ಶ್ರೀ ವಿದ್ಯಾರಣ್ಯ ಪುಸ್ತಕಮಾಲೆ ೩.

# ಛತ್ರಪತಿ
# ಶಿವಾಜಿ ಮಹಾರಾಜ

ಮುಂಬಯಿ ವಿಶ್ವವಿದ್ಯಾಲಯದ ಗೌರವ ಸಭಾಸದರಾದ
**ರಾಮಚಂದ್ರ ಹಣಮಂತ ದೇಶಪಾಂಡೆ,** ಎಂ.ಎ.,
ಇವರು ಬರೆದುದನ್ನು

ಶ್ರೀ ವಿದ್ಯಾರಣ್ಯ ಪ್ರಕಾಶಕ ಸಂಸ್ಥೆಯ ಆಡಳಿತೆಗಾರರಾದ
**ಶ್ರೀಪಾದ ರಾಮಚಂದ್ರ ದೇಶಪಾಂಡೆ,** ಬಿ.ಎಸ್ ಸಿ.,
ಇವರು ಪ್ರಸಿದ್ಧಪಡಿಸಿದರು.

ಮೊದಲನೆಯಾವೃತ್ತಿ

೧೯೨೩



ಬೆಲೆ ೨ ರೂಪಾಯಿ ೧೨ ಆಣೆ.

ಶ್ರೀ ವಿದ್ಯಾರಣ್ಯ ಪುಸ್ತಕಮಾಲೆ ೩.

# ಛತ್ರಪತಿ

# ಶಿವಾಜಿ ಮಹಾರಾಜ

ಮುಂಬಯಿ ವಿಶ್ವವಿದ್ಯಾಲಯದ ಗೌರವ ಸಭಾಸದರಾದ

**ರಾಮಚಂದ್ರ ಹಣಮಂತ ದೇಶಪಾಂಡೆ,** ಎಂ.ಎ.,

ಯವರು ಬರೆದುದನ್ನು

ಶ್ರೀ ವಿದ್ಯಾರಣ್ಯ ಪ್ರಕಾಶಕ ಸಂಸ್ಥೆಯ ಆಡಳಿತೆಗಾರರಾದ

**ಶ್ರೀಪಾದ ರಾಮಚಂದ್ರ ದೇಶಪಾಂಡೆ,** ಬಿ. ಎಸ್ಸಿ.,

ಯವರು ಪ್ರಸಿದ್ಧಪಡಿಸಿದರು.

ಮೊದಲನೆಯಾ



೧೯೨೩



ಬೆಂಗಳೂರು ಮುದ್ರಾಲಯದ ಮೇಲ್ವಿಚಾರಕರು ಇದನ್ನು ಮುದ್ರಿಸಿದರು.

ಬೆಲೆ ೨ ರೂಪಾಯಿ ೧೨ ಆಣೆ.

## ಅವರೇ ಬರೆದ ಪುಸ್ತಕಗಳು.

---

| | | | ರೂ. | ಆ. | ಪೈ. |
|---|---|---|---|---|---|
| ೧. | ಅಕ್ಬರಚಕ್ರವರ್ತಿ ಚರಿತ್ರೆ (ಸಚಿತ್ರ) | ಬೆಲೆ | ೧ | ೧ | ೦ |
| ೨. | ಧರ್ಮಸ್ಥಾಪಕರೂ ಧರ್ಮಸುಧಾರಕರೂ (ಸಚಿತ್ರ) | ,, | ೦ | ೬ | ೦ |
| ೩. | ಚರಿತ್ರಸಂಗ್ರಹ ಪೂರ್ವಾರ್ಧ (ಸಚಿತ್ರ) | ,, | ೧ | ೪ | ೦ |
| ೪. | ಕಥೆಗಳನ್ನೊಳಗೊಂಡ ಬೀರಬಲ್ಲನ ಚರಿತ್ರೆ ಪೂರ್ವಾರ್ಧ (ಸಚಿತ್ರ) | ,, | ೧ | ೬ | ೦ |
| ೫. | ಮೊಗಲ್ಬಾದಶಾಹಿ ಪೂರ್ವಾರ್ಧ | ,, | ೦ | ೧೪ | ೦ |
| ೬. | ಹೈದರಲ್ಲಿ ಟೀಪುಸುಲ್ತಾನ | ,, | ೦ | ೫ | ೦ |
| ೭. | ನಾನಾಫಡನವೀಸ | ,, | ೦ | ೪ | ೦ |
| ೮. | ಗ್ರೇಟಬ್ರಿಟನ್ ಅಯರ್ಲಂಡ ದೇಶಗಳ ಸಂಕ್ಷಿಪ್ತವರ್ಣನೆ | ,, | ೦ | ೬ | ೦ |
| ೯. | ನೂರಜಹಾನ ಮಹಾರಾಣಿ (ಸಚಿತ್ರ) | ಅಚ್ಚಿನಲ್ಲಿದೆ. | | | |
| ೧೦. | ಕರ್ನಾಟಕಸಾಮ್ರಾಜ್ಯ ಮೊದಲನೆಯ ಸಂಪುಟ (ಸಚಿತ್ರ) | ಸಿದ್ಧವಾಗುತ್ತಲಿವೆ. | | | |
| ೧೧. | ಸದರ, ಎರಡನೆಯ ಸಂಪುಟ (ಸಚಿತ್ರ) | | | | |

---

# ವಿಷಯಾನುಕ್ರಮಣಿಕೆ.

# ಚಿತ್ರಗಳು.

# ಪ್ರಸ್ತಾವನೆ.

ಶಿವಾಜಿಯು ಮರಾಟಿಗನಾದ್ದರಿಂದ ಅವನ ಚರಿತ್ರೆಯಿಂದ ಕನ್ನಡಿಗರಿಗೆ ಹೆಚ್ಚು ಪ್ರಯೋಜನವಿಲ್ಲೆಂದು ಕೆಲವರು ಆಕ್ಷೇಪಿಸಬಹುದು. ಈ ಆಕ್ಷೇಪಣೆಯಲ್ಲಿ ತಥ್ಯಾಂಶವು ಅತ್ಯಲ್ಪ ಪ್ರಮಾಣದಲ್ಲಿರುತ್ತದೆಂದು ಎಲ್ಲರೂ ಒಡಂಬಡುವರು. ಮರಾಟ ಮಹನೀಯರು ಕನ್ನಡ ಮಹಾಪುರುಷರಷ್ಟು ಪೂಜ್ಯರೂ ಪ್ರೀತ್ಯಾಸ್ಪದರೂ ಆಗದಿದ್ದರೂ ಕನ್ನಡಿಗರ ತರುವಾಯ ಅವರು ನಮಗೆ ಬೇಕಾದವರೇ ಸರಿ. ತಾಯಿಯ ತರುವಾಯ ಸೋದರಮಾವನೇ ಕಕ್ಕುಲತೆಯುಳ್ಳವನಲ್ಲವೇ? ತಾಯಿಸತ್ತರೂ ಸೋದರಮಾವನು ಉಳಿಯಬೇಕೆಂಬ ಗಾದೆಯು ನಮ್ಮಳೊಗೆ ಬಳಿಕೆಯಲ್ಲಿಲ್ಲವೇ? ಮರಾಟರು ನಮ್ಮ ನೆರೆಯವರು. ಅವರ ನುಡಿಯಲ್ಲಿ ಒಂದು ಮೂರಾಂಶಕ್ಕಿಂತ ಹೆಚ್ಚು ಕನ್ನಡ ಶಬ್ದಗಳಿರುತ್ತವೆ. * ಅವರ ರೀತಿ ನಡತೆಗಳು ನಮ್ಮನ್ನು ಹೋಲುತ್ತವೆ. ನಮ್ಮ ಧರ್ಮಗುರುಗಳೇ ಅವರ ಗುರುಗಳು; ನಮ್ಮ ಹೆಬ್ಬಯಕೆಗಳೇ ಅವರ ಹೆಬ್ಬಯಕೆಗಳು; ನಮ್ಮ ಇತಿಹಾಸವೇ ಅವರ ಇತಿಹಾಸವು. ೬ ನೆಯ ಶತಮಾನದಿಂದ ೧೪ ನೆಯ ಶತಮಾನದವರೆಗೆ ಮರಾಟಪ್ರಾಂತವು ಕನ್ನಡ ಸಾರ್ವಭೌಮರ ಆಳಿಕೆಗೆ ಒಳಗಾಗಿತ್ತು ಮತ್ತು ೧೭,೧೮ ಶತಮಾನಗಳಲ್ಲಿ ನಮ್ಮ ತಾಯ್ನಾಡು ಮರಾಟರ ಅಂಕೆಯಲ್ಲಿತ್ತು. ಈ ಮೇರೆಗೆ ಐತಿಹಾಸಿಕ, ಧಾರ್ಮಿಕ, ನೈತಿಕ, ಭಾಷಾತ್ಮಕ, ರಾಜಕೀಯ ದೃಷ್ಟಿಯಿಂದ ಕರ್ನಾಟಕ ಮರಾಟ ಪ್ರಾಂತಗಳು ಒಂದೇ ಆಗಿರುತ್ತವೆಂದು ಧಾರಾಳವಾಗಿ ಹೇಳಬಹುದು.

---

* ಮರಾಟಪ್ರಾಂತವು ಕರ್ನಾಟಕದ ಒಂದು ಭಾಗವೇ ಸರಿ. ಮರಾಟರೂ ಕನ್ನಡಿಗರೂ ಒಂದೇ ನೆತ್ತರದವರು. ಮೊದಲು ಎರಡೂ ನಾಡುಗಳಲ್ಲಿ ಕನ್ನಡವೇ ಬಳಿಕೆಯಲ್ಲಿತ್ತು. ವಿಕೃತವಾದ ಕನ್ನಡವೇ ಮರಾಟನುಡಿಯೆಂದು ಕರೆಯಲ್ಪಡುತ್ತದೆ. **ಬಾ. ಗ. ಟಿಳಕರು** ಗುರ್ಲಹೊಸೂರಿನಲ್ಲಿ ಆಡಿದ್ದು ತಾರೀಖು ೨೭—೧೧—೧೯೦೭.

ಇವೆಲ್ಲ ಸಾಮಾನ್ಯ ವಿಚಾರಗಳಾದವು. ಈ ಚರಿತ್ರೆಯಿಂದ ನಮಗೆ ಕೆಲವು ವಿಶಿಷ್ಟಲಾಭಗಳುಂಟು. ಅವುಗಳಾವವೆಂದರೆ:—

೧. ಹದಿನೇಳನೆಯ ಶತಮಾನದ ಹಿಂದಿನ ಶತಮಾನಗಳಲ್ಲಿ ಎಷ್ಟೋ ಮಂದಿ ಕನ್ನಡಿಗರು ಮರಾಟಪ್ರಾಂತದೊಳಗೆ ಅರಸರೂ ಇನಾಮುದಾರರೂ ವತನದಾರರೂ ಆಗಿದ್ದರೆಂದು ಈ ಚರಿತ್ರೆಯಿಂದ ಕಂಡು ಬರುತ್ತದೆ. ಕರ್ನಾಟಕ (ವಿಜಯನಗರ) ಸಾಮ್ರಾಜ್ಯಕ್ಕೆ ಸೇರಿದ ಒಬ್ಬ ಕುಲಗೆಟ್ಟ ಕನ್ನಡ ಬ್ರಾಹ್ಮಣನು ಅಹಮ್ಮದನಗರದಲ್ಲಿ ನಿಜಾಮಶಾಹಿಯನ್ನು ಸ್ಥಾಪಿಸಿದನು (೧೪೯೦). * **ಹೊನ್ನಪ್ಪನೆಂಬವನು** ಪುಣೆಯ ದೇಶಪಾಂಡೆಯಾಗಿದ್ದನು. ಚಾಕಣದ ಕೋಟೆಯು ಅವನ ವಶದಲ್ಲೇ ಇತ್ತು. ಅವನ ಹೆಸರೇ ಅವನು ಕನ್ನಡಿಗನಾಗಿದ್ದನೆಂದು ಒತ್ತಿ ಹೇಳುತ್ತದೆ. ಚಾಕಣದ ಕಿಲ್ಲೆದಾರನಾದ **ನರಸಾಲನಾದರೂ** ಕನ್ನಡಿಗನೇ ಆಗಿರಲಿಕ್ಕೆ ಬೇಕು (ಪುಟ ೪೨). ಸುಪೆಪರಗಣೆಯ ಜಹಗೀರದಾರರಾದ **ರಾಮ, ಹನುಮಂತ** ಎಂಬವರಾದರೂ ಕನ್ನಡಿಗರಾಗಿದ್ದರೆಂದು ತೋರುತ್ತದೆ (ಪುಟ ೧೨೩). ಜುನ್ನರದ ಇನಾಮುದಾರನಾದ ಶ್ರೀನಿವಾಸರಾಯನು ಕನ್ನಡಿಗನಾಗಿರಬಹುದೆಂದು ಅನುಮಾನಮಾಡಲಿಕ್ಕೆ ಅನುವು ದೊರೆಯುತ್ತದೆ (ಪುಟ ೧೧).

೨. ಸಿವಾಜಿಗೆ ನೆರವಾದವರೊಳಗೆ ಎಷ್ಟೋಮಂದಿ ಕನ್ನಡಿಗರಾಗಿದ್ದರೆಂದು ಕಂಡುಬರುತ್ತದೆ. **ಮಾದಣ್ಣ ಮಂತ್ರಿ** (ಪುಟ ೨೫೨). **ಮುರಾರಿರಾಯ** (ಪು. ೧೫), **ಹನುಮಂತೆ ಬಾಳಕೃಷ್ಣರಾಯ** (ಪು. ೧೭), **ಹನುಮಂತೆ ರಘುನಾಥರಾಯ** (ಪು. ೨೪೩), **ನೆಲ್ಲೂರ ರಾಮಣ್ಣ** (ಪು. ೨೫೯), ಜನಾರ್ದನ ನಾರಾಯಣ ಹನುಮಂತೆ (ಪು. ೨೬೯), ಅಣ್ಣಾಜಿದತ್ತು (ಪು. ೩೩೧) ಇವರು ಕನ್ನಡಿಗರಾಗಿದ್ದರೆಂಬ ಬಗ್ಗೆ ಸಂಶಯವಿಲ್ಲ.

೩. ಆ ಕಾಲಕ್ಕೆ ನಮ್ಮ ವರ್ಣಾಶ್ರಮಧರ್ಮಗಳ ಸ್ಥಿತಿಯು ಹೇಗಿತ್ತೆಂಬುದೂ ನಮ್ಮ ಪೂರ್ವಜರ ರೀತಿನಡತೆಗಳೂ ಆಚಾರವಿಚಾರಗಳೂ ಏನಿದ್ದವೆಂಬುದೂ ಈ ಚರಿತ್ರೆಯಿಂದ ಕೆಲಮಟ್ಟಿಗೆ ಗೊತ್ತಾಗುತ್ತವೆ.

---

* ಹಂಟರ ಇತಿಹಾಸ ಪು. ೨೩೨.

೪. ಹದಿನಯ್ದು ಹದಿನಾರನೆಯ ಶತಮಾನಗಳಲ್ಲಿ ಸಾಮ್ರಾಜ್ಯ ವೈಭವಸುಖದ ಉನ್ನತಶಿಖರವನ್ನೇರಿದ ನಮ್ಮ ಪೂರ್ವಜರು ೧೭ ನೆಯ ಶತಮಾನದಲ್ಲಿ ಎಷ್ಟು ಕೀಳುಸ್ಥಿತಿಗೆ ಇಳಿದಿದ್ದರೆಂಬುದೂ ಅವರ ಆತ್ಮಿಕ, ನೈತಿಕ, ಸಾಮಾಜಿಕ, ರಾಜಕೀಯ ಹಾಡು ಎಷ್ಟು ಹಾಳಾಗಿತ್ತೆಂಬುದೂ ಅವರು ತನ್ನೊಳಗೆ ಮೊದಲು ಬೆಳಗುತ್ತಿದ್ದ ಐಕ್ಯ, ಸ್ವಾತಂತ್ರ್ಯಪ್ರೀತಿ, ಸ್ವಜನೋನ್ನತಿ, ದೇಶಾಭಿಮಾನಗಳನ್ನು ಬದಿಗೊತ್ತಿ ಬಿಸಾಟ, ಬಿಡಿಕಟ್ಟಿಗೆಯಂತೆ ನಿರ್ಜಲರಾದ್ದರಿಂದ ಮುಸಲ್ಮಾನರೂ ಮರಾಟರೂ ಅವರನ್ನು ಹೇಗೆ ಅನಾಯಾಸವಾಗಿ ಮುರಿಬಡಿದರೆಂಬುದೂ ಎಂಜಲೆಲೆಗೆ ಕಡಿದಾಡುವ ತಿರುಕರಂತೆ ಅವರು ಹೇಗೆ ಹೆಣ್ಣುಹೊನ್ನುಮಣ್ಣುಗಳಿಗೆ ಬಡಿದಾಡಿ, ಪರಕೀಯರ ತುತ್ತಾದರೆಂಬುದೂ ಈ ಚರಿತ್ರೆಯಿಂದ ತಿಳಿದು ಬರುತ್ತದೆ. ಮೆಣಸು ಹುಳಿತರೂ ಜೋಳಕ್ಕೆ ಸರಿಯಾದೀತೇ? ಎಂಬ ಗಾದೆಯಂತೆ ಕನ್ನಡಿಗರು ದುರ್ದೈವದಿಂದ ಎಷ್ಟು ಅವನತಿಯನ್ನು ಹೊಂದಿದ್ದರೂ ಅವರೊಳಗೆ ಬೆಳವಡಿ ಸಾವಿತ್ರವ್ವನಂತಹ ವೀರವನಿತೆಯರು ಆ ಕಾಲಕ್ಕಾದರೂ ಇದ್ದರೆಂಬುದು ನಮಗೆ ಅಭಿಮಾನೋತ್ಪಾದಕ ಸಂಗತಿಯೇ ಸರಿ (ಪುಟ ೨೬೯).

೫. ಸಿವಾಜಿಯು ಕಾಲದಲ್ಲಿ ಕನ್ನಡಿಗಮರಾಟಿಗರೊಳಗೆ ಹಗೆತನವಿರದೆ ಗೆಳೆತನವೇ ಇತ್ತು. ಸಿವಾಜಿಯು ಕನ್ನಡಿಗರನ್ನು ಎಂದೂ ದ್ವೇಷಿಸಲಿಲ್ಲ. ಅವನ ಹೆಗ್ಗುರಿಯು ಪರಕೀಯರಾದ ಮುಸಲ್ಮಾನರ ರಾಜ್ಯವನ್ನು ಮುರಿದು ಸ್ವರಾಜ್ಯವನ್ನು ಸ್ಥಾಪಿಸುವುದಾದ್ದರಿಂದ, ಅವನು ಭಾಷಾಭೇದವನ್ನೂ ಜಾತಿಭೇದವನ್ನೂ ಎಂದೂ ಎಣಿಸಲಿಲ್ಲ. ಅವನು ಕರ್ನಾಟಕದ ಪಟ್ಟಣಗಳಾದ ಹುಬ್ಬಳ್ಳಿ,ಕಾರವಾರ, ಬಸರೂರು ಮುಂತಾದ ಊರುಗಳನ್ನು ಸುಲಿದುದು ನಿಜವೇ ಸರಿ. ಆದರೆ ಅವನು ಈ ಊರುಗಳು ಅದಿಲ್ಶಾಹಿಯವೆಂದು ಲೂಟುಮಾಡಿದನೇ ಹೊರತು, ಕರ್ನಾಟಕದ ಊರುಗಳೆಂದು ಅವುಗಳನ್ನು ಸೂರೆಗೊಳ್ಳಲಿಲ್ಲ.

೬. ಆಕಾಲಕ್ಕಿದ್ದ ಮೊಗಲ್ಬಾದಶಾಹಿ, ಅದಿಲ್ಶಾಹಿ, ಕುತುಬಶಾಹಿ ಸರಕಾರಗಳಲ್ಲಿ ನಮ್ಮ ಪೂರ್ವಜರಿಗೆ ಎಷ್ಟು ಮಟ್ಟಿಗೆ ಅಧಿಕಾರಸ್ವಾತಂತ್ರ್ಯಗಳಿದ್ದವೆಂಬುದೂ ಅವರು ಯಾವ ಪ್ರಕಾರದ ಧಾರ್ಮಿಕ, ಸಾಮಾಜಿಕ,

ನೈತಿಕ ಮತ್ತು ಆರ್ಥಿಕ ತೊಂದರೆಗಳನ್ನು ಅನುಭೋಗಿಸಬೇಕಾಗುತ್ತಿ ತ್ತೆಂಬುದೂ ಈ ಚರಿತ್ರೆಯಿಂದ ಗೊತ್ತಾಗುತ್ತದೆ.

ಇಷ್ಟೆಲ್ಲ ಈ ಚರಿತ್ರೆಗೆ ಸಂಬಂಧಿಸಿದ ವಿಷಯವಾಯಿತು. ಇನ್ನು ಈ ಪುಸ್ತಕದ ಭಾಷೆಯನ್ನು ಕುರಿತು ಎರಡು ಮಾತುಗಳನ್ನು ಬರೆಯಬೇಕಾ ಗಿದೆ. ನನ್ನ ತಾಯ್ನುಡಿಗೆ ಏಕರೂಪತೆಯನ್ನುಂಟುಮಾಡುವುದಕ್ಕೋಸ್ಕರ ೧೯೧೮ ರಿಂದ ಹೆಣಗುತ್ತೇನೆಂಬುದು ಎಲ್ಲರಿಗೂ ತಿಳಿದಮಾತೇ ಸರಿ. ಆ ವರ್ಷದ ಮದ್ರಾಸ ಸಭೆಯ ನಿರ್ಣಯಗಳನ್ನಲ್ಲದೆ * ಕೆಳಗೆ ಕೊಟ್ಟ ಉಪ ನೇಮಗಳನ್ನು ಪಾಲಿಸಿರುತ್ತೇನೆ —

(ಅ) ಹಳೆಗನ್ನಡ ಹೊಸಗನ್ನಡೆಂಬ ಭೇದವು ರೂಪಪ್ರತ್ಯಯಗಳಲ್ಲಿ ಮಾತ್ರ ಇರುತ್ತದೆ ಹೊರತು ಶಬ್ದದಲ್ಲಿರುವುದಿಲ್ಲ. ಆದ್ದರಿಂದ ಎಲ್ಲ ಕನ್ನಡ ಶಬ್ದಗಳು, ಅವು ಹಳೆಗಂಥಗಳಲ್ಲಿ ಉಪಯೋಗಿಸಿದವಾಗಲಿ ಮಾತಿನಲ್ಲಿ ಬರುವುವಾಗಲಿ, ಬರಹದಲ್ಲಿ ಬಳಿಸಲಿಕ್ಕೆ ತಕ್ಕವುಗಳೇ ಸರಿ.

(ಇ) ಕನ್ನಡ ಶಬ್ದವನ್ನುಪಯೋಗಿಸಿ, ಅದೇ ಅರ್ಥವನ್ನು ಮತ್ತೆ ಹೇಳಬೇಕಾದರೆ, ಶಬ್ದವೈಚಿತ್ರ್ಯಕ್ಕೋಸ್ಕರ ಸಂಸ್ಕೃತ, ಪಾರ್ಸಿ, ಅರಬಿ ಮುಂತಾದ ಪರಭಾಷೆಯ ಶಬ್ದಗಳನ್ನು ಉಪಯೋಗಿಸಬಹುದು.

(ಉ) ಶಬ್ದಮಣಿದರ್ಪಣ, ಶಬ್ದಾನುಶಾಸನ, ಭಾಷಾಭೂಷಣಗಳು ಹಳೆ ವ್ಯಾಕರಣಗ್ರಂಥಗಳಾದ್ದರಿಂದ ಅವುಗಳ ನೇಮಗಳಂತೆ ಬರೆಯು ವುದು ಈ ಕಾಲಕ್ಕೆ ಸಾಧ್ಯವಿಲ್ಲ.

(ಎ) ನಮ್ಮ ಬರಹದ ನುಡಿಯು ಆದಷ್ಟು ಮಟ್ಟಿಗೆ ನಮ್ಮ ಮಾತಾ ಡುವ ನುಡಿಯನ್ನು ಹೋಲಬೇಕು.

(ಒ) ಸಿಗು, ಕೂಡ್ರು, ಕಳಿಸು ಮುಂತಾದ ಹೊಸ ಧಾತುಗಳನ್ನೂ ಆಗ (ದೆಶೆಯಿಂದ ಉ. ಆವನ ಕಾಲಾಗ) ಮುಂತಾದ ಹೊಸ ಪ್ರತ್ಯಯ ಗಳನ್ನೂ ಬಳಿಸಲಿಕ್ಕೆ ಅಡ್ಡಿ ಇರಕೂಡದು.

---

* ಅಕ್ಬರ ಚಕ್ರವರ್ತಿ ಚರಿತ್ರೆಯ ಪ್ರಸ್ತಾಪನೆ (೩ನೆಯಾವೃತ್ತಿ) ಪುಟ ೬.

ಪಂಡಿತ ಯದುನಾಥ ಸರಕಾರರ ಅವರಂಗಜೇಬ ಸಿವಾಜಿಯರ ಚರಿತ್ರಗಳು ಈ ಚರಿತ್ರೆಯನ್ನು ಬರೆಯಲಿಕ್ಕೆ ನನ್ನನ್ನು ಹುರಿದುಂಬಿಸಿದವೆ ನ್ನಲಿಕ್ಕೆ ಅಡ್ಡಿಯಿಲ್ಲ. ಆದ್ದರಿಂದ ನಾನು ಅವರಿಗೆ ಅತ್ಯಂತವಾಗಿ ಕೃತಜ್ಞ ನಾಗಿರುತ್ತೇನೆ. ಮ॥ ರಾ॥ ಕೇಳುಸಕರ, ರಡ್ಡಿ, ಪಂಡಿತ ತಕಾಖಾವು ಇವರ ಸಿವಾಜಿ ಚರಿತ್ರೆಗಳೂ ಈಲಿಯಟ್ಟ, ಎಲ್ಫಿನಸ್ಟನ್, ಹಂಟರ ಇವರ ಇತಿಹಾಸ ಗಳೂ ಹೊನ್ನಾಪುರಮಠದವರ ರಾಮದಾಸಸ್ವಾಮಿಗಳ ಚರಿತ್ರೆಯೂ ಇಂಡಿಯಾ ಸಾಮ್ರಾಜ್ಯ ಗ್ಯಾಝಿಟಿಯರವೂ ಈ ಚರಿತ್ರೆಯನ್ನು ಬರೆಯು ವಾಗ ನನಗೆ ಬಹಳವಾಗಿ ನೆರವಾದ್ದರಿಂದ ಈ ಎಲ್ಲ ಬರಹಗಾರರ ಉಪ ಕಾರವನ್ನು ಎಣಿಸುತ್ತೇನೆ. ಈ ಪುಸ್ತಕದ ಮಾತೃಕೆಯನ್ನು ಮೊದಲಿನಿಂದ ತುದಿಯ ವರೆಗೆ ಓದಿ, ಎಷ್ಟೋ ಬೆಲೆಯುಳ್ಳ ಸೂಚನೆಗಳನ್ನು ಮಾಡಿದ ನನ್ನ ಪರಮ ಮಿತ್ರರಾದ ಮ॥ ರಾ॥ ನಂಗಪುರ ವೆಂಕಟೇಶಯ್ಯಂಗಾರ್, ಬಿ. ಎ., ಯವರಿಗೆ ನಾನು ಋಣಿಯಾಗಿದ್ದೇನೆ.

ಈ ಚರಿತ್ರೆಯಲ್ಲಿ ಇರಬಹುದಾದ ವಸ್ತುಸ್ಥಿತಿದೋಷಗಳನ್ನಾಗಲಿ ವಿಚಾರದೋಷಗಳನ್ನಾಗಲಿ ತೋರಿಸಿಕೊಡುವ ವಾಚಕಮಹಾಶಯರಿಗೆ ನಾನು ಪ್ರೇಮಪೂರ್ವಕವಾಗಿ ವಂದನೆಗಳನ್ನು ಅರ್ಪಿಸುವುದಲ್ಲದೆ ಅವರ ಸೂಚನೆಗಳನ್ನು ಆದರದಿಂದ ಸ್ವೀಕರಿಸಿ, ದಿಟವಾದ ತಪ್ಪುಗಳನ್ನು ಮುಂದಿನ ಮುದ್ರಣದಲ್ಲಿ ತಿದ್ದಲಿಕ್ಕೆ ಯತ್ನಿಸುವೆನು.

ಮಾಳಮಡ್ಡಿ, ಧಾರವಾಡ<br>
ಶಕೆ ೧೮೪೫ ರುಧಿರೋದ್ಗಾರಿ ಸಂವತ್ಸರ<br>
ಭಾದ್ರಪದ ಶುದ್ಧ ತ್ರಯೋದಶಿ,<br>
ಶನಿವಾರ ೨೨ ಸಪ್ಟಂಬರ ೧೯೨೩ ಇಸ್ವಿ.

**ರಾ. ಹ. ದೇಶಪಾಂಡೆ.**

# ಒಪ್ಪೋಲೆ.

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೬ | ೨೪ | ಸಿವೆಗ | ಶಿವೆಗೆ |
| ೨೦ | ೧೧ | ಕಸವು | ಕಸುವು |
| ೩೬ | ೧೧ | ಬಡೆದಾಡುತ್ತಲಿದ್ದೇನೆ | ಬಡಿದಾಡುತ್ತಲಿದ್ದೇವೆ |
| ೫೦ | ೪ | ಅದರ ಮೇಲೆ ಅವನಿಗೆ | ಅದರ ಮೇಲೆ ಅವನ |
| ೫೩ | ೧೬ | ಒಂಡು | ಒಂದು |
| ೬೬ | ೩,೪ | ಇದುದಲ್ಲದೆ | ಇದ್ದುದಲ್ಲದೆ. |
| ೮೩ | ೨೦ | ಬಂದರೆ | ಬಂದಾಗ |
| ೮೮ | ೧೪ | (ಸದ್ದುಹೊಡೆದು) | (ಸಡ್ಡುಹೊಡೆದು) |
| ೯೪ | ೧೭ | ತವಕಿಸುತ್ತಿದ್ದ, | ತವಕಿಸುತ್ತಿದ್ದ |
| ೯೫ | ೨ | ಕೊಲ್ಲುತ್ತಾರೆ | ಕೊಲ್ಲುತ್ತಾನೆ |
| ೯೯ | ೯ | ಕಸವು | ಕಸುವು |
| ೧೦೩ | ೧೨ | ಕಸವಿನಿಂದಲೂ | ಕಸುವಿನಿಂದಲೂ |
| ೧೧೪ | ೨೧ | ತಾಪ್ತಿಹೊಳೆಯ | ತಾಪಿಹೊಳೆಯ |
| ೧೬೪ | ೯ | ನಿಸ್ಸ್ತಾನವಾಗಲಿ | ನಿಸ್ಸಂತಾನವಾಗಲಿ |
| ೧೭೬ | ೨೪ | ಹತ್ತರ ಗಿಡ್ಡಾದ ಕೋಟೆಯನ್ನು | ಹತ್ತಿರಿದ್ದ ಗಿಡ್ಡಾದ ಗೋಡೆಯನ್ನು |
| ೧೮೩ | ೧ | ಜನ್ಮಭೂಮಿಯಾದ | ಬೆಳೆದೆಡೆಯಾದ |
| ೧೮೫ | ೯ | ಚೆನ್ನಟ್ಟಲಿಕೆ | ಚೆನ್ನಟ್ಟಲಿಕ್ಕೆ |
| ೨೦೩ | ೧೦ | ಮಂದಿನ | ಮುಂದಿನ |
| ೨೦೭ | ೧೭ | ತಾಸೆಮು | ತಾಸೆಮುಂತಾದವು |
| ೨೪೩ | ೨ | ೨ ವರ್ಷ | ೧೨ ವರ್ಷ |
| ೨೫೦ | ೨೫ | ಸಿಂಗರಿಸಲ್ಪಟ್ಟಿದ್ದವು | ಸಿಂಗರಿಸಲ್ಪಟ್ಟಿತ್ತು |

| ಪುಟ | ಸಾಲು | ತಪ್ಪು | ಒಪ್ಪು |
| --- | --- | --- | --- |
| ೨೫೪ | ೧೦ | ತರಿಸಿದನು | ತರಿಸಿದನು. |
| ೨೫೬ | ೮ | ಕೌಶಲ | ಕೌಶಲ್ಯ |
| ೨೭೧ | ಅಡಿಟಿಪ್ಪಣಿ | ಹಿಂದೆ ಪುಟ ೨೦೪, ೨೦೫, ೨೩೦ | ಹಿಂದೆಪುಟ ೨೨೧, ೨೨೨ |
| ೨೭೩ | ,, | ಹಿಂದೆ ಪುಟ ೨೦೬, ೨೦೭ ೨೦೮ | ಹಿಂದೆಪುಟ ೨೩೩, ೨೩೫, ೨೩೬. |
| ೨೭೮ | ೬ | ಉಜ್ಜ್ವಲವಾದ | ಉಜ್ಜ್ವಳವಾದ |
| ೨೯೦ | ೧೦, ೧೧ ೧೭ ೧೮ ೨೧ | ಮುರಜಮ್ಮಶಹನು | ಮುಜಮ್ಮಶಹನು |
| ೨೯೬ | ಅಡಿಟಿಪ್ಪಣಿ ಸಾಲು ೩ | ಆರೋಪವನು | ಆರೋಪವನ್ನು |
| ೩೧೦ | ೬ | ಅವನಿಗೆ | ಹಬಸಿಯುವರಿಗೆ |
| ೩೨೮ | ೧೧ | ಪರಿಘ | ಪರಿಧಿ |
| ೩೩೬ | ೫ | ಪಟ್ಟಿಯನು | ಪಟ್ಟಿಯನ್ನು |
| ೩೩೭ | ೧೦, ೧೧ | ಇದ್ದವೆಂದು | ಇದ್ದವೆಂತಲೂ |
| ೩೪೬ | ೧೯ | ಜ್ಞಾನಾಂಧಕಾರವನ್ನು | ಅಜ್ಞಾನಾಂಧಕಾರವನ್ನು |
| ೩೪೭ | ಅಡಿಟಿಪ್ಪಣಿ ೧೨ | ಪುಣ್ಯೇರೇವ | ಪುಣ್ಯೈರೇವ |
| ೩೫೨ | ೧೬ | ಶ್ರೇಷ್ಠತ್ವವಾಗಿತು | ಶ್ರೇಷ್ಠತ್ವವಾಗಿತ್ತು |
| ೩೫೯ | ೧೭ | ಬಿಂಬಿಸಿದ್ದನು | ಬಿಂಬಿಸಿದನು |
| ೩೬೦ | ೨೩ | ಔದಾರಿಯೂ | ಉದಾರಿಯೂ |
| ೪೦೧ | ೯ | ಹೆಚು | ಹೆಚ್ಚು |
| ೪೦೩ | ೭ | ರಾಣಾಪ್ರತಾಪಸಿಂಹನನ್ನೂ | ರಾಣಾಪ್ರತಾಪಸಿಂಹನ ವಂಶಜನನ್ನೂ |
| ೪೨೧ | ೧೫ | ಹಬ್ಬಿದಿಲ್ಲ | ಹಬ್ಬಿದ್ದಿಲ್ಲ |
| ೪೩೦ | ೧೨ | ಮಾಡದೆ. | ಮಾಡದೆ, |

# ಛತ್ರಪತಿ ಸಿವಾಜಿ ಮಹಾರಾಜ.



## ೧ ನೆಯ ಪ್ರಕರಣ

### ಪೂರ್ವಜರು.

ನಮ್ಮ ಪೂರ್ವಜರಾದ ಮಹರ್ಷಿಗಳು ಬಹುಕಾಲ ವಿಚಾರಮಾಡಿ ನಾವು ಶ್ರೇಯೋಭ್ಯುದಯವಂತರಾಗಲಿಕ್ಕೆ ಎರಡು ಹೆದ್ದಾರಿಗಳನ್ನು ಹುಡುಕಿ ತೆಗೆದಿದ್ದಾರೆ—೧ ನಿವೃತ್ತಿಮಾರ್ಗ, ೨ ಪ್ರವೃತ್ತಿಮಾರ್ಗ. ನಿವೃತ್ತಿಮಾರ್ಗ ದಲ್ಲಿ ಹೆಸರುವಾಸಿಯಾದವರ ಗಣನೆಯು ದೇವಕೋಟಿಯಲ್ಲಿಯಾಗುತ್ತದೆ. ಪ್ರವೃತ್ತಿಮಾರ್ಗದಲ್ಲಿ ಘನತೆಯನ್ನು ಹೊಂದಿದವರು ಪುರುಷಶ್ರೇಷ್ಠರೆಂದೆಸಿಸಿ ಕೊಳ್ಳುತ್ತಾರೆ. ಈ ಶ್ರೇಷ್ಠತ್ವಕ್ಕೆ ಅಥವಾ ಹೆಚ್ಚಳಕ್ಕೆ ಹಲವು ಕಾರಣ ಗಳಿರುತ್ತವೆ. ಅವುಗಳೊಳಗೆ ಮುಖ್ಯವಾದವುಗಳಾವವೆಂದರೆ:—೧ ಕುಲ, ೨ ಶೀಲ (ಸುಸ್ವಭಾವ ಅಥವಾ ನೀತಿಮತ್ವ), ೩ ದೇಹಸಾಮರ್ಥ್ಯ, ೪ ಬುದ್ಧಿ ಸಾಮರ್ಥ್ಯ, ೫ ಧೈರ್ಯ ಶೌರ್ಯ ಸಾಹಸಾದಿ ಗುಣಗಳು, ೬ ಧನ, ಸಂಪತ್ತು, ೭ ಅಧಿಕಾರ, ೮ ದೇಶಕಾಲಾನುಕೂಲತೆ. ಈ ಎಲ್ಲ ಅಷ್ಟಸಾಧನ ಗಳು ನಮ್ಮ ಚರಿತ್ರನಾಯಕನಿಗೆ ದೊರೆದುದರಿಂದ ಈಗ ಅವನು ಸತ್ತು ೨೩೫ ವರ್ಷಗಳಾದರೂ ಅವನು ಕೀರ್ತಿಶೇಷನಾಗಿ ನಮ್ಮೊಳಗೆ ಮೆರೆಯು ತ್ತಾನೆ. ಆದ್ದರಿಂದ ಈ ಪ್ರಕರಣದಲ್ಲಿ ಅವನ ಕುಲವನ್ನೂ ಅವನ ಪೂರ್ವ ಜರು ಅವನಿಗೋಸ್ಕರ ಮಾಡಿಟ್ಟ ಅನುಕೂಲತೆಗಳನ್ನೂ ಸಂಕ್ಷೇಪವಾಗಿ ವಿವರಿಸುವೆವು.

ಸಾಧಾರಣಸ್ಥಿತಿಯ ಮನುಷ್ಯನು ದೈವಯೋಗದಿಂದಾಗಲಿ ಸ್ವಸಾ ಮರ್ಥ್ಯಬುದ್ಧಿಪರಾಕ್ರಮಗಳಿಂದಾಗಲಿ ವೈಭವಶಾಲಿಯಾದ ಕೂಡಲೆ ಅವನ ಆಪ್ತೇಷ್ಟರೂ ಅನುಯಾಯಿಗಳೂ ಅವನು ದೊಡ್ಡ ಕುಲದಿಂದ ಹುಟ್ಟಿದವ

ನೆಂದು ಸಿದ್ಧಮಾಡಲಿಕ್ಕೆ ಪ್ರಯತ್ನಿಸುವುದು ವಾಡಿಕೆಯಾದ ಮಾತೇ ಸರಿ. ಯುರೋಪದ ಕಲಿಯೆಂದು ಹೆಸರುವಾಸಿಯಾದ ನೆಪೋಲಿಯನ್ ಬೊನಾಪಾರ್ಟನು ಫ್ರಾನ್ಸದೇಶದ ಬಾದಶಹನಾದ ಬಳಿಕ ನೂರಾರುಮಂದಿ ಪಂಡಿತರು ಕೂಡಿ ಅವನು ಅರಸುಮನೆತನದಿಂದ ಹುಟ್ಟಿದವನೆಂದು ನಿರ್ಣಯಿಸಿದ ಬಳಿಕ ಆಸ್ಟ್ರಿಯಾದ ಬಾದಶಹನು ತನ್ನ ಮನೆತನದ ಹೆಣ್ಣನ್ನು ಅವನಿಗೆ ಮದುವೆ ಮಾಡಿಕೊಡಲಿಲ್ಲವೇ? ಅದರಂತೆಯೇ ಸಿವಾಜಿಯು ಅರಸನಾದ ಬಳಿಕ ಕೆಲಪಂಡಿತರು ಒಟ್ಟುಗೂಡಿ ಸಿವಾಜಿಯು ರಾಜಸ್ಥಾನದಲ್ಲಿ ಹೆಸರುವಾಸಿಯಾದ **ಸಿಸೋದೆ** ಯೆಂಬ ಅರಸುಮನೆತನದಲ್ಲಿ ಹುಟ್ಟಿದವನೆಂದು ನಿರ್ಣಯಿಸಿದರು. ನಮ್ಮ ಚರಿತ್ರನಾಯಕನು ಸಿಸೋದೆ ಕುಲದವನಾಗಲಿ, ಆಗದೆ ಇರಲಿ, ಅವನು ಮಾಡಿದ ಸಾರ್ವಜನಿಕವಾದ ದೊಡ್ಡ ಕೆಲಸಗಳಿಂದ ಅವನ ಮೈಯ್ನಿತ್ತರದಲ್ಲಿ ವಿಶಿಷ್ಟವಾದ ಶಕ್ತಿಯಿತ್ತೆಂದು ಸ್ಪಷ್ಟವಾಗಿ ತೋರುತ್ತದೆ. ಈ ಕುಲದ ಸಂಬಂಧದ ಹಾಕಿಯಾಟವನ್ನು ಕುರಿತು ಕರ್ಣನು ಅಶ್ವತ್ಥಾಮನಿಗೆ ಕೊಟ್ಟ ಉತ್ತರವೇ ಸರಿಯಾದ್ದೆಂದು ಓದುವವರು ಒಡಂಬಡಬಹುದು.*

೧೪ ನೆಯ ಶತಮಾನದ ಆರಂಭದಲ್ಲಿ ಖಿಲ್ಜಿಮನೆತನದ ಅಲ್ಲಾವುದ್ದೀನನೆಂಬ ದಿಲ್ಲಿಯ ಬಾದಶಹನು ಅತಿ ಲಾವಣ್ಯವತಿಯೆಂದು ಹೆಸರುವಾಸಿಯಾದ ಪದ್ಮಿನಿಗೆ ಮೋಹಿಸಿ ಮರುಳಾಗಿ ಆಕೆಯನ್ನು ತನ್ನ ವಶಮಾಡಿಕೊಳ್ಳುವ ಉದ್ದೇಶದಿಂದ ಮೇವಾಡದ ರಾಜಧಾನಿಯಾದ ಚಿತ್ತೂರನ್ನು ಮುತ್ತಿ ಹಾಳುಮಾಡಿದ (೧೩೦೩) ಬಳಿಕ, ಅಲ್ಲಿಯ ಅರಸನ ೨ ನೆಯ ಮಗನಾದ **ಅಜಯಸಿಂಹ**ನೆಂಬವನು ದಿಕ್ಕೆಟ್ಟು ಹೊರಹೊರಟನು. ಅವನೂ ಅವನ ವಂಶಜರೂ ಬೇರೆ ಕಡೆಯಲ್ಲಿ ರಾಜ್ಯವನ್ನು ಸ್ಥಾಪಿಸಬೇಕೆಂದು ಹಲವು ಸಾರಿ ಹೋರಾಡಿದರು. ಆದರೆ ಆ ಕಾಲಕ್ಕೆ ಮುಸಲ್ಮಾನರು ಅತಿಪ್ರಬಲರಾದ್ದರಿಂದ ಅವರ ಆಟ ಸಾಗಲಿಲ್ಲ. ಮುಂದೆ ಅವನ ವಂಶಜನಾದ ದೇವ

---

* ಸೂತೋ ವಾ ಸೂತಪುತ್ರೋ ವಾ ಯೋ ವಾ ಕೋ ವಾ ಭವಾಮ್ಯಹಮ್ ।
ದೈವಾಯತ್ತಮ್ ಕುಲೇ ಜನ್ಮ ಮದಾಯತ್ತಂ ತು ಪೌರುಷಮ್ ॥
(ವೇಣೀಸಂಹಾರನಾಟಕ.)

ರಾಜಜಿ ಮಹಾರಾಣನೆಂಬವನು ಕೃಷ್ಣಾ ಭೀಮಾ ಹೊಳೆಗಳ ನಡುವಿರುವ ೨/೩ ಹಳ್ಳಿಗಳ ಗೌಡಕಿಯನ್ನು ಮಾಡಿಕೊಂಡು, ಕಾಲಕ್ಷೇಪ ಮಾಡತೊಡಗಿದನು. ಅವನಿಂದ ೯ ನೆಯ ತಲೆಯವನಾದ **ಬಾಬಾಜಿ** ಎಂಬವನೇ ನಮ್ಮ ಚರಿತ್ರನಾಯಕನ ಮುತ್ತಜ್ಜನು. ಇವನಿಗೆ **ಮಾಲೋಜಿ, ವಿಠೋಜಿ** ಎಂಬ ಇಬ್ಬರು ಗಂಡುಮಕ್ಕಳು ೧೫೫೦, ೧೫೫೩ ರಲ್ಲಿ ಹುಟ್ಟಿದರು. ನಮ್ಮ ಚರಿತ್ರನಾಯಕನ ಅಜ್ಜನಾದ ಮಾಲೋಜಿಯು ದೌಲತ್ತಾಬಾದಿನ ನೆರೆಯಲ್ಲಿದ್ದ **ವೇರೂಳ** ವೆಂಬ ಹಳ್ಳಿಯ ಗೌಡನಾಗಿದ್ದನು.

೧೬ ನೆಯ ಶತಮಾನದ ಕೊನೆಯಲ್ಲಿ ನಾವು ಈಗಿನಂತೆ ನಿಸ್ಸತ್ವರೂ, ನಿರ್ವಿಣ್ಣರೂ, ನರಸತ್ತವರೂ, ನಿರುತ್ಸಾಹಿಗಳೂ ಆಗಿರಲಿಲ್ಲ. ೨೪೧ ವರ್ಷಗಳ ಹಿಂದೆ ನಮ್ಮ ವೀರಶ್ರೀಯು ಈಗಿನಂತೆ ಬತ್ತಿ ಹೋಗದೆ ತುಂಬಾ ಹರಿಯುತ್ತಿತ್ತು; ನಮ್ಮ ಸ್ವಾಭಿಮಾನವೂ, ಸ್ವಾವಲಂಬನವೂ, ಸ್ವಾತಂತ್ರ್ಯ ಪ್ರೀತಿಯೂ, ಆತ್ಮಶಕ್ತಿಯೂ ತುಂಬಿ ತುಳುಕುತ್ತಿದ್ದವು. ಆದ್ದರಿಂದ ನಮ್ಮ ಚರಿತ್ರನಾಯಕನ ಅಜ್ಜ ಚಿಕ್ಕಜ್ಜರಾದ ಮಾಲೋಜಿ ವಿಠೋಜಿಯರು ಈಗಿನ ಅಧಮರಂತೆ ತಮ್ಮ ಗೌಡಕಿಯ ವತನವನ್ನು ಹಂಚಿಕೊಂಡು ನನಗೆ ಹೆಚ್ಚು, ತನಗೆ ಹೆಚ್ಚೆಂದು ಬಡಿದಾಡಿ, ತಮಗೆ ನ್ಯಾಯತಃ ಬರತಕ್ಕ ಆಸ್ತಿಯನ್ನು ವಕೀಲರಿಗೆ ಅಥವಾ ಸಾವುಕಾರರಿಗೆ ಮಾರಿ, ಉಧೋಲಕ್ಷ್ಮಣ ಎಂದು ಬಿಕ್ಕೆಯ ಪಾಲಾಗದೆ, ದೇವರು ತಮಗೆ ಕೊಟ್ಟ ದೇಹ ಬುದ್ಧಿ ಸಾಮರ್ಥ್ಯ ಬಂಧುಪ್ರೀತಿಗಳಿಂದ ತಮ್ಮ ಜೀವನವನ್ನು ಕಲ್ಪಿಸಿಕೊಂಡು, ಸುಖದಿಂದಲ್ಲದಿದ್ದರೂ ಸ್ವಾರ್ಜಿತ ಸಂಪತ್ತಿನಿಂದ ತಮ್ಮ ಯೋಗಕ್ಷೇಮವನ್ನು ಸಾಗಿಸಿಕೊಳ್ಳಬೇಕೆಂದು ನಿಶ್ಚಯಿಸಿ, ತಮ್ಮ ಆಸ್ತಿಯನ್ನು ಬೇರೆಯವರಿಗೆ ಒಪ್ಪಿಸಿ, ವೇರೂಳವನ್ನು ಬಿಟ್ಟು, ಸಿಂಧಖೇಡದ ದೇಶಮುಖನೂ ನಿಜಾಮಶಾಹಿಯ ೧೨೦೦೦ ಮನಸಬ್ದಾರನೂ ಆದ ಲಖುಜಿ ಜಾಧವರಾಯನೆಂಬ ಮರಾಟೆ ಸರದಾರನ ಆಶ್ರಯದಲ್ಲಿ ಹೋಗಿ ನಿಂತರು (೧೫೭೭). ಅವನು ಇಬ್ಬರಿಗೂ ಊಟಹಾಕಿ ಪ್ರತಿಯೊಬ್ಬನಿಗೆ ವರ್ಷಕ್ಕೆ ೫ ಹೊನ್ನು ಸಂಬಳ ಕೊಡಲಿಕ್ಕೆ ಒಪ್ಪಿಕೊಂಡನು. ಮಾಲೋಜಿಯು ಎಚ್ಚರದಿಂದಲೂ ಪ್ರಾಮಾಣಿಕತನದಿಂದಲೂ ತನಗೆ ಕೊಟ್ಟ ಚಾಗಲಕಾಯುವ ಕೆಲಸವನ್ನು ಮಾಡಿದ್ದರಿಂದ ಜಾಧವರಾಯನು ಮೆಚ್ಚಿ ನಿಜಾಮಶಾಹಿಯಿಂದ ಆವನಿ

ಗೊಂದು ಸಿಲ್ಲೆದಾರಿ (ಕುದುರೆಸ್ವಾರನ ಕೆಲಸ) ಯನ್ನು **ಕೊಡಿಸಿದನು.** ಅವನು ಜಾಧವರಾಯನ ನೆರೆಮನೆಯಲ್ಲಿದ್ದು ಅವನಿಗೆ ಗೃಹಕೃತ್ಯದಲ್ಲಿ ನೆರವಾಗಿ ಅವನ ಒಲುಮೆಯನ್ನು ಸಂಪಾದಿಸಿಕೊಂಡಿರುತ್ತಿದ್ದನು.

ಮುಂದೆ ಕೆಲವು ದಿವಸಗಳಾದ ಬಳಿಕ ಮಾಲೋಜಿಯು ಫಲ್ಟನ್ನದ ದೇಶಮುಖನಾದ ನಿಂಬಾಳಕರ ಜಗಪಾಳರಾಯನ ತಂಗಿಯಾದ **ದೀಪಾ ಬಾಯಿ** ಯನ್ನು ಮದುವೆಯಾದನು. ಆದರೆ ಆ ದಂಪತಿಗಳಿಗೆ ಬಹಳ ದಿವಸ ಮಕ್ಕಳಾಗಲಿಲ್ಲ. ಅವರು ಎಷ್ಟೋ ಹರಿಕೆಗಳನ್ನು ಹೊತ್ತರು, ದಾನ ಧರ್ಮ ಮಾಡಿದರು. ಆದರೆ ಅದರಿಂದೇನೂ ಫಲವಾಗಲಿಲ್ಲ. ಕಟ್ಟಕಡೆಗೆ ಅಹಮ್ಮದನಗರದಲ್ಲಿ **ಶಹಾಶರೀಫ** ನೆಂಬ ಪೀರನ ಗೋರಿಗೆ ಹರಿಕೆ ಬೇಡಿ ಕೊಂಡು, ಪ್ರತಿಗುರುವಾರ ಫಕೀರರಿಗೆ ದಾನಧರ್ಮ ಕೊಡಲಾರಂಭಿಸಿದರು. ಕರ್ಮ ಧರ್ಮ ಸಂಯೋಗದಿಂದ ಮುಂದೆ ೬ ತಿಂಗಳಲ್ಲೇ **ದೀಪಾಬಾಯಿ** ಯು ಬಸುರಾಗಿ ಗಂಡುಮಗನನ್ನು ಹೆತ್ತಳು (೧೫೯೪). ಪೀರನ ಅನುಗ್ರಹ ದಿಂದ ಹುಟ್ಟಿದ್ದರಿಂದ ಈ ಕೂಸಿಗೆ ಆ ಪೀರನ ಮೊದಲಿನ ಹೆಸರನ್ನಿಟ್ಟು **ಶಹಾಜಿ** ಎಂದು ಕರೆದರು. ಇವನೇ ನಮ್ಮ ಚರಿತ್ರನಾಯಕನ ತಂದೆಯು. ಇವನ ತಮ್ಮನಿಗೆ ಶರೀಫಜಿ ಎಂದು ಹೆಸರಿಟ್ಟರು.

ಜಾಧವರಾಯನಿಗೆ **ಜಿಜಾವು** ಎಂಬ ಒಬ್ಬ ಶಹಾಜಿಯ ಓರಗೆಯ ಮಗಳು ಮಾತ್ರ ಇದ್ದಳು. ಶಹಾಜಿಯು ದಿನಾಲು ಅವನ ಮನೆಗೆ ಹೋಗಿ ಜಿಜಾವಿನೊಡನೆ ಆಡುತ್ತಿದ್ದನು. ಅವನು ಚೆಲುವನೂ, ಚಪಲನೂ, ದಿಟ್ಟನೂ, ಅರಿವುಳ್ಳವನೂ ಆದ್ದರಿಂದ ಜಾಧವರಾಯನೂ ಅವನ ಹೆಂಡತಿಯೂ ಅವನನ್ನು ಪ್ರೀತಿಸುತ್ತಿದ್ದರು. ಅವನಿಗೆ ಬೇಕಾದ ತಿಂಡಿ ಗಳನ್ನು ಜಾಧವರಾಯನ ಹೆಂಡತಿಯು ಕೊಡುತ್ತಿದ್ದಳು. ಜಾಧವರಾಯನು ತನ್ನ ಮಗಳಿಗೆ ಕೊಟ್ಟ ಆಟದ ಸಾಮಾನುಗಳನ್ನೂ ಅರವೆಗಳನ್ನೂ ಶಹಾಜಿಗೆ ಕೊಡುತ್ತಿದ್ದನು. ಆದ್ದರಿಂದ ಶಹಾಜಿಯು ಹಗಲೆಲ್ಲ ಜಾಧವ ರಾಯನ ಮನೆಯಲ್ಲೇ ಇರುತ್ತಿದ್ದನು.

ರಂಗಪಂಚಮಿಯ ಹಬ್ಬವನ್ನು ಮರಾಟರು ಕನ್ನಡಿಗರಿಗಿಂತ ಹೆಚ್ಚು ಹುರುಪಿನಿಂದ ಮಾಡುತ್ತಾರಷ್ಟೇ. ಶಹಾಜಿಯು ೫ ವರ್ಷದವನಿರುವಾಗ

ಒಂದು ದಿವಸ ಈ ಹಬ್ಬವು ಬಂತು. ಜಾಧವರಾಯನು ವರ್ಷಂಪ್ರತಿ ಯಂತೆ ಈ ಹಬ್ಬಕ್ಕೋಸ್ಕರ ಎಲ್ಲ ಪ್ರಮುಖಜನರನ್ನು ತನ್ನ ಮನೆಗೆ ಕರಿಸಿ ದನು. ಶಹಾಜಿಯು ತನ್ನ ತಂದೆಯೊಡನೆ ಬರಲು, ಜಾಧವರಾಯನು ಅವನನ್ನು ಕರೆದು ತನ್ನ ತೊಡೆಯಮೇಲೆ ಕೂಡ್ರಿಸಿಕೊಂಡನು. ಕೂಡಲೆ



ಶಹಾಜಿ.

ಅವನ ಮಗಳಾದ ಜಿಜಾವು ಒಳಗಿಂದ ಬಂದು ಅವನ ಎರಡನೆಯ ತೊಡೆಯ ಮೇಲೆ ಕುಳಿತಳು. ಆಯೆರಡೂ ಮುದ್ದು ಮಕ್ಕಳನ್ನು ನೋಡಿ, ಜಾಧವರಾಯನಿಗೆ ಸಂತೋಷದ ಉದ್ರೇಕವಾಯಿತು. ಆಗಲವನು ತನ್ನ

ಮಗಳನ್ನು ಮುದ್ದಿಟ್ಟು "ಇವನನ್ನು ನೀನು ಮದುವೆಮಾಡಿಕೊಳ್ಳುವೆ ಯೇನು? ನೀವಿಬ್ಬರು ತಕ್ಕ ಜೋಡಿಯೇ ಸರಿ" ಎಂದುಸುರಿದನು.

ಮಾಲೋಜಿಯು ಬಹಳ ಅಭಿಮಾನಿಯೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಮೇಲೆ ಬರೆದ ಶಬ್ದಗಳು ಜಾಧವರಾಯನ ಬಾಯಿಂದ ಹೊರಟ ಕೂಡಲೆ ಅವನು ದಿಟ್ಟತನದಿಂದ ನೆರೆದ ಸಭೆಯಲ್ಲಿ ಎದ್ದುನಿಂತು "ಮಹಾಶಯರೇ, ಮಿತ್ರರೇ, ಈಗ ನಮ್ಮ ಒಡೆಯನಾದ ಜಾಧವರಾಯನು ತಮ್ಮೆಲ್ಲರ ಮುಂದೆ ಹೇಳಿದ್ದನ್ನು ದಯವಿಟ್ಟು ನೆನಪಿನಲ್ಲಿಡಿರಿ. ಅವನು ತನ್ನ ಮಗಳನ್ನು ನನ್ನಮಗನಿಗೆ ತಮ್ಮೆಲ್ಲರ ಸಮಕ್ಷಮವಾಗಿ ಕೊಡಲೊಪ್ಪಿದ್ದರಿಂದ ನಾವಿಬ್ಬರು ಈ ಹೊತ್ತಿನಿಂದ ಬೀಗಬೀಗರಾದೆವು" ಎಂದು ಗಟ್ಟಿಯಾಗಿ ಎಲ್ಲರು ಕೇಳುವಂತೆ ಒದರಿ ಹೇಳಿದನು. ಈ ಉದ್ದುರುಟುತನವನ್ನು ನೋಡಿ ಜಾಧವರಾಯನು ಸುಮ್ಮನುಳಿದನು. ಮಾಲೋಜಿಯೂ ಕೂಡಿದ ಜನರೂ ಅವನು ಮಾಲೋಜಿಯ ಮಾತಿಗೆ ಒಡಂಬಟ್ಟನೆಂದು ತಿಳಿಕೊಂಡರು. ಈ ಸುದ್ದಿಯು ಊರಲೆಲ್ಲ ಹಬ್ಬಿತು. ಜಾಧವರಾಯನ ಹೆಂಡತಿಯು ಅದನ್ನು ಕೇಳಿ, ಗಂಡನ ಮೇಲೆ ಸಿಟ್ಟುಬೆಂಕಿಯಾಗಿ, ತಮ್ಮ ಕಯ್ಕೆಳಗಿನ ಆಳಿನ ಮಗನಿಗೆ ತನ್ನ ಮಗಳನ್ನು ಕೊಡಕೂಡದೆಂದು ಹಟಹಿಡಿದಳು. ಜಾಧವರಾಯನು ವಿನೋದದಿಂದ ತಾನು ಹಾಗೆ ಹೇಳಿದೆನೆಂದು ಎಷ್ಟು ಹೇಳಿಕೊಂಡರೂ ಮಾಲೋಜಿಯು ಕೇಳದ್ದರಿಂದ, ಜಾಧವರಾಯನು ಸಿಟ್ಟಿಗೆದ್ದು ಮಾಲೋಜಿ ವಿಠೋಜಿಯರಿಗೆ ಆ ಹೊತ್ತಿನ ವರೆಗೆ ಆದ ಸಂಬಳವನ್ನು ಕೊಡಿಸಿ, ಕೆಲಸದಿಂದ ದೂರಮಾಡಿ ಆ ಊರಿನಿಂದ ಹೊರಗೆ ಹಾಕಿದನು!!! ಆಗ ಆಯಿಬ್ಬರು ಅಣ್ಣತಮ್ಮಂದಿರು ನಿರುಪಾಯರಾಗಿ ಹೆಂಡರುಮಕ್ಕಳನ್ನು ಕಟ್ಟಿಕೊಂಡು, ತಮ್ಮ ಊರಾದ ವೇರೂಳಕ್ಕೆ ಹೋಗಿ, ಮೊದಲಿನಂತೆ ಒಕ್ಕಲತನ ಮಾಡಿಕೊಂಡು ನಿಂತರು.

ಮಾಲೋಜಿಯ ಹಟವು ಹೆಚ್ಚಳಾಸೆಯಿಂದ ಹುಟ್ಟಿದ ದುರಾಗ್ರಹವೆಂದು ಎಲ್ಲ ವಾಚಕರು ಒಡಂಬಡಬಹುದು. ಹಬ್ಬದ ದಿವಸ ಹಿಗ್ಗಿನಲ್ಲಿ ತನ್ನ ತೊಡೆಯಮೇಲೆ ಕುಳಿತ ಗಂಡು ಹೆಣ್ಣಾದ ಎರಡು ಹುಡುಗರ ಅನುರೂಪತೆಯನ್ನು ಆಡಿ ತೋರಿಸಿದ್ದು ಸ್ವಾಭಾವಿಕ ಮತ್ತು ಸಹಜವಾದ ವಿನೋದದ

ಮಾತೇ ಸರಿ. ಇಂತಹ ನಗೆಚೇಟಿಗೆಯ ಮಾತುಗಳನ್ನು ಪ್ರತಿಯೊಂದು ಕುಟುಂಬದಲ್ಲಿ ಎಷ್ಟೋ ಸಾರಿ ಹಿರಿಯರು ಆಡುತ್ತಾರೆ. ಮಾಲೋಜಿಯಂತೆ ಅವು ವಿಚಾರಪೂರ್ವಕವಾಗಿ ಕೊಟ್ಟ ವಚನಗಳೆಂದು ಜನರು ಎಣಿಸಲಾರಂಭಿಸಿದರೆ, ಪ್ರತಿಯೊಂದು ಮನೆಯು ಕಾಲುಕೆದರಿ ತೆಗೆದ ಜಗಳಕ್ಕೆ ಈಡಾಗಬಹುದು. ಸಾಮಾನ್ಯವಾಗಿ ಜನರು ಇಂತಹ ಮಾತುಗಳು ಚೇಷ್ಟೆ ಎಂದೆಣಿಸಿ, ಅವುಗಳಿಗೆ ಲಕ್ಷಕೊಡುವುದಿಲ್ಲವಾದ್ದರಿಂದ, ನಮ್ಮೆಲ್ಲರ ಮನೆಗಳು ಶಾಂತವಾಗಿರುತ್ತವೆ. ಆದರೆ ಈಕಾಲಕ್ಕೆ ಮಾಲೋಜಿಯ ಮನಸ್ಸು ಮಹತ್ವಾಕಾಂಕ್ಷೆಯ ರಜೋಗುಣದಿಂದ ಮುಸಕು ಹಾಕಲ್ಪಟ್ಟಿತ್ತು. ಆಗ ಅವನಲ್ಲಿ ನ್ಯಾಯಾನ್ಯಾಯಗಳನ್ನು ತಿಳಿದುಕೊಳ್ಳುವಷ್ಟು ವಿಚಾರಶಕ್ತಿಯೇ ಇದ್ದಿಲ್ಲ. ಆದ್ದರಿಂದ ಜಾಧವರಾಯನು ತನ್ನ ಮಗಳನ್ನು ಶಹಾಜಿಗೆ ಕೊಡುತ್ತೇನೆಂದು ಮಾತು ಕೊಟ್ಟನೆಂತಲೂ ಮುಂದೆ ತಾನು ಬಡವನಾಗಿದ್ದುದರಿಂದ ಹೆಂಡತಿಯ ಮಾತುಕೇಳಿ, ತನ್ನ ವಚನವನ್ನು ಮುರಿಯುಲೆಳಸುತ್ತಾನೆಂತಲೂ ನೆರೆನಂಬಿದ್ದನು. ಅವನು ಹೇವಿನವನೂ, ಧೀರನೂ, ಧೈರ್ಯಶಾಲಿಯೂ, ದೀರ್ಘಪ್ರಯತ್ನಿಯೂ ಆದ್ದರಿಂದ ಹೇಗಾದರೂ ವಿಶ್ವಪ್ರಯತ್ನಮಾಡಿ, ಜಾಧವರಾಯನನ್ನು ಹಣ್ಣುಮಾಡಿ, ಅವನ ಮಗಳನ್ನು ತನ್ನ ಮಗನಿಗೆ ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿದನು.*

ಮಾಲೋಜಿಯ ಹಟವು ಅನ್ಯಾಯದ್ದಾದರೂ ಅವನ ಪೂರ್ವಜನ್ಮದ ಸುಕೃತದಿಂದಲೋ ಅವನ ಧೈರ್ಯಸಾಹಸಾದಿಗುಣಗಳಿಗೆ ಮೆಚ್ಚಿಯೋ ಶ್ರೀ ಭವಾನಿಯು ಅವನಿಗೆ ಅನುಕೂಲಳಾಗಿ, ಅವನ ಹೊಲದಲ್ಲಿದ್ದ ಹುತ್ತಿನ ಕೆಳಗೆ ಒಂದು ಹಣದ ಕೊಪ್ಪರಿಗೆ ಇರುತ್ತದೆಂದು ಅವನ ಕನಸಿನಲ್ಲಿ ಬಂದು ಹೇಳಿದಳಂತೆ. ಅದರಂತೆ ಅಗಿದು ನೋಡಲು, ಹೇರಳ ಹಣವು ದೊರೆಯಿತು. ಆದರಿಂದ ಅವನು ೧,೦೦೦ ಮಂದಿ ಕುದುರೆ ಸ್ವಾರರನ್ನಿಟ್ಟುಕೊಂಡು,

---

* ನಿಂದಂತು ನೀತಿನಿಪುಣಾ ಯದಿ ವಾ ಸ್ತುವಂತು।
ಲಕ್ಷ್ಮೀಃ ಸಮಾವಿಶತು ಗಚ್ಛತು ವಾ ಯಥೇಷ್ಟಮ್॥
ಅದ್ಯೈವ ವಾ ಮರಣಮಸ್ತು ಯುಗಾಂತರೇವಾ।
ನ್ಯಾಯಾತ್ಪಥಃ ಪ್ರವಿಚಲಂತಿ ಪದಂ ನ ಧೀರಾಃ॥ (ಸುಭಾಷಿತ.)

ಜಾಧವರಾಯನ ಊರುಗಳಲ್ಲಿ ಪುಂಡಾಟಗೆಯನ್ನು ಮಾಡತೊಡಗಿದನು. ಈ ಹಾವಳಿಯಿಂದ ಏನೂ ಪ್ರಯೋಜನವಾಗಲಿಲ್ಲ. ಆದ್ದರಿಂದ ಮಾಲೋಜಿಯು ತನ್ನ ಬೀಗನಾದ ನಿಂಬಾಳಕರನ ಮಧ್ಯಸ್ಥಿಕೆಯಿಂದ ಜಿಜಾವನ್ನು ತನ್ನಮಗನಿಗೆ ಕೊಡಬೇಕೆಂದು ಕೇಳಿದನು. ಅದಕ್ಕೆ ಜಾಧವರಾಯನು ಮಾಲೋಜಿಯು ಸರಿಕನಲ್ಲುದರಿಂದ ತನ್ನ ಮಗಳನ್ನು ಕೊಡಲಾರೆನೆಂದು ಸ್ಪಷ್ಟವಾಗಿ ಹೇಳಿ ಕಳುಹಿದನು. ಈ ಮೇರೆಗೆ ತಾನು ಮಾಡಿದ ಪ್ರಯತ್ನಗಳೆಲ್ಲ ವ್ಯರ್ಥವಾದುದನ್ನು ನೋಡಿ, ಮಾಲೋಜಿಯು ಚಿಂತಾಕ್ರಾಂತನಾಗಿ, ತನ್ನ ಬೀಗನಿಂದ ೨,೦೦೦ ರಾಹುತರ ನೆರವನ್ನು ಪಡೆದು, ನಿಜಾಮುಶಾಹಿಯ ರಾಜ್ಯದಲ್ಲಿ ಹಾವಳಿಯನ್ನು ಮಾಡತೊಡಗಿದನು. ಒಂದು ದಿನ ಒಂದು ಕಾಡು ಹಂದಿಯನ್ನು ಹೊಡೆದು, ಅದರ ಕೊರಳಲ್ಲಿ ಒಂದು ಚೀಟಿಯನ್ನು ಕಟ್ಟಿ, ದೌಲತ್ತಾಬಾದಿನ ನೆರೆಯಲ್ಲಿದ್ದ ಒಂದು ಮಸೀದೆಯಲ್ಲಿ ಚೆಲ್ಲಿಸಿದನು. ಈ ಸುದ್ದಿಯು ನಿಜಾಮುಶಹನ ಕಿವಿಗೆ ಹೋಗಿ ಮುಟ್ಟಿತು. ಹಂದಿಯ ಕೊರಳಲ್ಲಿ ಕಟ್ಟಿದ ಚೀಟಿಯ ಒಕ್ಕಣಿಕೆಯು ಕೆಳಗೆ ಬರೆದಂತೆ ಇತ್ತು.

"ನಿಜಾಮುಶಾಹಿಯ ಸರದಾರನಾದ ಲಖುಜಿ ಜಾಧವರಾಯನು ತನ್ನ ಮಗಳನ್ನು ಭೋಸಲೆ ಮಾಲೋಜಿಯ ಮಗನಿಗೆ ಮದುವೆ ಮಾಡಿ ಕೊಡುತ್ತೇನೆಂದು ಪ್ರತಿಷ್ಠಿತ ಜನರ ಸಮಕ್ಷಮವಾಗಿ ಹೇಳಿ, ಮುಂದೆ ಹೆಂಡತಿಯ ಮಾತುಕೇಳಿಕೊಂಡು ಆ ವಚನವನ್ನು ಮುರಿಯಲೆತ್ತುಗಡೆ ಮಾಡುತ್ತಲಿದ್ದಾನೆ. ನಿಜಾಮುಶಹನು ಜಾಧವರಾಯನನ್ನು ತನ್ನ ವಚನಕ್ಕನುಸರಿಸಿ ನಡೆಯುವಂತೆ ಮಾಡುವ ವರೆಗೆ ಈ ಮೇರೆಗೆ ಮಸೀದೆಗಳು ಭ್ರಷ್ಟವಾಗಿ ಮಾಡಲ್ಪಡುವವು."

ಇದು ಮಾಲೋಜಿಯ ಮತ್ತೊಂದು ಉದ್ದುರುಟುತನವೇ ಸರಿ. ಇದಕ್ಕೆ ಅವನಿಗೆ ನಿಜಾಮುಶಾಹಿ ಸರಕಾರದಿಂದ ತಕ್ಕ ಶಿಕ್ಷೆಯಾಗಬೇಕಾಗಿತ್ತು. ಆದರೆ ಕಾಲಮಹಿಮೆಯು ಅತಿವಿಚಿತ್ರವಾದುದು ಮತ್ತು ರಾಜತಂತ್ರವು ಅತಿಕುಟಿಲವಾದುದು. ಅರಸನಿಗೆ ಒಮ್ಮೆ ಪ್ರಿಯರೂ ಅತಿ ವಿಶ್ವಾಸಿಕರೂ ಆದವರು ಮತ್ತೊಮ್ಮೆ ಅವನ ದಂಡನೆಗೆ ಪಾತ್ರರಾಗುತ್ತಾರೆ. ಪುಂಡರೂ ರಾಜದ್ರೋಹಿಗಳೂ ಬಂಡುಗಾರರೂ ಒಮ್ಮೊಮ್ಮೆ ಅರಸರಿಗೆ

ಬೇಕಾದವರಾಗುತ್ತಾರೆ. ಮಾಲೋಜಿಯ ಸುದೈವದಿಂದ ಈ ಕಾಲಕ್ಕೆ ಅವನಂತಹ ಪುಂಡರು ನಿಜಾಮಶಹನಿಗೆ ಅವಶ್ಯವಾಗಿ ಬೇಕಾಗಿದ್ದರು. ಏಕೆಂದರೆ ಅಕ್ಬರ ಬಾದಶಹನ ಎಡೆಬಿಡದ ಕಾಟದಿಂದ ನಿಜಾಮ ಶಾಹಿಯು ತೀರ ಮುರಕಳಿಗೆ ಬಂದಿತ್ತು. ನಿಜಾಮಶಾಹಿಯ ರಾಜಧಾನಿ ಯಾದ ಅಹಮ್ಮದನಗರವು ಮೊಗಲರ ಕಯ್ಸೇರಿದಂದಿನಿಂದ (೧೬೦೦), ಆ ರಾಜ್ಯದಲ್ಲಿ ಶಾಂತಿಯೇ ಇದ್ದಿಲ್ಲ. ಮೊಗಲರು ಯಾವಾಗ ದಂಡೆತ್ತಿ ಬರುವರೋ ಎಂಬ ಹೆದರಿಕೆಯಿದ್ದುದರಿಂದ ನಿಜಾಮಶಹನಿಗೆ ಮಾಲೋಜಿ ಯಂತಹ ಶೂರರು ಬೇಕಾಗಿದ್ದರು. ಆದ್ದರಿಂದ ಅವನು ಮಾಲೋಜಿ ಯನ್ನು ಕರಿಸಿ, ಅವನ ದೂರನ್ನು ಕೇಳಿ, ಅವನಿಗೆ ೫,೦೦೦ ಮನಸಬ್ದಾರಿ ಯನ್ನೂ *'ರಾಜಾ' ಎಂಬ ಬಿರುದನ್ನೂ ಕೊಟ್ಟು, ತನ್ನ ಮಗಳನ್ನು ಶಹಾಜಿಗೆ ಕೊಡಲಿಕ್ಕೆ ಜಾಧವರಾಯನನ್ನು ಒತ್ತಾಯದಿಂದ ಒಡಂಬಡಿಸಿ ದನು. ಮಾಲೋಜಿಗೆ **ಸಿವನೇರಿ, ಚಾಕಣ** ಎಂಬ ೨ ಕೋಟೆಗಳು ಸರಂಜಾಮುವಾಗಿಯೂ ಪುಣೆ, ಸುಪೆ ಎಂಬ ೨ ಪರಗಣೆಗಳು ಉಂಬಳಿ ಯಾಗಿಯೂ ನಿಜಾಮಶಾಹಿಯಿಂದ ದೊರೆತವು. ಮುಂದೆ ಕೆಲವು ದಿವಸ ಗಳ ಮೇಲೆ ಜಿಜಾವುಶಹಾಜಿಯರ ಮದುವೆಯು ಆ ಕಾಲಕ್ಕೆ ನಿಜಾಮ ಶಾಹಿಯ ರಾಜಧಾನಿಯಾದ ದೌಲತ್ತಾಬಾದಿನಲ್ಲಿ ಬಹು ಸಂಭ್ರಮದಿಂದ ಜರಗಿತು (ಏಪ್ರಿಲ್ ೧೬೦೪). ಮುಂದೆ ೧೬೨೩ ರಲ್ಲಿ ಆ ದಂಪತಿಗಳ ಹಿರಿಮಗನಾದ ಶಂಭುಜಿಯು ಹುಟ್ಟಿದನು.

ನಿಜಾಮಶಹನ ಕೃಪೆಯಿಂದ ತನ್ನ ಬಯಕೆಯು ಪೂರ್ಣವಾದ್ದ ರಿಂದ ಮಾಲೋಜಿಯು ಸಂತುಷ್ಟನಾಗಿ ಕೃತಜ್ಞತೆಯಿಂದಲೂ, ದಕ್ಷತೆ ಯಿಂದಲೂ, ಹುರುಪಿನಿಂದಲೂ ಆ ಸರಕಾರದ ಸೇವೆಯನ್ನು ಮನಃಪೂ ರ್ವಕವಾಗಿ ೧೫ ವರ್ಷಮಾಡಿ ಕಾಲವಾದನು (೧೬೧೯). ಆ ಕಾಲದ ಪದ್ಧತಿ ಯಂತೆ ನಿಜಾಮಶಹನು ಮಾಲೋಜಿಯ ಬಿರುದನ್ನೂ ಮನಸಬನ್ನೂ ಉಂಬಳಿ ಸರಂಜಾಮುಗಳನ್ನೂ ಅವನ ಹಿರಿಮಗನಾದ ಶಹಾಜಿಗೆ ಕೊಟ್ಟನು.

---

* ಈ ಮನಸಬ್ದಾರಿಯು ೧೨,೦೦೦ ದ್ದಿತ್ತೆಂದು ಕೃ. ಅ. ಕೇಳೂಸಕರರು ಬರೆ ಯುತ್ತಾರೆ. ಇದು ಅಸಂಭವವೆಂದು ತೋರುತ್ತದೆ.

ಇನ್ನು ಮುಂದೆ ಶಹಾಜಿಯು ಶಹಾಜಿರಾಜನೆಂಬ ಹೆಸರಿನಿಂದ ನಿಜಾಮುಶಾಹಿಯ ಊಳಿಗವನ್ನು ಮಾಡತೊಡಗಿದನು. ಆ ಕಾಲಕ್ಕೆ **ಮಲಿಕಂಬರ**ನೆಂಬ ಹಬಸಿಯ ಕುಲದ ಸರದಾರನು ನಿಜಾಮುಶಾಹಿಯ ಆಧಾರಸ್ತಂಭನಾಗಿದ್ದನು. ಅವನು ಶೂರನೂ ಜಾಣನೂ ಚತುರನೂ ಪ್ರಜೆಗಳ ಕ್ಷೇಮಚಿಂತಕನೂ ಆಗಿದ್ದನು. ಆ ಸರಕಾರದಲ್ಲಿ ಕೆಲಮಂದಿ ಮರಾಟರು ಪ್ರಮುಖ ಸರದಾರರಾಗಿದ್ದರು. ಅವರೊಳಗೆ ಕೆಲವರು ಮಲಿಕಂಬರನ ಹೆಚ್ಚಳವನ್ನು ಸಹಿಸಲಾರದೆ ಅವನ ವಿರುದ್ಧವಾಗಿ ಒಳಸಂಚು ನಡಿಸಿದರು. ಅದು ಬೈಲಿಗೆ ಬಂದುದರಿಂದ ಮಲಿಕಂಬರನು ಆ ಒಳಸಂಚಿನ ಮುಖ್ಯಸ್ಥನಾದ **ಮಿಯಾನರಾಜು** ಎಂಬವನನ್ನು ಹಿಡಿದು ಸೆರೆಯಲ್ಲಿಟ್ಟನು. ಶಹಾಜಿರಾಜನ ಮಾವನಾದ ಜಾಧವರಾಯನು ಈ ಒಳಸಂಚಿಗೆ ಸೇರಿದ್ದರಿಂದ, ಹೆದರಿ, ಓಡಿಹೋಗಿ ಮೊಗಲರ ಮರೆಹೊಕ್ಕು ಆ ಸರಕಾರದ ಮನಸಬ್ದಾರಿಯನ್ನು ಪಡೆದನು. ಶಹಾಜಿರಾಜನು ಮಾತ್ರ ಒಳಸಂಚಿನಲ್ಲಿ ಸೇರದೆ ಮಲಿಕಂಬರನನ್ನು ಹಿಂಬಾಲಿಸಿ ಅವನ ನಂಬಿಗೆಗೆ ಪಾತ್ರನಾಗಿದ್ದನು.

ಈ ಮಲಿಕಂಬರನು ೧೪ ನೆಯ ಮೇ ೧೬೨೬ ರಲ್ಲಿ ಸತ್ತುದರಿಂದ ಅವನ ಮಗನಾದ ಫತ್ತೆಖಾನನು ನಿಜಾಮುಶಾಹಿಯ ವಜೀರನಾದನು. ಇವನು ಕೊಬ್ಬಿನವನೂ ಪೀಡಕನೂ ಜಂಬದವನೂ ಆದ್ದರಿಂದ ಇವನಿಗೂ ಉಳಿದ ಕೆಲ ಸರದಾರರಿಗೂ ಕೂಡಿಬರಲಿಲ್ಲ. ವಜೀರನಾದ ಕೂಡಲೆ ಅವನು ವಿಜಾಪುರದ ಮೇಲೆ ದಂಡೆತ್ತಿ ಹೋದನು (೨೨ ಸಪ್ಟ. ೧೬೨೬). ಶಹಾಜಿರಾಜನಿಗೆ ಅವನೊಡನೆ ಹೋಗಬೇಕಾಯಿತು. ಆಗ * ಅವನ

---

* ಈ ಕಾಲಕ್ಕೆ ಶಹಾಜಿರಾಜನು ದೌಲತ್ತಾಬಾದನ್ನು ಬಿಟ್ಟು ಹೋದುದರ ಕಾರಣವನ್ನು ನಾನು ಕಾಯಾಸಕಟ್ಟಿ ಬರೆದಿರುತ್ತೇನೆ. ಪಂಡಿತ ಸರ್ಕಾರರು ಈ ಸಂಬಂಧದಿಂದ ಏನೂ ಬರೆಯುವುದಿಲ್ಲ. ಕೇಳೂಸಕರರು ಬರೆಯುವುದೇನಂದರೆ— ಮೊಗಲರು ದೌಲತ್ತಾಬಾದನ್ನು ಮುತ್ತಲು ಶಹಾಜಿರಾಜನು ಚಿಕ್ಕ ನಿಜಾಮಶಹನನ್ನೂ ಅವನ ತಾಯಿಯನ್ನೂ ಕರಕೊಂಡು **ಮಾಹುಲಿ** ಕೋಟೆಗೆ ಹೋದನು. ಜಾಧವರಾಯನು ಮೊಗಲದಂಡಿನೊಡನೆ ಬಂದು ಅದನ್ನು ಮುತ್ತಿದಾಗ ನಿಜಾಮು

ಹೆಂಡತಿಯಾದ ಜೀಜಾಬಾಯಿಯು ೪-೫ ತಿಂಗಳು ಬಸುರಿದ್ದುದರಿಂದ ದಾರಿಯಲ್ಲಿ ಆಕೆಗೆ ಹೊಟ್ಟೆಕಡತವು ಎದ್ದಿತು. ಆದಕಾರಣ ಶಹಾಜಿರಾಜನಿಗೆ ಆಕೆಯನ್ನು ಸಂಗಡ ಕರೆದುಕೊಂಡು ಹೋಗುವ ಬಗೆಯು ತೋರದ್ದರಿಂದ ನಿರುಪಾಯನಾಗಿ ಆಕೆಯನ್ನೂ ಆಕೆಯ ಸಂರಕ್ಷಣೆಯ ಬಗ್ಗೆ ಕೆಲವು ಸ್ವಾರರನ್ನೂ ಸಿವನೇರಿ ಕೋಟೆಯಲ್ಲಿಟ್ಟು, ನೆರೆಯಲ್ಲಿದ್ದ ಜುನ್ನರದ ಇನಾಮದಾರನೂ ತನ್ನ ನಂಬಿಗೆಯ ಗೆಳೆಯನೂ ಆದ ಶ್ರೀನಿವಾಸರಾಯನೆಂಬವನಿಗೆ † ಆಕೆಯನ್ನು ನೋಡಲಿಕ್ಕೆ ಹೇಳಿ, ತನ್ನ ಹಿರಿಮಗನಾದ ಶಂಭುಜಿಯೊಡನೆ ತಾನು ಮುಂದಕ್ಕೆ ತೆರಳಿದನು. ಈ ದಂಡಯಾತ್ರೆಯಿಂದ ಫತ್ತೆಖಾನನು ಅವಿವೇಕಿಯೆಂದು ಆದಿಲಶಾಹಿ ಸರಕಾರಕ್ಕೆ ಗೊತ್ತಾಯಿತೇ ಹೊರತು ಮತ್ತೇನು ಫಲವಾಗಲಿಲ್ಲ.

೧೬೨೮ರಲ್ಲಿ ಶಹಾಜಹಾನ ಬಾದಶಹನು ದೊಡ್ಡದಂಡಿನೊಡನೆ ನಿಜಾಮಶಾಹಿಯನ್ನೊಳನುಗ್ಗಿದನು. ಮೊಗಲರು **ಬೀರ** ಕೋಟೆಯನ್ನು ತೆಗೆದುಕೊಳ್ಳಲಿಕ್ಕೆ ಹೋದಾಗ ಫತ್ತೆಖಾನನು ಅವರನ್ನು ಹಿಂಭಾಗದಲ್ಲಿ ಹೆದರಿಸಲಿಕ್ಕೆ ಶಹಾಜಿರಾಜನನ್ನು ೬,೦೦೦ ಸ್ವಾರರೊಡನೆ ಕಳುಹಿದನು.

---

ಶಹನ ತಾಯಿಯು ಅವನಮೇಲೆ ಸಿಟ್ಟಾದ್ದರಿಂದ ಶಹಾಜಿಯು ಅಲ್ಲಿಂದ ಓಡಿಹೋಗುವಾಗ ಜೀಜಾಬಾಯಿಯನ್ನು ಸಿವನೇರಿಯಲ್ಲಿಟ್ಟನು. ಈ ಬರಹಕ್ಕೆ ಆಧಾರವೇನೂ ದೊರೆಯುವುದಿಲ್ಲ. ಆದರೆ ಸಿವಾಜಿಯು ಸಿವನೇರಿಯಲ್ಲಿ ಹುಟ್ಟಿದನೆಂದು ಎಲ್ಲರು ಒಡಂಬಡುತ್ತಾರೆ. ಫತ್ತೆಖಾನನು ನಿಜಾಮಶಾಹಿಯ ವಜೀರನಾದ್ದರಿಂದ ಶಹಾಜಿರಾಜನಿಗೂ ನಿಜಾಮಶನ ತಾಯಿಗೂ ವೈಮನಸ್ಸು ಹುಟ್ಟುವ ಕಾರಣವಿದ್ದಿಲ್ಲ. ಜಹಂಗೀರಬಾದಶಹನು ೨೮ ಅಕ್ಟೋಬರ ೧೬೨೭ ರಲ್ಲಿ ಸತ್ತುದರಿಂದ ಶಹಾಜಹಾನನು ತನ್ನ ಪಟ್ಟದೊರಕಿಸುವ ಗದ್ದಲದಲ್ಲಿದ್ದಕಾರಣ ಮೊಗಲರು ದೌಲತ್ತಾಬಾದನ್ನು ಮುತ್ತುವ ಸಂಭವವಿದ್ದಿಲ್ಲ. ಇದಲ್ಲದೆ ಈ ಕಾಲಕ್ಕೆ ಮೊಗಲರ ದಕ್ಷಿಣದ ಸುಬೇದಾರನಾದ ಖಾನಜಹಾನ ಲೋಡಿಯು ನಿಜಾಮಶಾಹಿಗೆ ಅನುಕೂಲನಾಗಿದ್ದನು (ಎಲ್ಫಿನಸ್ಟನ ಪುಟ ೫೭೬).

† ಇವನು ಕರ್ನಾಟಕದಿಂದ ಅತ್ತಕಡೆಗೆ ಹೋಗಿ ನಿಂತವನೆಂದು ತೋರುತ್ತದೆ.

ಮೊಗಲರು ಅವನನ್ನು ಸೋಲಿಸಿ ಓಡಿಸಿಬಿಟ್ಟರು. ಮೊಗಲರನ್ನು ಅಡ್ಡ ಗಟ್ಟಲಿಕ್ಕೆ ಮಾಡಿದ ಫತ್ತೆಖಾನನ ಪ್ರಯತ್ನಗಳೆಲ್ಲಾ ವ್ಯರ್ಥವಾದ್ದರಿಂದ ನಿಜಾಮುಶಹನು ಸಿಟ್ಟಾಗಿ, ಅವನನ್ನು ಸೆರೆಯಲ್ಲಿಟ್ಟು **ಹಮೀದ ಖಾನ** ನೆಂಬ ಮತ್ತೊಬ್ಬ ಹಬಸಿಯನ್ನು ತನ್ನ ವಜೀರನಾಗಿ ಮಾಡಿಕೊಂಡನು



ಶಹಾಜಹಾನ ಬಾದಶಹ.

(೧೬೩೦). ಈ ಸುಮಾರಿಗೆ ಶಹಾಜಿರಾಜನು ನಿರಾಧಾರನಾಗಿ ತನ್ನ ಗೆಳೆಯನಾದ ಜುನ್ನರದ ಶ್ರೀನಿವಾಸರಾಯನ ಬಳಿಯಲ್ಲಿ ಹೋಗಿ ನಿಂತನೆಂದು ತೋರುತ್ತದೆ. ಅಲ್ಲಿಂದ ಅವನು ಮೊಗಲ್ಬಾದಶಹನ ಆಶ್ರಯ ಬೇಡಲು

ಅವನಿಗೆ ೫,೦೦೦ ದ ಮತ್ತು ಅವನ ಮಗ ಶಂಭುಜಿಗೆ ೨,೦೦೦ ದ ಮನಸ ಬ್ದಾರಿಗಳು ದೊರೆತವು. ಮುಂದೆ ೨ ವರ್ಷಗಳ ಮೇಲೆ ಅವನಿಗೆ ಕೊಟ್ಟ ಜಹಗೀರನ್ನು ಬಾದಶಹನು ಫತ್ತೆಖಾನನಿಗೆ ಕೊಟ್ಟದರಿಂದ ಶಹಾಜಿಯು ಸಿಟ್ಟಿಗೆದ್ದು ಮೊಗಲರ ಊಳಿಗವನ್ನು ಬಿಟ್ಟುಕೊಟ್ಟನು (೧೬೩೨). ಮರು ವರುಷ ದೌಲತ್ತಾಬಾದಿನ ಮೊಗಲರ ಕಿಲ್ಲೇದಾರನಾದ ಇರಾದತ್ತ ಖಾನನು ಮೊಗಲರ ಊಳಿಗವನ್ನು ಸೇರಲಿಕ್ಕೆ ವಿಠೋಜಿಯ ಮಗನಾದ ಮಾಲೋಜಿಯ ಮುಖಾಂತರವಾಗಿ ಸಂಧಾನ ನಡಿಸಿದನು. ಅವನು ಬೇಡಿದ ಜಹಗೀರನ್ನು ಬಾದಶಹನಿಂದ ಕೊಡಿಸುವೆನೆಂದು ಆಶ್ವಾಸನ ಕೊಟ್ಟನು. ಆದರೆ ಶಹಾಜಿಯು ಮಹತ್ವಾಕಾಂಕ್ಷಿಯೂ, ಶೂರನೂ, ಕರ್ತೃತ್ವಿಯೂ ಆದ್ದರಿಂದ ಆ ಊಳಿಗಕ್ಕೆ ಒಡಂಬಡದೆ, ನಿಜಾಮಶಾಹಿಯ ಪುನರು ತ್ಥಾಪನೆಗೆ ನೆರವಾಗಬೇಕೆಂದು ಆದಿಲಶಾಹಿಯೊಡನೆ ಮಾತುಕಥೆ ನಡಿ ಸಿದನು. ಈ ಸೂಚನೆಗೆ ಆದಿಲಶಹನು ಒಪ್ಪಿಕೊಂಡು, **ಮುರಾರಿ ರಾಯ** ನೊಡನೆ ಒಂದು ದಂಡನ್ನು ಶಹಾಜಿಗೆ ನೆರವಾಗಲಿಕ್ಕೆ ಕಳಿಸಿದನು. ಅವನ ಸಾಹಾಯ್ಯದಿಂದ ಶಹಾಜಿಯು **ಮುರ್ತಿಜಾ** ಎಂಬ ಒಬ್ಬ ಹುಡುಗ ನಿಗೆ ನಿಜಾಮಶಾಹಿ ಪಟ್ಟಗಟ್ಟಿ, ಕೆಳಕೊಂಕಣದ ಜಹಗೀರದಾರನಾದ ಸಿದ್ದಿಸಬಾಸೈಫಖಾನನಿಗೆ ಭೀಮಗಡಕ್ಕೆ ಬಂದು ನಿಜಾಮಶಹನನ್ನು ಮನ್ನಿಸಬೇಕೆಂದು ಕಾಗದ ಕಳುಹಿದನು. ಅವನು ಹಾಗೆ ಮಾಡಲಿಕ್ಕೆ ಒಡಂಬಡದೆ ತನ್ನ ಜಹಗೀರನ್ನು ಶಹಾಜಿಗೆ ಒಪ್ಪಿಸಿ, ವಿಜಾಪುರಕ್ಕೆ ಹೊರ ಟನು. ಸಿದ್ದಿಯು ನಿಜಾಮಶಹನ ಆನೆಗಳನ್ನು ಹಿಡಕೊಂಡನೆಂಬ ನೆವದಿಂದ ಶಹಾಜಿಯು ಖೇಡದ ಹತ್ತರ ಅವನ ದಂಡಿನ ಮೇಲೆ ಬಿದ್ದು, ಅವನ ದಳವಾಯಿಯನ್ನು ಸೋಲಿಸಿ ಸೆರೆಹಿಡಿದು, ಸಿದ್ದಿಯು ಇದ್ದ ಖೇಡನ್ನು ಮುತ್ತಿದನು. ಬಳಿಕ ಮುರಾರಿರಾಯನು ಅಲ್ಲಿಗೆ ಬಂದು ಅವನನ್ನು ಬಿಡಿಸಿ ಕೊಂಡು ವಿಜಾಪುರಕ್ಕೆ ಹೋದನು. ಈ ಸಿದ್ದಿಯಿಂದ ಶಹಾಜಿಗೆ ಭಿವಂಡಿ ಜಂಜಿರಾ ಪರಗಣೆಗಳು ದೊರೆತವು.

'ಲೋಭಮೂಲಾನಿ ಪಾಪಾನಿ' ಎಂಬ ಸಂಸ್ಕೃತ ನಾಣ್ಣುಡಿಯು ಓದುವವರಿಗೆ ಗೊತ್ತಿರಬಹುದು. ಲೋಭವುಳ್ಳವನು ಅಣ್ಣತಮ್ಮ ತಂದೆ ತಾಯಿ ಮಕ್ಕಳನ್ನೂ ಜೀವದ ಗೆಳೆಯನನ್ನೂ ಒಡೆಯನನ್ನೂ ಕೊಲ್ಲಲಿಕ್ಕೆ

ಹಿಂದೆಮುಂದೆ ನೋಡುವುದಿಲ್ಲೆಂದು ಒಬ್ಬ ಕವಿಯು ಬರೆಯುತ್ತಾನೆ. * ರಾಜ್ಯಲೋಭವಂತೂ ಅತಿಕೆಟ್ಟದು. ಈ ಕಾಲಕ್ಕೆ ಶಹಾಜಿಯ ರಾಜ್ಯ ಲೋಭವು ಹೆಚ್ಚಿದ್ದರಿಂದ ಅವನು ತನ್ನ ಜೀವದ ಗೆಳೆಯನೂ ಆಶ್ರಯದಾತನೂ ಆದ ಶ್ರೀನಿವಾಸರಾಯನನ್ನು ಊಟಕ್ಕೆ ಕರೆದು, ಮೋಸದಿಂದ ಸೆರೆ ಹಿಡಿದು, ಅವನ ವಶದಲ್ಲಿದ್ದ ಜುನ್ನರ, ಶ್ರೀವರ್ಧನ, ಸೌದಾ ಮುಂತಾದ ಕೋಟೆಗಳನ್ನು ತನ್ನ ವಶಮಾಡಿಕೊಂಡು, ತನ್ನ ಕಯ್ಯೊಳಗಿನ ಗೊಂಬೆಯಂತಿರುವ ನಿಜಾಮಶಹನನ್ನು ಭೀಮಗಡದಿಂದ ಜುನ್ನರಕ್ಕೆ ತಂದು ಮುಂದೆ ೩ ವರ್ಷ ಅತಿವೈಭವದಿಂದ ಕಾಲಕಳೆದನು (೧೬೩೦).

ಶಹಾಜಿಯ ಪುಂಡಾಟಿಗೆಯನ್ನು ನೋಡಿ ಶಹಾಜಹಾನನು ಸಿಟ್ಟಿಗೆದ್ದು ಅದಿಲಶಹ ಶಹಾಜಿಯರೊಡನೆ ಯುದ್ಧ ಹೂಡಿದನು. ಮುರಾರಿರಾಯನ ಸಾಹಸದಿಂದ ಮೊಗಲರು ಹಾಕಿದ **ಪರೆಂಡಾ** ಕೋಟೆಯ ಮುತ್ತಿಗೆಯು ಎದ್ದಿತು (ಫೇಬ್ರು—ಮೇ ೧೬೩೪). ಶಹಾಜಿಯು ದೌಲತ್ತಾಬಾದಿನ ನೆರೆಯಲ್ಲಿದ್ದ ಹಳ್ಳಿಗಳನ್ನು ಲೂಟಮಾಡತೊಡಗಿದ್ದರಿಂದ ಮೊಗಲರು ಅವನನ್ನು ಬೆನ್ನಟ್ಟಿ ಸೋಲಿಸಿ ಓಡಿಸಿ, ಅವನ ಅನ್ನಸಾಮಗ್ರಿಯನ್ನೆಲ್ಲ ಹಿಡಿಕೊಂಡರು (೧೬೩೫). ಮರುವರುಷ ಮೊಗಲರು ನಾಸಿಕ, ಸಂಗಮನೇರ ಮುಂತಾದ ಸ್ಥಳಗಳಿಂದ ಮರಾಟರನ್ನು ಓಡಿಸಿ, ಜುನ್ನರಕ್ಕೆ ಬರುವಷ್ಟರಲ್ಲಿ ಶಹಾಜಿಯ ಸುದೈವದಿಂದ ಮೊಗಲ್ ದಳವಾಯಿಗೆ ವಿಜಾಪುರಕ್ಕೆ ಹೋಗಬೇಕೆಂದು ಹುಕುಮು ಬಂತು. ಅದಿಲಶಾಹಿಯೊಡನೆ ಒಪ್ಪಂದವಾದ ಬಳಿಕ ಶಹಾಜಿಯು ನಿರುಪಾಯನಾಗಿ ನಿಜಾಮಶಹನನ್ನೂ ಜುನ್ನರ ಮುಂತಾದ ಕೋಟೆಗಳನ್ನೂ ಮೊಗಲರಿಗೆ ಒಪ್ಪಿಸಿ, ಮೊಗಲ ಬಾದಶಹನ ಅಪ್ಪಣೆಯಿಂದ ವಿಜಾಪುರದ ಊಳಿಗವನ್ನು ಸೇರಿದನು (ಅಕ್ಟೋಬರ ೧೬೩೬).

ಶಹಾಜಿಯು ಬಹು ಚತುರನಾಗಿದ್ದನು. ೧೬೩೦ರಲ್ಲಿ ಮುರಾರಿರಾಯನು ವಿಜಾಪುರಕ್ಕೆ ತಿರುಗಿ ಹೋಗುವಾಗ **ಸಾಬಲ** ಎಂಬಲ್ಲಿ ತುಲಾ

---

* ಮಾತರಮ್ ಪಿತರಮ್ ಪುತ್ರಮ್ ಭ್ರಾತರಮ್ ವಾ ಸುಹೃತ್ತಮಮ್।
ಲೋಭಾವಿಷ್ಟೋ ನರೋ ಹಂತಿ ಸ್ವಾಮಿನಮ್ ವಾ ಸಹೋದರಮ್॥
(ಸುಭಾಷಿತ.)

ಭಾರ ಮಾಡಿಸಿಕೊಂಡನು. ಆಗ ತಾನು ಹತ್ತಿದ್ದ ಆನೆಯ ತೂಕವನ್ನು ಹೇಗೆ ಮಾಡಬೇಕೆಂಬುದು ಅವನಿಗೆ ಹೊಳೆಯಲಿಲ್ಲ. ಆಗ ಜಾಣನಾದ ಶಹಾಜಿಯು ಆನೆಯನ್ನು ಹತ್ತಿಸಿದಾಗ ಹಡಗು ಎಷ್ಟು ಮುಣಗುತ್ತದೆಂಬುವನ್ನು ನೋಡಿ ಅಷ್ಟು ಕಲ್ಲುಗಳನ್ನು ಹಡಗಿನ ಮೇಲೆ ಹಾಕಿದರೆ, ಆ ಕಲ್ಲುಗಳಷ್ಟೇ ಆನೆಯ ತೂಕವಿರುತ್ತದೆಂದು ಸೂಚಿಸಿದ್ದರಿಂದ ಅವನು ಹಾಗೇ ಮಾಡಿದ್ದಲ್ಲದೆ ಶಹಾಜಿಗೆ ಅಂದಿನಿಂದ ಕೃತಜ್ಞನಾದನು. ಆ ಹೊತ್ತಿನಿಂದ ಪಾಬಲಕ್ಕೆ **ತುಲಾಪುರ** ವೆಂಬ ಹೆಸರು ಬಿದ್ದಿದೆ.

---

## ೨ ನೆಯ ಪ್ರಕರಣ

### ಹುಟ್ಟೂ ಚಿಕ್ಕತನವೂ.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಶಹಾಜಿರಾಜನು ತನ್ನ ಹೆಂಡತಿಯಾದ ಜೀಜಾಬಾಯಿಯನ್ನು ಸಿವನೇರಿಕೋಟೆಯಲ್ಲಿಟ್ಟು ಹೊರಟುಹೋದ ಬಳಿಕ ಆಕೆಯ ತಂದೆಯಾದ ಜಾಧವರಾಯನು ಅಲ್ಲಿಗೆ ಬಂದು ಸಮಾಚಾರ ತಿಳಿದುಕೊಂಡು, ಆಕೆಗೆ ಬೇಕಾದ ಕೆಲವು ಅನುಕೂಲತೆಗಳನ್ನು ಮಾಡಿಕೊಟ್ಟು ತಿರುಗಿಹೋದನಂತೆ.* ಮುಂದೆ ಕೆಲವುದಿನಗಳಾದ ಬಳಿಕ ಜೀಜಾಬಾಯಿಯು ಸುಖರೂಪವಾಗಿ ಗಂಡುಕೂಸನ್ನು ಹೆತ್ತಳು. ಇವನೇ ನಮ್ಮ ಪ್ರತಾಪಶಾಲಿಯಾದ ಚರಿತ್ರನಾಯಕನು—ಸಿವಾಜಿ ಮಹಾರಾಜನು. ಇವನು ಹುಟ್ಟಿದ ದಿವಸವು ಸರಿಯಾಗಿ ಗೊತ್ತಾಗುವುದಿಲ್ಲ. ಬೇರೆ ಬೇರೆ

---

* ಕೇಳೂಸಕರರು ತಮ್ಮ ಛತ್ರಪತಿ ಸಿವಾಜಿ ಚರಿತ್ರದಲ್ಲಿ ಜಾಧವರಾಯನು ಶಹಾಜಿರಾಜನನ್ನು ಬೆನ್ನಟ್ಟಿ ಬಂದಾಗ ಮಗಳನ್ನು ಸಿವನೇರಿಯಲ್ಲಿ ಕಂಡನೆಂದು ಬರೆಯುತ್ತಾರೆ. ಆದರೆ ಶಹಾಜಿರಾಜನು ತನ್ನ ಬೆನ್ನಟ್ಟಿ ದಂಡು ಕಳಿಸುವಷ್ಟು ರಾಜದ್ರೋಹಮಾಡಿದ್ದಕ್ಕೂ ಅಳಿಯ ಮಗಳನ್ನು ಬೆನ್ನಟ್ಟಿ ಬರುವಷ್ಟು ಜಾಧವರಾಯನು ಹಗೆತನತೊಟ್ಟುದಕ್ಕೂ ಆಧಾರಗಳೇನು ದೊರೆಯುವುದಿಲ್ಲ.

ಬರಹಗಾರರು ಬೇರೆ ಬೇರೆ ತಿಥಿಗಳನ್ನು ಕೊಡುತ್ತಾರೆ. ಲೋಕಮಾನ್ಯ ಬಾಳಗಂಗಾಧರ ಟಿಳಕರು ಸಿವಾಜಿಯು ಶಕೆ ೧೫೪೯ ಪ್ರಭವನಾಮ ಸಂವತ್ಸರ ವೈಶಾಖ ಶುದ್ಧ ೧ ಗುರುವಾರ ಉತ್ತರರಾತ್ರಿ ಅಶ್ವಿನೀ ನಕ್ಷತ್ರ ತಾರೀಖು ೬ ಏಪ್ರಿಲ ೧೬೨೭ ಇಸವಿ ದಿವಸ ಹುಟ್ಟಿದನೆಂದು, ತಾರೀಖು ೨೪ ಏಪ್ರಿಲ ೧೯೦೦ ಇಸವಿಯ ಕೇಸರಿ ಪತ್ರದಲ್ಲಿ ಬರೆದಿರುತ್ತಾರೆ. ಇದಕ್ಕೂ ಹೆಚ್ಚು ವಿಶ್ವಸನೀಯವಾದ ತಿಥಿಯು ಗೊತ್ತಾಗುವವರೆಗೆ ಇದೇ ನಮ್ಮ ಚರಿತ್ರನಾಯಕನ ಹುಟ್ಟಿದ ದಿವಸವೆಂದು ಎಣಿಸೋಣ.*

ಸಿವಾಜಿಯ ಜನ್ಮದಬಗ್ಗೆ ೨ ದಂತ ಕಥೆಗಳುಂಟು. (೧) ಶಹಾಜಿಯು ದೌಲತ್ತಾಬಾದಿನಲ್ಲಿದ್ದಾಗ ಒಬ್ಬ ಗೋಸಾವಿಯು ಕನಸಿನಲ್ಲಿ ಬಂದು ಒಂದು ಮಾವಿನ ಹಣ್ಣನ್ನು ಕೊಟ್ಟು ಅದನ್ನು ದಂಪತಿಗಳಿಬ್ಬರೂ ತಿಂದರೆ ಅವರ ಹೊಟ್ಟೆಯಿಂದ ಈಶ್ವರನು ಹುಟ್ಟುವನೆಂದು ಹೇಳಿ ಹೋದ ನಂತೆ. (೨) ಸಿವಾಜಿಯು ಹುಟ್ಟಿದ ಬಳಿಕ ಈಶ್ವರನು ಶಹಾಜಿಯ ಕನಸಿನಲ್ಲಿ ಬಂದು "ನಿನಗೆ ಈಗ ಹುಟ್ಟಿದ ಮಗನು ನನ್ನ ಅವತಾರ ನಾಗಿರುತ್ತಾನೆ" ಎಂದು ಹೇಳಿದನಂತೆ. ಈ ಕಥೆಗಳು ನಂಬಿಗೆಗೆ ಎಷ್ಟು ಅರ್ಹವಾಗಿರುತ್ತವೆಂಬುದನ್ನು ವಾಚಕರೇ ಊಹಿಸಬಹುದು. ಅವನು ಈಶ್ವರವತಾರವೆಂದು ತಂದೆತಾಯಿಗಳೂ ಸಮಕಾಲಿಕಜನರೂ ನಂಬ ಲಿಲ್ಲ. ನಮ್ಮೊಳಗೆ ಯಾವನಾದರೊಬ್ಬನು ತನ್ನ ಗುಣಾತಿಶಯದಿಂದ ಪ್ರಸಿ ದ್ಧಿಗೆ ಬಂದರೆ ಸಾಕು, ಹುತ್ತಿನಿಂದ ಇರಿವೆಗಳು ಹೊರಬೀಳುವಂತೆ, ಕಟ್ಟುಕಥೆಗಳು ಒಂದರ ಹಿಂದೊಂದು ಹುಟ್ಟುತ್ತವೆ. ಈ ನಮ್ಮ ಮನಸ್ಸಿನ ಸ್ಥಿತಿಯು ದೇವರಲ್ಲಿದ್ದ ನಮ್ಮ ದೃಢವಿಶ್ವಾಸದ ಸೂಚಕವಾದರೂ ನಮ್ಮ ಸ್ವಾವಲಂಬನ-ಆತ್ಮವಿಶ್ವಾಸಗಳ ಅಭಾವವನ್ನು ತೋರಿಸುತ್ತದೆಂದು ವಿಷಾದಿ ಸಬೇಕಾಗುತ್ತದೆ. ಅದು ಹೇಗೇ ಇರಲಿ. ಆ ಬಲುಗಂಡಾಂತರದ ಕಾಲದಲ್ಲಿ ಗಂಡನಿಂದಲೂ ಹತ್ತಿಹೊಂದಿದವರಿಂದಲೂ ಅಗಲಿ ಒಂಟಿಗಳಾಗಿದ್ದ ಜೀಜಾಬಾಯಿಯು ಸಿವೆಗೆ (ಪಾರ್ವತಿಗೆ) ಹರಕೆಹೊತ್ತು ಗಂಡು

---

* ಕೇಳೂಸಕರರು ವೈಶಾಖ ಶುದ್ಧ ೫ ಸೋಮವಾರ ತಾ|| ೧೦ ಏಪ್ರಿಲ್ ೧೬೨೭ ಇ. ಎಂದು ಬರೆಯುತ್ತಾರೆ.

ಮಗುವನ್ನು ಹೆತ್ತುದರಿಂದ ಆ ಮಗುವಿಗೆ **ಸಿವಾಜಿ** ಎಂದು ಹೆಸರಿಟ್ಟರು. ಆಗ ಶಹಾಜಿಯು ಈ ಸುದ್ದಿಯನ್ನು ಕೇಳಿ ಸ್ವಾಭಾವಿಕವಾಗಿ ಹಿಗ್ಗಿರಬಹುದು.




ಸಿವಾಜಿ.

ಶಹಾಜಿಯು ದೂರದೃಷ್ಟಿಯುವನಾದ್ದರಿಂದ ಫತ್ತೇಖಾನನೊಡನೆ ದಂಡೆತ್ತಿ ವಿಜಾಪುರಕ್ಕೆ ಹೋದಾಗ ಹಣುಮಂತೆ ಬಾಳಕೃಷ್ಣರಾಯನೆಂಬವನ ಮುಖಾಂತರ ನಿಜಾಮಶಾಹಿಯ ಬಗ್ಗೆ ಇದ್ದ ವಿಜಾಪುರದ ಆದಿಲಶಾಹಿ ದರಬಾರದವರ ಅಭಿಪ್ರಾಯವನ್ನು ಗೊತ್ತುಮಾಡಿಕೊಂಡಿದ್ದನು. ಮುಂದೆ ಕೆಲವು ದಿವಸಗಳ ಮೇಲೆ ಮೊಗಲರ ದಂಡಯಾತ್ರೆಯಿಂದ ನಿಜಾಮಶಾಹಿಯು ಮುರಕಳಿಗೆ ಬರಲು, ತಾನೇ ಅಲ್ಲಿಗೆ ಹೋಗಿ,

ಆಕಾಲಕ್ಕೆ ಮುಖ್ಯಾಧಿಕಾರಿಗಳಾದ **ಖವಾಸಖಾನ** * ಮುರಾರಿರಾಯರೆಂಬವರನ್ನು ಕಂಡು, ಅವರನ್ನು ತನ್ನಮತಕ್ಕೆ ಒಡಂಬಡಿಸಿಕೊಂಡನು. ಇವರಿಗೂ ಶಹಾಜಿಗೂ ಏನು ಕರಾರಾಯಿತೆಂಬುದನ್ನು ನಿಶ್ಚಯವಾಗಿ ಹೇಳಲಿಕ್ಕೆ ನಮಗೆ ಆಧಾರವಿಲ್ಲ. ಆದರೂ ನಿಜಾಮಶಾಹಿಯು ಮುರಕಳಿಗೆ ಬಂದುದರಿಂದ ಅದರ ಊರುಗಳನ್ನು ಗೆದ್ದು, ಅದಿಲಶಾಹಿಗೆ ಕೊಡುತ್ತೇನೆಂದು ಶಹಾಜಿಯು ಹೇಳಿದಂತೆ ತೋರುತ್ತದೆ. ಅವನ ಮಾತನ್ನು ನಂಬಿ, ಅದಿಲಶಹನು ಅವನಿಗೆ ಕೆಲವು ದಂಡನ್ನೂ ಹಣವನ್ನೂ ಕೊಟ್ಟನು. ಶಹಾಜಿಯು ಆ ದಂಡಿನೊಡನೆ ಹೊರಟು ಸಂಗಮನೇರದಿಂದ ಪುಣೆಯ ವರೆಗೆ ಎಲ್ಲ ಪ್ರದೇಶವನ್ನೂ ನೆರೆಯಲ್ಲಿದ್ದ ಕೋಟೆಗಳನ್ನೂ ಅದಿಲಶಾಹಿಯ ಕೆಲವು ಊರುಗಳನ್ನೂ ಕಯ್ವಶಮಾಡಿಕೊಂಡು, ಸ್ವತಂತ್ರನಾಗಿ ಇರಲಾರಂಭಿಸಿದನು. ಈ ಸುದ್ದಿಯನ್ನು ಕೇಳಿ ಅದಿಲಶಹನು ಸಿಟ್ಟಾಗಿ, ಮುರಾರಿರಾಯನೊಡನೆ ಅವನ ವಿರುದ್ಧವಾಗಿ ದೊಡ್ಡ ದಂಡನ್ನು ಕಳುಹಿದನು. ಶಹಾಜಿಗೆ ಅವನಿಗೆ ಎದುರಾಗುವಷ್ಟು ಸಾಮರ್ಥ್ಯವಿದ್ದಿಲ್ಲ. ಆದ್ದರಿಂದ ಅವನು ತನ್ನ ಮಿತ್ರನಾದ ಜುನ್ನರದ ಶ್ರೀನಿವಾಸರಾಯನ ಆಶ್ರಯಕ್ಕೆ ಹೋಗಿ ನಿಂತನು. ಮುರಾರಿರಾಯನು ಪುಣೆ ಇಂದಾಪುರ ಮುಂತಾದ ಅವನ ಊರು ಕೋಟೆಗಳನ್ನು ಹಿಡಿಕೊಂಡು, ಅವನ ಅರಮನೆಯನ್ನು ಸುಟ್ಟು ಬೂದಿಮಾಡಿ, ಭಿಲ್ಸಾರದ ತುದಿಯಲ್ಲಿ ಒಂದು ಕೋಟೆಯನ್ನು ಕಟ್ಟಿಸಿ, ಅದರ ಸಂರಕ್ಷಣಕ್ಕೆ ರಾಮರಾಯನೆಂಬವನನ್ನು ೨,೦೦೦ ದಂಡಿನೊಡನೆ ಇಟ್ಟು, ಚಂದ್ರರಾಯನೆಂಬವನನ್ನು ಕೆಳಕೊಂಕಣವನ್ನು ಗೆಲ್ಲಲಿಕ್ಕೆ ಕಳುಹಿ, ತಾನು ವಿಜಾಪುರಕ್ಕೆ ತಿರುಗಿಹೋದನು. ವಿಜಾಪುರದ ದಂಡು ತಿರುಗಿ ಹೋದ ಬಳಿಕ ಶಹಾಜಿಯು ಕಳೆಕೊಂಡ ಊರುಗಳನ್ನೂ ಕೋಟೆಗಳನ್ನೂ ಮತ್ತೆ ಒಂದರ ಹಿಂದೊಂದು ಹಿಡಿದುಕೊಳ್ಳಲಾರಂಭಿಸಿ ಮೊಗಲರ ರಾಜ್ಯದಲ್ಲಿ ಕೊಲೆ ಸುಲಿಗೆ ಲೂಟಿಗಳನ್ನು ಮಾಡತೊಡಗಿದನು.

೧೬೨೮ ರಿಂದ ೧೬೩೩ ರ ವರೆಗೆ ನಿಜಾಮಶಾಹಿ ರಾಜ್ಯದಲ್ಲಿ ಶಾಂತತೆಯಿದ್ದಿಲ್ಲ. ಆ ಕಾಲಕ್ಕೆ ಅರಸನಾದ ಮರ್ತುಜಾ ನಿಜಾಮಶಹನು

* ಈ ಖವಾಸಖಾನನು ಮೊದಲು ಮರಾಟನಿದ್ದು ಮುಂದೆ ಕುಲಗೆಟ್ಟು ಮುಸಲ್ಮಾನನಾಗಿ ಘನತೆಗೇರಿದನು. ಅವನ ಮೊದಲಿನ ಹೆಸರು ದೌಲತ್ತಖಾನ.

ಸ್ವೇಚ್ಛೆಯೂ ಸಂಶಯಸ್ವಭಾವದವನೂ ಅವಿವೇಕಿಯೂ ಹಟಮಾರಿಯೂ ಆಗಿದ್ದನು. ತನ್ನ ವಜೀರನಾದ ಫತ್ತೆಖಾನನನ್ನು ಸೆರೆಯಲ್ಲಿಟ್ಟದಲ್ಲದೆ ಶಹಾಜಿಯ ಮಾವನಾದ ಜಾಧವರಾಯನನ್ನು ಮೋಸದಿಂದ ಕೊಲ್ಲಿಸಿದನು. ಇದೇ ಸಮಯದಲ್ಲಿ ಜಹಂಗೀರ ಬಾದಶಹನ ಆಳಿಕೆಯ ಕೊನೆಯಲ್ಲಿ ಮೊಗಲರ ಸಾಮ್ರಾಜ್ಯದ ಮುಖ್ಯದಳವಾಯಿಯಾದ ಖಾನಜಹಾನಲೋಡಿಯು ಶಹಾಜಹಾನ ಬಾದಶಹನೊಡನೆ ಕಡಿದಾಡಿ, ಆಗ್ರಾದಿಂದ ಓಡಿಬಂದು, ನಿಜಾಮಶಹನ ಆಶ್ರಯದಲ್ಲಿ ಉಳಿದನು. ಆದ್ದರಿಂದ ಶಹಾಜಹಾನ ಬಾದಶಹನು ದಂಡೆತ್ತಿಬಂದು ನಿಜಾಮಶಾಹಿ ರಾಜ್ಯವನ್ನೊಳನುಗ್ಗಿದನು. ದೌಲತ್ತಾಬಾದಿನ ನೆರೆಯಲ್ಲಾದ ಒಂದು ದೊಡ್ಡಕಾಳಗದಲ್ಲಿ ಮರ್ತುಜಾ ನಿಜಾಮಶಹನು ಪೂರ್ಣವಾಗಿ ಸೋತುದರಿಂದಲೂ ಆ ಕಾಲಕ್ಕೆ ರಾಜ್ಯದಲ್ಲಿ ಹೆಬ್ಬರವು ಬಿದ್ದುದರಿಂದಲೂ ನಿಜಾಮಶಹನು ಹೆದರಿ ತನ್ನ ಮೊದಲಿನ ವಜೀರನಾದ ಫತ್ತೇಖಾನನನ್ನು ಸೆರೆಯಿಂದ ಬಿಡಿಸಿ, ಮತ್ತೆ ತನ್ನ ವಜೀರನಾಗಿ ಮಾಡಿಕೊಂಡು, ಮೊಗಲರ ವಿರುದ್ಧವಾಗಿ ಅದಿಲಶಾಹಿಯ ಸಾಹಾಯವನ್ನು ಪಡೆದನು. ಅಷ್ಟರಲ್ಲಿ ಕೃತಘ್ನನಾದ ಫತ್ತೇಖಾನನು ರಾಜನಿಷ್ಠೆಯನ್ನೂ ದೇಶಾಭಿಮಾನವನ್ನೂ ತೊರೆದು, ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುವ ಉದ್ದೇಶದಿಂದ ಮರ್ತುಜಾ ನಿಜಾಮಶಹನನ್ನೂ ಅವನ ಪಕ್ಷದವರನ್ನೂ ಕೊಲ್ಲಿಸಿ, ಆ ವಂಶದ ಒಬ್ಬ ಹುಡುಗನನ್ನು ಗಾದೆಯ ಮೇಲೆ ಕುಳ್ಳಿರಿಸಿ, ಮೊಗಲಬಾದಶಹನ ಸ್ವಾಮಿತ್ವ ಕ್ಕೊಡಂಬಟ್ಟು ಒಪ್ಪಂದಮಾಡಿಕೊಂಡನು. ಮುಂದೆ ತುಸು ದಿವಸದಲ್ಲೇ ಮೊಗಲರ ದಂಡು ಮರೆಯಾದ ಕೂಡಲೆ, ಆ ಒಪ್ಪಂದವನ್ನು ಮುರಿದು ಮೊಗಲರಿಗೆ ಬಿಟ್ಟುಕೊಟ್ಟ ಪ್ರಾಂತವನ್ನೊಳನುಗ್ಗಿದನು. ದಕ್ಷಿಣದ ಮೊಗಲರ ಸುಬೇದಾರನಾದ ಮೊಹಬತ್ಖಾನನು ಅವನನ್ನು ಸೋಲಿಸಿ ಜೇರಿಗೆತಂದು (ಮೆತ್ತಗೆಮಾಡಿ) ದೌಲತ್ತಾಬಾದನ್ನು ಮುತ್ತಿದನು. ಆಗಲಾ ಸ್ವಾರ್ಥಪರನಾದ ರಾಜದ್ರೋಹಿಯು ಕಂಗೆಟ್ಟು ನಿರುಪಾಯನಾಗಿ ಬಾಲಕನಾದ ನಿಜಾಮಶಹನನ್ನು ಮೊಗಲರಿಗೆ ಒಪ್ಪಿಸಿ, ತಾನು ಅವರ ಊಳಿಗಕ್ಕೆ ಸೇರಿದನು (೧೬೩೩).

ನಿಜಾಮುಶಾಹಿಯು ರಾಜ್ಯವು ಈ ಮೇರೆಗೆ ಮೊಗಲರ ಕಯ್ಸೇರಿದ್ದರಿಂದ ಈ ಕಾಲಕ್ಕೆ ಶಹಾಜಿಯು ಅವರ ಕಾಟಕ್ಕೆ ಗುರಿಯಾದನು. ಮೊಗಲರ ಪಡೆಗಳು ನಿಜಾಮುಶಾಹಿಯು ಊರುಗಳನ್ನೂ ಕೋಟೆಗಳನ್ನೂ ಒಂದರಹಿಂದೊಂದನ್ನು ಹಿಡಿದುಕೊಳ್ಳತೊಡಗಿದವು. ಆಗ ಶಹಾಜಿರಾಜನು ಹೆದರಿ, ತನ್ನ ಹೆಂಡತಿಮಗನನ್ನು ಸಿವನೇರಿಯನ್ನು ಬಿಡಿಸಿ, ಬಾಯಜಾಪುರವೆಂಬಲ್ಲಿ ತಂದಿಟ್ಟನೆಂದು ತೋರುತ್ತದೆ. ಏಕೆಂದರೆ ಅವನು ನಿಜಾಮುಶಾಹಿಯು ಸರದಾರನಾಗಿದ್ದುದರಿಂದಲೂ ಬಾದಶಹನಿಗೆ ಶರಣುಬಾರದ್ದರಿಂದಲೂ ಅವನ ಮೇಲೆ ಸ್ವಾಭಾವಿಕವಾಗಿ ಮೊಗಲರ ಕಣ್ಣಿತ್ತು. ಇದಲ್ಲದೆ ನಿಜಾಮುಶಾಹಿಯು ಹಾಳಾದ್ದರಿಂದ ಅದಕ್ಕೆ ಸೇರಿದ ಊರುಗಳನ್ನೂ ಕೋಟೆಗಳನ್ನೂ ಹಿಡಿದುಕೊಳ್ಳಲಿಕ್ಕೆ ಅವನು ಈ ಕಾಲಕ್ಕೆ ಹೆಣಗುತ್ತಿದ್ದನು. ಮೊಗಲರ ದಂಡಿಗೆ ಎದುರಾಗುವಷ್ಟು ಕಸವು ಇಲ್ಲದ್ದರಿಂದ ಅವನು ಗೋಡೆಯ ಹಿಂದೆ ನಿಂತು ಹರಳು ಒಗೆಯುತ್ತಿದ್ದನು. ಅಂದರೆ, ಆ ದಂಡು ಸನೆಯಲ್ಲಿಲ್ಲದಾಗ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುತ್ತಿದ್ದನು. ಆದ ಕಾರಣ ಅವನನ್ನು ಸೋಲಿಸುವುದಾಗಲಿ ಸೆರೆಹಿಡಿಯುವುದಾಗಲಿ ಮೊಗಲರಿಗೆ ಸಾಧ್ಯವೆಂದು ತೋರಲಿಲ್ಲ. ಆದ್ದರಿಂದ ಅವರು ಅವನ ಹೆಂಡತಿ ಮಗನನ್ನು ಹಿಡಿದು ಅವನನ್ನು ಜೇರಿಗೆ ತರಬೇಕೆಂದು ಆಲೋಚಿಸಿದರು. ಕರ್ಮಧರ್ಮಸಂಯೋಗದಿಂದ ಇದೇ ಸಮಯಕ್ಕೆ ನಿಜಾಮುಶಾಹಿಯು ಒಬ್ಬ ಕಿಲ್ಲೆದಾರನು ಮೊಗಲರ ಸುಬೇದಾರನಾದ ಮೊಹಬತ್ಖಾನನ ಬಳಿಗೆ ಬಂದು, ತನ್ನನ್ನು ಊಳಿಗಕ್ಕೆ ಸೇರಿಸಿಕೊಳ್ಳಬೇಕೆಂದು ಬೇಡಿಕೊಂಡನು. ಶಹಾಜಿರಾಜನ ಹೆಂಡತಿಮಗನನ್ನು ಹಿಡಿತಂದುಕೊಟ್ಟರೆ ಹಾಗೆ ಮಾಡುವೆನೆಂದು ಸುಬೇದಾರನು ಹೇಳಲು, ಆ ದೇಶದ್ರೋಹಿಯು ಯುಕ್ತಿಪ್ರಯುಕ್ತಿಮಾಡಿ ಜೀಜಾಬಾಯಿ ಸಿವಾಜಿಯರನ್ನು ಹಿಡಿತಂದು ಮೊಹಬತ್ಖಾನನಿಗೆ ಒಪ್ಪಿಸಿದನು. ಖಾನನು ಹಿಗ್ಗುವಷ್ಟರಲ್ಲಿ ಅದೇ ಪಾಳಯದಲ್ಲಿದ್ದ ಜಾಧವರಾಯನ ತಮ್ಮನೂ ಜೀಜಾಬಾಯಿಯು ಕಕ್ಕನೂ ಆದ **ಜಗದೇವರಾಯನು** ಖಾನನ ಬಳಿಗೆ ಬಂದು ಬಿನ್ನವಿಸಿದ್ದೇನಂದರೆ:—"ಶಹಾಜಿರಾಜನಿಗೂ ನಮ್ಮ ಮನೆತನಕ್ಕೂ ವಿರೋಧವಿರುತ್ತದೆಂಬುದು ಎಲ್ಲರಿಗೂ ಗೊತ್ತಿದ್ದ ಮಾತೇ ಸರಿ. ಈ ಹಗೆತನದ ಮೂಲಕ

ಶಹಾಜಿರಾಜನು ಜೀಜಾಬಾಯಿಯನ್ನೂ ಆಕೆಯ ಮಗನನ್ನೂ ಬಿಟ್ಟು ಕೊಟ್ಟು ೨-೩ ವರ್ಷಗಳ ಹಿಂದೆ ಮೋಹಿತೆ ಮನೆತನದ **ತುಕಾಬಾಯಿ** ಎಂಬಾಕೆಯನ್ನು ಮದುವೆಮಾಡಿಕೊಂಡು ಬಾಳ್ವೆಮಾಡುತ್ತಲಿದ್ದಾನೆ. ಈಗ ಜೀಜಾಬಾಯಿಗೂ ಶಹಾಜಿರಾಜನಿಗೂ ಏನೂ ಸಂಬಂಧವಿಲ್ಲ. ಆಕೆಯನ್ನು ಕೈದಿನಲ್ಲಿಟ್ಟರೆ, ನಮ್ಮ ಮನೆತನದ ಅವಮಾನವಾಗುವುದೇ ಹೊರತು ಬೇರೆ ಏನೂ ಪರಿಣಾಮವಾಗಲಾರದು. ಖಾವಂದರು ನನ್ನ ಮೇಲೆ ಲಕ್ಷಕೊಟ್ಟು ದಯವಿಟ್ಟು ಆಕೆಯನ್ನೂ ಆಕೆಯ ಮಗನನ್ನೂ ಬಿಡುಗಡೆಮಾಡಿ, ನಮ್ಮ ಮನೆತನದ ಪ್ರತಿಷ್ಠೆಯನ್ನು ಕಾಯಬೇಕು." ಈ ದೀನವಾಣಿಯನ್ನು ಕೇಳಿ ಮೊಹಬತ್ಖಾನನ ಕಲ್ಲೆದೆಯು ಕರಗಿ ನೀರಾಯಿತು. ಅವನು ಸಿವಾಜಿಯನ್ನೂ ಜೀಜಾಬಾಯಿಯನ್ನೂ ಜಗದೇವರಾಯನಿಗೆ ಒಪ್ಪಿಸಿದನು. ಆಗ ಆ ಕಕ್ಕಮಗಳ ಆನಂದವನ್ನು ಹಿಡಿಯಲಾಸಲ್ಲ. ತವರಮನೆಯಲ್ಲಿ ಸುರಕ್ಷಿತವಾಗಿರಲಿಕ್ಕೆ ಆ ಮಾನವತಿಯಾದ ಜೀಜಾಬಾಯಿಯು ಒಡಂಬಡದ್ದರಿಂದ, ಜಗದೇವರಾಯನು ತಾಯಿ ಮಗನನ್ನು ಒಯ್ದು, ಶಹಾಜಿರಾಜನ ವಶದಲ್ಲಿದ್ದ **ಕೊಂಡಾಣವೆಂಬ** ಕೋಟೆಯಲ್ಲಿಟ್ಟನು (೧೬೩೩).

ಹಿಂದೆ ಹೇಳಿದಂತೆ ಅದಿಲಶಹನು ನಿಜಾಮುಶಹನಿಗೆ ನೆರವಾದ್ದರಿಂದ ಮೊಗಲರ ಹಗೆತನಕ್ಕೆ ಗುರಿಯಾದನು. ಅಸಫಖಾನನೆಂಬ ಮೊಗಲರ ದಳವಾಯಿಯು ಅದಿಲಶಹನನ್ನು ಕಾಳಗದಲ್ಲಿ ನೆರೆಸೋಲಿಸಿ, ಅವನ ರಾಜಧಾನಿಯಾದ ವಿಜಾಪುರವನ್ನು ಮುತ್ತಿದನು. ಈ ಮುತ್ತಿಗೆಯಿಂದ ಏನೂ ಫಲವಾಗದಿರಲು ಮೊಗಲರು ಒಪ್ಪಂದಮಾಡಿಕೊಂಡರು. ನಿಜಾಮುಶಹನಂತೆ ತನ್ನ ಹಾಡು ಆಗಬಹುದೆಂದು ಹೆದರಿ ಅದಿಲಶಹನು ಮೊಗಲರಿಗೆ ಪ್ರತಿಕಾರಮಾಡಲಿಕ್ಕೆ ಜೋಡಣೆಯನ್ನು ಮಾಡತೊಡಗಿದನು. ಶಹಾಜಿರಾಜನು ಮೊಗಲರಿಗೆ ಸಮಶತ್ರುವಾದ್ದರಿಂದಲೂ ಮೊಗಲರ ದಂಡನ್ನು ಎದುರಿಸುವಷ್ಟು ಸಾಮರ್ಥ್ಯವಿಲ್ಲುದರಿಂದಲೂ ಅದಿಲಶಾಹಿಯ ನೆರವನ್ನು ಬೇಡಿದನು. "ಮುಂಡೆಗೆ ಮುಂಡೆ ಕಂಡರೆ ಉಂಡಷ್ಟು ಸಂತೋಷ" ಎಂಬ ಗಾದೆಯಂತೆ ಅದಿಲಶಹನಿಗೆ ಬೇಕಾದ್ದು ದೊರೆದುದರಿಂದ ಅತಿಶಯ ಸಂತೋಷವಾಯಿತು. ಹಿಂದೆ ಅದಿಲಶಹನನ್ನು ಶಹಾ

ಜಿಯು ಮೋಸಮಾಡಿದ್ದರಿಂದ ಅವನನ್ನು ನಂಬಕೂಡದೆಂದು ಕೆಲವು ಮುಸಲ್ಮಾನ ಸರದಾರರು ಹಟಹಿಡಿದರೂ ದೇಶಾಭಿಮಾನಿಯಾದ ಮುರಾರಿ ರಾಯನು ಅವರ ಆಕ್ಷೇಪಣೆಗಳನ್ನೆಲ್ಲ ಖಂಡಿಸಿ, ಅದಿಲಶಹನನ್ನು ಒಡಂ ಬಡಿಸಿದನು. ಆದಿಲಶಹನು ಕೆಲ ಹಣದಂಡನ್ನು ಶಹಾಜಿಗೆ ಸಾಹಾಯಾರ್ಥ ವಾಗಿ ಕೊಡಬೇಕೆಂತಲೂ ನಿಜಾಮುಶಾಹಿಯು **ಬಹಿರಿ** ಮನೆತನದ ಒಬ್ಬ ಹುಡುಗನನ್ನು ಅದಿಲಶಾಹಿಯ ಮಾಂಡಲಿಕ–ನಿಜಾಮುಶಹನಾಗಿ ಮಾಡಿ, ಶಹಾಜಿಯು ಅವನ ದಿವಾನನಾಗಿ ರಾಜ್ಯದಾಡಳತವನ್ನು ಜರಗಿಸಬೇಕೆಂತಲೂ ಗೊತ್ತಾಯಿತು.

ಈ ಕರಾರದಂತೆ ಅದಿಲಶಾಹಿಯಿಂದ ಸಾಕಷ್ಟು ಹಣವೂ ಬೇಕಷ್ಟು ದಂಡೂ ದೊರೆದುದರಿಂದ ಧೈರ್ಯಶಾಲಿಯಾದ ಶಹಾಜಿರಾಜನು **ಶ್ರೀವರ್ಧನ**ದೊಳಗೆ ಕಾವಲಲ್ಲಿದ್ದ ನಿಜಾಮುಶಾಹಿಯು ಒಬ್ಬ ೧೦ ವರ್ಷದ ಹುಡುಗನನ್ನು ತರಿಸಿ, **ಭೀಮಗಡ**ದಲ್ಲಿ ಅವನಿಗೆ ಮಾಂಡಲಿಕ ಪಟ್ಟವನ್ನು ಕಟ್ಟಿ, ತಾನು ಅವನ ವಜೀರನಾಗಿ ದಂಡಿನೊಡನೆ ಹೊರಟು, ನಿಜಾಮು ಶಾಹಿಯ ಪ್ರದೇಶವನ್ನೆಲ್ಲ ತಿರುಗಿ ತನ್ನ ಕಯ್ವಶಮಾಡಿಕೊಂಡನು (೧೬೩೫). ಈ ಹಾವಳಿಯ ಸುದ್ದಿಯನ್ನು ಕೇಳಿ ಶಹಾಜಹಾನ ಬಾದ ಶಹನು ಮತ್ತೆ ದೊಡ್ಡ ದಂಡಿನೊಡನೆ ಅಹಮ್ಮದನಗರಕ್ಕೆ ಬಂದು, ತನ್ನ ದಂಡನ್ನು ಇಬ್ಭಾಗಿಸಿ, ಒಂದು ಭಾಗವನ್ನು ವಿಜಾಪುರವನ್ನು ಮುತ್ತಲಿಕ್ಕೆ ಕಳುಹಿ, ಮತ್ತೊಂದು ಭಾಗವನ್ನು ಶಹಾಜಿರಾಜನನ್ನು ಬೆನ್ನಟ್ಟಲಿಕ್ಕೆ ಕಳುಹಿದನು. ಈ ೨ ನೆಯ ದಂಡು ಶಹಾಜಿಯು ವಶದಲ್ಲಿದ್ದ ಮುಖ್ಯ ಕೋಟೆಗಳನ್ನು ಹಿಡಿಕೊಂಡು ಅವನನ್ನು ಹಿಂದಕ್ಕಟ್ಟಿತು. ವಿಜಾಪುರದ ಮುತ್ತಿಗೆಯು ಕೆಲದಿವಸ ನಡೆದಬಳಿಕ ಮುತ್ತಿದವರೂ ಮುತ್ತಿಸಿಕೊಂಡ ವರೂ ಬೇಸತ್ತರು. ಆದಿಲಶಹನು ವರ್ಷಕ್ಕೆ ೩೦ ಲಕ್ಷರೂಪಾಯಿ ಖಂಡಣಿ ಯನ್ನು ಮೊಗಲ ಬಾದಶಹನಿಗೆ ಕೊಡಲೊಪ್ಪಿದನು ಮತ್ತು ಶಹಾಜ ಹಾನನು ಅದಿಲಶಹನಿಗೆ ಸೊಲ್ಲಾಪುರ, ವಾಂಗಣಿ, ಪರೆಂಡಾ, ಭಾಳಕಿ, ಚಿದಗುಪ, ಪುಣೆ, ಸುಪೆ, ಕೊಂಕಣ ಮುಂತಾದ ಭೀಮಾ ನೀರಾ ಹೊಳೆ ಗಳ ನಡುವಿರುವ ನಿಜಾಮುಶಾಹಿಯ ೫೦ ಪರಗಣೆಗಳನ್ನು ಕೊಡಲೊಡಂ ಬಟ್ಟನು. ಭೋಸಲೆಶಹಾಜಿಯು ಜುನ್ನರ, ತ್ರಿಂಬಕ ಮುಂತಾದ ಕೋಟೆ

ಗಳನ್ನು ಮೊಗಲರಿಗೆ ಬಿಟ್ಟುಕೊಡದಿದ್ದರೆ ಎರಡೂ ಸರಕಾರದವರು ಅವನನ್ನು ದಂಡಿಸಬೇಕೆಂದು ಗೊತ್ತಾಯಿತು (೧೬೩೬).

ಈಮೇರೆಗೆ ನಿಜಾಮಶಾಹಿಯ ಪುನರುಜ್ಜೀವನದ ಪ್ರಯತ್ನವು ಮುಗಿದುದರಿಂದಲೂ ನಿಜಾಮಶಾಹಿಯ ಸಮಾಪ್ತಿಯಾದ್ದರಿಂದಲೂ ಶಹಾಜಿಯು ನಿರುಪಾಯನಾಗಿ ಮೊಗಲಬಾದಶಹನಿಗೆ ಶರಣು ಹೋದನು. ಅವನು ಶಹಾಜಿಯು ಮೋಸಗಾರನೆಂದೆಣಿಸಿ ಅವನನ್ನು ತನ್ನ ದಂಡಿನಲ್ಲಿಟ್ಟುಕೊಳ್ಳದೆ, ಆದಿಲಶಹನ ಊಳಿಗವನ್ನು ಸೇರಲಿಕ್ಕೆ ಅಪ್ಪಣೆಕೊಟ್ಟನು. ಈ ಮೇರೆಗೆ ಅತೋಭ್ರಷ್ಟ ತತೋಭ್ರಷ್ಟನಾದ ಶಹಾಜಿಯು ವಿಜಾಪುರಕ್ಕೆ ಹೋಗಿ, ಅದಿಲಶಹನಿಂದ ಪುಣೆ ಸುಪೆ ಪರಗಣೆಗಳನ್ನು ಉಂಬಳಿಯಾಗಿ ಪಡೆದು, ಅದಿಲಶಾಹಿಗೆ ಹೊಸದಾಗಿ ಬಂದ ನೀರಾ ಭೀಮಾ ಹೊಳೆಗಳ ನಡುವಿರುವ ಪ್ರದೇಶದ ಆಡಳತವನ್ನು ಕ್ರಮಗೊಳಿಸಲಿಕ್ಕೆ ಹೊರಟ ಮುರಾರಿರಾಯನನ್ನು ಹಿಂಬಾಲಿಸಿದನು * (೧೬೩೭).

ಈ ಮೇರೆಗೆ ಸಿವಾಜಿಯ ಹುಟ್ಟನಿಂದ ೧೦ ವರ್ಷಗಳ ವರೆಗೆ ಶಹಾಜಿಯು ರಾಜಕೀಯ ಹೆದ್ದೆರೆಗಳ ಅಲ್ಲೋಲಕಲ್ಲೋಲದಲ್ಲಿ ಸಿಲುಕಿ ಒದ್ದಾಡುತ್ತಿದ್ದುದರಿಂದ ತನ್ನ ಹಿರಿಹೆಂಡತಿ ಚಿಕ್ಕಮಗನ ಸಮಾಚಾರ ತೆಗೆದುಕೊಳ್ಳಲಿಕ್ಕೆ ಅವನಿಗೆ ವಿರಾಮವೇ ದೊರೆತಿದ್ದಿಲ್ಲ. ಈಗ ಆ ಗೊಂದಲವೆಲ್ಲ ತಗ್ಗಿದ್ದರಿಂದ ಅವನು ತನ್ನ ಜಹಗೀರನ್ನೂ ಹೆಂಡತಿ ಚಿಕ್ಕಮಗನನ್ನೂ ದಾದಾಜಿ ಕೊಂಡದೇವನೆಂಬ † ಒಬ್ಬ ವಿಶ್ವಾಸಿಕ ಬ್ರಾಹ್ಮಣನಿಗೆ ಒಪ್ಪಿಸಿ, ಅವರೆಲ್ಲರನ್ನು ಪುಣೆಯಲ್ಲಿರಿಸಿ, ಅವರ ಸಂರಕ್ಷಣೆಗೋಸ್ಕರ ೧,೦೦೦ ರಾಹುತರನ್ನು **ಸಿದ್ದಿ ಹಿಲಾಲ** ನೆಂಬವನ ಕಯ್ಕೆಳಗಿಟ್ಟನು.

---

* ಪಂಡಿತ (ಪ್ರೊಫೆಸರ) ಜಧುನಾಥ ಸರ್ಕಾರರು ಈ ಮುರಾರಿರಾಯನು ೧೬೩೫ ರಲ್ಲಿ ಸತ್ತನೆಂದು ಬರೆಯುತ್ತಾರೆ. ಇದು ನಿಜವಿದ್ದರೆ ಶಹಾಜಿಯು ಬೇರೊಬ್ಬ ಸರದಾರನೊಡನೆ ಹೋಗಿರಬಹುದು.

† ಈ ದಾದಾಜಿಯು ಪುಣೆಪ್ರಾಂತದಲ್ಲಿದ್ದ ಮಲಟಣವೆಂಬ ಗ್ರಾಮದ ಕುಲಕರ್ಣಿಯಾಗಿದ್ದನು. ಮುಂದೆ ಕೊಂಡಾಣದ ಕಿಲ್ಲೆದಾರನೂ ಜುನ್ನರದ ಮುಜುಮದಾರನೂ ಆದಂತೆ ಲೇಖಗಳಿವೆ.

ಜೀಜಾಬಾಯಿಯನ್ನು ಸಿವನೇರಿಕೋಟೆಯಲ್ಲಿ ಇಟ್ಟಂದಿನಿಂದ ಶಹಾಜಿಯ ಪ್ರೀತಿಯು ಆಕೆಯ ಮೇಲೂ ಚಿಕ್ಕಮಗನಾದ ಸಿವಾಜಿಯ ಮೇಲೂ ಎಷ್ಟಿತ್ತೆಂದು ನಿಶ್ಚಯವಾಗಿ ಹೇಳಲಿಕ್ಕೆ ನಮಗೆ ಆಧಾರವೇನೂ ಇಲ್ಲ. ಹಿರಿಮಗನಾದ ೩,೪ ವರ್ಷದ ಶಂಭುಜಿಯನ್ನು ತಾಯಿಯ ಹತ್ತರದಲ್ಲಿ ಇಡದೆ, ಅವನು ತನ್ನಸಂಗಡ ಏಕೆ ಕರೆದುಕೊಂಡು ಹೋದನೆಂಬುದು ತಿಳಿಯುವುದಿಲ್ಲ. ಪಂಡಿತ ಜದುನಾಥ ಸರ್ಕಾರರು ಶಹಾಜಿಯು ಜೀಜಾಬಾಯಿಯನ್ನು ಬಿಟ್ಟದ್ದನೆಂತಲೂ ಸಿವಾಜಿಯ ಬಗ್ಗೆ ಅನಾದರ ತೋರಿಸುತ್ತಿದ್ದನೆಂತಲೂ ಬರೆಯುತ್ತಾರೆ. ಈ ಬರಹಕ್ಕೆ ಹೆಚ್ಚಿನ ಆಧಾರಗಳೇನೂ ದೊರೆಯುವುದಿಲ್ಲ. ಸಿವಾಜಿಯು ಹುಟ್ಟಿದ ೨,೩ ವರ್ಷಗಳ ಮೇಲೆ ಶಹಾಜಿಯು ತುಕಾಬಾಯಿಯೆಂಬವಳನ್ನು ಮದುವೆಮಾಡಿಕೊಂಡು, ಆಕೆಯೊಡನೆ ಪ್ರಪಂಚ(ಸಂಸಾರ)ಮಾಡಿಕೊಂಡಿದ್ದುದು ನಿಜ. ಅವನು ಜೀಜಾಬಾಯಿ ಸಿವಾಜಿಯರನ್ನು ಎಂದೂ ಕರಿಸಿ ತನ್ನ ಹತ್ತಿರ ಇಟ್ಟುಕೊಳ್ಳಲಿಲ್ಲ ಮತ್ತು ತಾನಾದರೂ ಎಂದೂ ಬಂದು ಅವರ ಬಳಿಯಲ್ಲಿರಲಿಲ್ಲ ಎಂದು ಜದುನಾಥ ಸರ್ಕಾರರು ಬರೆಯುತ್ತಾರೆ. ಇಷ್ಟರಿಂದಲೇ ಅವನು ಜೀಜಾಬಾಯಿಯನ್ನು ಬಿಟ್ಟದ್ದನೆನ್ನಕೂಡದು ಮತ್ತು ಸಿವಾಜಿಯನ್ನು ಅನಾದರಿಸುತ್ತಿದ್ದನೆಂದು ಹೇಳಲಾಗದು. ಅವನು ತುಕಾಬಾಯಿಗೆ ಹೆಚ್ಚು ಮೆಚ್ಚಿದ್ದನೆಂದು ಮಾತ್ರ ಧಾರಾಳವಾಗಿ ಹೇಳಬಹುದು. ಅವನು ಸ್ವಾಭಾವಿಕವಾಗಿ ತನ್ನ ಚಿಕ್ಕಹೆಂಡತಿಯನ್ನು ನಚ್ಚಿ, ಹಿರಿ ಹೆಂಡತಿ ಚಿಕ್ಕಮಗನನ್ನು ಅಲಕ್ಷಿಸಿರಬಹುದು.

'ಸಂಕಟಬಂದಾಗ ವೆಂಕಟರಮಣ' ಎಂಬ ನಾಣ್ಣುಡಿಯನ್ನು ಓದುವವರು ಕೇಳಿರಬಹುದು. ಮನುಷ್ಯರು ವಿಪತ್ತಿನಲ್ಲಿ ದೇವರನ್ನು ನೆನೆದಷ್ಟು ಸಂಪತ್ತಿನಲ್ಲಿ ನೆನೆಯುವುದಿಲ್ಲ. ೧೬೨೭ ರಿಂದ ಸಿವಾಜಿಯು ಪ್ರಬುದ್ಧನಾಗುವ ವರೆಗೆ ಜೀಜಾಬಾಯಿಗೆ ವಿಪತ್ತುಎಡೆಬಿಡದೆ ಬೆನ್ನು ಹತ್ತಿತ್ತೆಂದು ಹೇಳಬಹುದು. ತವರಮನೆಗೆ ಎರವಾಗಿ, ಗಂಡನಿಂದಗಲಿ, ಹಿರಿಮಗನಿಂದ ದೂರಾಗಿದ್ದ ಹೆಂಗಸು ಸುಖಸಮಾಧಾನವನ್ನು ಹೊಂದುವ ಬಗೆ ಹೇಗೆ? ತಾನು ಹಿಂದಿನ ಜನ್ಮದಲ್ಲಿ ಮಾಡಿದ ದುಷ್ಕರ್ಮದ ಫಲವನ್ನು ಈ ಜನ್ಮದಲ್ಲಿ ಅನುಭೋಗಿಸಲಿಕ್ಕೇ ಬೇಕೆಂದೆಣಿಸಿ, ಆ ಸಾಧ್ವಿಯು ಮಗನ ಆರೈಕೆಯಲ್ಲಿಯೂ,

ದೇವತಾಸೇವಾರಾಧನಧ್ಯಾನದಲ್ಲಿಯೂ ಹೊತ್ತುಗಳೆಯಲಾರಂಭಿಸಿದಳು. ಆಕೆಯು ಕಾಲೋಚಿತವಾದ ವ್ರತಪೂಜೆಗಳನ್ನು ಯಥಾಸಾಂಗವಾಗಿ ಮಾಡುತ್ತಿದ್ದುದಲ್ಲದೆ, ದಿನಾಲು ಚಿಕ್ಕಮಗನನ್ನು ತನ್ನ ಹತ್ತರ ಕುಳ್ಳಿರಿಸಿಕೊಂಡು ಪುರಾಣಶ್ರವಣವನ್ನು ಮಾಡುತ್ತಿದ್ದಳು. ಚಿಕ್ಕತನದಲ್ಲಿ ಆದ ಈ ಎಲ್ಲ ಸಂಸ್ಕಾರಗಳು ನಮ್ಮ ಚರಿತ್ರನಾಯಕನು ಮಾಡಿದ ದೊಡ್ಡ ಕೆಲಸಗಳಿಗೆ ಎಷ್ಟು ಅನುಕೂಲವಾದವೆಂಬುದನ್ನು ಅವನ ಮುಂದಿನ ಚರಿತ್ರದಿಂದ ಸುಲಭವಾಗಿ ತಿಳಿದುಕೊಳ್ಳಬಹುದು.

ಚಿಕ್ಕ ಸಿವಾಜಿಯು ಆ ಕಾಲಕ್ಕೆ ಮರಾಟರಿಗೆ ವಾಡಿಕೆಯಾದ ಕ್ಷತ್ರಿಯ ಶಿಕ್ಷಣವನ್ನು ಹೊಂದಿದನು. ಅವನು ದೃಢಕಾಯನೂ, ಸಶಕ್ತನೂ, ಚಪಲನೂ, ಚುರುಕನೂ, ಬುದ್ಧಿವಂತನೂ ಆದ್ದರಿಂದ ಕುಸ್ತಿಯಲ್ಲಿಯೂ ಓಡುವುದರಲ್ಲಿಯೂ, ಕತ್ತಿಪಟ್ಟೆತಿರುವುದರಲ್ಲಿಯೂ, ತುಬಾಕಿಯಿಂದ ಗುರಿಹೊಡೆಯುವುದರಲ್ಲಿಯೂ ನಿಪುಣನಾಗಿದ್ದನು. ಅಕ್ಬರನಂತೆ ಅವನು ಕಠಾರಿಗೆಣೆಯ (ಗುರುತಿನವ) ನಾಗಿದ್ದನೆಂತಲೂ ಅವನಿಗೆ ಓದುಬರಹದ ಗಂಧವಿದ್ದಿಲ್ಲೆಂತಲೂ ಬಹುಜನರ ಅಭಿಪ್ರಾಯವಿರುತ್ತದೆ. ಆದರೆ ಇತ್ತಲಾಗ ಕೆಲವು ಕಟ್ಟಭಿಮಾನಿಗಳಾದ ಮರಾಟ ಬರಹಗಾರರು ಅವನಿಗೆ ಓದುಬರಹವು ಬರುತ್ತಿತ್ತೆಂದು ಬರೆಯತೊಡಗಿದ್ದಾರೆ. ಈ ಸಂಬಂಧದಿಂದ ಪಂಡಿತ ಜದುನಾಥ ಸರ್ಕಾರರು ಬರೆಯುವುದೇನಂದರೆ:—

"ಸಿವಾಜಿಯು ಅಕ್ಬರ, ಹೈದರಲ್ಲಿ, ರಣಜಿತಸಿಂಗರಂತೆ ನಿರಕ್ಷರಕುಕ್ಷಿಯಾಗಿದ್ದನು. ಅವನಿಗೆ ಬೆಟ್ಟಿಯಾದ ಯುರೋಪಿಯರು ಅವನ ಬರಹವನ್ನು ಎಂದೂ ನೋಡಲಿಲ್ಲ. ಅವರು ಕೊಟ್ಟ ಅರ್ಜಿಗಳನ್ನು ಅವನು ಯಾವಾಗಲು ತನ್ನ ಪ್ರಧಾನರಿಗೆ ಕೊಟ್ಟು ಅವರಿಂದ ಓದಿಸಿಕೊಳ್ಳುತ್ತಿದ್ದನು. ಅವನ ಕಯ್ಬರಹದ ಒಂದು ಪತ್ರವಾಗಲಿ ಸಣ್ಣ ಚೀಟಿಯಾಗಲಿ ಇನ್ನೂ ದೊರೆತಿಲ್ಲ. ರಾಮದಾಸಿ ಪತ್ರವ್ಯವಹಾರದ ಸಂಪಾದಕರಾದ ರಾ. ದೇವ ಎಂಬವರು ಒಂದು ಪತ್ರದ ಕೊನೆಗೆ ಸಿವಾಜಿಯ ಕಯ್ಬರಹದ ಕೆಲವು ಶಬ್ದಗಳಿರುತ್ತವೆಂದು ಬರೆಯುತ್ತಾರೆ. ಆದರೆ ಈ ಬರಹವು ಎಷ್ಟುಮಟ್ಟಿಗೆ ನಿಜವಾದ್ದೆಂಬುದನ್ನು ಬಲ್ಲವರು ಚೆನ್ನಾಗಿ ಪರಿ

ಶೋಧಿಸಿ ನಿರ್ಣಯಿಸುವ ವರೆಗೆ ನಾವು ಅದು ಸಿವಾಜಿಯ ಬರಹವೆಂದು ನಂಬಲಾರೆವು." *

ಸಿವಾಜಿಯು ಅಕ್ಷರಶತ್ರುವಾದರೂ ವಿಚಾರಿಯೂ ಬುದ್ಧಿವಂತನೂ ಜ್ಞಾನಾರ್ಜನೆಯಲ್ಲಿ ಕುತೂಹಲವುಳ್ಳವನೂ ಆಗಿದ್ದನು. ಅಕ್ಬರನಂತೆ ಅವನು ಎಲ್ಲ ಬಲ್ಲವರಿಂದ ಏನಾದರು ಕಲಿತುಕೊಳ್ಳಲಿಕ್ಕೆ ಹಾತೊರೆಯುತ್ತಿದ್ದನು. ತನ್ನ ತಾಯಿಯಿಂದ ದೇವಬ್ರಾಹ್ಮಣ ಸಾಧುಸಂತರಲ್ಲಿ ಭಕ್ತಿವಿಶ್ವಾಸಗಳನ್ನಿಡಲಿಕ್ಕೆ ಕಲಿತನು. ರಾಮಾಯಣ ಭಾರತಾದಿ ಪುರಾಣಶ್ರವಣದಿಂದ ರಾಮಚಂದ್ರನ ಪಿತೃಭಕ್ತಿಯನ್ನೂ, ಕರ್ಣಾರ್ಜುನಾದಿಗಳ ಶೌರ್ಯಧೈರ್ಯ ಸಾಹಸ ಸ್ವಜನಾಭಿಮಾನಗಳನ್ನೂ, ತನಗೂ ತನ್ನಾಪ್ತೇಷ್ಟರಿಗೂ ಆಗಿಂದಾಗ ಬರುತ್ತಿದ್ದ ವಿಪತ್ತುಗಳಿಂದ ಮುಸಲ್ಮಾನರ ದ್ವೇಷವನ್ನೂ, ದಾದಾಜಿ ಕೊಂಡದೇವನಿಂದ ವ್ಯವಹಾರಜ್ಞಾನವನ್ನೂ, ಪ್ರಜಾರಂಜನಕಲೆಯನ್ನೂ ಕಲಿತನು. ನಿಸ್ಸೀಮ ಸ್ವಾಮಿಭಕ್ತನಾದ ದಾದಾಜಿಯು: ಬೇರೆ ಬೇರೆ ಶಸ್ತ್ರವಿದ್ಯೆಗಳನ್ನು ಕಲಿಸಲಿಕ್ಕೆ ಬೇರೆ ಬೇರೆ ಶಿಕ್ಷಕರನ್ನು ನೇಮಿಸಿದ್ದಲ್ಲದೆ, ಅವನನ್ನು ತನ್ನ ಸಂಗಡ ಇಟ್ಟುಕೊಂಡು, ಸಂಸ್ಥಾನದ ಪಳ್ಗಿಯ ಬಗ್ಗೆ ತಾನು ಮಾಡುತ್ತಿದ್ದ ಎಲ್ಲ ಏರ್ಪಾಡುಗಳನ್ನು ಅವನಿಗೆ ತಿಳಿಸಿ ಹೇಳುತ್ತಿದ್ದನು.† ಜೀಜಾಬಾಯಿಯು ಆಗಿಂದಾಗ ತನ್ನ ತವರ್ಮನೆಯ ಮೊದಲಿನ ಘನತೆಯನ್ನೂ ಮುಸಲ್ಮಾನರಿಂದುಂಟಾದ ಅವನತಿಯನ್ನೂ ದೇವ ಬ್ರಾಹ್ಮಣರಿಗೆ ಆಗುವ ತೊಂದರೆಗಳನ್ನೂ ವಿವರಿಸಿ ಹೇಳುತ್ತಿದ್ದಳು. ಮಹಾ ಭಾರತದಲ್ಲಿ ವಿವರಿಸಿದ ಶ್ರೀಕೃಷ್ಣನ ರಾಜತಂತ್ರಗಳನ್ನು ಕೇಳಿ ನಮ್ಮ ಚರಿತ್ರ ನಾಯಕನು ಹಿರಿಹಿರಿ ಹಿಗ್ಗುತ್ತಿದ್ದನು. ಈಮೇರೆಗೆ ತಂದೆಯ ಸಾನ್ನಿಧ್ಯಶಿಕ್ಷಣ

---

* ಪಂಡಿತ ಜದುನಾಥ ಸರ್ಕಾರರ ಸಿವಾಜಿಯೂ ಅವನ ಕಾಲವೂ, ಪುಟ ೨೬.

† ಜಮಾಬಂದಿಯ ಏರ್ಪಾಡನ್ನು ಸರಿಯಾಗಿ ಮಾಡಿಸಿ ನಾಡಿನಲ್ಲಿ ಅಬಾದಾನಿಯನ್ನು ಹೇಗೆ ಮಾಡಬೇಕೆಂಬುದನ್ನೂ, ಒಕ್ಕಲಿಗರನ್ನು ಹುರಿದುಂಬಿಸಿ ಹುಟ್ಟುವಳಿಯನ್ನು ಹೇಗೆ ಬೆಳಿಸಬೇಕೆಂಬುದನ್ನೂ, ಮೂಕಪ್ರಾಣಿಗಳ ಜೋಪಾನವನ್ನು ಹೇಗೆ ಮಾಡಬೇಕೆಂಬುದನ್ನೂ, ಆಳುಗಳನ್ನು ಹೇಗೆ ಆರಿಸಿ ಅವರನ್ನು ಸಂತುಷ್ಟರಾಗಿಡಬೇಕೆಂಬುದನ್ನೂ, ಲಷ್ಕರಪಾಗೆಗಳ ಸಿಸ್ತು ಹೇಗಿರಬೇಕೆಂಬುದನ್ನೂ ಸಿವಾಜಿಯು ದಾದೋಜಿಯಿಂದ ಕಲಿತನು.—ಕೇಳೂಸಕರ.

ಗಳಿಲ್ಲದಿದ್ದರೂ ಆಗಾಧವಾದ ಸೃಷ್ಟಿಯೂ, ಅನುಪಮೇಯವಾದ ಪುರಾಣ ಗಳೂ, ಅನನ್ಯಭಕ್ತಿಯುಳ್ಳ ತಾಯಿಯೂ, ಅಪ್ರತಿಮ ಸ್ವಾಮಿಭಕ್ತನಾದ ದಾದಾಜಿಯೂ, ಅನ್ಯದೇಶೀಯರಾದ ಮುಸಲ್ಮಾನರ ಹಾವಳಿಯೂ, ಅನ್ಯಾಕ್ರಾಂತವಾದ ಭರತಖಂಡವೂ ನಮ್ಮ ಚರಿತ್ರನಾಯಕನಾದ ಸಿವಾ ಜಿಯ ಶಿಕ್ಷಣವನ್ನು ಕೊನೆಗಾಣಿಸಿದವು.

ಈ ತರದ ಸ್ವಾಭಾವಿಕವಾದ ಶಿಕ್ಷಣವನ್ನು ಹೊಂದಿದ ಯುವಕನು ಈಗ ಪಾಶ್ಚಿಮಾತ್ಯ ಶಿಕ್ಷಣವನ್ನು ಹೊಂದುತ್ತಿರುವ ಯುವಕರಂತೆ ಸ್ವಾಭಿ ಮಾನಗೇಡಿಯೂ, ಸ್ವದೇಶದ್ರೋಹಿಯೂ, ಪರಾವಲಂಬಿಯೂ ಎಂದಾ ದರು ಆಗಬಹುದೇ ? ಛೇ, ಎಂದೂ ಇಲ್ಲ. ಈಗಿನವರಂತೆ ತನ್ನ ಅಥವಾ ತನ್ನ ದೇಶಬಂಧುಗಳ ಸ್ವಾತಂತ್ರ್ಯವನ್ನು ನೂರಾರು ಇಲ್ಲವೆ ಸಾವಿರಾರು ರೂಪಾಯಿಗಳಿಗೆ ಮಾರಿಕೊಳ್ಳುವನೇ ? ರಾಮ, ರಾಮ!!! ಅದೆಂದೂ ಆಗದು. ಆದ್ದರಿಂದ ನಮ್ಮ ಚರಿತ್ರನಾಯಕನು ಹರೆಯಕ್ಕೆ ಬಂದಾಗ ಅವನ ನೆತ್ತರದಲ್ಲಿ ಪರಕೀಯ ರಾಜ್ಯದ ದ್ವೇಷವೂ ಸ್ವಾತಂತ್ರ್ಯ ಪ್ರೀತಿ ಯೂ ವೀರಾವೇಶವೂ ತುಂಬಿ ತುಳುಕುತ್ತಿದ್ದವು.

ಆದುದಾಗಲಿ, ಹೇಗಾದರು ಮಾಡಿ ತನ್ನದೊಂದು ಸ್ವತಂತ್ರರಾಜ್ಯ ವನ್ನು ಸ್ಥಾಪಿಸಬೇಕೆಂಬ ಹವಣಿಕೆಯು ಚಿಕ್ಕಂದಿನಲ್ಲೇ ಹುಟ್ಟಿದ್ದು ಅವನ ಮನೆತನದ ಪುಣ್ಯದಫಲವೆಂದೂ, ಮರಾಟರ ಭಾಗ್ಯೋದಯವೆಂದೂ ನಿಸ್ಸಂದೇಹವಾಗಿ ಹೇಳಬಹುದು. ಈ ವಿಚಾರವು ಅವನ ತಾಯಿಯದೂ ಅಲ್ಲ, ಅವನ ಪಾಲಕನದೂ ಅಲ್ಲ. ಅವನ ಇಷ್ಟದೇವತೆಯಾದ ಭವಾನಿಯ ಕೃಪಾಕಟಾಕ್ಷದ ಫಲವೆಂದರೂ ಸಲ್ಲುವುದು. ಪುಣೆಪ್ರಾಂತದ ಪಡವಲಿಗೆ ಸಹ್ಯಾದ್ರಿಯ ಓರೆಗುಂಟ (ಉದ್ದಕ್ಕೆ) ಇದ್ದ **ಮಾವಳರ** ಹಳ್ಳಿಗಳಿಗೆ ಅವನು ಆಗಿಂದಾಗ ತನ್ನ ಪಾಲಕನೊಡನೆ ಹೋಗುತ್ತಿದ್ದನು. ಅಲ್ಲಿರುವಾಗ ಅವನು ತಾನು ದೊಡ್ಡವನೆಂದು ಸೆಟೆಕೊಂಡು ಕೂಡ್ರದೆ, ಸಾಧಾರಣ ಜನ ರೊಳಗೆ ಕೂಡಿ ಭೇದಭಾವವಿಲ್ಲದೆ ಅವರೊಡನೆ ಬಳಿಕೆಮಾಡಿ, ಅವರ ಇಂಗಿತ ಸ್ಥಿತಿಗಳನ್ನು ತಿಳಿದುಕೊಂಡು, ಅವರ ದುಃಖಗಳನ್ನು ಕಯ್ಯಲಾದ ಮಟ್ಟಿಗೆ ದೂರಮಾಡಿ, ಸಂಕಟಸಮಯದಲ್ಲಿ ಅವರಿಗೆ ನೆರವಾಗಿ, ಅವರ ಅಂತಃಕರಣವನ್ನು ತನ್ನ ಕಡೆಗೆ ಎಳೆದುಕೊಳ್ಳುತ್ತಿದ್ದನು. ಜನರನ್ನು

ಮೆಚ್ಚಿಸಿ ಅವರ ಮನಸ್ಸನ್ನು ತನ್ನ ಕಡೆಗೆ ಒಲಿಸಿಕೊಂಡು, ಅವರಿಂದ ತನ್ನ ಕೆಲಸವನ್ನು ಮಾಡಿಸಿಕೊಳ್ಳುವ ಹಂಚಿಕೆಯು ಸಿವಾಜಿಗೆ ಗೊತ್ತಿದ್ದಷ್ಟು ಬಲು ತುಸುಜನರಿಗೆ ಗೊತ್ತಿರಬಹುದು. ಯಾವ ಪುರುಷನ ಸೇವೆಯಲ್ಲಿ ಜನರು ತಮ್ಮ ಸರ್ವಸ್ವವನ್ನೂ ಪ್ರಾಣವನ್ನೂ ಕೊಡಲಿಕ್ಕೆ ಅಣಿಯಾಗುತ್ತಾರೋ ಅಂತಹ ಮಹಾಪುರುಷನಲ್ಲಿ ಏನಾದರೊಂದು ವಿಶೇಷವಾದ ಶಕ್ತಿ ಇರಲಿಕ್ಕೇ ಬೇಕು. ಇಂತಹ ಅದ್ಭುತಶಕ್ತಿಯು ನಮ್ಮ ಚರಿತ್ರನಾಯಕನಲ್ಲಿದ್ದುದರಿಂದ ಮಾವಳರೊಳಗೆ ಕೆಲವರು ಅವನು ಹೇಳಿದ ಸಾಹಸಸ್ವಾರ್ಥತ್ಯಾಗಗಳನ್ನು ಬೇಕಾದಾಗ ಮಾಡಲಿಕ್ಕೆ ಸಿದ್ಧರಾಗಿದ್ದರು. **ಏಸಾಜಿಕಂಕ, ಬಾಜಿಫಸಲ್ಕರ** ರೆಂಬಿಬ್ಬ ಮಾವಳರೂ, **ತಾನಾಜಿ ಮಾಲುಸರೆ** ಎಂಬೊಬ್ಬ ಕೊಂಕಣದ ದೇಶಮುಖನೂ ನಮ್ಮ ಚರಿತ್ರನಾಯಕನನ್ನು ಮಾರುತಿಯು ಶ್ರೀರಾಮಚಂದ್ರನನ್ನು ಸೇವಿಸಿದಂತೆ ತನುಮನಧನದಿಂದ ಓಲಗಿಸಿದರು. ಅವನನ್ನು ಸ್ವರಾಜ್ಯಸ್ಥಾಪನಾವಿಚಾರದಲ್ಲಿ ಹುರಿದುಂಬಿಸಿದವರು ಅವರೇ; ಮಾವಳರ ದಂಡನ್ನು ಕೂಡಿಸಿಕೊಟ್ಟವರು ಅವರೇ; ಅವನಿಗೋಸ್ಕರ ಗಂಡಾಂತರವುಳ್ಳ ಸಾಹಸಕೃತ್ಯಗಳನ್ನು ಕಯ್ಕೊಂಡವರು ಅವರೇ; ಅನುವಾಪತ್ತುಗಳಲ್ಲಿ ಅವನನ್ನು ಎಡೆಬಿಡದೆ ಹಿಂಬಾಲಿಸಿ ಮನಮುಟ್ಟಿ ನೆರವಾದವರು ಅವರೇ.

ದಾದಾಜಿ ಕೊಂಡದೇವನು ಲೆಕ್ಕಪತ್ರದವನಾದ್ದರಿಂದ ಲಷ್ಕರದ ಕಡೆಗೆ ಸ್ವಾಭಾವಿಕವಾಗಿ ಹೆಚ್ಚು ಲಕ್ಷಕೊಡುತ್ತಿದ್ದಿಲ್ಲ. ಅದರ ಏರ್ಪಾಡನ್ನೆಲ್ಲ ಅವನು ಚಿಕ್ಕ ಸಿವಾಜಿಗೆ ಒಪ್ಪಿಸಿ, ತಾನು ಮೇಲ್ವಿಚಾರಣೆಯನ್ನು ಮಾತ್ರ ಮಾಡುತ್ತಿದ್ದನು. ಆದ್ದರಿಂದ ಸಿವಾಜಿಗೆ ಪ್ರತಿಯೊಬ್ಬ ದಂಡಾಳಿನ ಗುರುತು ಮಾತ್ರವೇ ಅಲ್ಲ, ಅವನ ಸ್ಥಿತಿಗತಿಸ್ವಭಾವಗಳೆಲ್ಲ ಗೊತ್ತಿದ್ದವು. ಈ ಅತಿಬಳಿಕೆಯಿಂದ ಅವನಲ್ಲಿ ಓದುಬರಹದಿಂದ ಬಾರದ ಒಂದು ವಿಶೇಷಜ್ಞಾನವು ಉಂಟಾಯಿತು. ಅವನು ಮನುಷ್ಯನ ಸ್ವಭಾವವನ್ನು ಸರಿಯಾಗಿ ಕಂಡುಹಿಡಿಯುತ್ತಿದ್ದನು. ಈ ಅಮೌಲ್ಯವಾದ ಅನುಭವಜನ್ಯಜ್ಞಾನವು ಅವನ ಸ್ವರಾಜ್ಯಸ್ಥಾಪನಾಪ್ರಯತ್ನಕ್ಕೆ ಅತಿಶಯವಾಗಿ ಅನುಕೂಲಿಸಿತು. ಹೊಸಮನುಷ್ಯನು ಊಳಿಗವನ್ನು ಕೇಳಲಿಕ್ಕೆ ಬಂದ ಕೂಡಲೆ, ಅವನ ಮಾತುಕಥೆಯಿಂದಲೂ ಮುಖಲಕ್ಷಣಗಳಿಂದಲೂ

ಅವನು ಇಂತಹ ನಡತೆಯವನೆಂದು ಸರಿಯಾಗಿ ಹೇಳುತ್ತಿದ್ದನು. ಅವನು ತನ್ನ ದಳವಾಯಿದಂಡಾಳುಗಳೊಳಗೆ ಯಾವನು ಎದೆಗಾರನು, ಯಾವನು ಕಲಿಯು, ಯಾವನು ಚತುರನಾದ ಯುಕ್ತಿವಂತನು, ಯಾವನು ಮೋಸಗಾರನು, ಯಾವನು ಜೀವದ ಹಂಗುದೊರೆದು ಕಾದುವವನು, ಯಾವನು ಹಗೆಗಳನ್ನು ಮೋಸಗೊಳಿಸಲಿಕ್ಕೆ ಬಲ್ಲವನು, ಯಾವನು ಪ್ರಸಂಗಾವಧಾನವುಳ್ಳವನು, ಯಾವನು ಸ್ವಾಮಿಭಕ್ತಿಪರಾಯಣನು, ಯಾವನು ಸ್ವಾರ್ಥಪರನು, ಯಾವನು ಹೆಣ್ಣುಹೊನ್ನುಗಳಿಗೆ ಮರುಳಾಗುವವನು, ಎಂಬುದನ್ನು ಚೆನ್ನಾಗಿ ಅರಿತದ್ದರಿಂದ, ತಾನು ಮಾಡಿಸಬೇಕಾದ ಬೇರೆ ಬೇರೆ ಕೆಲಸಗಳಿಗೆ ತಕ್ಕ ಜನರನ್ನೇ ಆರಿಸುತ್ತಿದ್ದನು. ಆದ್ದರಿಂದ ಅವನು ಕಯ್ಕೊಂಡ ಕೆಲಸಗಳಲ್ಲಿ ಜಯಲಕ್ಷ್ಮಿಯು ಅವನಿಗೆ ಸುಪ್ರಸನ್ನಳಾಗಿ ಸಂತೋಷದಿಂದ ಅವನ ಕೊರಳೊಳಗೆ ಮಾಲೆಯನ್ನು ಹಾಕುತ್ತಿದ್ದಳು.

ಶೀಲವ್ಯಸನಗಳು ಸರಿಯಾಗಿದ್ದವರು ಬಲುಬೇಗನೆ ಗೆಳೆಯರಾಗುತ್ತಾರೆಂಬ ನಾಣ್ಣುಡಿಯ * ನಿಜತ್ವದ ಅನುಭವವು ನಮ್ಮ ಪ್ರತಿಯೊಬ್ಬ ವಾಚಕರಿಗೆ ಬಂದಿರಬಹುದು. ಜಾಲೆ ಗಿಡಗಳು ಎರೆನಾಡಿನಲ್ಲಿ ಬೆಳೆದಂತೆ ಮಲೆನಾಡಿನಲ್ಲಿ ಬೆಳೆಯಲಾರವು. ಒಂದೇತರದ ರುಚಿಸ್ವಭಾವವುಳ್ಳವರು ಒಬ್ಬರನ್ನೊಬ್ಬರು ಸೇರುವಂತೆ ಭಿನ್ನರುಚಿಸ್ವಭಾವವುಳ್ಳವರು ಸೇರಲಾರರು. ನಮ್ಮ ಚರಿತ್ರನಾಯಕನ ಸಂಬಂಧವು ಬಾಲ್ಯದಿಂದ ದಂಡಿನೊಡನೆ ನಿಕಟವಾದ್ದರಿಂದ ಹಗಲು ಹನ್ನೆರಡು ತಾಸು ಅವನು ಯುದ್ಧದ ಮಾತನ್ನೇ ಆಡುತ್ತಿದ್ದನು. ಹೇಗೆ ದಾಳಿ ಮಾಡಬೇಕೆಂಬುದನ್ನೂ, ಹೇಗೆ ಕೊಳ್ಳೆಹೊಡೆಯಬೇಕೆಂಬುದನ್ನೂ, ಹೇಗೆ ಲಗ್ಗೆ ಹತ್ತಬೇಕೆಂಬುದನ್ನೂ, ಹೇಗೆ ಹಗೆಗಳನ್ನು ಮೋಸಗೊಳಿಸಬೇಕೆಂಬುದನ್ನೂ, ಹೇಗೆ ಅವರಿಗೆ ಆಶಾ ತೋರಿಸಿ ಅವರನ್ನು ವಶಮಾಡಿಕೊಳ್ಳಬೇಕೆಂಬುದನ್ನೂ, ಹೇಗೆ ಅವರಿಗೆ ಲಂಚಕೊಟ್ಟು ಒಡಕೊಳ್ಳಬೇಕೆಂಬುದನ್ನೂ, ಸೋಲುವ ಸಮಯ ಒದಗಿದಾಗ ಹೇಗೆ ಯುಕ್ತಿಯಿಂದ ಪಾರಾಗಬೇಕೆಂಬುದನ್ನೂ, ಶತ್ರುಗಳ ಊರು

---

* ಮೃಗಾ ಮೃಗೈಃ ಸಂಗಮನುವ್ರಜಂತೆ । ಗಾವಶ್ಚ ಗೋಭಿಸ್ತುರಗಾಸ್ತುರಂಗೈಃ॥
ಮೂರ್ಖಾಶ್ಚ ಮೂರ್ಖೈಃ ಸುಧಿಯಃ ಸುಧೀಭಿಃ। ಸಮಾನಶೀಲವ್ಯಸನೇಷು ಸಖ್ಯಂ॥

ಗಳನ್ನು ಹೇಗೆ ಸುಲಿದು ಲೂಟಿಮಾಡಬೇಕೆಂಬುದನ್ನೂ, ಅತಿಪ್ರಬಲನಾದ ಶತ್ರುವಿಗೆ ಹೇಗೆ ನಮ್ರತನ ತೋರಿಸಿ ಅವನ ಹೊಟ್ಟೆಯೊಳಗೆ ಹೊಕ್ಕು ಬೆನ್ನೊಳಗೆ ಬಿರಿಯಬೇಕೆಂಬುದನ್ನೂ ಅವನು ತನ್ನ ದಳವಾಯಿಗಳೊಡನೆ ಯಾವಾಗಲು ಆಲೋಚಿಸುತ್ತಿದ್ದುದಲ್ಲದೆ ಒಬ್ಬನೇ ಕುಳಿತಾಗ ಶಾಂತ ಮನಸ್ಸಿನಿಂದ ಅದನ್ನೇ ಧ್ಯಾನಿಸುತ್ತಿದ್ದನು; ಮತ್ತು ತನ್ನ ಜೀವದ ಗೆಳೆಯರಾದ ಏಸಾಜಿ ತಾನಾಜಿ ಬಾಜಿಗಳೊಡನೆ ಆ ಸಂಬಂಧದಿಂದ ಹಾಕಿಯಾಡುತ್ತಿದ್ದನು.

ಬೆಂಕಿಯ ಕಿಡಿಯು ಎಷ್ಟು ಸಣ್ಣದಾದರೂ ತುಸುಹೊತ್ತಿನಲ್ಲೇ ತನ್ನ ನಿಜಸ್ವರೂಪವನ್ನು ಹೊರಗೆಡವಲಿಕ್ಕೆ ಬೇಕು. ಮೊದಲು ಹೊಗೆಯ ರೂಪದಿಂದಲೂ ಬಳಿಕ ಉರಿಯ ರೂಪದಿಂದಲೂ ಅದು ಹತ್ತರಿದ್ದ ಜನರಿಗೆ ಕಾಣಿಸಿಕೊಳ್ಳದೆ ಬಿಡದು. ಅದರಂತೆಯೇ ನಮ್ಮ ಚರಿತ್ರನಾಯಕನ ಸ್ವತಂತ್ರ ರಾಜ್ಯಸ್ಥಾಪನೆಯ ಉಬ್ಬೂ ಸುತ್ತಲಿನ ಪ್ರದೇಶದಲ್ಲಿ ದಾಳಿ ಸುಲಿಗೆ ಮಾಡಬೇಕೆಂಬ ಹುರುಪೂ ಪಾಲಕಗುರುವಾದ ದಾದಾಜಿ ಕೊಂಡದೇವನ ಕಿವಿಗೆ ಪರ್ಯಾಯದಿಂದ ಮುಟ್ಟಿದವು. ಅದನ್ನು ಕೇಳಿ ಆ ರಾಜನಿಷ್ಠನಾದ ಸಾಧುಪುರುಷನು ಬೆಚ್ಚಿ ಬೆರಗಾದನು; ಈ ತರದ ರಾಜದ್ರೋಹದ ವಿಚಾರಗಳು ಅವನ ತಲೆಯಲ್ಲಿ ಹೇಗೆ ಮೊಳೆಯಿತೆಂಬುದು ಅವನಿಗೆ ತಿಳಿಯಲಿಲ್ಲ; ಇಂತಹ ಕೇಡಿನ ವಿಚಾರಗಳು ಅವನಲ್ಲಿ ಹುಟ್ಟಲಿಕ್ಕಿಲ್ಲೆಂದು ಗಟ್ಟಿಯಾಗಿ ನಂಬಿ ತಾನು ಇಷ್ಟು ದಿವಸ ಅವುಗಳನ್ನು ಹೋಗಲಾಡಿಸಲಿಕ್ಕೆ ಏನೂ ಎತ್ತುಗಡೆ ಮಾಡದೆ ಸುಮ್ಮನೆ ಕುಳಿತುದು ದೊಡ್ಡ ತಪ್ಪಾಯಿತೆಂದು ಬಲು ಹಳಹಳಿಸಿದನು; ಸಿವಾಜಿಯು ಅದಿಲಶಾಹಿಯಲ್ಲಿ ಕೊಳ್ಳೆಸುಲಿಗೆ ಮಾಡತೊಡಗಿದರೆ ಅದಿಲಶಹನು ಸಿಟ್ಟಿಗೆದ್ದು ತನ್ನ ಒಡೆಯನಾದ ಶಹಾಜಿಯ ಜಹಗೀರನ್ನು ಕಸಿಕೊಂಡು ಅವನನ್ನೂ ಅವನ ಮಗನನ್ನೂ ಸೆರೆಯಲ್ಲಿ ನಿಶ್ಚಯವಾಗಿ ಇಡುವನೆಂದು ಹೆದರಿದನು; ಶಹಾಜಿಯು ತನ್ನ ಮೇಲೆ ಸ್ವಾಭಾವಿಕವಾಗಿ ಮುನಿಯುವನೆಂದು ಅಂಜಿದನು; ತಾನು ಇಷ್ಟು ದಿವಸ ತ್ರಿಕರಣಪೂರ್ವಕವಾಗಿ ಸಿವಾಜಿಗೆ ವಿದ್ಯಾಬುದ್ಧಿ ಕಲಿಸಿದ್ದು **ದೇವರ ಅವಕೃಪೆಯಿಂದ** ವ್ಯರ್ಥವಾಯಿತೆಂದು ನೊಂದುಕೊಂಡನು; ಮುಂದೆ ಸಿವಾಜಿಯ ಹಾಡು ಏನಾಗಬಹುದೆಂಬು

ದನ್ನು ಕುರಿತು ಬಗೆದು ಮರಮರ ಮರುಗಿದನು; ತನ್ನ ಹೆಸರಿಗೆ ಕುಂದು ಬರಬಹುದೆಂದು ಹಲುಬಿದನು; ಈ ತನ್ನ ಶಿಷ್ಯನ ರಾಜದ್ರೋಹದ ಬಗೆಗಳಿಂದ ತನ್ನ ಒಡೆಯನಿಗೂ ಅವನ ಕುಟುಂಬದವರಿಗೂ ಆಗ ಬಹುದಾದ ಪೇರ್ಗೇಡಿಗೆ ತಾನೇ ಮುಖ್ಯಕಾರಣನಾದೆನೆಂದು ಬಹಳವಾಗಿ ದುಃಖಿಸಿದನು.

ನೈತಿಕ ದೃಷ್ಟಿಯಿಂದ ಮನುಷ್ಯರನ್ನು ಎರಡುವರ್ಗಗಳೊಳಗೆ ವಿಭಾಗಿಸಬಹುದು.—೧ ಒಳ್ಳೆಯವರು, ೨ ಕೆಟ್ಟವರು. ಒಳ್ಳೆಯವರೊಳಗೆ ಮತ್ತೆ ೨ ವರ್ಗಗಳಿರುತ್ತವೆ.—೧ ಪ್ರಯತ್ನವಾದಿಗಳು, ೨ ದೈವ ಅಥವಾ ಅದೃಷ್ಟ ವಾದಿಗಳು. ಪ್ರಯತ್ನವಾದಿಗಳು ಹೆಚ್ಚುಕಡಮೆ ಪ್ರಮಾಣದಿಂದ ಧೈರ್ಯ ಶಾಲಿಗಳೂ, ಸಾಹಸಿಗಳೂ, ತಾವು ಕಯ್ಕೊಂಡ ಕೆಲಸಗಳಲ್ಲಿ ಬರುವ ತೊಂದರೆನೋವುಗಳನ್ನು ತಾಳಿಕೊಳ್ಳುವಷ್ಟು ತಾಳ್ಮೆಯುಳ್ಳವರೂ, ದೀರ್ಘ ಪ್ರಯತ್ನಿಗಳೂ, ತಮ್ಮ ಮತ್ತು ತಮ್ಮ ದೇಶಬಾಂಧವರ ಲೇಸಿಗಾಗಿ ಹೆಣಗುವರೂ, ಸ್ವಸುಖಕ್ಕಿಂತ ಸ್ವದೇಶಕಲ್ಯಾಣವು ಹೆಚ್ಚಿನದೆಂದು ಗಟ್ಟಿ ಯಾಗಿ ನಂಬಿದವರೂ, ಪ್ರಾಣಕ್ಕಿಂತ ಕೀರ್ತಿಯು ಜನ್ಮಸಾರ್ಥಕತೆಗೆ ಹೆಚ್ಚು ಬಲವಾದ ಸಾಧನವೆಂದು ಮನಗಂಡವರೂ ಆಗಿರುತ್ತಾರೆ. ಪಾಶ್ಚಿಮಾತ್ಯ ರಲ್ಲಿ ಪ್ರಯತ್ನವಾದಿಗಳು ಬಹಳ, ಪೌರ್ವಾತ್ಯರಲ್ಲಿ ಕಡಮೆ. ಆದ್ದರಿಂದ ಪಾಶ್ಚಿಮಾತ್ಯರಲ್ಲಿ ದಿನ ದಿನಕ್ಕೆ ಹೊಸಹೊಸ ಭೌತಿಕಶೋಧಗಳು ಆಗುತ್ತ ಲಿವೆ; ನಮ್ಮಲ್ಲಿ ನಮ್ಮ ಪೂರ್ವಜರು ಶ್ರಮಪಟ್ಟು ಮಾಡಿದ ನೈತಿಕಭೌತಿಕ ಶೋಧಗಳು ಮೂಲೆಗುಂಪಾಗಿ ಮರೆಯುತ್ತಲಿವೆ. ಅದೃಷ್ಟವಾದಿಗಳು ಮಯ್ಗಳ್ಳರೂ, ಕಯ್ಯಲಾಗದವರೂ, ಹೇಡಿಗಳೂ, ಸ್ವಾರ್ಥಪರರೂ, ಸೋಮಾರಿಗಳೂ, ಅಲ್ಪಸಂತೋಷಿಗಳೂ ಆಗಿರುತ್ತಾರೆ.

ನಮ್ಮ ಚರಿತ್ರನಾಯಕನ ಗುರುಪಾಲಕನಾದ ದಾದಾಜಿಯು ಪ್ರಯತ್ನವಾದಿಯಾದ್ದರಿಂದ ತನ್ನ ಶಿಷ್ಯನ ಪುಂಡಾಟಿಗೆಯ ವಿಚಾರ ಗಳನ್ನು ಕೇಳಿ ಸುಮ್ಮನೆ ಕೂಡ್ರದೆ, ತನ್ನ ಕಯ್ಯಿಂದಾದಷ್ಟು ಬಗೆ ಬಗೆಯ ಪ್ರಯತ್ನಮಾಡಿ, ಅವನನ್ನು ಹಾದಿಗೆ ತರಬೇಕೆಂದು ನಿಶ್ಚಯಿಸಿದನು. ಮೊದಲು ಜೀಜಾಬಾಯಿಯಿಂದ ಅವನಿಗೆ ಬುದ್ಧಿ ಹೇಳಿಸಿದನು. ಜಾಣ

ನಾದ ಸಿವಾಜಿಯು ಆಕೆಯ ಬಾಯನ್ನು ಕಟ್ಟಿದನು. ಆ ಪ್ರಯತ್ನವು ವ್ಯರ್ಥವಾದ್ದನ್ನು ನೋಡಿ, ತನ್ನ ನಂಬಿಗಸ್ತನಾದ ಕಾರಕೂನನಿಗೆ ಆ ಕೆಲಸವನ್ನು ಹೇಳಿದನು. ಉತ್ಸಾಹಪೂರಿತನಾದ ಮತ್ತು ಹರೆಯದ ಮಕರಾಟದಲ್ಲಿದ್ದ ಸಿವಾಜಿಯು ಇಂತಹ ಅಳುಬುರಕ ಕಾರಕೂನನ ಮಾತನ್ನು ಸಡ್ಡೆಮಾಡುವನೇ? ಅವನ ಆಕ್ಷೇಪಣೆಗಳನ್ನು ಒಂದರ ಹಿಂದೊಂದು ಖಂಡಿಸಿ, ತಾನು ಮಾಡಬೇಕೆಂದೆಣಿಸಿದ ಹಾವಳಿಯೇ ಸರಿಯಾದ ಮಾರ್ಗವೆಂದು ಅವನ ಬಾಯಿಂದಲೇ ಒಡಂಬಡಿಸಿದನು. ಆದ್ದರಿಂದ ಮುದುಕನಾದ ದಾದಾಜಿಗೆ ಮುಂದೆ ಏನು ಮಾಡಬೇಕೆಂಬ ವಿಚಾರ ಬಿತ್ತು. ಈ ಎಣಿಕೆಯಲ್ಲಿ ಕೆಲವು ದಿವಸಗಳು ಕಳೆದುಹೋದವು.

ದಾದಾಜಿ ಸಿವಾಜಿಯರಿಬ್ಬರೂ ಪ್ರಯತ್ನವಾದಿಗಳೇ ಸರಿ. ಆದರೆ ಪ್ರಯತ್ನವಾದಿಗಳಲ್ಲಿ ಹಲವು ತರಗತಿಗಳುಂಟು. ಅಲ್ಪಪ್ರಯತ್ನವಾದಿಗಳು ಅದೃಷ್ಟವಾದಿಗಳಿಗಿಂತ ಮೇಲಿನ ತರಗತಿಯವರಾದರೂ, ದೀರ್ಘಪ್ರಯತ್ನವಾದಿಗಳು ಅವರಿಗಿಂತ ಹೆಚ್ಚಿನವರೇ ಸರಿ. ಈ ದೀರ್ಘಪ್ರಯತ್ನವಾದಿಗಳಲ್ಲಿ ಎರಡು ವರ್ಗಗಳುಂಟು.—೧ ಸೌಮ್ಯದೀರ್ಘಪ್ರಯತ್ನವಾದಿ, ೨ ಉಗ್ರ ದೀರ್ಘಪ್ರಯತ್ನವಾದಿ. ಈ ೨ ವರ್ಗಗಳೊಳಗೆ ೧ ನೆಯದಕ್ಕೆ ಸೇರಿದವನು ದಾದಾಜಿಯು, ೨ ನೆಯದಕ್ಕೆ ಸೇರಿದವನು ನಮ್ಮ ಚರಿತ್ರನಾಯಕನು. ಸೌಮ್ಯದೀರ್ಘಪ್ರಯತ್ನವಾದಿಗಳು ನಮ್ಮೊಳಗೆ ಹೇರಳವಾಗಿ ದೊರೆಯುತ್ತಾರೆ. ಅವರು ತಾವಿದ್ದ ಸಮಾಜಸರಕಾರಗಳಿಗಂಜಿ, ಅವುಗಳ ನೇಮಗಳನ್ನನುಸರಿಸಿ, ತಮ್ಮ ಮನೋಭೀಷ್ಟವನ್ನು ಸಾಧಿಸಿಕೊಳ್ಳಲಿಕ್ಕೆ ಯತ್ನಿಸುತ್ತಾರೆ. ಆದರೆ ಉಗ್ರ ದೀರ್ಘಪ್ರಯತ್ನವಾದಿಗಳು ಸಮಾಜಸರಕಾರಗಳ ನೇಮಗಳನ್ನು ಲೆಕ್ಕಿಸದೆ, ಬೇಕಾದಾಗ ಅವುಗಳನ್ನು ಮುರಿದು ತಮ್ಮ ಮನಃಸಾಕ್ಷಿಯಾಗಿ ಸರಿಯಾದ್ದೆಂದು ಕಂಡ ಕೆಲಸವನ್ನು ದೃಢನಿಶ್ಚಯದಿಂದ ಕಯ್ಕೊಂಡು, ಅದರಲ್ಲಿ ಒದಗಿದ ಕಷ್ಟನಷ್ಟಗಳನ್ನು ಧೈರ್ಯದಿಂದ ಅನುಭೋಗಿಸಿ, ಅದನ್ನು ಮುಂದರಿಸಲಿಕ್ಕೆ ಹವಣಿಸುತ್ತಾರೆ. ದಾದಾಜಿಯು ಸೌಮ್ಯದೀರ್ಘಪ್ರಯತ್ನವಾದಿಯಾದ್ದರಿಂದ ತನ್ನ ಹಿಂದಿನ ೨ ಪ್ರಯತ್ನಗಳು ವ್ಯರ್ಥವಾದವೆಂದು ನಿರಾಶನಾಗದೆ, ತಾನೇ ತನ್ನ ಶಿಷ್ಯನೊಡನೆ ಮಾತಾಡಿ ಅವನಿಗೆ ಬುದ್ಧಿಹೇಳಿ, ಅವನನ್ನು ಸರಿಯಾದ ರಾಜ

ನಿಷ್ಠಮಾರ್ಗಕ್ಕೆ ತರಬೇಕೆಂದು ನಿಶ್ಚಯಿಸಿ, ಒಂದು ಸುಸಂಧಿಯನ್ನು ನೋಡಿ, ಅವನನ್ನು ಕರೆದು ಅವನೊಡನೆ ಮಾತಾಡತೊಡಗಿದನು.

ದಾದಾಜಿ.—ಸಿವಾಜಿ, ನೀನು ಈಗ ಪ್ರಬುದ್ಧನಾದಿ; ಪ್ರಾಯಕ್ಕೆ ಬಂದಿರುತ್ತಿ. ನಾನು ಮುದುಕನಾದೆನು. ಈ ಸಂಸ್ಥಾನದ ಆಡಳತವನ್ನು ನಿನ್ನ ಕಯ್ಯಲ್ಲಿ ತೆಗೆದುಕೊಂಡು ನನ್ನನ್ನು ದಯವಿಟ್ಟು ಬಿಡುಗಡೆ ಮಾಡಿದರೆ, ನಾನು ನನ್ನ ಊರಿಗೆ ಹೋಗಿ ಆನಂದದಿಂದ ದೇವತಾಸೇವಾಧ್ಯಾನಗಳಲ್ಲಿ ಉಳಿದ ಆಯುಷ್ಯವನ್ನು ಕಳೆಯುವೆನು.

ಸಿವಾಜಿ.—ಗುರುಮಹಾರಾಜ, ತಾವು ನನ್ನನ್ನು ಹುಟ್ಟಿದಂದಿನಿಂದ ಜೋಪಾನಮಾಡಿ ವಿದ್ಯೆ ಬುದ್ಧಿ ಕಲಿಸಿದಿರಿ. ಹಿರಿಯರ ಸ್ಥಳದಲ್ಲಿ ತಾವೇ ನನ್ನ ಹಿರಿಯರಾಗಿರುತ್ತೀರಿ. ನಾನು ಇನ್ನೂ ಹುಡುಗನಾಗಿದ್ದೇನೆ. ತಾವಿರುವ ವರೆಗೆ ತಮ್ಮ ಅನುಭವಜ್ಞಾನಗಳಿಂದ ನನಗೆ ನೆರವಾಗುವಿರೆಂದು ನಂಬಿದ್ದೇನೆ. ನಾನು ತಮಗೆ ಬೇಸರಾದೆನೇನು?

ದಾದಾಜಿ.—ಹಾಗೇನು ತಿಳಿಯಬೇಡಪ್ಪಾ. ನೀನು ನನ್ನ ಮಗನೆಂದೇ ಭಾವಿಸಿದ್ದೇನೆ. ನಿನಗೋಸ್ಕರ ನನ್ನ ಪ್ರಾಣವನ್ನಾದರೂ ಕೊಡಲಿಕ್ಕೆ ಸಿದ್ಧನಿದ್ದೇನೆ. ಆದರೆ ನನಗೆ ವಯಸ್ಸಾಯಿತು. ನೀನು ಎಲ್ಲ ನೋಡಿಕೊಂಡು ಹೋಗಲಿಕ್ಕೆ ತಕ್ಕವನಾಗಿರುತ್ತಿ. ಮುಂದೆ ಕಾಲ ಎಂತಹದು ಬರುತ್ತದೋ ಏನೋ?

ಸಿವಾಜಿ.—ಗುರುಜಿ, ಸಾವಿಗಂಜಿ ಬಾಳ್ವೆಮಾಡುವವರುಂಟೇ? ಬಂದುದನ್ನು ಅನುಭೋಗಿಸಲಿಕ್ಕೇ ಬೇಕು. ಅದಕ್ಕೆ ಹೆದರಬಾರದೆಂದು ತಾವು ಎಷ್ಟೋ ಸಾರಿ ನನಗೆ ಉಪದೇಶಮಾಡಿರುತ್ತೀರಿ. ತಾವು ಮುಂದೇನಾಗಬಹುದೆಂದು ಆಲೋಚಿಸುವುದೇಕೆ?

ದಾದಾಜಿ.—ನೀನು ಹೇಳುವುದು ಸರಿ. ಇಷ್ಟು ದಿವಸ ನೀನು ಸಣ್ಣವನಿದ್ದಿ. ಈಗ

ಸಿ.—ಗುರುಮಹಾರಾಜ, ತಾವು ಹಾಗೆ ಹೇಳಬಹುದೇ? ತಮಗೆ ನಾನು ಈಗಲೂ ಸಣ್ಣವನೇ. ಊರಿಗೆ ಅರಸನಾದರೂ ತಂದೆಗೆ ಮಗನಲ್ಲವೇ?

ದಾ.—ಅಹುದು. ಆದರೆ ಈಗ ನೀನು ಬುದ್ಧಿವಂತನಾದಿ.

ಸಿ.—ತಾವು ಕಲಿಸಿದ್ದಲ್ಲವೇ ನನ್ನ ಬುದ್ಧಿ. ತಮ್ಮ ಅನುಭವ ಬುದ್ಧಿಗಳ ಮುಂದೆ ನನ್ನ ಬುದ್ಧಿ ಎಷ್ಟರದು? ತಮ್ಮ ಪರಿಪಕ್ವವಾದ ವಿಚಾರಗಳು ನನಗೆ ಯಾವಾಗಲು ಬೇಕು. ಆಡಳತದ ಮರ್ಮವು ತಮಗೆ ಗೊತ್ತಿದ್ದಷ್ಟು ನನಗೆ ಗೊತ್ತಾಗಲಾರದು.

ದಾ.—ಇಷ್ಟು ದಿವಸ ನಾನು ನನ್ನ ಬುದ್ಧಿಸಾಮರ್ಥ್ಯಗಳನ್ನು ವೆಚ್ಚಮಾಡಿ ಈ ಸಂಸ್ಥಾನದ ಹುಟ್ಟುವಳಿಯನ್ನು ಬೆಳಿಸಿದೆನು. ಜನರ ಸುಖಕ್ಕೆ ಬೇಕಾದುದನೆಲ್ಲ ಮಾಡಿ ಅವರನ್ನು ಸಂತೋಷದಲ್ಲಿಟ್ಟೆನು. ಇನ್ನು ಮುಂದೆ ನೀನು ಏನು ಮಾಡುತ್ತಿಯೋ ಎಂಬ ಬಗ್ಗೆ ಸಂಶಯ ಬರುತ್ತದೆ. ಹೂವು ಮಾರಿದಲ್ಲಿ ಹುಲ್ಲು ಮಾರಬಾರದೆಂಬುದೇ ನನ್ನ ಬಯಕೆಯು.

ಸಿ.—ಮಹಾರಾಜ, ತಾವು ಮಾಡಿದ್ದನ್ನು ನಾನು ಹಾಳು ಮಾಡುವೆನೆಂದು ತಾವು ಎಣಿಸಕೂಡದು. ಆದನ್ನು ಬೆಳಿಸಿ ಹೆಚ್ಚಿಸಬೇಕೆಂಬುದೇ ನನ್ನ ಕೋರಿಕೆಯು.

ದಾ.—ಕಾಶಿಗೆ ಹೋಗಬೇಕೆಂಬ ಕೋರಿಕೆಯಿಂದ ವಿಜಾಪುರದ ದಾರಿಯನ್ನು ಹಿಡಿದರೆ ಕಾಶಿಯನ್ನು ಮುಟ್ಟುವ ಬಗೆ ಹೇಗೆ?

ಸಿ.—ಮಹಾರಾಜ, ಈ ಮಾತಿನ ಅರ್ಥವೇ ನನಗೆ ತಿಳಿಯಲೊಲ್ಲದು. ನಾನು ಇಂತಹ ದೊಡ್ಡ ತಪ್ಪನ್ನು ಎಂದೂ ಮಾಡಲಾರೆನೆಂದು ಭಾವಿಸುತ್ತೇನೆ.

ದಾ.—ರಾಜ್ಯವನ್ನು ಬೆಳಿಸಬೇಕೆಂದೆಳಸಿ ರಾಜದ್ರೋಹವನ್ನು ಬಗೆದರೆ, ರಾಜ್ಯವು ಹಾಳಾಗುವುದೋ ಬೆಳೆಯುವುದೋ?

ಸಿ.—ಮಹಾರಾಜ, ದಯವಿಟ್ಟು ಶಿಷ್ಯನನ್ನು ಕ್ಷಮಿಸಬೇಕು. ರಾಜರೆಂದುಕೊಳ್ಳುವವರು ನಿಜವಾದ ರಾಜರಾದರೆ ಅವರ ವಿರುದ್ಧವಾಗಿ ಮಾಡುವ ಕೆಲಸವು ರಾಜದ್ರೋಹವಾಗಬಹುದು. ರಾಜರ ಮುಖ್ಯ ಲಕ್ಷಣವು ಪ್ರಜಾವಾತ್ಸಲ್ಯ. ಅದೇ ಅದಿಲಶಾಹಿಯಲ್ಲಿಲ್ಲ. ಈ ಮುಸಲ್ಮಾನರು ನಮ್ಮನ್ನು ದ್ವೇಷಿಸುತ್ತಾರೆ ಹೊರತು ಪ್ರೀತಿಸುವುದಿಲ್ಲ; ಜನರಿಂದ ಜುಲುಮೆ

ಯಿಂದ ದುಡ್ಡು ಸೆಳೆಕೊಂಡು ದುಂದುಗಾರರಾಗಿರುವುರಲ್ಲದೆ, ನಮ್ಮ ದೇವಸ್ಥಾನವನ್ನೂ, ನಮ್ಮ ಧರ್ಮವನ್ನೂ, ನಮ್ಮ ಹೆಂಗಸರನ್ನೂ ಕೆಡಿಸುತ್ತಾರೆ. ಇಂತಹ ನೀಚರಿಗೆ ರಾಜರೆನ್ನುವುದರ ಬದಲು ಸನದಸೀರ ಹಗಲು ಕಳ್ಳರೆನ್ನಬಹುದು. ಸಂಧಿ ದೊರೆದಾಗ ಅವರನ್ನು ಒತ್ತಿ ಹಣ್ಣುಮಾಡಿ ಓಡಿಸುವುದೇ ಎಲ್ಲ ಭಾರತೀಯರ ಕರ್ತವ್ಯವಲ್ಲವೇ?

ದಾ.—ಸಿವಾ, ನಿನ್ನ ಮಾತಿನಲ್ಲಿ ತಥ್ಯಾಂಶವುಂಟು. ಮೊದಲು ರಾಮ ಧರ್ಮರಾಯ ಹರಿಶ್ಚಂದ್ರ ಮುಂತಾದವರು ಧರ್ಮದಿಂದಲೂ, ನೀತಿಯಿಂದಲೂ, ಪ್ರೀತಿಯಿಂದಲೂ ರಾಜ್ಯವಾಳಿ ಹೆಸರುವಾಸಿಯಾಗಿ ಹೋದರು. ಈ ಮುಸಲ್ಮಾನರು ಪ್ರೀತಿಸದೆ ನಮ್ಮನ್ನು ಗೋಳಾಡಿಸುತ್ತಾರೆ. ಅವರ ಆಡಳತವು ಧರ್ಮದಾಡಳತವಲ್ಲ; ಆದರೆ ಮಾಡುವುದೇನಿದೆ? ಅವರು ಅತಿ ಬಲಿಷ್ಠರು. ಅವರಿಗೆ ನಮ್ರವಾಗಿ ನಡೆಕೊಳ್ಳುವುದರಿಂದಲೇ ನಮಗೆ ಕ್ಷೇಮವುಂಟು. ಬಲವದ್ವಿರೋಧವು ಸರಿಯಲ್ಲ.

ಸಿ.—ತಾವು ಹೀಗೆ ಹೇಳುವುದನ್ನು ಕೇಳಿ ನನಗೆ ಆಶ್ಚರ್ಯವಾಗುತ್ತದೆ. ಬಲಿಷ್ಠರೊಡನೆ ಕಾದುವುದೇ ಶೌರ್ಯವೆನಿಸುವುದಿಲ್ಲವೇ? ಅಬಲೆಯರೊಡನೆ ಕಾದಕೂಡದೆಂದು ಶಾಸ್ತ್ರಗಳು ಹೇಳುವುದಿಲ್ಲವೇ? ನಮಗಿಂತ ಅತಿಬಲಿಷ್ಠವಾದ ಆನೆ, ಹುಲಿ, ಸಿಂಹಗಳ ಬೇಟೆಯನ್ನು ಆಡುವುದು ನಮ್ಮ ಧರ್ಮವಲ್ಲವೇ? ಅವು ಬಲಿಷ್ಠ ಪ್ರಾಣಿಗಳೆಂದು ನಾವು ಅವುಗಳನ್ನು ಕೆಣಕದೆ ಸುಮ್ಮನೆ ಕೂಡ್ರುತ್ತೇವೇ?

ದಾ.—ಸಿವಾ, ಅವು ಮೂಕಪ್ರಾಣಿಗಳು. ಈ ಮುಸಲ್ಮಾನರು ಮನುಷ್ಯರು. ನಮ್ಮಂತೆ ಬುದ್ಧಿಯುಳ್ಳವರು, ಒಕ್ಕಟ್ಟಿನಿಂದ ನಮ್ಮನ್ನು ಮುರಿಬಡಿಯುವವರು. ಆದ್ದರಿಂದ ಇಂತಹರೊಡನೆ ಕಾದಲಿಕ್ಕೆ ನಮಗೆ ಜನಬಲವೂ, ದ್ರವ್ಯಬಲವೂ, ದೇವರ ಕೃಪೆಯೂ ಬೇಕು.

ಸಿ.—ತಾವು ಹೇಳಿದ ಮಾತು ವೇದವಾಕ್ಯವಾಗಿರುತ್ತದೆ. ನಮ್ಮ ಜನರೆಲ್ಲ ಈ ಮುಸಲ್ಮಾನರ ಆಳಿಕೆಗೆ ಬೇಸತ್ತಿರುತ್ತಾರೆ; ಈ ಆಡಳತವು ಬೇಗನೆ ಹಾಳಾಗಿ ಹೋಗಲೆಂದು ದೇವರನ್ನು ದಿನಾಲು ಪ್ರಾರ್ಥಿಸುತ್ತಾರೆ. ಆದ್ದರಿಂದ ಜನಸಾಹಾಯಕ್ಕೇನು ಕಡಮೆಯಿಲ್ಲ. ದ್ರವ್ಯವನ್ನು

ಹೇಗಾದರೂ ದೊರಕಿಸಬಹುದು. ನನಗೆ ಮುಖ್ಯವಾಗಿ ಬೇಕಾದ್ದೇನಂದರೆ ಮಾತೋಶ್ರೀಯರ ಮತ್ತು ತಮ್ಮ ಆಶೀರ್ವಾದವು, ಶ್ರೀ ಭವಾನಿಯ ಅನುಗ್ರಹವು; ಈ ಎರಡು ದೊರೆತರೆ ಸಾಕು. ನಾನು ಯಶಸ್ವಿಯಾಗುವೆನೆಂದು ನಂಬಿದ್ದೇನೆ.

ದಾ.—ನಿನ್ನ ತಾಯಿಯೂ ನಾನೂ ನಿನಗೆ ದೇವರು ಕಲ್ಯಾಣ ಮಾಡಲೆಂದು ದಿನಾಲು ಬೇಡಿಕೊಳ್ಳುತ್ತೇವೆ. ಜನಸಾಹಾಯವುಂಟೆಂದು ನೀನು ಹೇಳುವುದು ನನಗೆ ನಿಜವೆಂದು ತೋರುವುದಿಲ್ಲ. ಏಕೆಂದರೆ ಈ ರಾಜರು ಯುಕ್ತಿಯಿಂದಲೂ, ಶಕ್ತಿಯಿಂದಲೂ, ನಮ್ಮಜನರ ಸಂಪತ್ತನ್ನು ಸೆಳೆಕೊಂಡು, ನಮ್ಮನ್ನು ಕಂಗಾಲರಾಗಿ ಮಾಡಿರುತ್ತಾರೆ. ಆದ್ದರಿಂದ ನಾವು, ತಿರುಕರು ಎಂಜಲೆಲೆಗಳಿಗೆ ಬಡಿದಾಡುವಂತೆ, ನಮ್ಮಲ್ಲಿ ಉಳಿದ ಕಿಂಚಿದಾಸ್ತಿಗೆ ನಮ್ಮ ನಮ್ಮೊಳಗೆ ಬಡೆದಾಡುತ್ತಲಿದ್ದೇವೆ. ನಾವು ಸ್ವಾರ್ಥವನ್ನು ತಗ್ಗಿಸಿ ದೇಶಾಭಿಮಾನಿಗಳಾದರೆ ಮಾತ್ರ ನಮ್ಮಲ್ಲಿ ಒಕ್ಕಟ್ಟಾಗಬಹುದು.

ಸಿ.—ಗುರುಮಹಾರಾಜ, ತಾವು ಹೇಳಿದಂತೆ ಜನರು, ವಿಶೇಷವಾಗಿ, ದೇಸಾಯಿ ದೇಶಮುಖರು ತಂತಮ್ಮೊಳಗೆ ಜಗಳಾಡುವುದು ನಿಜ. ಇಂತಹ ಎಷ್ಟೋ ಜಗಳಗಳನ್ನು ತಾವೇ ತೀರಿಸಿ ರಾಜಿಮಾಡಿರುತ್ತೀರಿ. ಆದರೆ ಮುಸಲ್ಮಾನ ಅಧಿಕಾರಿಗಳ ಮತದ್ವೇಷವೂ ಜುಲುಮೆಯೂ ಜನರನ್ನು ಒಟ್ಟುಗೂಡಿಸುತ್ತಲಿವೆ. ಇದಲ್ಲದೆ ಈ ಸಹ್ಯಾದ್ರಿಯ ಗುಡ್ಡಗಾಡು ಪ್ರದೇಶದಲ್ಲಿ ಅದಿಲಶಾಹಿಯ ದೊಡ್ಡದಂಡಿನ ಆಟವು ಹೆಚ್ಚಾಗಿ ಸಾಗುವಂತಿಲ್ಲ.

ದಾ.—ಸಿವಾ, ನೀನು ಎಷ್ಟು ಹೇಳಿದರೂ ಈ ಪುಂಡಾಟದಲ್ಲಿ ನಿನಗೆ ಪೂರ್ಣಜಯ ದೊರೆಯುವುದು ಹೇಗೋ ಏನೋ ಎಂದು ನನಗೆ ಹೆದರಿಕೆ ಬರುತ್ತದೆ. ಆದ್ದರಿಂದ ದುಡುಕಬೇಡ. ಗಾಳಿ ಬಿಟ್ಟಾಗ ತೂರಿಕೊಳ್ಳಬೇಕೆಂಬ ಗಾದೆಯುಂಟು. ಸಂಧಿಯು ಬಂದಾಗ ನಿನ್ನ ಕೆಲಸವನ್ನು ಮಾಡಿಕೊ, ಅವಸರ ಮಾಡಬೇಡ.

ಸಿ.—ಸ್ವಾಮಿ, ತಾವು ಹೆದರಲಿಕ್ಕೆ ಕಾರಣವಿಲ್ಲ. ನಾನು ಯುಕ್ತಿಪ್ರಯುಕ್ತಿಯಿಂದಲೇ ಈ ಮುಸಲ್ಮಾನರ ಸೊಕ್ಕು ಮುರಿಯುವೆನು. ಆ

ಸಂಬಂಧದಿಂದ ತಾವು ಎಳ್ಳಷ್ಟಾದರೂ ಕಾಳಜಿ ಮಾಡಕೂಡದು. ಈಗ ಉತ್ತಮ ಸಂಧಿಯು ಒದಗಿದೆ. ಮಹಮ್ಮದ ಆದಿಲಶಹನು ರೋಗಗ್ರಸ್ತ ನಾಗಿ ಹಾಸಿಗೆ ಹಿಡಿದಿರುತ್ತಾನೆ. ಅವನ ರಾಣಿಯಾದ **ಬಾರಿಸಾಹೇಬಳೇ** ರಾಜ್ಯದ ಆಡಳತವನ್ನು ನೋಡುತ್ತಾಳೆ. ಸರದಾರರೊಳಗೆ ಹೊಟ್ಟೆಕಿಚ್ಚು ಹೆಚ್ಚಿ ಒಡಕು ಹುಟ್ಟಿದೆ. ಆದ್ದರಿಂದ ಈಗಲೆ ನನ್ನ ಸ್ವತಂತ್ರರಾಜ್ಯಸ್ಥಾಪ ನೆಯ ಪ್ರಯತ್ನವನ್ನು ಆರಂಭಿಸಬೇಕೆಂದು ಮಾಡಿದ್ದೇನೆ. ಶಿಷ್ಯನನ್ನು ಅನುಗ್ರಹಿಸಬೇಕು (ಎಂದು ದಾದಾಜಿಯ ಕಾಲುಗಳನ್ನು ಗಟ್ಟಿಯಾಗಿ ಹಿಡಿದುಕೊಳ್ಳುತ್ತಾನೆ).

ದಾದಾಜಿಯು ಸಿವಾಜಿಯನ್ನೆಬ್ಬಿಸಿ ತಕ್ಕಯಿಸಿ, "ಸಿವಾ, ಶ್ರೀ ಶಂಕ ರನು ನಿನಗೆ ಯಶಸ್ಸುಕೊಡಲಿ. ಅವಸರಮಾಡಬೇಡ, ಕಂಡೆಯಾ. ಸಾವ ಧಾನದಿಂದಲೂ ಎಚ್ಚರದಿಂದಲೂ ಹಂಚಿಕೆಯಿಂದಲೂ ನಿನ್ನ ಸ್ವತಂತ್ರ ರಾಜ್ಯಸ್ಥಾಪನಾ ವಿಚಾರವನ್ನು ಮುಂದರಿಸು, ದುಡುಕಬೇಡ. ನಿನ್ನ ಈ ವಿಚಾ ರವು ಹೊಸದಾದ್ದರಿಂದಲೋ ಮುಪ್ಪಿನಿಂದಲೋ ನನಗೆ ಹೆದರಿಕೆ ಬರುತ್ತದೆ. ಹುಟ್ಟಿದಂದಿನಿಂದ ನಾನು ಯುದ್ಧಮಾಡಿದವನಲ್ಲ. ಲೆಕ್ಕಣಿಕೆಯೇ ನನ್ನ ಕತ್ತಿಯಾಗಿರುತ್ತದೆ. ನಿನ್ನ ಹಿರಿಯರಿಗೆ ನಿನ್ನ ವಿಚಾರಗಳನ್ನೆಲ್ಲ ಸವಿಸ್ತಾರ ವಾಗಿ ಬರೆದು ತಿಳಿಸುವೆನು. ಅವರು ಶೂರರು, ಜಹಗೀರನ್ನು ಸಂಪಾದಿಸಿ ದವರು, ರಾಜಕಾರ್ಯದಲ್ಲಿ ನುರಿತವರು, ಎಷ್ಟೋ ರಾಜಕಾರಸ್ಥಾನಮಾಡಿ ಪೆಟ್ಟುತಿಂದವರು, ಅನುಭವಶಾಲಿಗಳು ಆಗಿರುತ್ತಾರೆ. ಅವರ ಅಭಿಪ್ರಾಯ ವನ್ನು ತಿಳಿಕೊಂಡು ಮುಂದೆ ಸರಿತೋರಿದುದನ್ನು ಮಾಡಬಹುದು," ಎಂದು ಉಪದೇಶಮಾಡಿ ಸಿವಾಜಿಯನ್ನು ಹರಿಸಿ ಕಳಿಸಿದನು.

ನಮ್ಮ ಚರಿತ್ರನಾಯಕನು ಎಳೆ ಸಿಕ್ಕರೆ ಹಚ್ಚಡವನ್ನು ನುಂಗಿ ಬಿಡು ವವನಾಗಿದ್ದನು. ಆದ್ದರಿಂದ ಮೇಲೆ ಬರೆದಂತೆ ಸಂದಿಗ್ಧವಾದ ಒಪ್ಪಿಗೆಯು ತನ್ನ ಗುರುಪಾಲಕನಿಂದ ದೊರೆತ ಕೂಡಲೆ ಪರೆಯುಚ್ಚಿದ ಹಾವಿನಂತಾ ದನು ಮತ್ತು ತನ್ನ ಗೆಳೆಯರೊಡನೆ ಮುಂದೆ ಏನುಮಾಡಬೇಕೆಂಬುದನ್ನು ಆಲೋಚಿಸತೊಡಗಿದನು. ಪುಣೆಯ ಪಡವಲಿಗೆ ಸಹ್ಯಾದ್ರಿ ಬೆಟ್ಟವಿದ್ದುದ ರಿಂದ ಅಲ್ಲಿ ಅದಿಲಶಾಹಿಯ ಅಥವಾ ಮೊಗಲರ ದೊಡ್ಡದಂಡಿನ ಆಟವು

ನಡೆಯುವಂತಿದ್ದಿಲ್ಲ. ಅಲ್ಲಿದ್ದ ಅವರ ಕೋಟೆಗಳಲ್ಲಿ ಮಳೆಗಾಲದೊಳಗೆ ಕಾವಲುಗಾರರು ಇರುತ್ತಿದ್ದಿಲ್ಲ. ಅವರು ಮಳೆಗಾಲವನ್ನು ಕೋಟೆಯ ಕೆಳಗಿದ್ದ ಊರುಗಳಲ್ಲಿ ಕಳೆದು, ಮುಂದೆ ಚಳಿಗಾಲದ ಕೊನೆಗೆ ಕೋಟೆಯನ್ನು ಸೇರುತ್ತಿದ್ದರು. ಇದಲ್ಲದೆ ಅಲ್ಲಿ ಶತ್ರುಗಳ ಕಾಟವಿಲ್ಲದುದರಿಂದ ಕಿಲ್ಲೆದಾರರು ನಿರ್ಭೀತರಾಗಿದ್ದಕಾರಣ ಹಗೆಗಳನ್ನು ಬಡಿದೋಡಿಸಲಿಕ್ಕೆ ಬೇಕಾದ ಯುದ್ಧಸಾಮುಗ್ರಿಗಳೇ ಅವರಲ್ಲಿದ್ದಿಲ್ಲ. ಆದ್ದರಿಂದ ಅಲ್ಲಿದ್ದ ಕೋಟೆಗಳನ್ನು ಯುಕ್ತಿಯಿಂದ ಹಿಡಿದುಕೊಂಡು ಸುತ್ತಲಿನ ಪ್ರಾಂತವನ್ನು ತನ್ನ ಸಂಸ್ಥಾನಕ್ಕೆ ಕೂಡಿಸಬೇಕೆಂದು ಸಿವಾಜಿಯು ನಿಶ್ಚಯಿಸಿದನು. ಪುಣೆಯ ನೈರುತ್ಯಕ್ಕೆ ಸುಮಾರು ೨೦ ಮೈಲಿನ ಮೇಲೆ **ತೋರಣ** ಎಂಬ ಕೋಟೆಯಿತ್ತು. ಅಲ್ಲಿಯ ಕಿಲ್ಲೆದಾರನು ಕುಡಕನೂ, ದುಂದುಗಾರನೂ ಇದ್ದುದರಿಂದಲೂ, ಅಲ್ಲಿ ಹಣದ ಸಂಚಯವಿದ್ದುದರಿಂದಲೂ, ಅದನ್ನೇ ಮೊದಲು ಹಿಡಿದುಕೊಳ್ಳಬೇಕೆಂದು ಗೊತ್ತುಮಾಡಿ, ಸಿವಾಜಿಯು ಅಲ್ಲಿಗೆ ತನ್ನ ನಂಬಿಗಸ್ತರಾದ ಏಸಾಜಿ, ಮಾಲೋಜಿ, ಬಾಜಿಯರನ್ನು ದಂಡು ಕೊಟ್ಟು ಕಳುಹಿದನು. ಅವರು ಅಲ್ಲಿಗೆ ಹೋಗಿ ಅದಿಲಶಾಹಿ ಸರಕಾರದ ಅಪ್ಪಣೆಯಂತೆ ತಾವು ಬಂದಿರುತ್ತೇವೆಂತಲೂ ಕೋಟೆಯನ್ನು ತಮಗೆ ಒಪ್ಪಿಸಬೇಕೆಂತಲೂ ಕೇಳಿದರು. ಕಿಲ್ಲೆದಾರನು ಕೆಲಹೊತ್ತು ಅವರ ಸಂಗಡ ಹಾಕಿಯಾಡಿ ಹರವುಗಾಣದೆ, ನಿರುಪಾಯನಾಗಿ ಕೆಲ ಹಣ ಲಂಚ ತೆಗೆದುಕೊಂಡು, ಕೋಟೆಯನ್ನು ಬಿಟ್ಟುಕೊಟ್ಟನು. ಸುದೈವದಿಂದ ಅಲ್ಲಿ ೨ ಲಕ್ಷ ಹೊನ್ನುಗಳು ನಮ್ಮ ಚರಿತ್ರನಾಯಕನಿಗೆ ದೊರೆದವು (೧೬೪೬). ಬಳಿಕ ಸಿವಾಜಿಯು ತೋರಣದ ಮೂಡಲಿಗೆ ೫ ಮೈಲಿನ ಮೇಲೆ ಸಹ್ಯಾದ್ರಿಯ ಶಿಖರದಲ್ಲಿ ಒಂದು ಹೊಸಕೋಟೆಯನ್ನು ಕಟ್ಟಿಸಿ ಅದಕ್ಕೆ **ರಾಯಗಡ** ವೆಂದು ಹೆಸರಿಟ್ಟನು. ಹೀಗೆ ಸಹ್ಯಾದ್ರಿಯ ಮೇಲೆ ಎರಡು ಕೋಟೆಗಳಾದ್ದರಿಂದ ಸುತ್ತಲಿನ ಜಮೇದಾರರು ಹೆದರಿ ತಮ್ಮ ತಮ್ಮ ಊರುಗಳ ಕಂದಾಯವನ್ನು ಸಿವಾಜಿಗೆ ಕೊಡಲೊಪ್ಪಿದರು (೧೬೪೭).

ಅಷ್ಟರಲ್ಲಿ ಶಹಾಜಿಯಿಂದ ಉತ್ತರಬಂತು. ಅದರಲ್ಲಿ ಅವನು ಅದಿಲಶಹನು ಹಾಸಿಗೆ ಹಿಡಿದಿರುತ್ತಾನೆಂತಲೂ, ದರಬಾರಿನಲ್ಲಿ ಒಡಕು

ಹುಟ್ಟಿರುತ್ತದೆಂತಲೂ, ಸಿವಾಜಿಯು ಬಹಿರಂಗವಾಗಿ ಆದಿಲಶಾಹಿಯನ್ನು ಕೆಣಕಿವರೆ ಕ್ಷೇಮವಾಗಲಿಕ್ಕಿಲ್ಲೆಂತಲೂ, ಅದಿಲಶಾಹಿಯ ಹಿತವನ್ನುಮಾಡಿ ಹೊಸ ಪ್ರದೇಶವನ್ನು ಗಳಿಸಿಕೊಳ್ಳಬಹುದೆಂತಲೂ ಬರೆದಿತ್ತು. ಈ ಉತ್ತರ ದಿಂದ ದಾದಾಜಿ ಸಿವಾಜಿಯರಿಬ್ಬರೂ ಸಂತುಷ್ಟರಾದರು. ದಾದಾ ಜಿಯು ತನ್ನ ಅಭಿಪ್ರಾಯದಂತೇ ಶಹಾಜಿಯ ಅಭಿಪ್ರಾಯವಿರುತ್ತದೆಂದೆ ಣಿಸಿ, ತನ್ನ ಶಿಷ್ಯನಿಗೆ ಹೆಚ್ಚಿನ ಉಪದ್ವ್ಯಾಪವಮಾಡುವುದು ಸರಿಯಲ್ಲೆಂದು ಬೋಧಿಸಿದನು. ಸಿವಾಜಿಯು ತಾನು ಮಾಡಲುಜ್ಜುಗಿಸಿದ ರಾಜಕಾರ್ಯಕ್ಕೆ ತನ್ನ ತಂದೆಯು ಅನುಕೂಲನಾಗಿರುತ್ತಾನೆಂದೆಣಿಸಿ, ಬಹಿರಂಗವಾಗಿ ಆದಿಲಶಾಹಿಯನ್ನು ಕೆಣಕುವುದಿಲ್ಲೆಂದು ಹೇಳಿ ದಾದಾಜಿಯನ್ನು ಸಮಾ ಧಾನಗೊಳಿಸಿದನು.

ಊರಿದ್ದಲ್ಲಿ ಹೊಲೆಗೇರಿ ಎಂಬ ಗಾದೆಯಂತೆ ಹೊಸದಾಗಿ ನಮ್ಮ ಚರಿತ್ರನಾಯಕನಿಗೆ ಅಂಕಿತರಾದ ಜಮೆದಾರರೊಳಗೆ ಕೆಲವರು ದೇಶಾಭಿ ಮಾನಗೇಡಿಗಳೂ, ಕಿರಿನೋಟದವರೂ, ನಾಡಿನ ಲೇಸನ್ನು ನೋಡದೆ ತಮ್ಮ ಒಳಿತನ್ನೇ ಬಯಸುವವರೂ ಇದ್ದರು. ಅವರು ತನ್ನ ದುಂದುಟಿಗೆಯನ್ನು ವಿಜಾಪುರ ಸರಕಾರಕ್ಕೆ ತಿಳಿಸುವುದಕ್ಕಿಂತ ಮೊದಲೇ ಸಿವಾಜಿಯು ಹೇರಳ ಹಣಕೊಟ್ಟು ತನ್ನೊಬ್ಬ ವಕೀಲನನ್ನು ಅದಿಲಶಹನ ಬಳಿಗೆ ಕಳುಹಿದನು. ಅವನು ಹೋಗಿ ಮುಖ್ಯ ಮುಖ್ಯ ಸರದಾರರಿಗೆ ಲಂಚಕೊಟ್ಟು ಅವರನ್ನು ಒಲಿಸಿಕೊಂಡು ಸಿವಾಜಿಯು ಅದಿಲಶಹನ ಹಿತಕ್ಕೋಸ್ಕರ ತೋರಣದ ಕೋಟೆಯನ್ನು ಹಿಡಿಕೊಂಡು ರಾಯಗಡವನ್ನು ಕಟ್ಟಿಸಿರುತ್ತಾನೆಂತಲೂ, ಆಗಿದ್ದ ಜಮೇದಾರರು ಕಂದಾಯದ ಹಣವನ್ನು ಸರಿಯಾಗಿ ಸರಕಾರಕ್ಕೆ ಕೊಡುತ್ತಿದ್ದಿಲ್ಲೆಂತಲೂ, ಮುಂದೆ ಸಿವಾಜಿಯು ಹೆಚ್ಚು ಹಣವನ್ನು ಅದಿಲ ಶಾಹಿಗೆ ಕಳಿಸಿಕೊಡುವನೆಂತಲೂ, ಏನೇನೋ ತಿಳಿಸಿ, ಜಮೇದಾರರ ದೂರನ್ನು ಮಕಮುದ್ದು ಮಾಡಿಸಿಬಿಟ್ಟನು. ಈ ಕೆಲಸದಲ್ಲಿ ಅದಿಲಶಾಹಿಯ ಸಿಟ್ಟನ್ನು ದೂರಮಾಡಲಿಕ್ಕೆ ಶಹಾಜಿ ದಾದಾಜಿಯರು ಸಿವಾಜಿಗೆ ಮನಃ ಪೂರ್ವಕವಾಗಿ ನೆರವಾದರು.

ಇಂತು ಸ್ವತಂತ್ರರಾಜ್ಯಸ್ಥಾಪನೆಯ ಬೋಣಿಗೆಯು ನಿರ್ವಿಘ್ನತೆ ಯಿಂದ ನೆರವೇರಿತೆಂದು ಸಂತೋಷಪಡುವಷ್ಟರಲ್ಲಿ ಮುದುಕನಾದ

ದಾದಾಜಿ ಕೊಂಡದೇವನು ಬೇನೆ ಬಂದು ಸತ್ತನು.* ಅವನ ಮರಣ ವನ್ನು ಕುರಿತು ಸಿವಾಜಿಯು ಬಹಳವಾಗಿ ಹಳಹಳಿಸಿ, ಅವನ ಉತ್ತರ ಕಾರ್ಯವನ್ನು ಯಥಾಸಾಂಗವಾಗಿ ಮಾಡಿಸಿದ್ದಲ್ಲದೆ ಅವನ ಮಕ್ಕಳನ್ನು ತನ್ನ ಆಶ್ರಯದಲ್ಲಿಟ್ಟುಕೊಂಡನು (೧೬೪೭). ಇದೇ ಸಮಯಕ್ಕೆ ಸಿವಾಜಿಯ ಪುಂಡಾಟಿಗೆಯ ದೋಷವನ್ನು ಅದಿಲಶಾಹಿ ಸರಕಾರವು ತನ್ನಮೇಲೆ ಹೊರಿಸ ಬಹುದೆಂದು ಹೆದರಿ ಶಹಾಜಿಯು ಯುಕ್ತಿಯಿಂದ ಸರಕಾರದ ಅಪ್ಪಣೆ ಯನ್ನು ಪಡೆದು ತನ್ನ ಜಹಗೀರಿನ ಊರಾದ ಬೆಂಗಳೂರಿಗೆ ಹೋದನೆಂದು ಕೇಳೂಸಕರರು ಬರೆಯುತ್ತಾರೆ. ಆದರೆ ಈ ಮಾತಿಗೆ ಆಧಾರವಿದ್ದಂತೆ ತೋರುವುದಿಲ್ಲ.

---

## ೩ ನೆಯ ಪ್ರಕರಣ

### ಅದಿಲಶಾಹಿಯೊಡನೆ ಹೆಣಗಾಟ.

ಹಿಂದಿನ ಪ್ರಕರಣದಲ್ಲಿ ದಾದಾಜಿ ಕೊಂಡದೇವನು ಕೈಲಾಸ ವಾಸಿಯಾದನೆಂದು ಬರೆದಿರುತ್ತೇವಷ್ಟೇ. ಸಿವಾಜಿಯು ಅವನೊಡನೆ ಭಯ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದನಾದ್ದರಿಂದ ಅವನಿರುವಾಗ ಸಿವಾಜಿಯ ಹಾವಳಿಗೆ ಕೆಲಮಟ್ಟಿಗೆ ತಡೆಯಿತ್ತು. ದಾದಾಜಿಯು ಸತ್ತಂದಿನಿಂದ

---

* ಈ ದಾದಾಜಿಯು ಅತಿ ಪ್ರಮಾಣಿಕನೂ, ಸ್ವಾಮಿ ಭಕ್ತನೂ, ಪಾಪ ಭೀರುವೂ ಆಗಿದ್ದನು. ಒಂದು ದಿವಸ ಸಿವಾಜಿಯೊಡನೆ ಒಂದು ಮಾವಿನ ತೋಟಕ್ಕೆ ಹೋದಾಗ ಮರೆವಿನಿಂದ ಒಂದು ಪಾಡು (ಡೋರ)ಗಾಯಿಯನ್ನು ಕಿತ್ತಿದನು. ಕೂಡಲೆ ತಾನು ಕಳವುಮಾಡಿದೆನೆಂದೆಣಿಸಿ ನೊಂದುಕೊಂಡು ಅದರ ಪ್ರಾಯಶ್ಚಿತ್ತಾರ್ಥವಾಗಿ ತನ್ನ ಬಲಗಯ್ಯನ್ನು ಕಡಿಯಲಿಕ್ಕೆ ಹೇಳಿದನು. ತೋಟಗನೂ ಸಿವಾಜಿಯೂ ಹಾಗೆಮಾಡುವುದು ಹುಚ್ಚತನವೆಂದು ಹೇಳಿ ಬಿಡಿ ಸಿದರಂತೆ. ಮುಂದೆ ಸಾಯುವವರೆಗೆ ಆ ಕಯ್ಯಿಗೆ ತೊಗಲುಚೀಲ ಹಾಕಿ ಅದನ್ನು ಯಾರಿಗೂ ತೋರಿಸುತ್ತಿದ್ದಿಲ್ಲ. ಈ ಸುದ್ದಿಯನ್ನು ಕೇಳಿ ಶಹಾಜಿಯು ಅವನಿಗೆ ೩೦೦ ಹೊನ್ನುಗಳನ್ನೂ ೧ ತೊಡವನ್ನೂ ಇನಾಮವಾಗಿ ಕಳಿಸಿದನಂತೆ.

ಸಿವಾಜಿಯು ಸ್ವತಂತ್ರವಾಗಿ ತನ್ನ ತಂದೆಯ ಸಂಸ್ಥಾನದ ಆಡಳಿತವನ್ನು ಜರಗಿಸತೊಡಗಿದನು. ಸುದೈವದಿಂದ ಅವನು ಅವಿವೇಕಿಯಾಗಿದ್ದಿಲ್ಲ. ಆದರೂ ಅವನಲ್ಲಿ ಯವ್ವನ, ಧನಸಂಪತ್ತಿ, ಪ್ರಭುತ್ವ ಎಂಬ ಮಾನಸಿಕ ತ್ರಿದೋಷಗಳು ಕೂಡಿದವು.* ಇದಲ್ಲದೆ ಸ್ವತಂತ್ರರಾಜ್ಯಸ್ಥಾಪನೆಯ ಬಾಕುಳಿಯು ಅವನ ಹೃದಯದಲ್ಲಿ ಕುದಿಯುತ್ತಿತ್ತು. ಆದ್ದರಿಂದ ಈ ಪರಿಸ್ಥಿತಿಯಲ್ಲಿ ಅವನ ಮನಸ್ಸು ಅಂಕುಶವಿಲ್ಲದ ಮದ್ದಾನೆಯಂತೆಯೂ, ಕಡಿವಾಣವಿಲ್ಲದ ಕುದುರೆಯಂತೆಯೂ, ಚುಕ್ಕಣವಿಲ್ಲದ ಹಡಗಿನಂತೆಯೂ, ತಡೆಡಬ್ಬಿಯಿಲ್ಲದ ಉಗೆಬಂಡಿಯಂತೆಯೂ ಆಯಿತು. ಆದ್ದರಿಂದ ಇಂತಹ ತ್ರಿದೋಷಕೂಡಿದ ಸ್ಥಿತಿಯಲ್ಲಿ ಅವನಿಂದ ಆಗಬಾರದ ಕೆಲವು ಕೆಲಸಗಳು ಆದುದೇನು ಸೋಜಿಗವಲ್ಲ.

ಮನೆಗೆದ್ದು ಮಾರುಗೆಲ್ಲಬೇಕೆಂಬ ಗಾದೆಯ ಮಾತು ಓದುವವರಿಗೆ ಗೊತ್ತಿರಬಹುದು. ಈ ಗಾದೆಯಂತೆ ತನ್ನ ತಂದೆಯ ಸಂಸ್ಥಾನವನ್ನೆಲ್ಲ ತನ್ನ ಕಯ್ಯಲ್ಲೇ ತೆಗೆದುಕೊಳ್ಳಬೇಕೆಂಬ ಎಣಿಕೆಯು ನಮ್ಮ ಚರಿತ್ರನಾಯಕನ ಬಗೆಯಲ್ಲಿ ಬಂತು. ಆದ್ದರಿಂದ ಅವನು ತನ್ನ ಸೋದರಮಾವನೂ ಸುಪೆಯ ಕಿಲ್ಲೆದಾರನೂ ಆದ ಮೋಹಿತೆ ಬಾಜಿರಾಯನಿಗೆ ತನ್ನಲ್ಲಿದ್ದ ಸ್ವಾರರನ್ನು ಕರೆಕೊಂಡು ಪುಣೆಗೆ ಬರಬೇಕೆಂದು ಬರೆದನು. ಶಹಾಜಿಯೇ ಅವನಿಗೆ ಸುಪೆಯ ಕೋಟೆಯನ್ನೂ ಅದರ ಕೆಳಗಿನ ಪ್ರಾಂತವನ್ನೂ ಕೊಟ್ಟದ್ದರಿಂದ ಅವನು ದಾದಾಜಿ ಕೊಂಡದೇವನ ಅಂಕಿತನಾಗಿದ್ದಿಲ್ಲ. ಆದ್ದರಿಂದ ಅವನಿಗೆ ಸಿವಾಜಿಯ ಬರಹವು ಸೇರಲಿಲ್ಲ. ಅವನು ತಾನು ಶಹಾಜಿಯ ಹೊರತು ಉಳಿದವರ ಹುಕುಮನ್ನು ಮನ್ನಿಸುವುದಿಲ್ಲೆಂದು ಖಂಡಿತವಾಗಿ ತಿರುಗಿ ಹೇಳಿ ಕಳುಹಿದರಿಂದ, ಸಿವಾಜಿಯು ಸಿಟ್ಟಿಗೆದ್ದು ಹೋಳಿಹುಣ್ಣಿವೆಯ ಹಬ್ಬದಲ್ಲಿ ಸುಪೆಗೆ ಹೋಗಿ ಅವನ ಆತಿಥ್ಯವನ್ನು ಸ್ವೀಕರಿಸಿ, ಮೋಸದಿಂದ ಅವನನ್ನು ಸೆರೆಹಿಡಿದು, ಆ ಕೋಟೆ ಪ್ರಾಂತಗಳನ್ನು ಕಯ್ವಶಮಾಡಿಕೊಂಡನು. ಮೋಹಿತೆಯು ಕಡೆತನಕ

---

* ಯೌವನಮ್ ಧನಸಂಪತ್ತಿಃ ಪ್ರಭುತ್ವಮವಿವೇಕತಾ।
ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಮ್॥ (ಸುಭಾಷಿತ.)

ಸಿವಾಜಿಯು ಅಂಕಿತನಾಗಲಿಕ್ಕೆ ಒಡಂಬಡದ್ದರಿಂದ ಕುಟುಂಬ ಸಹಿತವಾಗಿ ಅವನನ್ನು ಶಹಾಜಿಯು ಕಡೆಗೆ ಕಳಿಸಿಬಿಟ್ಟನು (೧೬೪೮).

ಈ ಮೇರೆಗೆ ತನ್ನ ಸೋದರಮಾವನನ್ನೇ ದಂಡಿಸಿದ್ದನ್ನು ನೋಡಿ ಉಳಿದ ಕಿಲ್ಲೆದಾರರು ಹೆದರಿದರು. ಪುಣೆಯ ಬಡಗಲಲ್ಲಿದ್ದ **ಚಾಕಣ** ಎಂಬ ಕೋಟೆಯು ಮೊದಲು ದೇಶಪಾಂಡೆ ಹೊನ್ನಪ್ಪನೆಂಬ ಕನ್ನಡಿಗನ ವಶದಲ್ಲಿತ್ತು. ದಾದಾಜಿಯು ಕಾಲದಲ್ಲಿ ಅದು ಹೇಗೋ ಅವನ ವಶಕ್ಕೆ ಬಂದುದರಿಂದ ಅವನು ಅದನ್ನು ಫಿರಂಗೋಜಿ ನರಸಾಲನೆಂಬವನಿಗೆ ಕೊಟ್ಟಿದ್ದನು. ಸಿವಾಜಿಯು ಅವನಿಗೆ ಹೇಳಿಕಳಿಸಲು, ನರಸಾಲನು ಅದನ್ನು ಸಂತೋಷದಿಂದ ಅವನಿಗೆ ಒಪ್ಪಿಸಿದನು. ಆದ್ದರಿಂದ ಸಿವಾಜಿಯು ಅವನನ್ನೇ ಅಲ್ಲಿಯ ಹವಾಲದಾರನಾಗಿ ನೇಮಿಸಿದನು. ಬಳಿಕ ಬಾರಾಮತಿ ಇಂದಾಪುರಗಳ ಠಾಣೆದಾರರು ಸಿವಾಜಿಗೆ ಶರಣುಬಂದರು. ಮುಂದೆ ಕೆಲ ದಿವಸಗಳ ಮೇಲೆ ಸಿವಾಜಿಯ ಜನ್ಮಸ್ಥಳವಾದ ಸಿವನೇರಿಕೋಟೆಯನ್ನು ಈ ನರಸಾಲನು ಹಂಚಿಕೆಯಿಂದ ಹಿಡಿದುಕೊಂಡುದರಿಂದ ಸಿವಾಜಿಯು ಸಂತುಷ್ಟನಾಗಿ ಅವನನ್ನು ಚಾಕಣ ಸಿವನೇರಿಗಳ ಹವಾಲದಾರನಾಗಿ ನೇಮಿಸಿದನೆಂದು ಕೇಳೂಸಕರರು ಬರೆಯುತ್ತಾರೆ.

ಪುಣೆಯ ನೈರುತ್ಯಕ್ಕೆ ೧೧ ಮೈಲಿನ ಮೇಲಿದ್ದ **ಕೊಂಡಾಣ** ಎಂಬ ಕೋಟೆಯು ಒಬ್ಬ ಅದಿಲಶಾಹಿಯ ಕಿಲ್ಲೆದಾರನ ವಶದಲ್ಲಿತ್ತು. ಅದು ಬೇರೆಯವರ ವಶದಲ್ಲಿರುವ ವರೆಗೆ ಪುಣೆಪಟ್ಟಣಕ್ಕೆ ಸುರಕ್ಷತೆಯಿದ್ದಿಲ್ಲ. ಆದ್ದರಿಂದ ಅದನ್ನು ಹಿಡಿದುಕೊಳ್ಳಬೇಕೆಂಬ ಲವಲವಿಕೆಯು ಸಿವಾಜಿಯ ಮನಸ್ಸಿನಲ್ಲಿ ಹುಟ್ಟಿತು. ಆದರೆ ಅದಿಲಶಾಹಿಯನ್ನು ಬಹಿರಂಗವಾಗಿ ಕೆಣಕುವಷ್ಟು ಕಸವು ಅವನಲ್ಲಿದ್ದಿಲ್ಲ. ಆ ಸರಕಾರದಲ್ಲಿ ತನ್ನ ತರ್ಫೆನಿಂದ ಮಾತಾಡಲಿಕ್ಕೆ ಜನರೂ ಇದ್ದಿಲ್ಲ. ಆದ್ದರಿಂದ ಅವನು ಏನುಮಾಡಬೇಕೆಂಬ ಎಣಿಕೆಯಲ್ಲಿ ಮುಳುಗಿದನು. ಅಷ್ಟರಲ್ಲಿ ಸುದೈವದಿಂದ ಕೊಂಡಾಣದ ಕಿಲ್ಲೆದಾರನು ಲಂಚಗುಳಿ ಇರುತ್ತಾನೆಂಬ ಸುದ್ದಿಬಂದುದರಿಂದ ಅವನಿಗೆ ದುಡ್ಡುಕೊಟ್ಟು ಆ ಕೋಟೆಯನ್ನು ತನ್ನಕಯ್ಯಲ್ಲಿ ತೆಗೆದುಕೊಂಡು ಅದಕ್ಕೆ **ಸಿಂಹಗಡ** ವೆಂದು ನಾಮಕರಣಮಾಡಿದನು.

ಪುಣೆಯ ಆಗ್ನೇಯಕ್ಕೆ ೧೮ ಮೈಲಿನ ಮೇಲೆ **ಪುರಂದರ** ವೆಂಬ ದೊಂದು ಬಲಿದಾದ ಕೋಟೆಯಿತ್ತು. ಅದು ನಿಜಾಮುಶಾಹಿಯ ಕಾಲದಿಂದ **ನೀಲಕಂಠ ಹೈಪತನಾಯಕ** ಎಂಬ ಒಬ್ಬ ಜಾಣನಾದ ಬ್ರಾಹ್ಮಣನ ವಶದಲ್ಲಿತ್ತು. ನಿಜಾಮುಶಾಹಿಯು ಹಾಳಾದಂದಿನಿಂದ ಅವನು ಆ ಕೋಟೆಯ ಸ್ವತಂತ್ರ ಒಡೆಯನಾಗಿದ್ದನು. ಅವನು ಸಾಯಲು ಅವನ ಹಿರಿಮಗನಾದ **ನೀಲ** ನೆಂಬವನು ಅದರ ಒಡೆಯನಾದನು. ಈ ನೀಲನಿಗೆ ಪಿಲ–ಶಂಕರ ರೆಂಬಿಬ್ಬರು ತಮ್ಮಂದರಿದ್ದು ಅವರು ಅಣ್ಣನೊಡನೆ ತಮಗೆ ಪಾಲುಕೊಡ ಬೇಕೆಂದು ಬಡಿದಾಡುತ್ತಿದ್ದರು. ಇಂದಾಪುರ ಸುಪೆ ಬಾರಾಮತಿ ಪರಗಣೆ ಗಳ ಸುರಕ್ಷಿತೆಯು ಈ ಕೋಟೆಯುಮೇಲೆ ಅವಲಂಬಿಸಿದ್ದುದರಿಂದ ಅದನ್ನು ಹಿಡಿಕೊಳ್ಳಬೇಕೆಂಬ ಲವಲವಿಕೆಯು ಸಿವಾಜಿಯ ಮನಸ್ಸಿನಲ್ಲಿ ಹೆಚ್ಚಾ ಗಿತ್ತು. ಆದರೆ ಅದನ್ನು ತೆಗೆದುಕೊಳ್ಳುವ ಬಗೆಯು ಅವನಿಗೆ ತೋಚ ಲೊಲ್ಲದು.

'ಇಬ್ಬರ ನ್ಯಾಯ ಒಬ್ಬರಿಗಾಯು' ಎಂಬ ಗಾದೆಯನ್ನು ಓದುವವರು ಕೇಳಿರಬಹುದು. ನೀಲನು ತನ್ನ ತಮ್ಮಂದಿರೊಡನೆ ಜಗಳಾಡುತ್ತಾನೆಂಬ ಸುದ್ದಿ ಹತ್ತಿದ್ದರಿಂದ ಸಿವಾಜಿಯು ಸಣ್ಣದಂಡಿನೊಡನೆ ಹೊರಟು ಪುರಂದರ ಕೋಟೆಯ ಕೆಳಗಿದ್ದ ನಾರಾಯಣದೇವರ ಗುಡಿಯಲ್ಲಿ ಇಳಿಕೊಂಡನು. ಸಿವಾಜಿಯ ಕೆಲ ಹಸ್ತಕರು ಕೋಟೆಯೊಳಗೆ ಹೋಗಿ ಪ್ರಯತ್ನಮಾಡಿ ದ್ದರಿಂದ ನೀಲನು ಸಿವಾಜಿಯನ್ನೂ ಅವನ ಮುಖ್ಯಾಧಿಕಾರಿಗಳನ್ನೂ ನರಕ ಚತುರ್ದಶಿಯ ಮಂಗಲಸ್ನಾನಕ್ಕೆ ಕರೆದೊಯ್ದನು. ಅಲ್ಲಿ ಆದರಾತಿಥ್ಯ ಸ್ವೀಕರಿಸುತ್ತಿರುವಾಗ ನೀಲಪಿಲಶಂಕರರು ತಮ್ಮ ಜಗಳದ ಕಾರಣವನ್ನು ಅವನಿಗೆ ಅರುಹಿದರು. ನೀಲನು ಪಾಲುಕೊಡಲಿಕ್ಕೆ ಒಡಂಬಡದ್ದರಿಂದ ಅವನು ಮಲಗಿದಾಗ ಅವನಿಗೆ ಬೇಡಿಹಾಕಿ ತರಲಿಕ್ಕೆ ಅವನ ಇಬ್ಬರು ತಮ್ಮಂದರಿಗೆ ಸಿವಾಜಿಯು ಹೇಳಿದನು. ಅವರು ಹಾಗೇ ಮಾಡಲು, ಅವರ ಮೇಲೆ ಸಿಟ್ಟಿಗೆದ್ದಂತೆ ನಟಿಸಿ, ಅವರ ಕಾಲಿನಲ್ಲಿ ಬೇಡಿ ಹಾಕಿಸಿ, ಮುವ್ವ ರನ್ನು ಸೆರೆಯಲ್ಲಿಟ್ಟು, ಕೋಟೆಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು ಅದರ ಕಾವಲಿಗೆ ತನ್ನ ಮಾವಳರನ್ನಿರಿಸಿ ಪುಣೆಗೆ ಹೊರಟು ಹೋದನು!!!

ಬಳಿಕ ಈ ಮುವ್ವರನ್ನು ಸೆರೆಯಿಂದ ಬಿಡುಗಡೆಮಾಡಿ ಅವರಿಗೆ ತನ್ನದಂಡಿ ನಲ್ಲಿ ಕೆಲಸ ಕೊಟ್ಟನಂತೆ. ಮುಂದೆ ವಿಸಾಪುರ, ರೋಹಿರಾ, ತಿಕೋಣ, ಲೋಹಗಡ, ರಾಜಮಾಚಿ ಈ ಕೋಟೆಗಳು ಒಂದರಹಿಂದೊಂದು ಅವನ ಕಯ್ವಶವಾದವು.

ಈ ಮೇರೆಗೆ ಚಾಕಣದಿಂದ ನೀರಾಹೊಳೆಯ ವರೆಗೆ ಎಲ್ಲ ನಾಡು ಅವನ ಕಯ್ವಶವಾದ್ದರಿಂದ ಅವನ ಪಿತ್ರಾರ್ಜಿತ ಜಹಗೀರು ಸುರಕ್ಷಿತ ವಾಯಿತು. ತನ್ನ ನಾಡಿನ ಸುತ್ತಲಿರುವ ಕೋಟೆಗಳ ದುರಸ್ತಿಯನ್ನು ಮಾಡಿಸಿ ಅವುಗಳಲ್ಲಿ ಅನ್ನ ಯುದ್ಧ ಸಾಮಗ್ರಿಗಳನ್ನು ಕೂಡಿಸಿ ಇಡಿಸಿದ್ದ ರಿಂದ, ಹಗೆಗಳ ಕಾಟವು ಕಡಮೆಯಾದುದಲ್ಲದೆ ಆ ಕೋಟೆಗಳ ಕೆಳಗಿದ್ದ ದೇಶಮುಖರು ಕಂದಾಯದ ಹಣವನ್ನು ಸರಿಯಾಗಿ ಹೊತ್ತೊತ್ತಿಗೆ ಕೊಡ ಲಾರಂಭಿಸಿದರು. ಈ ಕಾಲಕ್ಕೆ ಅವನ ಕಯ್ಕೆಳಗೆ ೧೦,೦೦೦ ಕಾಲಾಳು ಗಳೂ ೩,೦೦೦ ಕುದುರೆಸ್ವಾರರೂ ಇದ್ದರು. ಆದರೂ ಅದಿಲಶಹ-ಮೊಗ ಲ್ಬಾದಶಹರ ದಂಡುಗಳಿಗೂ ಸಿವಾಜಿಯ ದಂಡಿಗೂ ಅಜಗಜ ಪ್ರಮಾಣ ವಿತ್ತೆಂದು ಹೇಳಲಿಕ್ಕೆ ಏನೂ ಅಡ್ಡಿಯಿಲ್ಲ. ಆದ್ದರಿಂದ ತನ್ನ ದಂಡನ್ನು ಬೆಳಿಸುವುದು ಅವನಿಗೆ ಅತ್ಯವಶ್ಯಕವಾಗಿತ್ತು. ಮೊದಲು ನಿಜಾಮ ಶಾಹಿಯ ದಂಡಿನಲ್ಲಿದ್ದವರು ತಮಗೆ ಕೆಲಸಕೊಡಬೇಕೆಂದು ದಿನಾಲು ಎಡೆ ತಾಕುತ್ತಿದ್ದರು. ಜನರು ಬೇಕಾದಷ್ಟು ದೊರೆಯುತ್ತಿದ್ದರೂ ಅವರನ್ನು ಇಟ್ಟುಕೊಳ್ಳಬೇಕೆಂಬ ಕುತೂಹಲವು ಅವನಲ್ಲಿದ್ದರೂ 'ರಾವಣನ ಹೊಟ್ಟೆಗೆ ಕಾಸಿನಸುಂಟೇ?' ಎಂಬ ಗಾದೆಯಂತೆ ಅವನ ಚಿಕ್ಕ ಸಂಸ್ಥಾನದ ಹುಟ್ಟು ವಳಿಯು ಸಾಕಾಗುವಷ್ಟಿರಲಿಲ್ಲ. ಆದ್ದರಿಂದ ಅವನು ಮನಸ್ಸಿನಲ್ಲಿ ಮರಮರ ಮಿಡುಕುತ್ತಿದ್ದನು. ಹಾಸಿಕೆಯಿದ್ದಷ್ಟು ಕಾಲುಹರಿಬಿಡಬೇಕೆಂಬ ಗಾದೆಯಂತೆ ತನ್ನ ಉತ್ಪನ್ನವಿದ್ದಷ್ಟು ದಂಡಾಳುಗಳನ್ನಿಟ್ಟುಕೊಂಡು ಅವರ ಸಂಖ್ಯೆಯನ್ನು ಹೇಗೆ ಬೆಳಿಸಬೇಕೆಂಬ ಎಣಿಕೆಯಲ್ಲಿ ಹಗಲಿರಳು ಕಳೆಯುತ್ತಿದ್ದನು.

ಇಷ್ಟು ದಿವಸ ಸಿವಾಜಿಯು ಒಬ್ಬಂಟಿಗನಾದ್ದರಿಂದ ತಾನೇ ದಂಡೆತ್ತಿ ಹೋಗುತ್ತಿದ್ದನು. ಈಗ ಅವನ ಕಯ್ಕೆಳಗೆ ಕೆಲವು ಯೋಧ್ಧರೂ ಮುತ್ಸ

ದ್ದಿಗಳೂ ಆದರು. ಅವರ ಹೆಸರೂ ಅವರು ಕಯ್ಗೊಂಡ ಕೆಲಸಗಳೂ ಕೆಳಗೆ ಬರೆದಂತೆ :—

| | |
|---|---|
| ೧ ಶಾಮರಾಜ ನೀಲಕಂಠ ರಾಝುಕರ | ಪೇಶ್ವೆ (ಮಂತ್ರಿ) |
| ೨ ದೀಕ್ಷಿತ ಬಾಳಕೃಷ್ಣ ಪಂತ | ಮುಜುಮುದಾರ (ಲೆಕ್ಕಿಗ) |
| ೩ ಸೋನೋಪಂತ | ಡಬೀರ (ಕಾರ್ಯದರ್ಶಿ) |
| ೪ ರಘುನಾಥ ಬಲ್ಲಾಳ ಕೋರ್ಡೆ (ಚೋಕಿಲ?) | ಸಬ್ನೀಸ (ಸಂಬಳಕೊಡುವವ) |
| ೫ ಏಸಾಜಿಕಂಕ<br>೬ ತಾನಾಜಿ ಮಾಲೂಸರೆ<br>೭ ಬಾಜಿ ಫಸಲಕರ | ದಳವಾಯಿಗಳು. |

ಇವರನ್ನು ಸಿವಾಜಿಯು ಅವರವರ ಯೋಗ್ಯತೆಗೆ ಸರಿಯಾದ ರಾಜಕಾರ್ಯಗಳಿಗೆ ಕಳುಹ ತೊಡಗಿದನು. ಅವನ ಕಾರ್ಯಕ್ಷೇತ್ರವು ಬೆಳೆದಂತೆ ಅವನ ಸಾಧನ ಸಂಖ್ಯೆಯು ಸ್ವಾಭಾವಿಕವಾಗಿ ಬೆಳೆಯಿತು. ಆದ್ದರಿಂದ ಅವನು ತನ್ನ ನಾಡಿನ ಸುತ್ತಲಿನ ಪ್ರದೇಶವನ್ನು ಗೆಲ್ಲಲಿಕ್ಕೂ ದ್ರವ್ಯಸಂಗ್ರಹ ಮಾಡಲಿಕ್ಕೂ ಎತ್ತುಗಡೆ ಮಾಡತೊಡಗಿದನು (೧೬೪೮).

ನಮ್ಮ ಚರಿತ್ರನಾಯಕನು ಜಾಣನೂ ಧೂರ್ತನೂ ಆದ್ದರಿಂದ ಮೊದಲು ತನ್ನ ನಂಬಿಗಸ್ತರಾದ ಅಧಿಕಾರಿಗಳನ್ನು ಸುತ್ತಲಿನ ನಾಡುಗಳಿಗೆ ಕಳುಹಿ, ಅಲ್ಲಿಯ ಬೇರೆಬೇರೆ ಜಹಗೀರದಾರರ ಮತ್ತು ಜನರ ಸ್ಥಿತಿಗತಿಗಳನ್ನೂ ವಿಚಾರಗಳನ್ನೂ ಚೆನ್ನಾಗಿ ಗೊತ್ತುಮಾಡಿಕೊಂಡು, ತನ್ನ ಕಾರ್ಯಕ್ರಮವನ್ನು ನಿಶ್ಚಯಿಸುತ್ತಿದ್ದನು. ಅನ್ನ ಯುದ್ಧ ಸಾಮಗ್ರಿಗಳಿಲ್ಲದ ಕೋಟೆಗಳನ್ನೂ ಅಸಂತುಷ್ಟರಾದ ಜನರುಳ್ಳ ಊರುಗಳನ್ನೂ ಸಾಕಷ್ಟು ಕಾವಲಿಲ್ಲದ ದ್ರವ್ಯಸಂಚಯವನ್ನೂ ಅಜಾಗರೂಕರಾದ ಸಂಸ್ಥಾನಿಕರನ್ನೂ ಅವನು ಹಿಡಿಯಲಿಕ್ಕೆ ಯತ್ನಿಸಿದನು.

ಈ ಕಾಲದಲ್ಲಿ ಉತ್ತರ ಕೊಂಕಣದಲ್ಲಿದ್ದ ಕಲ್ಯಾಣಪ್ರಾಂತವು (ಈಗಿನ ಠಾಣೆಜಿಲ್ಲೆಯು) ಆದಿಲಶಾಹಿಯ ಸುಬೇದಾರನಾದ ಮುಲ್ಲಾ ಅಹಮ್ಮದ ಎಂಬವನ ವಶದಲ್ಲಿತ್ತು. ಈ ಸುಬೇದಾರನು ವಿಜಾಪುರದಲ್ಲೇ ಇರುತ್ತಿದ್ದನಾದಕಾರಣ ಆ ಪ್ರಾಂತದ ಸಂರಕ್ಷಣವ್ಯವಸ್ಥೆಯು ಸರಿಯಾಗಿದ್ದಿಲ್ಲ.

ಇದಲ್ಲದೆ ಇದೇ ಸಮಯಕ್ಕೆ ಈ ಪ್ರಾಂತದಿಂದ ಖಜಾನೆಯು ನಾಯಿ ಮಾರ್ಗವಾಗಿ ವಿಜಾಪುರಕ್ಕೆ ಹೋಗುತ್ತದೆಂಬ ಸುದ್ದಿ ಹತ್ತಿದ್ದರಿಂದ 'ಹಣ ಹಣ' ಎಂದು ಕನಕರಿಸುತಿದ್ದ ಸಿವಾಜಿಯು ೩೦೦ ರಾಹುತ ರೊಡನೆ ಹೋಗಿ ಖಜಾನೆಯ ಕಾವಲುಗಾರರನ್ನು ಹೊಡೆದೋಡಿಸಿ ಅದನ್ನು ಎತ್ತಿಕೊಂಡು ಬಂದನು. ಅಷ್ಟರೊಳಗೆ ಆಬಾಜಿ ಸೋನದೇವ ನೆಂಬ ದಳವಾಯಿಯು ಕಲ್ಯಾಣಪಟ್ಟಣವನ್ನು ಲೂಟಿಮಾಡಿ ಆ ಪ್ರಾಂತ ವನ್ನೆಲ್ಲ ಗೆದ್ದು ಸಿವಾಜಿಗೆ ಅಲ್ಲಿಗೆ ಬರಲಿಕ್ಕೆ ಹೇಳಿ ಕಳುಹಿಸಿದನು. ಅವನು ಅಲ್ಲಿ ಬಂದಕೂಡಲೆ ಆಬಾಜಿಯು ತನಗೆ ಸಿಕ್ಕ ಅಪೂರ್ವ ವಸ್ತುಗಳೊ ಡನೆ ಅತಿಚೆಲುವೆಯೂ ಪ್ರಾಯದವಳೂ ಆದ ಮುಲ್ಲಾ ಅಹಮ್ಮದನ ಸೊಸೆಯನ್ನು ಕಾಣಿಕೆಯಾಗಿ ಅರ್ಪಿಸಿದನು. ಸಿವಾಜಿಯು ಆಕೆಯನ್ನು ದಿಟ್ಟಿಸಿನೋಡಿ ಆಕೆಯ ಚೆಲುವಿಕೆ ಬೆಡಗುಗಳಿಗೆ ಬೆರಗಾಗಿ ಆಕೆಯನ್ನು ಮೇಲ್ಗಡೆ ದೂರದಲ್ಲಿ ಕುಳ್ಳಿರಿಸಿ, ಎಲ್ಲ ಸಭಿಕರಿಗೆ ಹೇಳಿದ್ದೇನಂದರೆ:—

"ಈ ತರುಣಿಯು ಅತಿಸುಂದರಿಯಾಗಿರುತ್ತಾಳೆಂಬುದೇನೋ ನಿಜ ವಾಗಿರುತ್ತದೆ. ಈಕೆಯನ್ನು ಮದುವೆಮಾಡಿಕೊಂಡ ಗೃಹಸ್ಥನು ಭಾಗ್ಯ ಶಾಲಿಯೇ ಸರಿ. ಬ್ರಹ್ಮದೇವರು ಈಕೆಯನ್ನು ಅವನಿಗೋಸ್ಕರ ನಿರ್ಮಿ ಸಿರುತ್ತಾನೆ, ಹೊರತು ಬೇರೆಯವರಿಗೋಸ್ಕರವಲ್ಲ. ನಮ್ಮ ತಾಯಿಯು ಈಕೆಯಂತೆ ಚೆಲುವೆಯಾಗಿದ್ದರೆ ನಾನೂ ಚೆಲುವನಾಗುತ್ತಿದ್ದೆನು. ಪೆರರ ಹೆಂಗಸರನ್ನು ಹಿಡಿದು ಒತ್ತಾಯದಿಂದ ಮದುವೆಮಾಡಿಕೊಳ್ಳುವುದು ಕೆಟ್ಟ ವ್ಲೇಂಛರ ಕೆಲಸವೇ ಹೊರತು ನಮ್ಮಂತಹ ವೇದಧರ್ಮಿಗಳಿಗೆ ಸಲ್ಲದು. ಶ್ರೇಯೋಭ್ಯುದಯವನ್ನು ಬಯಸುವವರು ಇಂತಹ ಅತಿನೀಚ ಕೆಲಸ ವನ್ನು ಎಂದೂ ಮಾಡಕೂಡದು. ಹಿಂದಕ್ಕೆ ರಾವಣಾದಿಗಳು ಪರ ಸ್ತ್ರೀಯರ ಮೇಲೆ ಮನಸ್ಸಿಟ್ಟು ಏನು ಹಾಡು ಹೊಂದಿದರೆಂಬುದು ತಮ್ಮೆಲ್ಲ ರಿಗೂ ಗೊತ್ತುಂಟು. ನನ್ನ ಕಯ್ಕೆಳಗಿನವರಾರೂ ಹೆಂಗಸರನ್ನು ಹಿಡಿಯ ಕೂಡದಿಷ್ಟೇ ಅಲ್ಲ, ಅವರನ್ನು ಮುಟ್ಟಕೂಡದು. ಈ ಅಪ್ಪಣೆಯನ್ನು ಮುರಿದವರಿಗೆ ನಾನು ದೇಹಾಂತ ಶಿಕ್ಷೆಯನ್ನು ತಪ್ಪದೆ ಕೊಡುವೆನೆಂಬು ದನ್ನು ಎಲ್ಲರಿಗೂ ತಿಳಿಸಿರಿ. ಆಬಾಜಿಸೋನದೇವನು ಈ ಹೆಣ್ಣುಮಗಳನ್ನು

ಹಿಡಿತಂದುದು ದೊಡ್ಡತಪ್ಪು. ಆದರೆ ಅವನಿಗೆ ನನ್ನ ಅಭಿಪ್ರಾಯವು ಗೊತ್ತಿಲ್ಲದುದರಿಂದಲೂ ಮ್ಲೇಂಛ ಸರದಾರರ ಅನುಕರಣವನ್ನು ಅವನು ಮಾಡಿದ್ದರಿಂದಲೂ ಅವನನ್ನು ಈ ಸಾರಿ ಮಾತ್ರ ಕ್ಷಮಿಸಿರುತ್ತೇನೆ. ಈ ಯುವತಿಯನ್ನು ಸನ್ಮಾನದಿಂದ ಆದರಿಸಿ, ಬೆನ್ನುಗಾವಲಿಗೆ ಸ್ವಾರರನ್ನು ಕೊಟ್ಟು, ಆಕೆಯ ತಂದೆಯ ಬಳಿಗೆ ಕಳಿಸಿ, ನನಗೆ ವರದಿ ಕೊಡಬೇಕು" ಎಂದು ಹೇಳಿ ಆಕೆಗೆ ವಸ್ತ್ರಾಲಂಕಾರಗಳನ್ನು ಕೊಟ್ಟು ಸನ್ಮಾನಿಸಿ, ಆಕೆಯ ಕ್ಷಮೆ ಬೇಡಿ ಕಳಿಸಿಕೊಟ್ಟನು. ತನಗೆ ಅಪಮಾನವೆಷ್ಟಾಗುವುದೋ ಮುಂದೆ ತನ್ನಹಾಡು ಏನಾಗುವುದೋ ಎಂದು ಹೆದರಿದ ಆ ಯುವತಿಯು ಈ ಸದಾಚಾರ ಸಂಪನ್ನತೆಯನ್ನೂ ಉದಾರ ವಿಚಾರಗಳನ್ನೂ ಕೇಳಿ ಸಂತುಷ್ಟಳಾಗಿ ಅವನನ್ನು ಕೊಂಡಾಡಿ ಕೃತಜ್ಞತಾಪೂರ್ವಕವಾಗಿ ಅವನಡಿಗೆರಗಿ ಬೀಳ್ಕೊಂಡಳು.

ನೈತಿಕಶಕ್ತಿಗೆ ಆತ್ಮಶಕ್ತಿಯ ಬೆಂಬಲವಿದ್ದುದರಿಂದ ಅದು ಕಾಯಿಕ ಶಕ್ತಿಗಿಂತ ಅತಿಶಯವಾಗಿ ಮಿಗಿಲಾದುದೆಂಬುದು ಓದುವವರಿಗೆ ಗೊತ್ತಿರಬಹುದು. ಈ ತತ್ವವನ್ನು ನಮ್ಮ ಪೂರ್ವಜರಾದ ಮಹರ್ಷಿಗಳೇ ಕಂಡು ಹಿಡಿದರೆಂಬುದೂ ಅದನ್ನು ಇಲ್ಲಿ ಕಲಿತುಕೊಂಡುಹೋಗಿ ಏಸೂಕ್ರಿಸ್ತನು ಪಾಶ್ಚಿಮಾತ್ಯರಿಗೆ ಕಲಿಸಿದನೆಂಬುದೂ ನಮ್ಮೆಲ್ಲರಲ್ಲಿ ಅಭಿಮಾನ ಹುಟ್ಟಿಸುವ ಸಂಗತಿಗಳೇ ಸರಿ. ಈ ನೈತಿಕಶಕ್ತಿಯ ಒಂದು ಸಣ್ಣ ಅಂಶವು ನಮ್ಮ ಚರಿತ್ರನಾಯಕನಲ್ಲಿತ್ತೆಂದು ಮೇಲೆ ಬರೆದ ಸಂಗತಿಯಿಂದ ತಿಳಿಯುತ್ತದೆ. ಪರಿಸ್ಥಿತಿಯ ಮೂಲಕ ಒಮ್ಮೊಮ್ಮೆ ಒಂದೊಂದು ವಸ್ತುವಿನ ಬೆಲೆಯು ಬಹಳವಾಗಿ ಹೆಚ್ಚಿಸುವಂತೆ ನಮ್ಮ ಚರಿತ್ರನಾಯಕನ ವಿಷಯ (ಕಾಮ) ವಾಸನೆಯ ನಿಗ್ರಹಶಕ್ತಿಯು ಈ ಕಾಲಕ್ಕೆ ಇರುಳಿನ ಚಂದ್ರನಂತೆ ಜನರನ್ನು ಆಹ್ಲಾದಗೊಳಿಸಿ, ಅವರ ಮನಸ್ಸನ್ನು ಅಯಸ್ಕಾಂತಮಣಿಯಂತೆ ಅವನ ಕಡೆಗೆ ಎಳೆಯಿತು. ಆ ಕಾಲದ ಮುಸಲ್ಮಾನರು ಕಂಡ ಹೆಂಗಸರನ್ನು ಬಿಡುತ್ತಿದ್ದಿಲ್ಲಾದಕಾರಣ ಶಿವಾಜಿಯ ಈ ಸದ್ಗುಣವು ಅಂದರೆ ಪೆರರ ಹೆಂಡಂದಿರನ್ನು ತಾಯಿಯಂತೆ ಕಾಣುವ ಅವನ ದೃಢನಿಶ್ಚಯವು ಆ ಕಾಲಮಹಾತ್ಮೆಯಿಂದ ಬಲು ಬೆಲೆಗಂಡಿತು; ಈ ಸಂಬಂಧದ ಅವನ ಕೀರ್ತಿಯು ಎಲ್ಲ

ಕಡೆಯಲ್ಲಿ ಹಬ್ಬಿತು; ಅವನ ಪ್ರಜೆಗಳಾಗುವುದರಿಂದ ತಂತಮ್ಮ ಹೆಂಗಸರ ಮಾನಸಂರಕ್ಷಣೆಯಾಗುತ್ತದೆಂಬ ನಂಬಿಗೆಯು ಎಲ್ಲರಲ್ಲಿ ಹುಟ್ಟಿತು. ಆದ ಕಾರಣ ಮುಸಲ್ಮಾನರ ಆಳಿಕೆಯಲ್ಲಿ ತಮ್ಮ ಧರ್ಮಕ್ಕೂ ಹೆಂಗಸರ ಮಾನಕ್ಕೂ ಬರುವ ಬಾಧೆಯು ಸಿವಾಜಿಯ ಆಳಿಕೆಯಲ್ಲಿ ನಿಶ್ಚಯವಾಗಿ ತಪ್ಪುವುದೆಂಬ ನಚ್ಚಿಗೆಯು ಆದಿಲಶಾಹಿಯ ಪ್ರಜೆಗಳ ಬಗೆಯಲ್ಲಿ ತಲೆ ದೋರಲಾರಂಭಿಸಿತು. ಸಾರಾಂಶ, ನಮ್ಮ ಚರಿತ್ರನಾಯಕನಿಗೆ ಅವನ ಸದ್ಗುಣಗಳಿಂದ ಆದಷ್ಟು ನೆರವು ಅವನ ದಂಡಿನಿಂದ ಆಗಲಿಲ್ಲೆಂದು ಧಾರಾಳವಾಗಿ ಹೇಳಬಹುದು.

ಆಬಾಜಿ ಸೋನದೇವನು ಉತ್ತರ ಕೊಂಕಣವನ್ನು(ಕುಲಾಬಾ ಠಾಣೆ ಜಿಲ್ಲೆಗಳ ಬಡಗಣ ಭಾಗವನ್ನು) ಗೆದ್ದುದರಿಂದ ಸಿವಾಜಿಯು ಸಂತುಷ್ಟನಾಗಿ ಅವನನ್ನು ಆ ಭಾಗದ ಸುಬೇದಾರನಾಗಿ ನೇಮಿಸಿದ್ದಲ್ಲದೆ, ಆ ನಾಡಿನಲ್ಲಿ ಮುಸಲ್ಮಾನರು ಕಸಿಕೊಂಡಿದ್ದ ದೇವಸ್ವ ಬ್ರಹ್ಮಸ್ವಗಳನ್ನು ತಿರುಗಿಕೊಟ್ಟು, ದೇವತೋತ್ಸವ ಸಮಾರಾಧನೆಗಳಿಗೋಸ್ಕರ ಸರಕಾರದಿಂದ ವರ್ಷಾಶನೆ ಗಳನ್ನು ಕೊಡಬೇಕೆಂದು ಕಟ್ಟುಮಾಡಿದನು. ಈ ಏರ್ಪಾಡಿನಿಂದ ಪ್ರಜೆ ಗಳು ಸಂತುಷ್ಟರಾದರು.

ಈ ಮೇರೆಗೆ ಸಿವಾಜಿಯು ಹಿಂದುಧರ್ಮದಲ್ಲಿ ಶ್ರದ್ಧೆಯುಳ್ಳವ ನೆಂತಲೂ ದೇವಬ್ರಾಹ್ಮಣರಲ್ಲಿ ಭಕ್ತಿಯುಳ್ಳವನೆಂತಲೂ ಹೆಂಗಸರ ಮಾನ ರಕ್ಷಣದಲ್ಲಿ ಗಟ್ಟಿಗನೆಂತಲೂ ಹೆಸರುವಾಸಿಯಾದ್ದರಿಂದ ದಕ್ಷಿಣ ಕೊಂಕಣ (ಠಾಣಾ ಕುಲಾಬೆಗಳ ತೆಂಕಣಭಾಗ) ದ ಕೆಲ ಜನರ ಮನಸ್ಸಿನಲ್ಲಿ ತಾವು ಕ್ರೂರಸಿದ್ದಿಗಳ ಅಂಕಿತರಾಗಿರದೆ, ಸಿವಾಜಿಯ ಪ್ರಜೆಗಳಾಗಬೇಕೆಂಬ ಬಯಕೆ ಹುಟ್ಟಿತು. ಈ ಹಬಸಿಯರ ಕಯ್ಕೆಳಗೆ ಎಷ್ಟೋಮಂದಿ ಮರಾಟ ರಿದ್ದರು. ಅವರೊಳಗೆ **ಸೊಡವೇಳಕರ ಕೋಡವೇಳಕರ** ಎಂಬಿಬ್ಬರು ಸಿವಾಜಿಗೆ ಒಂದು ಪತ್ರವನ್ನು ಬರೆದರು. ಅದರಲ್ಲಿ ಸಿವಾಜಿಯು ದಂಡೆತ್ತಿ ಬಂದರೆ **ತಳಾ, ಘೋಸಾಳಾ** ಎಂಬೆರಡು ಕೋಟೆಗಳೂ ಸುತ್ತಲಿನ ಪ್ರಾಂತವೂ ಅನಾಯಾಸವಾಗಿ ದೊರೆಯುವುವೆಂದು ಬರೆದಿತ್ತು. ಈ ಪತ್ರವನ್ನು ನೋಡಿ ಸಿವಾಜಿಗೆ ಅತ್ಯಾನಂದವಾಯಿತು. ಕೂಡಲೆ ಅವನು

ಕೆಲದಂಡನ್ನು ತೆಗೆದುಕೊಂಡು ಹೊರಟನು. ಕುಲಾಬೆಯ ಪೂರ್ವಕ್ಕೆ ೮ ಮೈಲಿನ ಮೇಲಿದ್ದ **ಸುರಗಡ**ವೂ, ಪಶ್ಚಿಮಕ್ಕೆ ೫ ಮೈಲಿನ ಮೇಲಿದ್ದ **ವೀರವಾಡಿ**ಯೂ, ತೆಂಕಲಿಗೆ ೧೦ ಮೈಲು ಮೇಲಿದ್ದ **ತಳಗಡ**ವೂ, ನೈರುತ್ಯಕ್ಕೆ ೫ ಮೈಲು ಮೇಲಿದ್ದ **ಘೋಸಾಳಗಡ**ವೂ, ರೋಹಾಪಟ್ಟಣದ ಪೂರ್ವಕ್ಕೆ ೧೫ ಮೈಲು ಮೇಲಿದ್ದ **ಸುಧಾಗಡ**ವೂ, ಮಹಾಡದ ಪೂರ್ವಕ್ಕೆ ೧೨ ಮೈಲು ಮೇಲಿದ್ದ **ಕಾಂಗೋರಿ**ಯೂ, **ರೈರಿ** ಕೋಟೆಯೂ ಅವನ ಕಯ್ವಶವಾದವು. ಮುಂದೆ ಈ ರೈರಿಯು **ರಾಯಗಡ** ಎಂಬ ಹೆಸರಿನಿಂದ ಅವನ ರಾಜಧಾನಿಯಾಯಿತು. ಸಿದ್ದಿಯರು ಅಡಮುಟ್ಟ (ಬಲಾಢ್ಯ) ಹಗೆಗಳಾದ್ದರಿಂದ ತಾನು ಹಿಡಿಕೊಂಡ ನಾಡಿನ ಸುರಕ್ಷತೆಗೋಸ್ಕರ ಸಿವಾಜಿಯು ವೀರವಾಡಿಯಲ್ಲಿಯೂ, ರೈರಿಯ ಮೂಡಲಿಗೆ ೫ ಮೈಲಿನ ಮೇಲಿದ್ದ ಲಿಂಗಾಣದಲ್ಲಿಯೂ ಬಲಿದಾದ ಕೋಟೆಗಳನ್ನು ಕಟ್ಟಿಸಿ ಮಾವಳರ ದಂಡನ್ನಿಟ್ಟನು.

ಈ ದಂಡಯಾತ್ರೆಯಲ್ಲಿ ನಮ್ಮ ಚರಿತ್ರನಾಯಕನಿಗೆ ಒಂದು ಅಮೌಲ್ಯವಾದ ಕತ್ತಿಯು ಕಾಣಿಕೆಯಾಗಿ ದೊರೆಯಿತು. ಇದೇ ಮುಂದೆ ಹೆಸರುವಾಸಿಯಾದ ಅವನ ಪ್ರೀತಿಯ **ಭವಾನೀಕತ್ತಿಯು.** ಒಂದು ದಿನ ಸಿವಾಜಿಯು ಹರಿಹರೇಶ್ವರನ ದರ್ಶನ ತೆಗೆದುಕೊಂಡು ತಿರುಗಿ ಬರುವಾಗ ಒಬ್ಬ ಗೃಹಸ್ಥನು ಅವನಿಗೆ ಹಾದಿಯಲ್ಲಿ ಗಂಟುಬಿದ್ದು, ಗೋವಳಕರ ಸಾವಂತನ ಮನೆಯಲ್ಲಿ ಒಂದು ಅತ್ಯುತ್ತಮವಾದ ಕತ್ತಿ ಇರುತ್ತದೆಂತಲೂ, ಅದನ್ನು ಹೇಗಾದರೂ ಮಾಡಿ ಸಿವಾಜಿಯು ತೆಗೆದುಕೊಳ್ಳಬೇಕೆಂತಲೂ ಸೂಚಿಸಿದನು. ಅದಕ್ಕೆ ಸಿವಾಜಿಯು ಹೆರವರ ಒಡವೆಯನ್ನು ಬಯಸುವುದು ಸಜ್ಜನರ ಧರ್ಮವಲ್ಲೆಂತಲೂ ಹಿಂದೆ ಸ್ಯಮಂತಕಮಣಿಗೋಸ್ಕರ ಹುಟ್ಟಿದ ಜಗಳವು ಶ್ರೀ ಕೃಷ್ಣಪರಮಾತ್ಮನ ಮಧ್ಯಸ್ಥಿಕೆಯಿಂದಲೇ ನೊಂದಿತೆಂತಲೂ ಹೇಳಿ ಅವನನ್ನು ಕಳುಹಿ, ತನ್ನ ಹಸ್ತಕರ ಮುಖಾಂತರವಾಗಿ ಆ ಸಾವಂತನೊಡನೆ ಮಾತುಕಥೆ ನಡಿಸಿದನು. ಆ ಸಾವಂತನು ಬಲವದ್ವಿರೋಧವು ಸರಿಯಲ್ಲೆಂದೆಣಿಸಿ, ಆ ಕತ್ತಿಯನ್ನು ತಂದು ಸಿವಾಜಿಗೆ ಕಾಣಿಕೆಯಾಗಿ ಅರ್ಪಿಸಿದನು. ಸಿವಾಜಿಯು ಸಂತುಷ್ಟನಾಗಿ ಅವನಿಗೆ ೩೦೦ ಹೊನ್ನುಗಳನ್ನೂ ಬೆಲೆಯುಳ್ಳ ಉಡುಗರೆಯನ್ನೂ ಕೊಟ್ಟು ಸನ್ಮಾನಿಸಿ

ಅವನಿಗೆ ತನ್ನ ದಂಡಿನಲ್ಲಿ ಒಂದು ದೊಡ್ಡ ಕೆಲಸವನ್ನು ಕೊಟ್ಟನು. ಈ ಕತ್ತಿಗೆ ಸಿವಾಜಿಯು **ಭವಾನಿ** ಎಂದು ಹೆಸರಿಟ್ಟನು. ಇದನ್ನು ತೆಗೆದು ಕೊಂಡು ಹೋದ ಎಲ್ಲ ಕೆಲಸಗಳಲ್ಲಿ ಅವನಿಗೆ ಗೆಲವು ಬಂದುದರಿಂದ ಅದರ ಮೇಲೆ ಅವನಿಗೆ ಪೂರ್ಣಭಕ್ತಿ ಕೂತಿತು. ಅದನ್ನು ಅವನು ದಿನಾಲು ತಪ್ಪದೆ ಪೂಜಿಸುತ್ತಿದ್ದುದಲ್ಲದೆ ದೊಡ್ಡದೊಡ್ಡ ಕೆಲಸಗಳಿಗೆ ಹೋಗುವಾಗ ಅದನ್ನು ಸಂಗಡ ತೆಗೆದುಕೊಳ್ಳಲಿಕ್ಕೆ ಮರೆಯುತ್ತಿದ್ದಿಲ್ಲ.

ಇದೇ ದಂಡಯಾತ್ರೆಯ ಕಾಲದಲ್ಲಿ ಸಿವಾಜಿಯು ಆ ಸಮಯದಲ್ಲಿ ವ್ಯಾಪಾರಕ್ಕೆ ಪ್ರಸಿದ್ಧಿಯನ್ನು ಹೊಂದಿದ ರಾಜಾಪುರವನ್ನು ಸುಲಿದನು. ಆ ಸುಲಿಗೆಯಲ್ಲಿ ಅವನಿಗೆ ಅರಿವೆ ಹಣ ಬೆಳ್ಳಿ ಬಂಗಾರ ಮುತ್ತುಗಳು ಹೇರಳ ವಾಗಿ ದೊರೆದವು. ಅವುಗಳೊಳಗೆ ಎಲ್ಲಕ್ಕೂ ಹೆಚ್ಚಿನ ಒಡವೆ ಎಂದರೆ ಒಬ್ಬ ಬುದ್ಧಿವಂತನೂ ಚುರುಕನೂ ಆದ ಕಾರಕೂನನು. ಅವನ ಹೆಸರು ಬಾಳಾಜಿ ಆಬಾಜಿ ಚಿತ್ರೆ. ಇವನ ತಂದೆಯು ಮೊದಲು ಹಬಸಿಯರ ದಿವಾನ ನಾಗಿದ್ದು ಮುಂದೆ ಅವರ ಸಿಟ್ಟಿಗೆ ಗುರಿಯಾಗಿ ಮರಣ ಹೊಂದಿದ್ದನಂತೆ. ಈ ಬಾಳಾಜಿಯು ಬಹಳ ಜಾಣನೂ, ಚತುರನೂ, ಸ್ವಾಮಿಭಕ್ತನೂ ಆದ್ದ ರಿಂದ ಅವನು ನಮ್ಮ ಚರಿತ್ರನಾಯಕನ ಆಪ್ತಸಚಿವನಾಗಿ ಅವನ ಪ್ರೀತಿಗೂ ವಿಶ್ವಾಸಕ್ಕೂ ಪಾತ್ರನಾದನು. ಇವನ ಬುದ್ಧಿಚಾತುರ್ಯದ ಸಂಬಂಧದಿಂದ ಕೇಳೂಸಕರರು ಒಂದು ಸಂಗತಿಯನ್ನು ಬರೆದಿರುತ್ತಾರೆ. ಒಂದು ದಿನ ಸಿವಾಜಿಯು ಯಾವುದೋ ಒಂದು ಮಹತ್ವದ ಪತ್ರವನ್ನು ಬರೆಯಲಿಕ್ಕೆ ಹೇಳಿದನು. ಬೇರೆ ನಾಜೂಕ ಕೆಲಸಗಳಿದ್ದುದರಿಂದ ಬಾಳಾಜಿಗೆ ಆ ಪತ್ರ ಬರೆಯಲಿಕ್ಕಾಗಲಿಲ್ಲ. ರಾತ್ರಿ ಮಲಗುವಾಗ ಸಿವಾಜಿಯು ಅದರ ಬಗ್ಗೆ ಕೇಳಲು, ಬರೆದಿಲ್ಲೆಂದರೆ ಸಿಟ್ಟಾಗಬಹುದೆಂಬ ಹೆದರಿಕೆಯಿಂದ ಬರೆದಿದ್ದೇ ನೆಂದು ಸುಳ್ಳೇ ಹೇಳಿಬಿಟ್ಟನು. ತನ್ನ ಬಯಕೆಯಂತೆ ಬರೆದಿರುತ್ತಾನೋ ಇಲ್ಲವೋ ಎಂಬುದನ್ನು ನೋಡುವ ಕುತೂಹಲವು ಉಂಟಾದ್ದರಿಂದ ಸಿವಾ ಜಿಯು ಆಗಿಂದಾಗ ಆ ಪತ್ರವನ್ನು ಓದಿ ತೋರಿಸಲಿಕ್ಕೆ ಹೇಳಿದನು. ಕೂಡಲೆ ಬಾಳಾಜಿಯು ನೆರೆಯಲ್ಲಿದ್ದ ಕೋಣೆಯಿಂದ ತನ್ನ ಕಾಗದ ಗಂಟನ್ನು ತಂದು, ಅದರೊಳಗಿಂದ ಒಂದು ಬಿಳಿಕಾಗದವನ್ನು ತೆಗೆದು

ಕೊಂಡು, ದೀವಟಿಗೆಯು ಬೆಳಕಿನಲ್ಲಿ ಇಡಿಪತ್ರವನ್ನು ಓದಿ ತೋರಿಸಿದನು. ಆ ಪತ್ರವು ತಾನು ಹೇಳಿದ್ದಕ್ಕಿಂತ ಹೆಚ್ಚು ವಿಸ್ತಾರವಾಗಿಯೂ, ಗರ್ಭಿತಾರ್ಥಪೂರ್ಣವಾಗಿಯೂ, ಮನೋರಂಜಕವಾಗಿಯೂ, ಸನ್ಮಾನಪೂರಿತವಾಗಿಯೂ ಇದ್ದುದನ್ನು ಕಂಡು ಸಿವಾಜಿಯು ಸುಪ್ರೀತನಾಗಿ ಅವನನ್ನು ಕೊಂಡಾಡತೊಡಗಿದನು. ಆಗ ದೀವಟಿಗೆಯವನು ತಡೆಯಲಾರದೆ ಕೊಳ್ಳನೆ ನಕ್ಕನು.



ಸಿವಾಜಿ.—ಬಾಬಾಜಿ, ಹೀಗೆ ಏಕೆ ನಕ್ಕಿ?

ಬಾಬಾಜಿ.—ಮಹಾರಾಜ, ತಪ್ಪಾಯಿತು. ಕ್ಷಮಿಸಬೇಕು.

ಸಿ.—ತಪ್ಪುಮಾಡಿದ ಬಗ್ಗೆ ನಿನ್ನ ಒಪ್ಪಿಗೆ ಬೇಕಾಗಿಲ್ಲ. ಏಕೆ ನಕ್ಕಿ ಹೇಳು.

ಬಾ.—ಮಹಾರಾಜ, ನಗೆ ಬಂತು, ಆದ್ದರಿಂದ ನಕ್ಕೆನು. ಮತ್ತೇನು ಇಲ್ಲ. ದಯವಿಟ್ಟು ಈ ತಪ್ಪನ್ನು ಹೊಟ್ಟೆಯೊಳಗೆ ಹಾಕಿಕೊಳ್ಳಿರಿ.

ಸಿ.—ನಕ್ಕಕಾರಣ ಹೇಳಿದ ಹೊರತು ಕ್ಷಮಿಸಲಾರೆವು. ಏಕೆ ನಕ್ಕಿ ಹೇಳು.

ಬಾ.—ಮಹಾರಾಜ, ನಗೆ ಬಂತು. ಅದನ್ನು ತಡೆಯಲಿಕ್ಕೆ ನಾನು ಮನಸಾರ ಪ್ರಯತ್ನಮಾಡಿದೆನು. ಅದು ಅಸಗೊಳ್ಳದೆ ಫಕ್ಕನೆ ಹೊರಬಿದ್ದಿತು. ನಾನು ಬೇಕೆಂದು ನಕ್ಕವನಲ್ಲ.

ಸಿ.—ನೀನು ಬಹಳ ತಿಳಿಗೇಡಿರುತ್ತಿ. ಬಲುಹುಂಬನು. ನಾನು ಕೇಳಿದ್ದಕ್ಕೆ ಉತ್ತರ ಕೊಡು. ನಿನಗೆ ನಗೆ ಏನು ಕಾರಣ ಬಂತು ಹೇಳು.

ಬಾ.—ಮಹಾರಾಜ, (ಬಾಳಾಜಿಯು ಕಣ್ಣು ಕಿಸಿದುದನ್ನು ನೋಡಿ) ಬಡವನಿಗೆ ಕಾರಣ ಪಾರಣ ದಯವಿಟ್ಟು ಕೇಳಬೇಡರಿ. ಅದನ್ನು ಹೇಳಿದರೆ ಮುಂದೆ ನಾನು ಬದುಕುವ ಬಗೆ ಹೇಗೆ?

ಸಿ.—ಹೆದರಬೇಡ, ನಿನ್ನ ಕಾರಣವು ಸರಿಯಾಗಿದ್ದರೆ, ನಿನಗೇನೂ ಮಾಡುವುದಿಲ್ಲ. ಅಂಜಬೇಡ. ಇದ್ದಕ್ಕಿದ್ದ ಹಾಗೆ ಹೇಳು. ನಿನ್ನ ಕೂದಲಿಗೆ ಧಕ್ಕೆ ಬಡಿಯದಂತೆ ಕಾಪಾಡುವೆನು.

ಬಾ.—ಮಹಾರಾಜ, ಬಡವನ್ನ ಉಳಿಸಬೇಕು. ಕರೆಸಂದರೆ ಹೇಳ ತೇನು. ನನಗೆ ನಗೆಯನ್ನು ತಡೆಯಲಿಕ್ಕಾಗಲಿಲ್ಲ.

ಸಿ.—ನೀನು ಬೇಖೂಬ ಕಾಣಿಸುತ್ತಿ. ಕಾರಣ ಹೇಳೆಂದರೆ ಮತ್ತೂ ತಡೆಯಲಿಕ್ಕಾಗಲಿಲ್ಲೆಂದು ಬೊಗಳುತ್ತಿ. ಬೇಗನೆ ಕಾರಣ ಹೇಳು.

ಬಾ.—ಮಹಾರಾಜ, ಕ್ಷಮಿಸಿರಿ. ಹೇಳತೆನರಿ, ಹೇಳತೇನು. ಈ ಅಪ್ಪನವರು (ಬಾಳಾಜಿಯ ಕಡೆಗೆ ಬೊಟ್ಟು ತೋರಿಸಿ) ಇಷ್ಟೊತ್ತನಕ ಬರೆಯದೆ ಇದ್ದ ಬಿಳಿಕಾಗದ ಕಣ್ಣುಮುಂದೆ ಹಿಡಿಕೊಂಡು ಗಡಗಡ ಒಂದೇ ಸವನೆ ಓದಿದರು. ತಾವು ಬಹಳ ಚೆಲೊ ಬರೆದೀದಿ ಎಂದು ಹೊಗಳಿದಿರಿ. ನನಗೆ ಹೊಟ್ಟೆ ಹಿಡಿಸದಷ್ಟು ನಗೆ ಬಂತು. ಏನುಮಾಡಲಿ ಸ್ವಾಮಿ? ಬಡವನ ತಪ್ಪು ಹೊಟ್ಟೆಯೊಳಗೆ ಹಾಕಿಕೊಳ್ಳಿರಿ.

ಸಿ.—(ಸೋಜಿಗಗೊಂಡು), ಬಾಳಾಜಿ, ಆ ಪತ್ರ ತಾ.

ಬಾಳಾಜಿಯು ಗಾಬರಿಯಾಗಿ ತಡವರಿಸುತ್ತ ಹೋಗಿ ತನ್ನ ಕಯ್ಯ ಲ್ಲಿದ್ದ ಬಿಳಿ ಹಾಳಿಯನ್ನು ಸಿವಾಜಿಯ ಕಯ್ಯಲ್ಲಿ ಕೊಟ್ಟು ಅಡ್ಡಬೀಳುತ್ತಾನೆ. ಸಿವಾಜಿಯು ಆ ಬರಿಕಾಗದವನ್ನು ನೋಡಿ ಆಶ್ಚರ್ಯಪಟ್ಟು,

ಬಾಳಾಜಿ, ನೀನು ಬರೆದುದೆಲ್ಲಿ? ಸುಳ್ಳೇ ಓದಿ ತೋರಿಸಿದೇನು?

ಬಾಳಾಜಿ—ಮಹಾರಾಜ, ನನ್ನ ಅಪರಾಧವನ್ನು ಕ್ಷಮಿಸಬೇಕು. ಒಡೆಯರು ಹೇಳಿದ ಬೇರೆ ಮಹತ್ವದ ಕೆಲಸಗಳಲ್ಲಿ ತೊಡಗಿದ್ದರಿಂದ ಈ ಪತ್ರವನ್ನು ಬರೆಯಲಿಕ್ಕೆ ನನಗೆ ಹೊತ್ತು ಸಿಗಲಿಲ್ಲ. ಹಾಗೆ ಹೇಳಿದರೆ ತಾವು ಸಿಟ್ಟಾಗಬಹುದೆಂದು ಹೆದರಿ ಹೀಗೆ ಬಿಳಿ ಕಾಗದವನ್ನು ಓದಿ ತೋರಿಸಿ ದೆನು. ದಯವಿಟ್ಟು ಕ್ಷಮಿಸಿರಿ.

ಸಿ.—ಬಾಳಾಜಿ, ನೀನು ನಿಜವಾದ ಸಂಗತಿಯನ್ನು ಹೇಳಿದ್ದರಿಂದ ನನಗೆ ಬಹಳ ಆನಂದವಾಯಿತು. ಇಗೊ ಈ ಸೆಲ್ಲೆಯನ್ನು ಇನಾಮಾಗಿ ಕೊಡುತ್ತೇನೆ. ಬಾಳಾಜಿ, ನಿನ್ನ ಬುದ್ಧಿಚಾತುರ್ಯವನ್ನು ನೋಡಿ ಬಹಳ ಸಂತೋಷಪಟ್ಟೆನು. ಇನ್ನು ಮುಂದೆ ಸುಳ್ಳುಮಾತ್ರ ಹೇಳಬೇಡ. ನಿನಗೆ ಈ ಹರಳಿನ ಉಂಗರವನ್ನು ಕೊಡುತ್ತೇನೆ. ಅದನ್ನು ನೋಡಿ ದಿನಾಲು

ನಾನು ಹೇಳಿದ ಉಪದೇಶವನ್ನು ನೆನಪುಮಾಡಿಕೊ. ನಿನ್ನಂತಹ ಜಾಣ ಸಚಿವನನ್ನು ಕೊಟ್ಟ ಬಗ್ಗೆ ಜಗನ್ಮಾತೆಯಾದ ಶ್ರೀ ಭವಾನಿಯನ್ನು ಅನನ್ಯ ಭಾವದಿಂದ ಕೊಂಡಾಡುತ್ತೇನೆ. ಜಯ ಭವಾನಿ!!

ರಾಜಾಪುರವನ್ನು ಸುಲಿದು ಹೇರಳ ಲೂಟಿಯನ್ನು ಹೇರಿಕೊಂಡು ಬಂದ ಬಳಿಕ ಸಿವಾಜಿಯು ತನ್ನ ಪೇಶ್ವೆಯನಾದ ಶಾಮರಾಜ ನೀಲ ಕಂಠ ರಂಜೇಕರನನ್ನು ದಂಡಿನೊಡನೆ ಆ ಭಾಗವನ್ನು ಗೆಲ್ಲಲಿಕ್ಕೆ ಕಳು ಹಿದನು. ಆದರೆ ಎದೆಗಾರರೂ ಗಟ್ಟಿಗರೂ ಆದ ಹಬಸಿಯರು ಅವ ನನ್ನು ಸೋಲಿಸಿ ಓಡಿಸಿ ಬಿಟ್ಟರು. ಸಿವಾಜಿಯು ಸಿಟ್ಟಗೆದ್ದು ಶಾಮ ರಾಜನನ್ನು ಕೆಲಸದಿಂದ ದೂರಮಾಡಿ, ಮೋರೊ ತ್ರಿಯಂಬಕ ಪಿಂಗಳೆ ಯೆಂಬವನನ್ನು ಪೇಶ್ವೆಯಾಗಿ ಮಾಡಿ, ರಘುನಾಥ ಬಲ್ಲಾಳ ಕೋರ್ಡೆ ಎಂಬ ಮತ್ತೊಬ್ಬ ದಳವಾಯಿಯನ್ನು ದೊಡ್ಡ ದಂಡಿನೊಡನೆ ಹಬಸಿಯರ ವಿರುದ್ಧವಾಗಿ ಕಳುಹಿದನು (೧೬೪೮).

ಈ ಮೇರೆಗೆ ನಮ್ಮ ಚರಿತ್ರನಾಯಕನು ಸಿದ್ದಿಯರೊಡನೆ ಗುದ್ದಿ ಯಾಡುತ್ತಿರುವಾಗ ಆದಿಲಶಾಹಿ ಸರಕಾರದವರು ಅವನ ತಂದೆಯಾದ ಶಹಾಜಿಯನ್ನು ಕರ್ನಾಟಕದಲ್ಲಿ ಸೆರೆಹಿಡಿದು, ವಿಜಾಪುರಕ್ಕೆ ತಂದು, ಅವನನ್ನು ಒಂದು ದೊಡ್ಡ ಮಾಡದಲ್ಲಿ ಕೂಡ್ರಿಸಿ, ಎದೆಯ ವರೆಗೆ ಗೋಡೆ ಯನ್ನು ಕಟ್ಟಿಸಿರುತ್ತಾರೆಂತಲೂ ಅದನ್ನು ಪೂರಾ ಏರಿಸಿ, ಅವನನ್ನು ಕೊಲ್ಲಿ ಸುವ ಎಣಿಕೆಯಲ್ಲಿರುತ್ತಾರೆಂತಲೂ ಸುದ್ದಿ ಬಂತು. ಇದನ್ನು ಕೇಳಿ ಜೀಜಾ ಬಾಯಿಯು ಅಳುತ್ತ ಕುಳಿತಳು; ಸಿವಾಜಿಯ ಕಯ್ಕಾಲುಗಳು ತಣ್ಣಗಾದವು. ಹೇಗೆ ತನ್ನ ತಂದೆಯನ್ನು ಉಳಿಸಿಕೊಳ್ಳಬೇಕೆಂಬ ಎಣಿಕೆಯಲ್ಲಿ ಅವನು ಮುಳುಗಿದನು. ಆದಿಲಶಾಹಿ ಸರಕಾರವು ಒಮ್ಮಿಂದೊಮ್ಮೆ ಏನುಕಾರಣ ಈ ಬಗೆಯಾಗಿ ತನ್ನ ತಂದೆಯ ಮೇಲೆ ಮುನಿದರೆಂಬುದು ಅವನಿಗೆ ಗೊತ್ತಾಗದ್ದರಿಂದ ಅವನು ತನ್ನ ನಂಬಿಗಸ್ತರಾದ ಇಬ್ಬರು ಕಾರಕೂನ ರನ್ನು ವೇಷಹಾಕಿ ವಿಜಾಪುರಕ್ಕೆ ಕಳುಹಿಸಿದನು. ಅವರು ಅಲ್ಲಿಗೆ ಹೋಗಿ ಗುಪ್ತರೀತಿಯಿಂದ ನಡೆದ ಸಂಗತಿಗಳನ್ನೆಲ್ಲ ಅರಿತುಕೊಂಡು ಬಂದು ಸಿವಾಜಿಗೆ ಎಲ್ಲವನ್ನು ಅರಿಕೆಮಾಡಿದರು. ಅವರು ಹೇಳಿದ್ದೇನಂದರೆ:—

ಆದಿಲಶಾಹಿಯ ಸರದಾರನಾದ ನವಾಬ ಮುಸ್ತಾಫಖಾನನು ತೆಂಕಲಲ್ಲಿ ಹೆಸರಾದ **ಜಿಂಜಿ ಕೋಟೆಯನ್ನು** ಮುತ್ತಿದಾಗ, ಶಹಾಜಿಯು ತನ್ನ ದಂಡಿನೊಡನೆ ತನ್ನ ಜಹಗೀರಿಗೆ ತಿರುಗಿ ಹೋಗಲಿಕ್ಕೆ ಅಪ್ಪಣೆಬೇಡಿದನು. ನವಾಬನು ಹಾಗೆ ಮಾಡಿದರೆ ಮುತ್ತಿಗೆಯು ಕೆಡುವುದೆಂತಲೂ ಅವನು ಬೇಡಿದ ಅಪ್ಪಣೆಯನ್ನು ಕೊಡಲಿಕ್ಕಾಗುವುದಿಲ್ಲೆಂತಲೂ ಖಂಡಿತವಾಗಿ ಹೇಳಿದನು. ಬಳಿಕ ಶಹಾಜಿಯು ಕಾಳು ಬಹಳ ತುಟ್ಟಿಯಾದ್ದರಿಂದ ತಾನು ನಿಲ್ಲುವುದಿಲ್ಲೆಂದು ಮಾರುತ್ತರ ಹೇಳಿ ಕಳುಹಿದನು. ಅದನ್ನು ಕೇಳಿ ನವಾಬನು ಸಿಟ್ಟಿಗೆದ್ದು ಘೋರ್ಪಡೆ ಬಾಜಿರಾಯ ಅಸಾದಖಾನ ಯಶವಂತರಾಯ ಎಂಬಿಬ್ಬರು ಸರದಾರರಿಗೆ ಶಹಾಜಿಯನ್ನು ಹಿಡಿತರಲಿಕ್ಕೆ ಹೇಳಿದನು. ಅವರು ಬೆಳಗಿನ ಜಾವಿನಲ್ಲಿ ತಮ್ಮ ದಂಡಿನೊಡನೆ ಶಹಾಜಿ ಇದ್ದೆಡೆಗೆ ಹೋದರು. ಆಗ ಅವನು ಗಡದ್ದಾಗಿ ಮಲಗಿದ್ದನು. ಆಳುಗಳು ಹಿಡಿಯಲಿಕ್ಕೆ ಬಂದ ಸುದ್ದಿಯನ್ನು ಹೇಳಿದ ಕೂಡಲೆ, ಶಹಾಜಿಯು ಅಡಬಡಿಸಿಕೊಂಡೆದ್ದು ಬತ್ತಲಗುದುರೆಯನ್ನೇರಿ ಓಡಿಹೋದನು. ಘೋರಪಡೆ ಬಾಜಿರಾಯನು ಅವನನ್ನು ಬೆನ್ನಟ್ಟಿ ಹಿಡಿತಂದು ನವಾಬನ ಮುಂದೆ ನಿಂದಿರಿಸಿದನು. ನವಾಬನು ಅವನನ್ನು ಸೆರೆಯಲ್ಲಿಟ್ಟು ವಿಜಾಪುರಕ್ಕೆ ಹೇಳಿಕಳುಹಿದನು. ಆದಿಲಶಹನು ಅಫಜುಲ್ಖಾನನೆಂಬ ಸರದಾರನನ್ನು ಕಳುಹಿ ಶಹಾಜಿಯನ್ನು ವಿಜಾಪುರಕ್ಕೆ ತರಿಸಿ, ಅವನನ್ನು ಒಂದು ಮಾಡದಲ್ಲಿ ಕುಳ್ಳಿರಿಸಿ ಕತ್ತಿನ ವರೆಗೆ ಗೋಡೆಯನ್ನು ಏರಿಸಲಿಕ್ಕೆ ಅಪ್ಪಣೆಕೊಟ್ಟಿರುತ್ತಾನೆ. ತಾವು ಹಿಡಿದುಕೊಂಡ ಆದಿಲಶಾಹಿಯ ಎಲ್ಲ ಪ್ರಾಂತಗಳನ್ನು ತಿರುಗಿಕೊಟ್ಟು ಶರಣು ಬರದಿದ್ದರೆ, ಪೂರಾ ಗೋಡೆ ಏರಿಸಿ ಅವನನ್ನು ಕೊಲ್ಲಿಸಬೇಕೆಂಬ ವಿಚಾರದಲ್ಲಿ ಆದಿಲಶಾಹಿ ದರಬಾರು ಇರುತ್ತದೆಂದು ಜನವಾರ್ತೆಯಿದೆ.*

---

* ಶಹಾಜಿಯು ಜಾಣನೂ ಧೂರ್ತನೂ ಆದ್ದರಿಂದ ಇಂತಹ ದಿಗರುತ್ತರ ಕೊಡಲಾರನೆಂತಲೂ ಘೋರ್ಪಡೆ ಬಾಜಿರಾಯನು ಅವನನ್ನು ಊಟಕ್ಕೆ ಕರೆದು ಮೋಸದಿಂದ ಸೆರೆಹಿಡಿದನೆಂತಲೂ ಆದಿಲಶಹನು ಶಿವಾಜಿಯ ಹಾವಳಿಯನ್ನು ತಡೆಯಲಾರದೆ ನವಾಬ ಮುಸ್ತಾಫಖಾನನಿಗೆ ಏನಾದರೂ ನೆವನ ಮಾಡಿ ಶಹಾಜಿಯನ್ನು ಸೆರೆಹಿಡಿಯಲಿಕ್ಕೆ ಬರೆದನೆಂತಲೂ ಕೇಳೂಸಕರು

ಈ ಎಲ್ಲ ವಿವರವನ್ನು ಕೇಳಿ ನಮ್ಮ ಚರಿತ್ರನಾಯಕನು ಅತಿಶಯ ವಾಗಿ ತಲ್ಲಣಿಸಿದನು. ಮುಂದೆ ಏನು ಮಾಡಬೇಕೆಂಬುದು ಅವನಿಗೆ ತಿಳಿಯದೆ ಹೋಯಿತು. ಅದಿಲಶಾಹಿಯೊಡನೆ ಕಾದಿ ಆ ಸರಕಾರವನ್ನು ಮಣಿಸುವಷ್ಟು ಕಸುವು ಅವನಲ್ಲಿದ್ದಿಲ್ಲ. ತಾನು ಗಳಿಸಿದ್ದನ್ನೆಲ್ಲ ಇಟ್ಟುಕೊಳ್ಳುವುದೇ ಅವನಿಗೆ ಸಾಕುಬೇಕಾಗಿತ್ತು. ಅದಿಲಶಹನಿಗೆ ಶರಣುಹೋದರೆ ತಾನು ಇಷ್ಟು ಬೆಂದು ಬಳಲಿ ಬಸವಳಿದು ಮಾಡಿದ್ದೆಲ್ಲ ಪೋಲಾಗುತ್ತಿತ್ತು. ಆದಕಾರಣ ಈ ಪೇರಳಲಿನಿಂದ ಪಾರಾಗಲಿಕ್ಕೆ ಎರಡೇ ಹಂಚಿಕೆಗಳು ಹೊಳೆದವು: (೧) ದಿಲ್ಲಿಯ ಸಾರ್ವಭೌಮನಾದ ಶಹಾಜಹಾನ ಬಾದಶಹನ ಮರೆಹೊಕ್ಕು, ಅವನಿಂದ ಅದಿಲಶಹನಿಗೆ ಹುಕುಮುಕೊಡಿಸಿ, ತನ್ನ ತಂದೆಯನ್ನು ಬಿಡಿಸುವುದು ಒಂದು. (೨) ಅದಿಲಶಾಹಿಯ ಪ್ರಮುಖ ಸರದಾರರಿಗೆ ಹೇರಳ ಲಂಚಕೊಟ್ಟು ಅವರ ನೆರವಿನಿಂದ ತನ್ನ ತಂದೆಯನ್ನು ಮುಕ್ತಮಾಡುವುದು ಮತ್ತೊಂದು. ಈ ಎರಡೂ ಪ್ರಯತ್ನಗಳನ್ನು ಕೂಡಲೆ ಕಯ್ಕೊಳ್ಳಬೇಕೆಂದು ನಿಶ್ಚಯಿಸಿ, ಸಿವಾಜಿಯು ಇಬ್ಬರು ಜಾಣರಾದ ಬ್ರಾಹ್ಮಣ ವಕೀಲರನ್ನು ವಿಜಾಪುರಕ್ಕೆ ಕಳಿಸಿದ್ದಲ್ಲದೆ, ದಕ್ಷಿಣದ ಮೊಗಲ್ ಸುಬೇದಾರನಾದ ಮುರಾದಬಕ್ಷನಿಗೆ ಒಂದು ಪತ್ರಬರಿಸಿದನು. ಅದರಲ್ಲಿ ತನ್ನ

---

ಬರೆಯುತ್ತಾರೆ, ಪುಟ ೧೧೯, ೧೨೦. ಶಹಾಜಿಯಂತಹ ಕಯ್ಕೆಳಗಿನ ಸಣ್ಣ ಸರದಾರರನ್ನು ಸೆರೆಹಿಡಿಯಲಿಕ್ಕೆ ಸುಳ್ಳುನೆವನ ಹೇಳುವಷ್ಟು ನಿಕೃಷ್ಟಾವಸ್ಥೆಗೆ ಅದಿಲಶಹನು ಆಕಾಲಕ್ಕೆ ಬಂದಿದ್ದಿಲ್ಲ. ಆದ್ದರಿಂದ ಕೇಳೂಸಕರರ ಬರಹವು ಸರಿಯಾದ್ದೆಂದು ತೋರುವುದಿಲ್ಲ. ಶಹಾಜಿಯಾದರು ಹೀಗೆ ತನ್ನ ಮೇಲಧಿಕಾರಿಯೊಡನೆ ಪುಂಡಾಟಮಾಡಲಿಕ್ಕೆ ಕಾರಣವೇನು? ನವಾಬನಿಗೂ ಶಹಾಜಿಗೂ ಬೇರೆ ಕಾರಣಕ್ಕೋಸ್ಕರ ಮನಸ್ತಾಪ ಉಂಟಾದುದನ್ನು ಯಾವ ಇತಿಹಾಸಕಾರನೂ ಬರೆಯುವುದಿಲ್ಲ. ಶಹಾಜಿಯು ಅನುಭವಿಕನಾದರೂ ಹೀಗೆ ಅವಿಧೇಯತನದ ದಿಗರುತ್ತರಕೊಟ್ಟ ಕಾರಣವೇನಿರಬಹುದು? ಕಾಳಿನ ತುಟಾಗ್ರತೆಯು ಎಲ್ಲ ದಂಡಿಗೂ ಇತ್ತು. ಅದರೊಳಗೆ ೮ ನೆಯ ಅಥವಾ ೧೦ ನೆಯ ಅಂಶವಾದ ಇವನ ೩,೦೦೦ ದಂಡಿಗೆ ಮಾತ್ರ ಇರಲಾರದು. ಜಿಂಜಿಯ ಕೋಟೆಯ ಒಡೆಯನು ಶಹಾಜಿಗೆ ಲಂಚಕೊಟ್ಟು ಆಶಾತೋರಿಸಿ ಅವನನ್ನು ಒಡಕೊಂಡಿರಬಹುದೇನು? ಹೊಸಕಾರಣವನ್ನು ಹುಡುಕಿ ತೆಗೆಯುವ ವರೆಗೆ ಈ ಪ್ರಶ್ನವು ವಾದಗ್ರಸ್ತವಾಗಿಯೇ ಉಳಿಯಬೇಕು.

ತಂದೆಯಾದ ಶಹಾಜಿಗೆ ಆದಿಲಶಾಹಿಯಿಂದ ಒದಗಿದ ದುಃಸ್ಥಿತಿಯನ್ನು ತುಂಬಾ ಬಣ್ಣಿಸಿ, ಮೊಗಲ್ಬಾದಶಹನು ಶಹಾಜಿಯು ಹಿಂದೆ ಮಾಡಿದ ಅಪರಾಧವನ್ನು ಕ್ಷಮಿಸಿ, ಆದಿಲಶಾಹಿಗೆ ಪತ್ರಬರೆದು ಅವನನ್ನು ಉಳಿಸಿದರೆ, ಅವನು ತಾನು ಇಬ್ಬರೂ ಮೊಗಲರ ಊಳಿಗವನ್ನು ಸೇರಿ, ಕೃತಜ್ಞತೆಯಿಂದ ಕೆಲಸಮಾಡುವೆವೆಂದು ಬರೆದಿತ್ತು. ಮುರಾದಬಕ್ಷನು ಕನಿಕರಬಟ್ಟು ಸಿವಾಜಿಗೆ ಅನುಕೂಲವಾಗಿ ಒಬ್ಬ ನಂಬಿಗೆಯ ವಕೀಲನನ್ನು ಕಳಿಸಬೇಕೆಂದು ಉತ್ತರ ಬರಿಸಿದನು (೧೪ ಮಾರ್ಚ ೧೬೪೯). ಅದರಲ್ಲಿ ಸಿವಾಜಿಯು ತನ್ನ ತಂದೆನೆಂಟರೊಡನೆ ಬಾದಶಹನ ದರಬಾರಕ್ಕೆ ಬರಬೇಕೆಂತಲೂ ಅವನಿಗೆ ೫,೦೦೦ ದ ಮನಸಬ್ದಾರಿಯೂ ಶಹಾಜಿಗೆ ಮೊದಲಿದ್ದ ಅಧಿಕಾರವೂ ಉಳಿದ ಆಪ್ತರಿಗೆ ಅವರವರ ಯೋಗ್ಯತಾನುಸಾರವಾಗಿ ಮನಸಬ್ದಾರಿಗಳೂ ದೊರೆಯುವವೆಂದೂ ಬರೆದಿತ್ತು (೧೪ ಆಗಸ್ಟ ೧೬೪೯). ಮುಂದೆ ೩ ತಿಂಗಳ ಮೇಲೆ ಮುರಾದಬಕ್ಷನು ಶಹಾಜಿಗೆ ನೇರಾಗಿ ಒಂದು ಉಡಿಗೆಯನ್ನೂ ಪತ್ರವನ್ನೂ ವಿಜಾಪುರಕ್ಕೆ ಕಳುಹಿದನು. ಆದರಲ್ಲಿ ಸಿವಾಜಿಯ ವಿನಂತಿಯು ತಲ್ಪಿತೆಂತಲೂ ತಾನು (ಮುರಾದಬಕ್ಷನು) ದಿಲ್ಲಿಯ ದರಬಾರಕ್ಕೆ ಹೋಗಿ ಶಹಾಜಿಯ ಅರಿಕೆಯನ್ನು ಬಾದಶಹನಿಗೆ ತಿಳಿಸುವನೆಂತಲೂ ಶಹಾಜಿಯು ಕೂಡಲೆ ಒಬ್ಬ ವಕೀಲನನ್ನು ದಿಲ್ಲಿ ದರಬಾರಕ್ಕೆ ಕಳಿಸಬೇಕೆಂತಲೂ ಬರೆದಿತ್ತು (೩೧ ಅಕ್ಟೋಬರ ೧೬೪೯). ಸಿವಾಜಿಯು ಜುನ್ನರ, ಅಹಮ್ಮದ ನಗರಗಳ ದೇಶಮುಖಿಯನ್ನು ಕೇಳಲು, ತಾನು ಆದಷ್ಟು ಪ್ರಯತ್ನಮಾಡಿ ಕೊಡಿಸುವೆನೆಂದು ಮುರಾದಬಕ್ಷನು ಬರೆದನು (೩೦ ನವಂಬರ ೧೬೪೯).

ಈ ನಾಲ್ಕು ಪತ್ರಗಳ ಒಕ್ಕಣಿಕೆಯಿಂದ ಮುರಾದಬಕ್ಷನು ಬಾದಶಹನ ತರ್ಫಿನಿಂದ ಆದಿಲಶಹನಿಗೆ ಶಹಾಜಿಯನ್ನು ಬಿಡುಗಡೆಮಾಡಲಿಕ್ಕೆ ಬರೆದಿರಬಹುದೆಂದು ತೋರುತ್ತದೆ. ಆದರೆ ಪಂಡಿತ ಜದುನಾಥ ಸರ್ಕಾರರು ದಿಲ್ಲಿ ಬಾದಶಹನು ಈ ಸಂಬಂಧದಿಂದ ಎಂದೂ ಏನೂ ಬರೆಯಲಿಲ್ಲೆಂತಲೂ ಹಾಗೆ ಬರೆಯಲಿಕ್ಕೆ ಕಾರಣವಿದ್ದಿಲ್ಲೆಂತಲೂ ದಿಲ್ಲಿ ದರಬಾರದಲ್ಲಿ ಶಹಾಜಿಯು ಎಲ್ಲರಿಗೂ ಬೇಡಾಗಿದ್ದುದರಿಂದ ದಿಲ್ಲಿಯ ದರಬಾರವು ಅವನ ಬಿಡುಗಡೆಯ ಸಂಬಂಧದಿಂದ ಮನಃಪೂರ್ವಕವಾಗಿ ಏನೂ

ಪ್ರಯತ್ನಮಾಡಲಿಲ್ಲೆಂತಲೂ ಚಿಟ್ಣೀಸ ಬಖೈರಿನಲ್ಲಿ ಮಧ್ಯಸ್ಥಿಕೆಯ ಬಗ್ಗೆ ಏನೂ ಉಲ್ಲೇಖವಿಲ್ಲೆಂತಲೂ ಬರೆಯುತ್ತಾರೆ.* ಕೇಳೂಸಕರರು ದಿಲ್ಲಿ ಬಾದಶಹನ ಮಧ್ಯಸ್ಥಿಕೆಯಿಂದಲೇ ಸಿವಾಜಿಯು ತನ್ನ ತಂದೆಯನ್ನು ಬಿಡಿಸಿಕೊಂಡನೆಂದು ಸ್ಪಷ್ಟವಾಗಿ ಬರೆಯುತ್ತಾರೆ.† ಇವರಿಬ್ಬರ ಬರಹ ದಲ್ಲಿಯೂ ತಥ್ಯಾಂಶವಿದ್ದಂತೆ ತೋರುತ್ತದೆ. ಶಹಾಜಹಾನ ಬಾದಶಹನು ಅದಿಲಶಾಹಿ ಸರಕಾರಕ್ಕೆ ಶಹಾಜಿಯನ್ನು ಬಿಟ್ಟುಕೊಡಬೇಕೆಂದು ಎಂದೂ ಬರೆಯಲಿಲ್ಲ. ಸಿವಾಜಿಯಿಂದ ದುಡ್ಡುತಿಂದ ಸರ್ಜಾಖಾನ, ರಣದುಲ್ಲಾ ಖಾನರು ಶಹಾಜಿಯನ್ನು ಮೇಲ್ಗಟ್ಟಿಕೊಂಡು ಯಾವಾಗಲೂ ಮಾತಾಡಿ ದ್ದರಿಂದಲೂ ಶಹಾಜಿಯನ್ನು ಕೊಲ್ಲಿಸಿದರೆ ಮೊಗಲರು ಸಿವಾಜಿಯೊಡನೆ ದಂಡೆತ್ತಿಬಂದು ವಿಜಾಪುರವನ್ನು ಮುತ್ತಬಹುದೆಂಬ ಹೆದರಿಕೆಯಿಂದಲೂ ಅದಿಲಶಾಹಿ ದರಬಾರವು ಅಂಜಿ, ಶಹಾಜಿಗೆ ಜೀವದಾನಕೊಟ್ಟು ಅವನ ಮೇಲೆ ಕಾವಲಿರಿಸಿದರೆಂದು ತೋರುತ್ತದೆ. ಕಾರಣವು ಏನಾದರಿರಲಿ, ಶಹಾಜಿಯು ತನ್ನ ಮಗನ ವಿಶ್ವಪ್ರಯತ್ನದಿಂದ ಸೆರೆಯಿಂದ ಬಿಡುಗಡೆ ಹೊಂದಿವನೆನ್ನಲಿಕ್ಕೆ ಸಂಶಯವಿಲ್ಲ (ದಶಂಬರ ೧೬೪೯). ಇದಕ್ಕೂ ತುಸು ದಿವಸ ಮೊದಲು ಜಿಂಜಿಕೋಟೆಯು ಅದಿಲಶಾಹಿಯ ಕಯ್ವಶ ವಾಯಿತು.

ಅದಿಲಶಾಹಿ ಸರಕಾರದವರು ಶಹಾಜಿಯನ್ನು ಯಾವ ಶರ್ತಿನ ಮೇಲೆ ಬಿಟ್ಟರೆಂಬ ಬಗ್ಗೆ ಯಾವ ಗ್ರಂಥದಲ್ಲಿಯೂ ಉಲ್ಲೇಖವಿಲ್ಲ. ಅವ ನನ್ನು ಕೆಲ ಶರ್ತಿನ ಮೇಲೆ ಬಿಟ್ಟರೆಂದು ಎಲ್ಲರೂ ಬರೆಯುತ್ತಾರೆ. ಆದ್ದರಿಂದ ಮುಂದೆ ನಡೆದ ಸಂಗತಿಗಳ ಮೇಲಿಂದ ಕೆಳಗೆ ಕೊಟ್ಟ ಶರ್ತುಗಳಿದ್ದ ವೆಂದು ಕಾಯಾಸ ಕಟ್ಟಬಹುದು :—

(೧) ಶಹಾಜಿಯು ನಿಶ್ಚಪ್ರಯತ್ನಮಾಡಿ ಅವನ ಮಗನು ಹಿಡಿ ಕೊಂಡ ಅದಿಲಶಾಹಿಯ ಕೋಟೆಯೂರುಗಳನ್ನು ತಿರುಗಿ ಅದಿಲಶಾಹಿಗೆ ಕೊಡಿಸಬೇಕು.

---

* ಸಿವಾಜಿಯೂ ಅವನ ಕಾಲವೂ, ಪುಟ ೪೧.

† ಛತ್ರಪತಿ ಸಿವಾಜಿ ಮಹಾರಾಜ, ಪುಟ ೧೨೪.

(೨) ಮೇಲಿನ ಶರ್ತಿನಂತೆ ಕೋಟೆಯೂರುಗಳು ಆದಿಲಶಾಹಿಯ ವಶಕ್ಕೆ ಬರುವವರೆಗೆ ಶಹಾಜಿಯು ವಿಜಾಪುರದಲ್ಲೇ ನಜರಕೈದಿಯಾಗಿರಬೇಕು.

೧ ನೆಯ ಶರ್ತಿನಂತೆ ಶಹಾಜಿಯು ಸಿವಾಜಿಗೆ ಆದಿಲಶಹನು ಹೇಳಿದಂತೆ ಸವಿಸ್ತಾರವಾಗಿ ಪತ್ರ ಬರೆದನು. ಆದಿಲಶಾಹಿಯ ಪ್ರಾಂತಗಳನ್ನು ತಿರುಗಿ ಕೊಡದಿದ್ದರೆ ನಿಶ್ಚಯವಾಗಿ ತನ್ನ ಜೀವವು ಉಳಿಯುವುದಿಲ್ಲೆಂತಲೂ, ಸದ್ಯಕ್ಕೆ ತಿರುಗಿ ಕೊಟ್ಟು ಮುಂದೆ ಆದಿಲಶಹನ ಒಲುಮೆಯಿಂದ ಈಗಿದ್ದುದಕ್ಕಿಂತ ಹೆಚ್ಚು ರಾಜ್ಯವನ್ನು ಸಂಪಾದಿಸಬಹುದೆಂತಲೂ, ತನ್ನ ಜೀವ ಉಳಿದರೆ ಇಂತಹವೆಷ್ಟೋ ರಾಜ್ಯಗಳು ದೊರೆಯಬಹುದೆಂತಲೂ ಬರೆದನು. ಆ ಪತ್ರವನ್ನು ನೋಡಿ ಸಿವಾಜಿಯು ಚಿಂತಾಗ್ರಸ್ತನಾಗಿ ಮುಂದೆ ಏನು ಮಾಡಬೇಕೆಂದು ತೋಚದೆ, ಹುಚ್ಚು ಹಿಡಿದವನ ಹಾಗೆ ಎಣಿಕೆ ಹಾಕುತ್ತ ಸಣ್ಣಮೋರೆಮಾಡಿಕೊಂಡು ಸುಮ್ಮನೇ ಕುಳಿತನು. ಆವನ ಆ ಸ್ಥಿತಿಯನ್ನು ನೋಡಿ ಚದುರೆಯೂ ಅವನ ಪ್ರೀತಿಗೆ ಪಾತ್ರಳಾದ ಹೆಂಡತಿಯೂ ಆದ ಸಯಿಬಾಯಿಯು ಅವನ ಹತ್ತರಕ್ಕೆ ಬಂದು ಅವನ ಬಳಿಯಲ್ಲಿ ಕುಳಿತು, ಪ್ರೀತಿಪೂರ್ವಕವಾದ ಇಂಜರದಿಂದ,

"ಪ್ರಾಣನಾಥ, ಏನುಕಾರಣ ಇಷ್ಟು ತಲ್ಲಣಿಸುತ್ತಿರುವಿರಿ? ಅಂತಹ ಕುತ್ತು ಏನು ಬಂದಿದೆ? ತಾವು ಗಂಡುಗಲಿಗಳಿದ್ದು ಹೀಗೆ ಚಿಂತೆಗೆ ಈಡಾಗಬಹುದೇ? ಶ್ರೀ ಭವಾನಿಯ ದಯೆಯಿಂದ ಎಂತಹ ಕೇಡಾದರೂ ದೂರಾಗಬಹುದು. 'ಧೈರ್ಯಮ್ ಸರ್ವತ್ರ ಸಾಧನಮ್' ಎಂದು ತಾವೇ ಎಷ್ಟೋ ಸಾರಿ ನನಗೆ ಹೇಳಿಲ್ಲವೇ?"

ಸಿವಾಜಿ—(ಗುಂಗಿನಿಂದ ಎಚ್ಚತ್ತವನ ಹಾಗೆ ನಟಿಸಿ) ಹಾ, ಏನಂದಿ? ನನಗೆ ತುಸು ಜಂಪು ಹತ್ತಿತ್ತು.

ಸಯಿಬಾಯಿ—ಇದನ್ನೆಲ್ಲ ನಾನು ಬಲ್ಲೆ. ನಾನು ತಮ್ಮ ಕಯ್ಕೆಳಗೆ ಕಲಿತಿರುತ್ತೇನೆ. ಸಾಕು ಈ ಡೋಕಾರಿತನ. ಏನುಕಾರಣ ಚಿಂತೆ ಮಾಡುತ್ತೀರಿ ಹೇಳಿರಿ.

ಸಿ —ದಿಟವಾಗಿ ನನಗೆ ನಿದ್ದೆ ಬಂದಿತ್ತು. ಚಿಂತೆಯು ಜನ್ಮಕ್ಕೆ ಹತ್ತಿದೆ. ಚಿಂತೆಯಿಲ್ಲದ ಮನುಷ್ಯನಾವನಿದ್ದಾನೆ? ಸಂಸಾರವೇ ಚಿಂತೆ. ಜೀವ ಇರುವ ವರೆಗೆ ಏನಾದರೂ ಚಿಂತೆ ಇದ್ದೇ ಇರುತ್ತದೆ. ಒಂದರ ಚಿಂತೆ ತೀರುವುದರೊಳಗೆ ಮತ್ತೊಂದರ ಚಿಂತೆ ಎದ್ದಿರುತ್ತದೆ. ನಿನಗೇನು ಚಿಂತೆ ಇಲ್ಲವೇ ?

ಸಯಿ.—ಹಾಗಲ್ಲ. ಈ ಹೊತ್ತೇನೋ ಹೆಚ್ಚಿನ ಚಿಂತೆ ಬಂದಂತೆ ತೋರುತ್ತದೆ. ಈ ಮೊದಲು ತಾವು ಎಂದೂ ಹೀಗೆ ಜೋಲುಮೋರೆ ಹಾಕಿಕೊಂಡು ಕುಳಿತುದನ್ನು ನಾನು ನೋಡಿದ್ದಿಲ್ಲ. ದಿಟವಾದ ಕಾರಣ ವನ್ನು ಹೇಳಿರಿ. ಸುಳ್ಳುಸೊಟ್ಟರು ಹೇಳಿ ಕಳಿಸಬೇಡರಿ. ನಾನು ತಮ್ಮ ಅರ್ಧಾಂಗಿಯಲ್ಲವೇ? ಅರ್ಧಚಿಂತೆಯನ್ನು ಹೊತ್ತು ತಮ್ಮ ಚಿಂತೆಯ ಹೊರೆಯನ್ನು ಅರೆವಾಸಿ ಕಡಮೆಮಾಡುವೆನು.

ಸಿ.—ನೀನು ಅರ್ಧಾಂಗಿಯುಹುದು. ಇಕೋ (ಲಟ್ಟನೆ ಮುದ್ದು ಕೊಟ್ಟು ಕೊರಳಮೇಲೆ ಕಯ್ಹಾಕಿ), ಇದೇ ನೀವು ಚಿಂತೆಯನ್ನು ಕಡಮೆ ಮಾಡುವ ಸಾಧನವು. ರಾಜಕಾರ್ಯದಲ್ಲಿ ನಿಮಗೆ ತಿಳಿಯುವುದೇನು ?

ಸಯಿ.—ರಾಜಕಾರ್ಯವು ಮನುಷ್ಯನನ್ನು ಮಾರಿದ್ದೇನು ? ಹೆಂಗಸರು ಮನುಷ್ಯರಲ್ಲವೇ ? ನೀವು ಬಚ್ಚಿಟ್ಟರೆ ನಮಗೆ ತಿಳಿಯುವ ಬಗೆ ಹೇಗೆ? ಹಿಂದಕ್ಕೆ ಪ್ರಮೀಳಾ ಕಯ್ಕೆಯಿ ಸತ್ಯಭಾಮೆಯರು ಕಾಳಗದಲ್ಲಿ ತೊಡಗ ಲಿಲ್ಲವೇ? ಮೊನ್ನೆ ಮೊನ್ನೆ ಚಾಂದಬೀಬಿ ನೂರಜಹಾನರು ಬವರದಲ್ಲಿ ಕಲಿತನವನ್ನು ತೋರಿಸಲಿಲ್ಲವೇ? ಜಾಣತನದಿಂದ ರಾಜ್ಯಪರಿಪಾಲನೆ ಯನ್ನು ಮಾಡಲಿಲ್ಲವೇ?

ಸಿ.—ನೀನು ಹೇಳಿದವರೆಲ್ಲ ಅಪವಾದವಾಗಿರುತ್ತಾರೆ. ಸಾಮಾನ್ಯ ವಾಗಿ ಮನೆಯಾಡಳತವನ್ನು ನೋಡುವುದೂ ಮಕ್ಕಳನ್ನು ಹಡೆದು ಜೋಪಾನ ಮಾಡುವುದೂ ಹೆಂಗಸರ ಕೆಲಸಗಳಾಗಿರುತ್ತವೆ. ನಿಮಗೆ ರಾಜ್ಯಕಾರ್ಯದಲ್ಲಿ ಗತಿಯೇ ಇಲ್ಲ.

ಸಯಿ.—ಗಂಡಸರು ಹೆದರಿಕೆಯಿಂದಲೋ ಹೊಟ್ಟೆಕಿಚ್ಚಿನಿಂದಲೋ ನಮಗೆ ಆ ವಿದ್ಯೆಗಳನ್ನು ಕಲಿಸುವುದೇ ಇಲ್ಲ. ಮೊದಲು ಹೆಂಗಸರು

ಬೇಕಾದ ವಿದ್ಯೆಯನ್ನು ಕಲಿಯುತ್ತಿದ್ದರು. ಎಷ್ಟೋಮಂದಿ ಹೆಂಗಸರು ಗಂಡಸರೊಡನೆ ಶಾಸ್ತ್ರಗಳಲ್ಲಿ ವಾದ ಮಾಡಿದ ಉದಾಹರಣೆಗಳು ಪುರಾಣ ದಲ್ಲಿಲ್ಲವೇ ?

ಸಿ.—ಗಂಡಸರು ನಿಮಗೆ ಹೆದರುತ್ತಾರೇನು ?

ಸಯಿ.—ಅಂಜಿ ಕಾಲುಬೀಳುತ್ತಾರೆ. ಹೊರಗೆ ಮಾತ್ರ, ಇಲ್ಲದ ಬಡಿ ವಾರ ಹೇಳುತ್ತಾರೆ. ನಾವು ಹೆಂಗಸರು ಕಡಮೆಯವರೇನು ? ಶ್ರೀಭವಾ ನಿಯ ಅಂಶಭೂತರಾಗಿರುತ್ತೇವೆ. ಜಗದಂಬೆಯು ಎಷ್ಟುಮಂದಿ ದುಷ್ಟ ರಾಕ್ಷಸರನ್ನು ಸಂಹರಿಸಿದಳೆಂಬುದು ತಮಗೆ ಗೊತ್ತಿಲ್ಲವೇ ? ಮಲೆಯಾಳ ದಲ್ಲಿ ಹೆಂಗಸರೇ ರಾಜ್ಯಭಾರ ಮಾಡುವುದಿಲ್ಲವೇ ?

ಸಿ.—ಓಹೊ, ನೀನು ಭವಾನಿಯ ಅವತಾರವಾಗಿದ್ದರೆ ನಿನ್ನಡಿಗೆರ ಗುತ್ತೇನೆ. ಕ್ಷಮಿಸು (ಎಂದು ಆಕೆಯ ಕಾಲುಃ ಬೀಳಲಿಕ್ಕೆ ಹೋಗುತ್ತಾನೆ).

ಸಯಿ.—ಛೇ, ಛೇ, (ಅವನನ್ನು ಹಿಂದಕ್ಕೆ ಸರಿಸಿ) ನಾನು ತಮ್ಮ ದಾಸಾನುದಾಸಿ, ತಮಗೆ ಸಾಷ್ಟಾಂಗ ನಮಸ್ಕಾರ ಹಾಕುತ್ತೇನೆ. ದಯ ವಿಟ್ಟು, ಹಂಬಲದ ಕಾರಣ ತಿಳಿಸಿರಿ. ನನ್ನ ಅರಿಕೆಯನ್ನು ಮರೆಮಾತಿಗೆ ಹಾಕಬೇಡರಿ. ತಮ್ಮ ಸುಖದುಃಖಗಳಿಗೆ ನಾನು ಪಾಲುಗಾರಳಾಗಿರು ತ್ತೇನೆ.

ಸಿ.—ನೀನು ಹಟಹಿಡಿದುದರಿಂದ ಹೇಳುತ್ತೇನೆ ಕೇಳು. ಹಿರಿಯ ರಿಂದ ಈಗ ಒಂದು ಕಾಗದ ಬಂದಿದೆ. ನಾನು ದೊರಕಿಸಿದ ಎಲ್ಲ ರಾಜ್ಯ ವನ್ನು ತಿರುಗಿಕೊಡದಿದ್ದರೆ ಅದಿಲಶಹನು ಅವರ ಪ್ರಾಣ ಹೀರಿಕೊಳ್ಳು ತ್ತಾನಂತೆ.

ಸಯಿ.—ಮಾವನವರು ಏನು ಅಪ್ಪಣೆ ದಯಪಾಲಿಸುತ್ತಾರೆ ?

ಸಿ.—ಅವರು ನಿನಗೆ ಯೋಗ್ಯಕಂಡರೆ ಬಿಟ್ಟುಕೊಡು ಎಂದು ಬರೆ ದಿದ್ದಾರೆ.

ಸಯಿ.—ಅವರು ಬಿಟ್ಟುಕೊಡೆಂದು ಕಟ್ಟಪ್ಪಣೆಯನಿತ್ತಿಲ್ಲ. ತಮ್ಮ ಪ್ರಾಣಕ್ಕೆ ನಿಜವಾದ ಭಯವಿದ್ದರೆ 'ಯೋಗ್ಯಕಂಡರೆ' ಎಂಬ ಪದವನ್ನು

ಹಾಕುತ್ತಿದ್ದಿಲ್ಲ. ಆದ್ದರಿಂದ ಶ್ರೀಭವಾನಿಯು ಅವರನ್ನು ಹೇಗಾದರು ಮಾಡಿ ಪಾರುಮಾಡುವಳೆಂದು ತೋರುತ್ತದೆ. ದಿಟವಾದ ಅಂಜಿಕೆ ಇದ್ದರೆ ಅವರು ಹೀಗೆ ಎಂದೂ ಬರೆಯುತ್ತಿದ್ದಿಲ್ಲ.

ಸಿ.—ತಮ್ಮ ಜೀವವುಳಿದರ ಇಂತಹವೆಷ್ಟೋ ರಾಜ್ಯಗಳನ್ನು ಗಳಿಸ ಬಹುದೆಂದು ಕೂಡ ಬರೆದಿರುತ್ತಾರೆ.

ಸಯಿ.—ಅವರು ಉಳಿಯುತ್ತಾರೆಂಬ ಬಗ್ಗೆ ಏನೂ ಸಂಶಯುವಿಲ್ಲೆಂದು ನನ್ನ ಮನೋದೇವತೆಯು ಹೇಳುತ್ತಾಳೆ. ದೇವರ ಕೃಪೆಯಿಂದ ಅವರು ಉಳಿದು ಹೆಚ್ಚಿನ ರಾಜ್ಯ ಸಂಪಾದಿಸಿದರೆ, ಕಬ್ಬಿನಮೇಲೆ ಜೇನಿಕ್ಕಿದಂತಾ ಯಿತು. ಪ್ರಾಣನಾಥ, ಮಳೆನೀರು ಬಿಟ್ಟು ಮಂಜಿನ ನೀರಿಗೆ ಕಯ್ಯೊಡ್ಡು ವರೇ ? ಕಯ್ಯಲ್ಲಿದ್ದ ನಾಡನ್ನು ಬಿಟ್ಟುಕೊಟ್ಟು ಮತ್ತೆ ದೊರಕಿಸಬಹುದೆಂಬ ಬಯಕೆಯು ಬಯಲಾಸೆ ಅಲ್ಲವೇ?

ಸಿ.—ಭಲೆ, ಶಾಬಾಸ, ಸಯಿ, ನೀನು ಒಳ್ಳೆಯ ಎದೆಗಾರ್ತಿಯೂ ಮುನ್ನೋಟದವಳೂ ಆಗಿರುತ್ತಿ. ನೀನು ಇಷ್ಟು ಚದುರೆಯೂ ಜಾಣೆಯೂ ಆಗಿರುತ್ತಿ ಎಂದು ನಾನು ತಿಳಿದಿದ್ದಿಲ್ಲ. ನಿನ್ನ ಅಭಿಪ್ರಾಯವೂ ನನ್ನ ಅಭಿಪ್ರಾಯವೂ ಕೂಡಿದವು (ಎಂದು ಆಕೆಯನ್ನು ಬಿಗಿದಪ್ಪಿಕೊಂಡು ಮುದ್ದಾಡುತ್ತಾನೆ). ರಾಜ್ಯವನ್ನು ಬಿಡುವುದಿಲ್ಲ.

ಸಯಿ.—ತಾವು ಹೀಗೆ ದುಡುಕ ಕೂಡದು. ಎಷ್ಟಾದರೂ ನಾನು ಚಿಕ್ಕವಳು, ರಾಜ್ಯಕಾರ್ಯದಲ್ಲಿ ನುರಿತವಳಲ್ಲ. ಅತ್ತೆಯವರು ಬಹಳ ಅನುಭವಿಕರು; ಅದರಲ್ಲೇ ಮಣ್ಣಿಗೆ ಮಣ್ಣು ಕೂಡಿದವರು; ಎಷ್ಟೋ ಕಷ್ಟ ನಷ್ಟಗಳನ್ನು ಹೊಂದಿರುವರು. ಅವರ ಸಲಹೆಯನ್ನು ಕೇಳಿರಿ. ತಮ್ಮ ಮಂತ್ರಿಗಳು ರಾಜ್ಯಕಾರ್ಯಧುರೀಣರು; ಅವರ ಅಭಿಪ್ರಾಯವನ್ನು ತಿಳಿ ಕೊಂಡು ಮುಂದೆ ಏನು ಮಾಡಬೇಕೆಂಬುದನ್ನು ನಿಶ್ಚಯಿಸಿರಿ (ಎಂದು ಹೇಳಿ ಹೊರಟುಹೋಗುತ್ತಾಳೆ).

ಈ ಪುಟ್ಟ ಸಂವಾದದಿಂದ ನಮ್ಮ ಚರಿತ್ರನಾಯಕನ ತಲೆಯ ಮೇಲಿದ್ದ ಭಾರವು ಇಳಿದಂತಾಯಿತು. ತನ್ನ ಹೆಂಡತಿಯು ತನ್ನಂತೆ ಹೇಳಿದ್ದನ್ನು ಕೇಳಿ ಅವನು ಹಿಗ್ಗಿದನು. ಕೂಡಲೆ ತನ್ನ ತಾಯಿಯ ಬಳಿಗೆ ಹೋಗಿ

ನಡೆದ ಸಂಗತಿಗಳನ್ನೆಲ್ಲ ಸವಿಸ್ತಾರವಾಗಿ ತಿಳಿಸಿದನು. ಆ ವೀರಮಾತೆಯು ಇಂತಹ ಅದಿಲಶಾಹಿಯ ಪೊಳ್ಳು ಬೆದರಿಕೆಗೆ ಹೆದರುವವಳೇ? ತನ್ನ ಮಗನ ಹೇಳೋಣವೆಲ್ಲವು ಮುಗಿದಕೂಡಲೆ, "ಶಿವಾ, ಹೆದರಬೇಡ. ನಿನ್ನ ತಂದೆಯಂತಹ ಶೂರನನ್ನು ಕಳೆದುಕೊಳ್ಳುವಷ್ಟು ಅದಿಲಶಹನು ಹೆಡ್ಡನಲ್ಲ. ಇದು ಸುಳ್ಳು ಬೆದರಿಕೆ ಇರುತ್ತದೆ. ನೀನು ವಿರುದ್ಧವಾಗಿ ಬರೆಯದೆ, ಎರಡೂ ದಂಡೆಗಳ ಮೇಲೆ ಕಯ್ಯಿಟ್ಟು ಸಾರ್ವೋಪಚಾರದ ಉತ್ತರವನ್ನು ಕಳಿಸು. ರಾಜ್ಯವನ್ನು ತಿರುಗಿ ಕೊಟ್ಟು ಕಯ್ಕಟ್ಟಿಸಿಕೊಳ್ಳಬೇಡ. ಶ್ರೀಭವಾನಿಯು ಈ ಗಂಡಾಂತರದಿಂದ ಪಾರುಮಾಡುವಳು. ಏನೂ ಚಿಂತೆಮಾಡಬೇಡ" ಎಂದು ಹರಿಸಿ ಮಗನನ್ನು ಕಳಿಸಿಕೊಟ್ಟಳು. ಮಂತ್ರಿಗಳಾದರೂ ಹಾಗೆಯೇ ಅಭಿಪ್ರಾಯಪಟ್ಟುದರಿಂದ ಶಿವಾಜಿಯು ನಿಶ್ಚಿಂತನಾಗಿ ಉತ್ತರ ಬರಿಸಿ ಕಳಿಸಿದನು. ಅದರಲ್ಲಿ ಅವನು ಬರಿಸಿದ್ದೇನಂದರೆ:—ಮೊದಲಿನ ಅದಿಲಶಾಹಿಯ ಅಧಿಕಾರಿಗಳು ಸರಿಯಾಗಿ ಕೆಲಸಮಾಡದ್ದರಿಂದಲೂ, ಕಂದಾಯವನ್ನು ವಸೂಲುಮಾಡಿ ಹೊತ್ತು ಹೊತ್ತಿಗೆ ಕೊಡುತ್ತಿದ್ದಿಲ್ಲವಾದ್ದರಿಂದಲೂ, ಕೋಟೆಗಳಿಗೆ ದುರಸ್ತಿ ಇಲ್ಲುದರಿಂದಲೂ, ದೇಶಮುಖರು ತಂತಮ್ಮೊಳಗೆ ಬಡಿದಾಡಿ ಸರಕಾರದ ಹಾನಿಯನ್ನು ಮಾಡುತ್ತಿರುವುದರಿಂದಲೂ, ನಾನು ಅದಿಲಶಾಹಿಯ ನಂಬಿಗೆಯ ನೌಕರನ ಮಗನಾದ್ದರಿಂದಲೂ, ಅದಿಲಶಾಹಿಯ ಉಪ್ಪು ಉಣ್ಣುತ್ತಿರುವುದರಿಂದಲೂ, ನನ್ನ ಒಡೆಯನಾದ ಅದಿಲಶಹನಿಗೆ ಹಿತಮಾಡುವ ಉದ್ದೇಶದಿಂದಲೇ ರಾಜದ್ರೋಹಿಗಳಾದ ಅದಿಲಶಾಹಿ ನೌಕರರನ್ನು ಕಿತ್ತಿಹಾಕಿ, ಬಂಡುಗಾರರಾದ ದೇಶಮುಖರನ್ನು ಹಣಿದು, ಅದಿಲಶಾಹಿಯ ತರ್ಫಿನಿಂದ ಅವರ ನಾಡನ್ನೇ ಕ್ರಮಗೊಳಿಸುತ್ತಲಿದ್ದೇನೆ. ಈ ಸ್ವಾಮಿಕಾರ್ಯಕ್ಕೋಸ್ಕರ ನನಗೆ ಬಹಳ ಹಣ ವೆಚ್ಚಮಾಡಬೇಕಾದ್ದರಿಂದಲೂ, ಸಾವುಕಾರರ ತೊಂದರೆಯು ಹೆಚ್ಚಿದ್ದರಿಂದಲೂ, ಸಾಲ ಬಡ್ಡಿಗಳನ್ನು ಕೊಡುವುದರಲ್ಲಿ ಎಲ್ಲ ಹುಟ್ಟುವಳಿಯು ಖರ್ಚಾಗಿ ಹೋಗುತ್ತಿರುವುದರಿಂದಲೂ, ಅದಿಲಶಾಹಿ ಸರಕಾರಕ್ಕೆ ಹಣ ಕಳಿಸಿ ಕೊಡುವುದು ನನ್ನಿಂದಾಗಲಿಲ್ಲ. ಈ ಅನಿವಾರ್ಯವಾದ ಅಪರಾಧಕ್ಕೋಸ್ಕರ ಸುವಿಚಾರಿಯಾದ ಅದಿಲಶಾಹಿ ಸರಕಾರವು ನನ್ನನ್ನು ನಿಶ್ಚಯವಾಗಿ ಕ್ಷಮಿಸುವುದೆಂದು ತುಂಬಾ ನಂಬಿದ್ದೇನೆ. ಸಾಲವೆಲ್ಲ ಮುಟ್ಟಿದ ಬಳಿಕ

ಸರಕಾರಕ್ಕೆ ಬರತಕ್ಕ ಹಣವನ್ನು ತಪ್ಪದೆ ಹೊತ್ತುಹೊತ್ತಿಗೆ ಕಳಿಸಿಕೊಡು ವೆನು. ಇಲ್ಲಿಂದ ನಾನು ಓಡಿಸಿದ ರಾಜದ್ರೋಹಿಗಳೂ ಸ್ವಾರ್ಥಪರರೂ ಆದ ಮಾಜಿ ಅಧಿಕಾರಿಗಳು ನನ್ನ ವಿಷಯವಾಗಿ ಹೇಳಿದ ಅಥವಾ ಈಗ ಹೇಳುತ್ತಿದ್ದ ಚಾಡಿಗೆ ಅದಿಲಶಾಹಿ ಸರಕಾರದವರು ಕಿವಿಗೊಡದೆ, ನನ್ನ ರಾಜಸೇವೆಯಲ್ಲಿ ಪೂರ್ಣವಿಶ್ವಾಸವಿಟ್ಟರೆ, ಈ ರಾಜ್ಯದಲ್ಲಿ ಎಷ್ಟು ಅಬಾದಾನಿ ಯಾಗಿ ಜನರು ಕೊಂಡಾಡುವರೆಂಬುದು ತಾನೇ ತಿಳಿಯುವುದು. ನಾನು ಅದಿಲಶಾಹಿಯ ಸೇವೆಯನ್ನು ಉಳಿದ ಸರದಾರರಂತೆ ಪ್ರತಿಫಲ ಬಯಸದೆ ಸ್ವಾರ್ಥವನ್ನು ತೊರೆದು ಪ್ರಾಮಾಣಿಕತನದಿಂದ ಮಾಡುತ್ತಿರುವೆನೆಂಬು ದನ್ನು ಆ ಸರಕಾರಕ್ಕೆ ಪ್ರಯತ್ನಪೂರ್ವಕವಾಗಿ ಬಿನ್ನವಿಸಿ ತಿಳಿಸಿರಿ. ನಾನು ಈ ನಾಡಿನ ಅದಿಲಶಾಹಿಯ ಸಂಬಳಿಲ್ಲದ ಸುಬೇದಾರನೇ ಹೊರತು ಮತ್ತೇನು ಅಲ್ಲ ಎಂಬ ಸಂಗತಿಯನ್ನು ಸರಕಾರಕ್ಕೆ ಆಗಿಂದಾಗ ತಪ್ಪದೆ ನೆನಪುಕೊಡಿರಿ.

ಈ ಪತ್ರವು ಕಯ್ಸೇರಿದ ಕೂಡಲೆ ಶಹಾಜಿಯು ಅದನ್ನು ಮತ್ತೆ ಮತ್ತೆ ತಿರುತಿರುಗಿ ಓದಿ, ತನ್ನ ಮಗನ ಜಾಣತನವನ್ನೂ ಧೂರ್ತತನವನ್ನೂ ಮುಂಗಾಲುಪುಟಿಗೆಯ ಮಾತುಗಳನ್ನು ನೋಡಿ ಹಿಗ್ಗಿ, ಅದನ್ನು ತೆಗೆದು ಕೊಂಡು ದರಬಾರಕ್ಕೆ ಹೋದನು. ಅದನ್ನು ಓದಿಸಿ ಕೇಳಿ ಮಂತ್ರಿಗಳು ಸೋಜಿಗಗೊಂಡರು. ಅವನು ಬರೆದುದೆಲ್ಲ ಮೋಸವೆಂದು ಕೆಲವರಿಗೆ ಮನವರಿಕೆಯಾದರೂ ಅವನಿಂದ ಯಥೇಚ್ಛವಾಗಿ ದುಡ್ಡು ತಿಂದ ಹಲವರು ಅವನನ್ನು ಮೇಲ್ಗಟ್ಟಿಕೊಂಡು ಅತ್ಯಾವೇಶದಿಂದ ಮಾತಾಡತೊಡಗಿದರು. ತನ್ನ ಮಗನ ಮಾತು ವೇದವಾಕ್ಯಗಳಷ್ಟು ಪ್ರಮಾಣವಾದವುಗಳೆಂತಲೂ ತಾನು ಪ್ರತಿಯೊಂದು ಶಬ್ದಕ್ಕೆ ಹೊಣೆಯಾಗುವೆನೆಂತಲೂ ಶಹಾಜಿಯು ನಡುನಡುವೆ ಗುಣಗುಟ್ಟುತ್ತಿದ್ದನು. ಸ್ವಾಭಾವಿಕವಾಗಿ ದರಬಾರದಲ್ಲಿ ಮತ ಭೇದ ಉಂಟಾಯಿತು. ಮುಂದೆ ಮಾಡತಕ್ಕ ಕೆಲಸವು ಕಟ್ಟಾಯಿತು. ಪ್ರವೃತ್ತಿಗೆ ನಿಶ್ಚಿತಜ್ಞಾನವೇ ಮುಖ್ಯಕಾರಣವಲ್ಲವೇ? ಸಂಶಯದಲ್ಲಿ ಮುಳು ಗಿದವನಿಗೆ ಕಾರ್ಯೋತ್ಸಾಹವೆಲ್ಲಿ? ಆದಕಾರಣ ಒಬ್ಬ ವಿಶ್ವಾಸಿಕ ಮರಾಟ ಸರದಾರನನ್ನು ಸಿವಾಜಿಯು ಕಡೆಗೆ ಕಳುಹಿ ನಿಜವಾದ ಸಂಗತಿಯನ್ನು

ತಿಳಿಕೊಂಡು ಮುಂದೆ ಮಾಡಬೇಕಾದ್ದನ್ನು ನಿರ್ಣಯಿಸಬೇಕೆಂದು ಸರ್ವಾನು ಮತದಿಂದ ಗೊತ್ತಾಯಿತು. ಈ ಠರಾವಿನಂತೆ ಸಿವಾಜಿಯು ಅದಿಲಶಾಹಿ ಸರಕಾರದಲ್ಲಿ ಎಷ್ಟುಮಟ್ಟಿಗೆ ಭಕ್ತಿ ವಿಶ್ವಾಸವುಳ್ಳವನಾಗಿರುತ್ತಾನೆಂಬುದನ್ನು ತಿಳಿಕೊಂಡು ಬರಲಿಕ್ಕೆ ಅತಿರಾಜನಿಷ್ಠನಾದ ಬಾಜಿ ಶಾಮರಾಜ (ಘೋರಪಡೆ?) ನೆಂಬ ಮರಾಟೆ ಸರದಾರನು ೧೦,೦೦೦ ದಂಡಿನೊಡನೆ ಹೊರಟನು (೧೬೫೧).

ನಮ್ಮ ಚರಿತ್ರನಾಯಕನ ನಂಬಿಗಸ್ತರಾದ ಬೇಹಿನವರು ೮/೧೦ ಮಂದಿ ವಿಜಾಪುರ ಪಟ್ಟಣದಲ್ಲೇ ಇದ್ದರು. ಅವರು ಶಹಾಜಿಯಿಂದ ಎಲ್ಲ ವಿವರವನ್ನು ತಿಳಿದುಕೊಂಡು ಕೂಡಲೆ ಹೋಗಿ ಸಿವಾಜಿಗೆ ತಿಳಿಸಿದರು. ಇಂತಹ ಸೊಟ್ಟ ದಂಡಿಗೆ ಅವನು ಅಂಜುವವನೇ? ಆ ಕ್ಷಣವೇ ಅವನ ಕುಟಿಲತಂತ್ರದ ಸೆಲೆ ಒಡೆಯಿತು. ಅವನ ನಂಬಿಗಸ್ತರಾದ ನೂರಾರು ಜನರು ಬಾಜಿ ಶಾಮರಾಜನು ಬರುವ ಹಾದಿಗುಂಟ ಹೋಗಿ, ಆ ದಂಡಿಗೆ ಸ್ನೇಹಭಾವ ತೋರಿಸಿ ಪೂರ್ಣವಾದ ಅಸಹಕಾರವನ್ನು ತೋರಿಸಬೇಕೆಂತಲೂ ಅವರಿಗೆ ಸುಳ್ಳು ಹೇಳಿ ಮೋಸಮಾಡಬೇಕೆಂತಲೂ ಗುಪ್ತರೀತಿಯಿಂದ ತಿಳಿಸಿದರು. ಹೋದ ಹೋದಲ್ಲಿ ಬಾಜಿ ಶಾಮರಾಜನಿಗೆ ಒಳ್ಳೆಯ ಸವಿಮಾತುಗಳನ್ನು ಆಡುವವರು ದೊರೆದರೂ ಬೇಕಾದ ಸಾಮುಗ್ರಿಗಳು ಕಾಲಕಾಲಕ್ಕೆ ಸಿಕ್ಕಲಿಲ್ಲ. ಆದ್ದರಿಂದ ಅವನ ದಂಡಿಗೆ ಉಪವಾಸ ವನವಾಸಗಳೇ ಆಗ ತೊಡಗಿದವು. ಹಾಗೂ ಹೀಗೂ ಅವನು ವಾಯಿ ಜಾವಳಿಗಳ ಮಾರ್ಗವಾಗಿ ಮಹಡಿಗೆ ಬಂದನು. ಅಲ್ಲಿ ಸಿವಾಜಿ ಇರುತ್ತಾನೆಂದು ಅವನ ತಿಳಿವಳಿಕೆಯಾಗಿತ್ತು. ಆದರೆ ಸಿವಾಜಿಯು ಆಗ ಚೌಲಪಟ್ಟಣವನ್ನು ಸುಲಿಯುತ್ತಿದ್ದನು. ನೇತಾಜಿ ಎಂಬ ಸಿವಾಜಿಯ ದಳವಾಯಿಯು ವಿಜಾಪುರವ ದಂಡಿನಮೇಲೆ ಅಕಸ್ಮಾತ್ತಾಗಿ ಬಿದ್ದು ಅದನ್ನು ಮುರಿಬಡಿದುದರಿಂದ ಬಾಜಿ ಶಾಮರಾಜನು ಹೆದರಿ ಮುಂದಕ್ಕೆ ಹೋಗಲಿಕ್ಕೆ ಧೈರ್ಯಸಾಲದೆ ವಿಜಾಪುರಕ್ಕೆ ತಿರುಗಿ ಓಡಿಹೋದನು (೧೬೫೨).

ಅದಿಲಶಾಹಿ ಸರಕಾರದ ಸಿಟ್ಟಿನಿಂದ ತನ್ನ ತಂದೆಗೆ ಅಪಾಯ ಸಂಭವಿಸಬಹುದೆಂಬ ಹೆದರಿಕೆಯಿಂದ ನಮ್ಮ ಚರಿತ್ರನಾಯಕನು ನಾಲ್ಕುವರ್ಷ

(೧೬೪೯-೫೩) ಅವರ ನಾಡಿಗೆ ಏನೂ ತೊಂದರೆ ಕೊಡಲಿಲ್ಲ. ಕೋಟೆಗಳ ದುರಸ್ತಿ ಮಾಡಿಸುವುದರಲ್ಲಿಯೂ, ದಂಡಾಳುಗಳಿಗೆ ಕವಾಯಿತು ಕಲಿಸುವುದರಲ್ಲಿಯೂ, ಕಂದಾಯವನ್ನೆತ್ತುವ ಕ್ರಮವನ್ನು ಸರಿಪಡಿಸುವುದರಲ್ಲಿಯೂ ಕಾಲಕಳೆದನು. ಈ ನಿರುಪದ್ರವ ವೃತ್ತಿಯಿಂದ ಲಂಚಗುಳಿಯಾದ ಅದಿಲಶಾಹಿಯ ಮಂತ್ರಿಗಳು ಅವನು ರಾಜನಿಷ್ಠನಿರಬಹುದೆಂಬ ಬಯಲಾಸೆಯ ಭ್ರಮಕ್ಕೆ ಒಳಗಾಗಿ, ಅವನ ಕಸುವನ್ನು ಮುರಿಯಲಿಕ್ಕೆ ಏನೂ ಎತ್ತುಗಡೆ ಮಾಡದೆ, 'ಸಂಶಯಾತ್ಮಾ ವಿನಶ್ಯತಿ,' ಎಂಬ ಗಾದೆಯಂತೆ ಅದಿಲಶಾಹಿಯ ಮುರಕಳಿಗೆ ಕಾರಣರಾದರು.

ಸುದೈವದಿಂದ ಶಹಾಜಿಗೆ ಸ್ವಾತಂತ್ರ್ಯವು ಬೇಗನೆ ದೊರೆಯಿತು. ಅದಿಲಶಾಹಿ ಆಡಳತಕ್ಕೊಳಗಾದ ಎಲ್ಲ ಕರ್ನಾಟಕದ ಭಾಗಗಳಲ್ಲಿ ಬಂಡಾಯಗಳೆದ್ದವು (೧೬೫೩). ಅಲ್ಲಿದ್ದ ಅಧಿಕಾರಿಗಳಿಂದ ಅವುಗಳನ್ನು ಅಡಗಿಸುವುದಾಗಲಿಲ್ಲ. ಆದ್ದರಿಂದ ಗತ್ಯಂತರ ಕಾಣದೆ ಅದಿಲಶಾಹಿ ಸರಕಾರವು ಶಹಾಜಿಯನ್ನು ಬಿಡುಗಡೆಮಾಡಿ, ಕರ್ನಾಟಕದಲ್ಲಿದ್ದ ಗೊಂದಲವನ್ನು ಮುರಿಯಲಿಕ್ಕೆ ಅವನನ್ನು ಕಳುಹಿದರು (೧೬೫೫). ನಮ್ಮ ಚರಿತ್ರನಾಯಕನ ಚಿಂತೆ ಕಡಿಯಿತು; ಅವನು ಇಷ್ಟು ದಿವಸ ಹಿಡಿದ ನಿರುಪದ್ರವದ ವ್ರತವು ಮುಗಿಯಿತು; ಮತ್ತೆ ಅವನಿಗೆ ಹಾವಳಿ ಹಾಕಲಿಕ್ಕೆ ಹುರುಪು ಬಂತು.

ಸಾತಾರೆಯ ಜಿಲ್ಲೆಯ ವಾಯುವ್ಯ ಮೂಲೆಯಲ್ಲಿ **ಜಾವಳಿ** ಎಂಬ ಒಂದು ಊರು ಇರುತ್ತದೆ. ಇದು ಈಗ ಸಣ್ಣ ಹಳ್ಳಿಯಾದರೂ ೧೭ ನೆಯ ಶತಮಾನದಲ್ಲಿ ಒಂದು ಸಂಸ್ಥಾನದ ರಾಜಧಾನಿಯಾಗಿತ್ತು. ಇದು ಸಹ್ಯಾದ್ರಿಪರ್ವತದ ಓರೆಯಲ್ಲಿ ಸಮುದ್ರದ ಸಪಾಟಗಿಂತ ೪,೦೦೦ ಅಡಿ ಎತ್ತರವಾದ ಪ್ರದೇಶದಲ್ಲಿರುತ್ತದೆ. ಈ ಭೂಮಿಯು ಫಲವತ್ತಾದ್ದರಿಂದ ವನಸ್ಪತಿಗಳು ಬಲು ಕಸುವಿನಿಂದ ಬೆಳೆಯುತ್ತವೆ. ಸಹ್ಯಾದ್ರಿ ಬೆಟ್ಟವು ಇದರ ಪಡುವಣ ಗೋಡೆಯಂತಿದ್ದು ಅದರಲ್ಲಿ ಮಹಾಡ ಚಿಪಳೂಣಗಳಿಗೆ ಹೋಗುವ ಬಂಡಿ ದಾರಿಗಳಿರುತ್ತವೆ.

೧೬ ನೆಯ ಶತಮಾನದಲ್ಲಿ **ಮೋರೆ ಚಂದ್ರರಾಯ** ನೆಂಬ ಅತಿ ಬಲಿಷ್ಠ ಶೂರಗೃಹಸ್ಥನಿಗೆ ೧ ನೆಯ ಅದಿಲಶಹನು ಈ ಜಾವಳಿ ಪ್ರಾಂತ

ವನ್ನು ಇನಾಮಾಗಿ ಹಾಕಿಕೊಟ್ಟಿದ್ದನು. ಅವನಿಂದ ೮ ತಲೆಯವರು ತಮ್ಮ ಶೌರ್ಯಧೈರ್ಯಗಳಿಂದ ಸಂಸ್ಥಾನವನ್ನು ಬೆಳಸಿ, ಹೇರಳ ಹಣ ವನ್ನು ಕೂಡಿಹಾಕಿದ್ದರು. ಈ ಸಂಸ್ಥಾನಿಕನಿಗೆ ರಾಜನೆಂಬ ಬಿರುದು ಇದ್ದು ದಲ್ಲದೆ ಇವನ ಅಂಕೆಯಲ್ಲಿ ಸಾತಾರೆ ಜಿಲ್ಲೆಯೂ ಕೊಂಕಣದ ಕೆಲಭಾಗವೂ ಇತ್ತು. ಇವನ ಕಯ್ಕೆಳಗೆ ೧೨,೦೦೦ ಮಾವಳ ಕಾಲಾಳುಗಳಿದ್ದರು. ಬಾಜಿ ಶಾಮರಾಜನು ಜಾವಳಿ ದಾರಿಯಿಂದ ಬಂದುದರಿಂದ ನಮ್ಮ ಚರಿತ್ರ ನಾಯಕನು ಈ ಮೋರೆನನ್ನು ತನ್ನ ಕಡೆಗೆ ಮಾಡಿಕೊಳ್ಳಬೇಕೆಂದು ಬಯಸಿ, ಸಾಮದಾನಗಳಿಂದ ಪ್ರಯತ್ನ ನಡಿಸಿದನು. ೮ನೆಯ ಚಂದ್ರ ರಾಯನಾದ ಕೃಷ್ಣಾಜಿ ಬಾಜಿಯು ಸಿವಾಜಿಯ ಸೂಚನೆಗಳನ್ನೆಲ್ಲ ಅಲ್ಲ ಗಳೆದುದಲ್ಲದೆ ಅವನನ್ನು ಬಂಡುಗಾರನೆಂದು ಜರೆದನು (೧೬೫೫).

ಈ ಕಾಲಕ್ಕೆ ಸಿವಾಜಿಯ ಮನಸ್ಸಿನಲ್ಲಿ ದಕ್ಷಿಣ ಕೊಂಕಣದಲ್ಲಿಯೂ ಕೊಲ್ಲಾಪುರದ ನಿಟ್ಟಿನ ನೈರುತ್ಯ ದಿಕ್ಕಿನ ದೇಶದಲ್ಲಿಯೂ ತನ್ನಕಾಲು ಚಾಚಬೇಕೆಂಬ ಹಪಾಪಿಯು ಹುಟ್ಟಿತ್ತು. ಆದರೆ ಜಾವಳಿ ಸಂಸ್ಥಾನವು ಈ ಎರಡೂ ದಿಕ್ಕುಗಳನ್ನು ಅಡ್ಡಗಟ್ಟಿತ್ತು. ಆದ್ದರಿಂದ ಅದನ್ನು ಹೇಗಾ ದರೂ ಮಾಡಿ ಹಿಡಿದುಕೊಳ್ಳಬೇಕೆಂಬ ಲವಲವಿಕೆಯು ಅವನಲ್ಲಿ ಹುಟ್ಟಿತು. ಮೊದಲು ಅವನು ಸಾಮದಾನಭೇದಗಳಿಂದ ಚಂದ್ರರಾಯನನ್ನು ತನ್ನ ಕಡೆಗೆ ಒಲಿಸಿಕೊಳ್ಳಲಿಕ್ಕೆ ಹೆಣಗಿದನು. ಆ ಯತ್ನವು ವ್ಯರ್ಥವಾಯಿತು. ದಂಡೋಪಾಯದಿಂದ ಜಾವಳಿಯನ್ನು ಒಳನುಗ್ಗುವಷ್ಟು ಧೈರ್ಯಸಾಮ ರ್ಥ್ಯಗಳು ಅವನಲ್ಲಿರಲಿಲ್ಲ. ಆದ್ದರಿಂದ ಅತಿನಿಂದ್ಯವಾದ ಕಪಟೋಪಾಯ ವನ್ನು ಕಯ್ಕೊಳ್ಳಲಿಕ್ಕೆ ಅವನು ಹೇಸಲಿಲ್ಲ. ತನ್ನ ಹಸ್ತಕನಾದ ರಘುನಾಥ ಬಲ್ಲಾಳ ಕೋರಡೆ ಎಂಬವನನ್ನು ಕರೆದು ಅವನು ಸ್ಪಷ್ಟವಾಗಿ ಹೇಳಿದ್ದೇ ನಂದರೆ—“ಚಂದ್ರರಾಯನನ್ನು ಕೊಲ್ಲದ ಹೊರತು ಅವನ ಸಂಸ್ಥಾನವು ನಮ್ಮ ಕಯ್ಸೇರುವಂತಿಲ್ಲ. ಈ ಕೊಲೆಯನ್ನು ನಿನ್ನ ಹೊರತು ಬೇರೆಯವ ರಾರೂ ಮಾಡಲಾರರು. ನನ್ನ ರಾಯಭಾರಿಯಾಗಿ ನಿನ್ನನ್ನು ಅವನ ಬಳಿಗೆ ಕಳಿಸುತ್ತೇನೆ.”

ರಘುನಾಥರಾಯನು ತನ್ನೊಡೆಯನು ಹೇಳಿದ ಕೊಲೆಯನ್ನು ಮಾಡ ಲೊಪ್ಪಿ, ತನ್ನಸಂಗಡ ನಂಬಿಗಸ್ಥರಾದ ೧೨೫ ಮಂದಿ ಶೂರರನ್ನು ಕರೆ

ಕೊಂಡು ತಾನು ಮದುವೆಯ ಮಾತುಕಥೆಗಳನ್ನಾಡಲಿಕ್ಕೆ ಹೋಗುತ್ತೇ ನೆಂದು ಸುದ್ದಿಯನ್ನು ಬೀರಿ, ಜಾವಳಿಗೆ ಹೊರಟನು. ಚಂದ್ರರಾಯನು ಅವನನ್ನು ಆದರದಿಂದ ಬರಮಾಡಿಕೊಂಡನು. ಮೊದಲನೆಯ ದಿವಸ ರಘುನಾಥರಾಯನು ಸಿವಾಜಿಯ ಮನಸ್ಸಿನಲ್ಲಿ ಚಂದ್ರರಾಯನ ಮಗಳನ್ನು ತನ್ನ ಹೆಂಡತಿಯಾಗಿ ಮಾಡಿಕೊಳ್ಳುವ ಇಚ್ಛೆ ಇರುತ್ತದೆಂದು ಹೇಳಿ ಮಗ ಳನ್ನು ಕೊಡಲಿಕ್ಕೆ ಚಂದ್ರರಾಯನನ್ನು ಒಡಂಬಡಿಸಿದನು. ಮರುದಿವಸ ಕೊಡುಕೊಳ್ಳುವ ಮಾತುಕಥೆಗಳು ನಡೆಯಬೇಕಾದ್ದರಿಂದ ರಘುನಾಥ ರಾಯನು ಏಕಾಂತವಾಗಿ ಮಾತಾಡುವುದು ಸರಿಯೆಂದು ಸೂಚಿಸಿದನು. ಅದಕ್ಕೆ ಚಂದ್ರರಾಯನು ಒಡಂಬಟ್ಟು, ಒಂದು ಕೋಣೆಯಲ್ಲಿ ಅವನನ್ನು ಕರೆದುಕೊಂಡು ಹೋದನು. ಚಂದ್ರರಾಯನು ಸೆರೆಬಡಕನಾದ್ದರಿಂದ ಸಾರಾಯಿಯನ್ನು ತರಿಸಿ, ರಘುನಾಥರಾಯನಿಗೆ ಅಷ್ಟುಕೊಟ್ಟು ತಾನು ಮನದಣಿ ಕುಡಿದನು. ಅರವುಳ್ಳ ರಘುನಾಥರಾಯನು ಸಾರಾಯಿಯನ್ನು ಮುಟ್ಟದೆ, ಲಗ್ನದಮಾತುಗಳನ್ನು ಆಡತೊಡಗಿ ಚಂದ್ರರಾಯನಿಗೆ ಅಮಲೇ ರಿದ ಸಂಧಿಯನ್ನು ನೋಡಿ, ಅವನ ಎದೆಯಲ್ಲಿ ಕಠಾರಿಯನ್ನು ತಿವಿದು, ಅವನನ್ನು ಕೊಂದನು. ಅವನ ಸಂಗಡಿಗನು ಚಂದ್ರರಾಯನ ತಮ್ಮನಾದ ಸೂರ್ಯರಾಯನನ್ನು ಕೊಂದನು. ಈ ಆಕಸ್ಮಿಕ ಕೊಲೆಗಳ ಗದ್ದಲವು ಏಳುವಷ್ಟರೊಳಗೇ ಅವರಿಬ್ಬರು ತಪ್ಪಿಸಿಕೊಂಡು ಪಾರಾದರು!!

ರಘುನಾಥರಾಯನ ಹೇಳಿಕೆಯಂತೆ ಸಿವಾಜಿಯು ತನ್ನ ದಂಡಿ ನೊಡನೆ ಬಂದು ಜಾವಳಿಯ ನೆರೆಯಲ್ಲೇ ನಿಂತಿದ್ದನು. ಈ ಕೊಲೆಯ ಸುದ್ದಿಯು ಹತ್ತಿದಕೂಡಲೆ ಅವನು ದಂಡೆತ್ತಿ ಬಂದು ಜಾವಳಿಯನ್ನೊಳ ನುಗ್ಗಿ, ಚಂದ್ರರಾಯನ ಬಳಗದವರನ್ನು ಸೆರೆಹಿಡಿದು, ಅದನ್ನು ತನ್ನ ವಶ ಮಾಡಿಕೊಂಡನು. ಜಾವಳಿಸಂಸ್ಥಾನದ ದಳವಾಯಿಯಾದ ಮೋರೆ ಹಣ ಮಂತರಾಯನು ಉಳಿದ ದಂಡನ್ನು ಕೂಡಿಸಿ ಸಿವಾಜಿಯನ್ನು ಅಡ್ಡಗಟ್ಟಬೇ ಕೆಂದು ಯೋಚಿಸಿದನು. ಆಗ ಸಿವಾಜಿಗೆ ತಾನು ಪಾರಾಗಿ ಹೋಗಲಿಕ್ಕೆ ಬೇರೆ ಉಪಾಯವೇ ತೋರಲಿಲ್ಲ. ಆದ್ದರಿಂದ ಅವನು ಶಂಬುಜಿ ಕವಜಿ ಎಂಬೊಬ್ಬ ಶೂರನಾದ ಮರಾಟನನ್ನು ಹಣಮಂತರಾಯನೊಡನೆ ಒಪ್ಪಂದದ ಮಾತುಗ ಳನ್ನಾಡಲಿಕ್ಕೆ ಕಳುಹಿದನು. ಅವನು ಹೋಗಿ ಹಣಮಂತರಾಯನನ್ನು

ಕೊಂದುದರಿಂದ ಎಲ್ಲದಂಡು ಘಾನಾಘಾನಾಯಿತು. ಈ ಬೇಕೆಂದು ಮಾಡಿಸಿದ ಕೊಲೆಗಳಿಂದ ಸಿವಾಜಿಗೆ ಇಡೀ ಜಾವಳಿ ಸಂಸ್ಥಾನವೂ ಅಲ್ಲಿ ತಲಾಂತರದಿಂದ ಕೂಡಿಬಿದ್ದ ಅಪಾರ ಸಂಪತ್ತೂ ಸಿಕ್ಕಿದ್ದಲ್ಲದೆ ಅಲ್ಲಿರುವ ಶೂರ ಮಾವಳರು ಅವನ ದಂಡಾಳುಗಳಾಗಿ ದೊರೆತರು (ದಶಂಬರ ೧೬೫೫).

ಜಾವಳಿ ಸಂಸ್ಥಾನವು ಸಿಕ್ಕಿದ್ದರಿಂದ ನಮ್ಮ ಚರಿತ್ರನಾಯಕನ ರಾಜ್ಯವು ಕೊಂಕಣದಲ್ಲಿಯೂ ದೇಶದಲ್ಲಿಯೂ ಹಬ್ಬಿತು. ಅದರಿಂದ



ಶ್ರೀ ಭವಾನಿ.

ಅವನ ರಾಜ್ಯತೃಷ್ಣೆಯೂ ಭವಾನಿಯಲ್ಲಿದ್ದ ಶ್ರದ್ಧೆಯೂ ಬೆಳೆದವು. ಆದಕಾರಣ ಅವನು ಜಾವಳಿಯ ಪಡುವಲಿಗೆ ೨ ಮೈಲಿನ ಮೇಲೆ ಪ್ರತಾಪಗಡ

ವೆಂಬ ಕೋಟೆಯನ್ನು ಕಟ್ಟಿಸಿ, ಅಲ್ಲಿ ಒಂದು ಭವ್ಯವಾದ ಗುಡಿಯನ್ನು ಕಟ್ಟಿಸಿ ಅದರೊಳಗೆ ತನ್ನ ಇಷ್ಟದೇವತೆಯಾದ ಶ್ರೀ ಭವಾನಿಯ ಒಂದು ಸುಂದರವಾದ ಕಲ್ಲಿನ ಮೂರ್ತಿಯನ್ನು ಸ್ಥಾಪಿಸಿದನು.

ಆ ದೇವತೆಗೆ ತನ್ನಲ್ಲಿದ್ದ ಹೆಚ್ಚಿನ ಬೆಲೆಯ ಅಮೌಲ್ಯವಾದ ಹರಳು ಕಲ್ಲಿನ ಆಭರಣಗಳನ್ನೂ ಚಿನ್ನಬೆಳ್ಳಿಯ ಸಾಮಾನುಗಳನ್ನೂ ಅರ್ಪಿಸಿದ್ದಲ್ಲದೆ, ಆಗಿಂದಾಗ ದರ್ಶನ ತೆಗೆದುಕೊಂಡು ಬಹು ಭಕ್ತಿಯಿಂದ ಆ ದೇವತೆಗೆ ನಡೆಕೊಳ್ಳುತ್ತಿದ್ದನು. ಗಂಡಾಂತರದ ಸಮಯಗಳಲ್ಲಿ ಶ್ರೀ ಭವಾನಿಯು ತನ್ನ ಕನಸಿನಲ್ಲಾಗಲಿ ಮೈಯ್ಯಲ್ಲಾಗಲಿ ಬಂದು, ತಾನು ಮಾಡತಕ್ಕ ಹಂಚಿಕೆಯನ್ನು ಹೇಳಿಕೊಡುತ್ತಿದ್ದಳೆಂದು ಅವನು ತುಂಬಾ ನಂಬಿದ್ದನು. ಈ ಕಟ್ಟಡಗಳನ್ನು ಮೋರೊ ತ್ರಿಯಂಬಕ ಪಿಂಗಳೆ ಎಂಬವನು ಸಲಕ್ಷಣವಾಗಿ ಕಟ್ಟಿಸಿದ್ದರಿಂದ ಅವನು ಸಿವಾಜಿಯ ಪ್ರೀತಿವಿಶ್ವಾಸಗಳಿಗೆ ಪಾತ್ರನಾದನು. ಇದೇಕಾಲಕ್ಕೆ ಸಿವಾಜಿಯು ಮಹಾಬಲೇಶ್ವರ ದೇವಸ್ಥಾನದ ಜೀರ್ಣೋದ್ಧಾರವನ್ನು ಮಾಡಿಸಿದನೆಂದೂ ಕೃಷ್ಣಾನದಿಯು ಹುಟ್ಟುವಲ್ಲಿ ಒಂದು ಗುಡಿಯನ್ನು ಕಟ್ಟಿಸಿದನೆಂದೂ ಕೇಳೂಸಕರರು ಬರೆಯುತ್ತಾರೆ.

ಸಿವಾಜಿಯು ಹಂಚಿಕೆಗಾರನೂ ಕರ್ತೃತ್ವಿಯೂ ಆಗಿದ್ದಂತೆ ಒಳ್ಳೆಯ ಏರ್ಪಾಡುಗಾರನಾಗಿದ್ದನು. ಆದ್ದರಿಂದ ಅವನು ತನ್ನ ಸಭಾಸದರ ಸಂಖ್ಯೆಯನ್ನು ಬೆಳಿಸಿ, ಅಯೋಗ್ಯರಾದವರನ್ನು ಕೆಲಸದಿಂದ ದೂರಮಾಡಿ, ತನಗೆ ಯೋಗ್ಯಕಂಡ ಜನರನ್ನು ನಿಯಮಿಸಿದನು. ಅಳುದಕ್ಕಿಯ ಪೇಶ್ವೆಯಾದ ಶಾಮರಾಜ ನೀಲಕಂಠ ರಂಝೇಕರನನ್ನು ತೆಗೆದುಹಾಕಿ, ಅವನ ಎಡೆಯಲ್ಲಿ ತನ್ನ ನಂಬಿಗಸ್ತನಾದ ಮೋರೊ ತ್ರಿಯಂಬಕ ಪಿಂಗಳೆಯನನ್ನು ನಿಯಮಿಸಿದನು ; ಬಾಳಕೃಷ್ಣಪಂತನ ಬದಲು ನಿಳೊ ಸೋನದೇವನನ್ನು ಮುಜುಮದಾರನಾಗಿಯೂ, ನೇತಾಜಿ ಪಾಲಕರನನ್ನು ಸರನೌಬತ (ಸ್ವಾರರ ಮುಖ್ಯಸ್ಥ) ನಾಗಿಯೂ, ಪಸಾಜಿಕಂಕನನ್ನು ಕಾಲಾಳುಗಳ ದಳವಾಯಿಯಾಗಿಯೂ ನೇಮಿಸಿದನು. ಸುರನೀಸ (ದಫ್ತರದಾರ) ವಾಕ್ನೀಸ (ಸುದ್ದಿಗಾರ) ಎಂಬ ಎರಡು ಹೊಸಹುದ್ದೆಗಳನ್ನು ಕಲ್ಪಿಸಿ, ಅವುಗಳನ್ನು ಆಬಾಜಿ ಸೋನದೇವ, ಗಂಗಾಜಿ ಮಂಗಾಜಿ ಎಂಬೀರ್ವರಿಗೆ ಕೊಟ್ಟನು. ಈ ಕಾಲಕ್ಕೆ

ನಮ್ಮ ಚರಿತ್ರನಾಯಕನ ಕಯ್ಯೊಳಗೆ ೧೦,೦೦೦ ರಾಹುತರೂ ೧೦,೦೦೦ ಕಾಲಾಳುಗಳೂ ೪೦ ಕೋಟೆಗಳೂ ಇದ್ದವು. ಇದೇ ಸುಮಾರಿನಲ್ಲಿ ಅವನಿಗೆ ಶಂಭುಜಿ ಎಂಬ ಗಂಡು ಮಗನು ಹುಟ್ಟಿದ್ದರಿಂದ ಅವನ ಸಂತೋಷವು ಉಕ್ಕೇರಿತು (೧೬೫೭).

೧೬೪೪ ರಲ್ಲಿ ನಮ್ಮ ಚರಿತ್ರನಾಯಕನು ಸ್ವತಂತ್ರವಾಗಿ ಆಳತೊಡಗಿದನು. ಆ ಕಾಲಕ್ಕೆ ಪುಣೆಜಿಲ್ಲೆಯ ಅರ್ಧಭಾಗವು ಅವನ ವಶದಲ್ಲಿತ್ತೆಂದು ಹೇಳಬಹುದು. ದೇಶದಲ್ಲಿ ಅವನ ಸಂಸ್ಥಾನದ ಬಡಗಣ ಮೇರೆಯು ಕೆಲ ಮಟ್ಟಿಗೆ ಘೋಡಹೊಳೆಯಾಗಿತ್ತೆಂದು ಬರೆದರೆ ಹೆಚ್ಚು ತಪ್ಪಾಗಲಿಕ್ಕಿಲ್ಲ. ಜುನ್ನರ ಚಾಮರಗುಂಡಗಳು ಮೊಗಲರ ವಶದಲ್ಲಿದ್ದವು; ಚಾಕಣಮಾತ್ರ ಸಿವಾಜಿಯ ವಶದಲ್ಲಿತ್ತು. ಇಂದಾಪುರ, ಬಾರಾಮತಿ, ಸುಪೆ ಪ್ರಾಂತಗಳೂ ಪುರಂದರ, ರಾಜಗಡ, ಕೊಂಡಾನ, ತೋರಣ, ಈ ಕೋಟೆಗಳೂ ಅವನ ಸಂಸ್ಥಾನದ ತೆಂಕಣ ಮೇರೆಯಾಗಿದ್ದವು. ಕೊಂಕಣದಲ್ಲಿ ಕಲ್ಯಾಣ, ಮಾಹುಲಿ ಪಟ್ಟಣಗಳೂ ಠಾಣೆಜಿಲ್ಲೆಯ ಆಗ್ನೇಯದ ಭಾಗವೂ ಕುಲಾಬಾ ಜಿಲ್ಲೆಯ ಮೂಡಣ ಅರ್ಧಭಾಗವೂ ಅವನ ಆಳಿಕೆಗೆ ಒಳಗಾಗಿದ್ದವು. ಈಗ ಅಂದರೆ ೧೬೫೫ ರಲ್ಲಿ ಸಾತಾರೆಜಿಲ್ಲೆಯ ತೆಂಕಣ ಎಲ್ಲೆಯ ವರೆಗೆ ಎಲ್ಲ ದೇಶವೂ ಮಹಾಡದಿಂದ ರಾಜಾಪುರದ ವರೆಗೆ ಎಲ್ಲ ಕೊಂಕಣವೂ ಅವನ ಕಯ್ಸೇರಿತ್ತು. ಠಾಣಾ ಕುಲಾಬಾ ಜಿಲ್ಲೆಗಳ ಅತಿಸಣ್ಣಭಾಗಗಳೂ ದಂಡೆಯಲ್ಲಿದ್ದ ಬಂದರದ ಊರುಗಳೂ ಮಾತ್ರ ಅದಿಲಶಹ, ಸಿದ್ದಿ, ಪೋರ್ತುಗೀಸರ ಅಂಕೆಗೆ ಒಳಗಾಗಿದ್ದವು.

---

# ೪ ನೆಯ ಪ್ರಕರಣ

## ಮೊಗಲರೊಡನೆ ಕೆಣಕಾಟವೂ ಆದಿಲಶಾಹಿಯೊಡನೆ ಹೋರಾಟವೂ.

'ಇಬ್ಬರ ನ್ಯಾಯ ಒಬ್ಬನಿಗೆ ಆಯ' ಎಂಬ ನಾಣ್ಣುಡಿಯು ಎಲ್ಲ ವಾಚಕರಿಗೂ ಗೊತ್ತಿರುತ್ತದಷ್ಟೇ. ಎರಡು ವ್ಯಕ್ತಿಗಳು ಅಥವಾ ಎರಡು ಮನೆತನಗಳು ಅಥವಾ ಎರಡು ಸಮಾಜಗಳು ಜಗಳಾಡತೊಡಗಿದರೆ ಮೂರನೆಯ ವ್ಯಕ್ತಿಯು ಅಥವಾ ಕುಟುಂಬವು ಅಥವಾ ಸಮಾಜವು ಲಾಭ ಹೊಂದುವಂತೆ, ಇಬ್ಬರು ಅರಸರು ಅಥವಾ ಸಂಸ್ಥಾನಿಕರು ಬಡಿದಾಡಲಾರಂಭಿಸಿದರೆ, ಮೂರನೆಯ ಅರಸನು ಅಥವಾ ಸಂಸ್ಥಾನಿಕನು ನಿಶ್ಚಯವಾಗಿ ಲಾಭಹೊಂದುವನು. ಇಬ್ಬರು ನ್ಯಾಯವಾಡುವುದರಿಂದ ೩ ನೆಯವನಾದ ವಕೀಲನು ಧನಿಕನಾಗುವುದನ್ನು ನಾವು ದಿನಾಲು ಕಣ್ಣಾರೆ ನೋಡುತ್ತೇವೆ. ಈ ಮೂರನೆಯವನು ವ್ಯಕ್ತಿಯಾಗಲಿ ಮನೆತನಸ್ಥನಾಗಲಿ ಸಮಾಜದ ಮುಖ್ಯಸ್ಥನಾಗಲಿ ಸಂಸ್ಥಾನಿಕನಾಗಲಿ ಅರಸನಾಗಲಿ ತನ್ನ ತನ್ನ ಎದೆಗಾರಿಕೆ ಮುನ್ನೋಟ ಜಾಣ್ಮೆಗಳ ಪ್ರಮಾಣದಂತೆ ಹೆಚ್ಚು ಕಡಮೆಯಾಗಿ ಐಶ್ವರ್ಯವಂತನಾಗುತ್ತಾನೆಂಬುದು ಎಲ್ಲರಿಗೂ ಅನುಭವಕ್ಕೆ ಬಂದ ಮಾತೇ ಸರಿ. ನಮ್ಮ ಚರಿತ್ರನಾಯಕನು ಸ್ವತಂತ್ರನಾದಂದಿನಿಂದ ಮೊಗಲರು ಒಂದೇ ಸವನೆ ಆದಿಲಶಾಹಿ, ನಿಜಾಮಶಾಹಿ, ಕುತುಬಶಾಹಿ, ಬರೀದಶಾಹಿಗಳೊಡನೆ ಕಾಲುಕೆದರಿ ಜಗಳತೆಗೆದು ಬಡಿದಾಡುತ್ತಿದ್ದರು. ಸಿವಾಜಿಯು ಧೂರ್ತನೂ ತಂತ್ರಗಾರನೂ ಕೆಚ್ಚೆದೆಯವನೂ ಜಾಣನೂ ಆದ್ದರಿಂದ ಈ ಹೊಡೆದಾಟದಿಂದ ಆದಷ್ಟು ಮಟ್ಟಿಗೆ ತನ್ನ ಸ್ವಾರ್ಥವನ್ನು ಸಾಧಿಸಿಕೊಂಡು, ತನ್ನ ರಾಜ್ಯವನ್ನು ಬೆಳಿಸಿದನೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ.* ಆದಿಲಶಹನು ತನ್ನ ತಂದೆಯ ಪ್ರಾಣವನ್ನು ತೆಗೆದುಕೊಳ್ಳುವ ಎಣಿಕೆಯಲ್ಲಿದ್ದಾಗ ಅವನು ಹೇಗೆ ಮೊಗಲರ ಮಧ್ಯ

---

* ವರಂ ವಿದ್ವಾನೇಕೋ ಸಕಲಮಭಿಸಂಧಾಯ ಕಪಟೈಃ ।
ತಟಸ್ಥಃ ಸ್ವಾನರ್ಥಾನ್ ಘಟಯತಿಚ ಮೌನಂಚ ಭಜತೇ ॥
(ಮಾಲತೀಮಾಧವ.)

ಸ್ಥಿಕೆಯನ್ನು ಸಂಪಾದಿಸಲಿಕ್ಕೆ ಪ್ರಯತ್ನಮಾಡಿ, ತನ್ನ ತಂದೆಯನ್ನು ಉಳಿಸಿದನೆಂಬುದನ್ನು ಹಿಂದಿನ ಪ್ರಕರಣದಲ್ಲಿ ವಿವರಿಸಿರುತ್ತೇವೆ. ಮೊಗಲರು ಕೈತೊಳಕೊಂಡು ಅದಿಲಶಹನ ಬೆನ್ನುಹತ್ತಿದ್ದರಿಂದ ಅವನಿಗೆ ತನ್ನ ರಾಜ್ಯವನ್ನು ಹೆಚ್ಚಿಸಲಿಕ್ಕೂ ಅದಿಲಶಾಹಿಯಲ್ಲಿ ಬೇಕಾದ ಅತ್ಯಾಚಾರ ಮಾಡಲಿಕ್ಕೂ ಮನದಣಿ ಅನುವು ದೊರೆಯಿತು.

ಹಿಂದೆ ಬರೆದಂತೆ ಶಹಾಜಿ ಸಿವಾಜಿಯರು ಮೊಗಲ ಬಾದಶಹನ ದಕ್ಷಿಣದ ಸುಬೇದಾರನನ್ನು ಎಷ್ಟೋ ಸಾರಿ ಮೋಸಗೊಳಿಸಿದರಷ್ಟೇ. ಮೋಸ ಹೋಗುವುದೂ ಮೋಸಮಾಡುವುದೂ ಅವರವರ ಜಾಣ್ಮೆಯ ಕಡಮೆ ಹೆಚ್ಚು ಪ್ರಮಾಣವನ್ನು ಅನುಸರಿಸುತ್ತದೆಂಬ ಮಾತನ್ನು ಮರೆಯಕೂಡದು. ಜಾಣರು ಎಬಡರನ್ನು ಮೋಸಗೊಳಿಸಿ, ತಮ್ಮ ಹಿತವನ್ನು ಸಾಧಿಸಿಕೊಳ್ಳುತ್ತಾರೆ. ಹೆಚ್ಚು ಜಾಣರು ಕಡಮೆಜಾಣರನ್ನು ವಂಚಿಸಿ ಲಾಭ ಹೊಂದುತ್ತಾರೆ. ಈ ಜಗತ್ತಿನಲ್ಲಿ ಸಾಧುಸತ್ಪುರುಷರ ಹೊರತು ಉಳಿದವರೆಲ್ಲರು ಇದೇ ಬಗೆಯಿಂದ ತಂತಮ್ಮ ಸುಖಸಾಧನಗಳನ್ನು ದೊರಕಿಸುತ್ತಾರೆಂದರೆ ಅತಿಶಯೋಕ್ತಿಯಾಗಲಾರದು. ಈ ತರದ ಮೋಸಕ್ಕೆ ಒಳಗಾಗದಷ್ಟು ಅರಿವಿಗೆ ವ್ಯವಹಾರಜ್ಞಾನ ಅಥವಾ ಚತುರತೆ ಎಂಬ ಹೆಸರು ಬಿದ್ದಿದೆ. ಈ ವ್ಯವಹಾರಜ್ಞಾನವು ನಮ್ಮ ಚರಿತ್ರನಾಯಕನಲ್ಲಿ ತುಂಬಾ ಇದ್ದುದರಿಂದಲೇ ಇಷ್ಟು ವರ್ಷ ಅವನು ಮೊಗಲರನ್ನೂ ಅದಿಲಶಾಹಿಯವರನ್ನೂ ಬೇರೆ ಚಿಕ್ಕ ಪುಟ್ಟ ಸಂಸ್ಥಾನಿಕ ವತನದಾರರನ್ನೂ ಠಕ್ಕಿಸಿ ತನ್ನ ಬೇಳೆ ಬೇಯಿಸಿಕೊಂಡನು.

ಈ ಸುಮಾರಿನಲ್ಲಿ ನಮ್ಮ ಚರಿತ್ರನಾಯಕನಷ್ಟೇ ಅಥವಾ ಅವನಿಗಿಂತ ಹೆಚ್ಚು ಮೋಸಗಾರನೂ ತಂತ್ರಗಾರನೂ ಆದ ಒಬ್ಬ ಗೃಹಸ್ಥನು ದಕ್ಷಿಣದ ಸುಬೇದಾರನಾದನು (೧೬೫೩). ಇವನೇ ಮುಂದೆ ಹೆಸರುವಾಸಿಯಾದ ಅವರಂಗಜೇಬನು. ಇಷ್ಟು ವರ್ಷ ಸಿವಾಜಿಯು ಅದಿಲಶಾಹಿಯೊಡನೆ ಹೆಣಗಾಡುತ್ತಿದ್ದುದರಿಂದ ಮೊಗಲರೊಡನೆ ದ್ವೇಷಕಟ್ಟಿಕೊಳ್ಳಲಿಲ್ಲ. ಸುಬೇದಾರನಾದ ಬಳಿಕ ಅವರಂಗಜೇಬನು ಬಹುದಕ್ಷತೆಯಿಂದ ತನ್ನ ಸುಬೆಯ ಬಂದೋಬಸ್ತಿಯನ್ನು ಮಾಡಿದ್ದರಿಂದಲೂ ಅವನು

ಗೋವಲಕೊಂಡದ ಮೇಲೆ ದಂಡೆತ್ತಿಹೋದಾಗ (೧೬೫೬) ಸಿವಾಜಿಯು ಜಾವಳಿ ರತ್ನಾಗಿರಿಗಳನ್ನು ಗೆಲ್ಲುವುದರಲ್ಲಿ ತೊಡಗಿದ್ದರಿಂದ ಮೊಗಲ ಮರಾಟರ ನಡುವೆ ಚಕಮುಕಿ ಹಾರಲಿಲ್ಲ (ಯುದ್ಧವಾಗಲಿಲ್ಲ).



ಅವರಂಗಜೀಬ.

ಮೊಗಲರು ಅದಿಲಶಾಹಿಯನ್ನು ನುಂಗಿ ನೀರುಕುಡಿಯಬೇಕೆಂದು ಯಾವಾಗಲು ಹೊಂಚು ಹಾಕಿಕೊಂಡು ಕುಳಿತಿದ್ದರು. ಮಹಮ್ಮದ ಅದಿಲಶಹನು ೪ ನವಂಬರ ೧೬೫೬ ರ ದಿವಸ ಸತ್ತನು. ಈ ಸುದ್ದಿಯು ಬಂದಕೂಡಲೆ ಅವರಂಗಜೀಬನು ವಿಜಾಪುರವನ್ನು ಮುತ್ತುವ ಸಿದ್ಧತೆ ಯನ್ನು ಮಾಡತೊಡಗಿ, ಅದಿಲಶಾಹಿಯ ಮಾಂಡಲಿಕರನ್ನು ತನ್ನ ಕಡೆಗೆ

ಒಡೆಕೊಳ್ಳುವ ಎತ್ತುಗಡೆ ಮಾಡಲಾರಂಭಿಸಿದನು. ಮೊಗಲರಿಗೆ ನೆರವಾಗ ಬೇಕೆಂದು ಸಿವಾಜಿಗೆ ಒಂದು ಓಲೆ ಬಂದಿತು. ಅದಕ್ಕವನು ಅಹಮ್ಮದ ನಗರ, ಜುನ್ನರಪ್ರಾಂತಗಳಲ್ಲಿದ್ದ ತನ್ನ ಪಿತ್ರಾರ್ಜಿತ ಸರದೇಶಮುಖಿ ಹಕ್ಕನ್ನೂ ತಾನು ಆದಿಲಶಾಹಿಯಿಂದ ಕಸಿಕೊಂಡ ಸ್ಥಳಗಳ ಸ್ವಾಮಿತ್ವವನ್ನೂ ದಾಭೋಳ ಮುಂತಾದ ಆದಿಲಶಾಹಿಯ ಬಂದರಗಳನ್ನು ಹಿಡಿದುಕೊಳ್ಳ ಲಿಕ್ಕೆ ಅಪ್ಪಣೆಯನ್ನೂ ಕೊಟ್ಟರೆ ಮಾತ್ರ ಮನಃಪೂರ್ವಕವಾಗಿ ನೆರವಾಗುವೆ ನೆಂದು ಬದಲು ಬರೆದನು. ಅವರಂಗಜೇಬನು ಇಂತಹ ಶರ್ತುಗಳಿಗೆ ಒಡಂ ಬಡುವಷ್ಟು ಮರುಳನೇ? ಅಲ್ಲ. ಸ್ಪಷ್ಟವಾಗಿ ಸಿವಾಜಿಯ ಬೇಡಿಕೆಗಳನ್ನು ಅಲ್ಲಗಳೆದು, ಅವನೊಡನೆ ಇಂತಹ ಸಮಯದಲ್ಲಿ ವಿರೋಧಕಟ್ಟಿಕೊಳ್ಳು ವವನೇ? ಅದೂ ಅಲ್ಲ. ಹಾಗಾದರೆ ಮಾಡಿದನೇನು? ಕೊಡುವುದಿಲ್ಲೆಂದು ಹೇಳದೆಯೂ ಕೊಡುತ್ತೇನೆಂದು ಸ್ವಚ್ಛವಾಗಿ ಬರೆಯದೆಯೂ ಎರಡೂ ದಂಡೆಯಮೇಲೆ ಕಯ್ಯಿಟ್ಟ ದ್ವಂದ್ವಾರ್ಥದ ಉತ್ತರವನ್ನು ಕಳುಹಿದನು. ಸಿವಾಜಿಯು ಇಂತಹ ಪತ್ರಕ್ಕೆ ಉಪ್ಪುಹಾಕುವನೇ?* ಕೂಡಲೆ ಮೊಗಲರ ಆಶೆಯನ್ನು ತೊರೆದು ಆದಿಲಶಾಹಿಯೊಡನೆ ಮಾತುಕಥೆ ನಡಿಸಿ, ತನಗೆ ಬೇಕಾದ ಶರ್ತುಗಳಿಗೆ ಅವರನ್ನೊಡಂಬಡಿಸಿ, ಮಿನಾಜಿ ಭೋಸಲೆ, ಕಾಶಿ ಎಂಬ ತನ್ನ ಇಬ್ಬರು ದಳವಾಯಿಗಳನ್ನು ೩,೦೦೦ ರಾಹುತರೊಡನೆ ಮೊಗಲರ ವಶದಲ್ಲಿದ್ದ ಚಾಮರಗುಂಡ—ರೈಸಿನ ಪ್ರಾಂತಗಳನ್ನು ಲೂಟಿ ಸಲಿಕ್ಕೆ ಕಳುಹಿದನು. ಅವರು ಕೊಲೆ ಸುಲಿಗೆ ಮಾಡುತ್ತ ಅಹಮ್ಮದ ನಗರದ ಹೆಬ್ಬಾಗಿಲಿನ ವರೆಗೆ ಹೋದರು (ಮಾರ್ಚ ೧೬೫೭). ಅತ್ತ ಸಿವಾ ಜಿಯು ಅತಿಸಾಹಸದಿಂದ ಇರಳಿನಲ್ಲಿ ಜುನ್ನರದ ಕೋಟೆಯನ್ನು ಹೊಕ್ಕು, ಕಾವಲುಗಾರರನ್ನು ಕಡಿದು ಹಾಕಿ, ಮೂರು ಲಕ್ಷ ಹೊನ್ನುಗಳನ್ನೂ ೨೦೦ ಕುದುರೆಗಳನ್ನೂ ಬೆಲೆಯುಳ್ಳ ವಸ್ತ್ರಾಭರಣಗಳನ್ನೂ ಎತ್ತಿಕೊಂಡು ಹೋದನು.

ಈ ಹಾವಳಿಯನ್ನು ಕೇಳಿದ ಕೂಡಲೆ ಅವರಂಗಜೇಬನ ಪಿತ್ತವು ತಲೆಗೇರಿತು. ತಕ್ಷಣವೇ ಅವನು ಮಿನಾಜಿಯನ್ನು ದಂಡಿಸಲಿಕ್ಕೆ ಒಂದು ಪಡೆಯನ್ನೂ ಸಿವಾಜಿಯನ್ನು ಬೆನ್ನಟ್ಟಲಿಕ್ಕೆ ಮತ್ತೊಂದು ದಂಡನ್ನೂ

---

* ಮೋಸ ಹೋಗುವನೇ?

ಅಟ್ಟಿದನು. ವಿಜಾಸಾಜಿಯು ಚಾಮರಗುಂಡದ ಮುತ್ತಿಗೆಯನ್ನೆಬ್ಬಿಸಿ ಓಡಿಹೋದನು. ಸಿವಾಜಿಯು ಮೊಗಲರ ದಂಡಿನ ಕಯ್ಯಲ್ಲಿ ಸಿಕ್ಕು ಸೋತು ತಿರುಗಿಬಂದನು (ಮೇ). ಅಷ್ಟರಲ್ಲಿ ಮಳೆಗಾಲ ಸುರುವಾದ್ದರಿಂದ ಅವರಂಗಜೇಬನು ತನ್ನ ಸುಬೆಯ ನೈರುತ್ಯದಿಕ್ಕಿನ ಸಂರಕ್ಷಣಾರ್ಥವಾಗಿ **ಚಾಮರಗುಂಡ, ಪರೆಂಡಾ, ಜುನ್ನರ,** ಈ ಮೂರು ಸ್ಥಳಗಳಲ್ಲಿ ದಂಡುಗಳನ್ನಿರಿಸಿ, ಮರಾಟರ ದಾರಿಯನ್ನು ಅಡ್ಡಗಟ್ಟಿದನು (೧೬೫೭). ಮುಂದೆ ೩ ತಿಂಗಳಲ್ಲಿ ಯಾವ ಮಹತ್ವದ ಕೆಲಸವೂ ನಡೆಯಲಿಲ್ಲ. ಸಪಟಂಬರದಲ್ಲಿ ಶಹಾಜಹಾನ ಬಾದಶಹನು ಬೇನೆ ಬಿದ್ದನೆಂಬ ಸುದ್ದಿಯು ಬಂದುದರಿಂದ ಅವರಂಗಜೇಬನು ಅವಸರದಿಂದ ಅದಿಲಶಾಹಿಯೊಡನೆ ಒಪ್ಪಂದ ಮಾಡಿ ದಿಲ್ಲಿಗೆ ಹೊರಡುವ ಜೋಡಣಿಯನ್ನು ಮಾಡತೊಡಗಿದನು. ಈ ಸಮಯದಲ್ಲಿ ಮೊಗಲರನ್ನು ಕೆಣಕಿದ್ದು ದೊಡ್ಡತಪ್ಪಾಯಿತೆಂತಲೂ ಅದಿಲಶಾಹಿಯೊಡನೆ ಒಡಂಬಡಿಕೆಯಾದ್ದರಿಂದ ತನ್ನ ಮೂಲೋತ್ಪಾಟನವಾಗಬಹುದೆಂತಲೂ ಸಿವಾಜಿಗೆ ಹೊಳೆಯಿತು. ಆದ್ದರಿಂದ ಅವನು ಪಶ್ಚಾತ್ತಾಪ ಸೂಚಕವಾದ ಪತ್ರವನ್ನು ಅವರಂಗಜೇಬನಿಗೆ ಬರೆದನು. ದಿಲ್ಲಿಗೆ ಹೊರಡುವ ಗಡಬಿಡಿಯಲ್ಲಿದ್ದುದರಿಂದ, ವಕೀಲನನ್ನು ಕಳಿಸಿಕೊಡಬೇಕೆಂದು ಸಿವಾಜಿಗೆ ಹಾರಿಕೆಯ ಉತ್ತರವನ್ನು ಕೊಟ್ಟು, ತನ್ನ ದಳವಾಯಿಗೆ “ಆ ನಾಯಿಯ ಮಗನು ನಮ್ಮ ನಾಡನ್ನು ಸೂರೆಗೊಳ್ಳಲಿಕ್ಕೆ ಹೊಂಚುಹಾಕಿಕೊಂಡು ಕುಳಿತಿದ್ದಾನೆ; ಎಚ್ಚರದಿಂದಿರು” ಎಂತಲೂ ಅದಿಲಶಹನಿಗೆ “ದುಂಡುಟಿಗೆಯಿಂದ ಹಿಡಿದು ಕೊಂಡ ಕೋಟೆಗಳನ್ನು ಕಸಿದು ಕೊಳ್ಳಿರಿ, ಮತ್ತು ಅವನ ಊಳಿಗವು ನಿಮಗೆ ಬೇಕಾಗಿದ್ದರೆ, ನಮ್ಮ ರಾಜ್ಯದಿಂದ ಎಲ್ಲಿಯಾದರೂ ದೂರದಲ್ಲಿ ಅವನಿಗೆ ಜಹಗೀರ ಕೊಡಿರಿ” ಎಂತಲೂ ಬರೆದನು. ಮುಂದೆ ಎರಡು ವರುಷ ಒಳಜಗಳ ನಡೆದುದರಿಂದ ನಮ್ಮ ಚರಿತ್ರನಾಯಕನಿಗೆ ಮೊಗಲರ ಹೆದರಿಕೆಯು ತಪ್ಪಿತು (೧೬೫೮-೫೯).

ಮೊಗಲರ ಕಾಟತಪ್ಪಿದರೂ ನಮ್ಮ ಚರಿತ್ರನಾಯಕನಿಗೆ ವಿಶ್ರಾಂತಿಯು ದೊರೆಯಲಿಲ್ಲ. ಅಥವಾ ಅವನಿಗೆ ವಿಶ್ರಾಂತಿಯು ದೊರೆಯುವ ಸಂಭವವೇ ಇದ್ದಿಲ್ಲೆಂದು ಹೇಳಬಹುದು. ಏಕೆಂದರೆ ಅವನಿಗೆ ಒಬ್ಬಿಲ್ಲ,

ಒಬ್ಬ ಹಗೆಯು ಯಾವಾಗಲೂ ಬೆನ್ನಟ್ಟಿರುತ್ತಿದ್ದನು. ಹೊರಹಗೆಯು ಇಲ್ಲದಾಗ ಮಹತ್ವಾಕಾಂಕ್ಷೆ ಅಥವಾ ಹೆಗ್ಗೋರಿಕೆಯೆಂಬ ಒಳಹಗೆಯು ಅವನನ್ನು ಕಾಡುತ್ತಿದ್ದನು. ಮೊಗಲರು ತಂತಮ್ಮೊಳಗೆ ಬಡಿದಾಡ ತೊಡಗಿದರೆಂದು ಸಂತೋಷಬಡುವಷ್ಟರಲ್ಲಿ, ಅವನು ಸವೆಯಿಸಿದ ರಾಜ್ಯ ವುಳ್ಳವನಾದ ಅದಿಲಶಹನು ಅವನನ್ನು ಮುರಿಬಡಿದು, ಅವನು ಪುಂಡಾಟಿಗೆ ಯಿಂದ ಹಿಡಿದುಕೊಂಡ ನಾಡನ್ನು ತಿರುಗಿ ತೆಗೆದುಕೊಳ್ಳುವ ಎಣಿಕೆ ಯಲ್ಲಿದ್ದಾನೆಂಬ ಸುದ್ದಿಯು ಬಂತು. ನಮ್ಮ ಚರಿತ್ರನಾಯಕನು ಗಳಿಸಿ ಕೊಂಡ ಹೊಸನಾಡೆಲ್ಲ ಅದಿಲಶಹನದೇ ಆಗಿತ್ತೆಂದು ಓದುವವರಿಗೆ ಗೊತ್ತಿರಬಹುದು. ಏನಾದರೊಂದು ನೆವನಮಾಡಿ ಯಾವದಾದರೊಂದು ಪಂಟು ಹೇಳಿ, ಎಂತಹದೇ ಆಗಲಿ ಮೋಸಮಾಡಿ, ಅವನು ಒಂದರ ಹಿಂದೆ ಒಂದೊಂದು ಜಹಗೀರನ್ನೂ ಕೋಟೆಯನ್ನೂ ಊರುಗಳನ್ನೂ ಹಿಡಿದುಕೊಂಡು, ಬಲಿಷ್ಠನಾಗಿದ್ದನು. ವಿಜಾಪುರ ಸರಕಾರದವರು ೨—೩ ಸಾರಿ ಅವನನ್ನು ಬಗ್ಗುಬಡಿಯುಲಿಕ್ಕೆ ಮಾಡಿದ ಪ್ರಯತ್ನಗಳು ವ್ಯರ್ಥ ವಾದವು. ಮೊಗಲರು ಅದಿಲಶಾಹಿಯನ್ನು ಮುರಿಯಲಿಕ್ಕೆ ಯಾವಾ ಗಲೂ ಹೊಂಚು ಹಾಕಿಕೊಂಡು ಕುಳಿತಿದ್ದರಿಂದಲೂ ಅದಿಲಶಾಹಿ ಸರ ದಾರರು ಲಂಚಗುಳಿಯಾಗಿದ್ದುದರಿಂದಲೂ ನಮ್ಮ ಚರಿತ್ರನಾಯಕನು ಜಾಣನೂ ಹಂಚಿಕೆಗಾರನೂ ಕೆಚ್ಚೆದೆಯುವನೂ ಸಾಹಸಿಯೂ ಆದುದ ರಿಂದಲೂ ಹಿಂದೆ ಮಾಡಿದ ಪ್ರಯತ್ನಗಳಿಂದ ಅವನ ರಾಜ್ಯವು ಕುಗ್ಗು ವುದರ ಬದಲಾಗಿ ಹಿಗ್ಗಿತು.

ಇಷ್ಟು ದಿವಸ ಬೆವುಗನಂತೆ ಅದಿಲಶಾಹಿಯನ್ನು ಹೆದರಿಸುತಿದ್ದ ಮೊಗಲರು ತಂತಮ್ಮೊಳಗೆ ಒಬ್ಬರ ಕುತ್ತಿಗೆಯನ್ನು ಇನ್ನೊಬ್ಬರು ಹಿಚಕು ವುದರಲ್ಲಿ ತೊಡಗಿದ್ದರಿಂದ, ವಿಜಾಪುರ ಸರಕಾರದವರು ನಿಶ್ಚಿಂತರಾಗಿ, ಈವರೆಗೆ ತಮ್ಮ ನಾಡನ್ನು ಪುಂಡಾಟಿಗೆಯಿಂದ ಹಿಡಿದುಕೊಂಡು ಪ್ರಬಲ ಶತ್ರುವಾದ ಸಿವಾಜಿಯನ್ನು ನಿರ್ನಾಮ ಮಾಡುವುದಕ್ಕೆ ಹುರುಪು ಗೊಂಡರು. ಅವರಂಗಜೇಬನು ತಾನು ದಿಲ್ಲಿಗೆ ಹೊರಡುವಾಗ ಸಿವಾಜಿ ಯನ್ನು ಮೊಗಲರ ರಾಜ್ಯದಿಂದ ದೂರ ಅಟ್ಟಬೇಕೆಂದು ಬರೆದಿದ್ದನಷ್ಟೇ. ಆ ಪತ್ರವು ಅದಿಲಶಹನನ್ನು ಹೆಚ್ಚು ಹುರಿದುಂಬಿಸಿತು. ಈ ಕಾಲಕ್ಕೆ

೨೦ ವರ್ಷದವನಾದ ಅಲ್ಲಿ ಎಂಬವನು ಅದಿಲಶಹನಾಗಿದ್ದನು. ಅವನು ಚಿಕ್ಕವನಾದ ಕಾರಣ ಅವನ ತಾಯಿಯಾದ ಬಡಿ (ದೊಡ್ಡ) ಸಾಹೇಬಿನಿಯು ರಾಜ್ಯಭಾರವನ್ನು ತೂಗಿಸುತ್ತಿದ್ದಳು. ಒಂದು ದಿನ ಆಕೆಯು ಎಲ್ಲ ಸರದಾರರನ್ನು ದರಬಾರಿಗೆ ಕರಿಸಿ ಹೇಳಿದ್ದೇನಂದರೆ—"ಅದಿಲ ಶಾಹಿಯು ಕಟ್ಟಭಿಮಾನಿಗಳೇ, ನಿಮ್ಮ ಕಲಿತನದಿಂದಲೂ ರಾಜನಿಷ್ಠೆಯಿಂದಲೂ ಜಾಗರೂಕತೆಯಿಂದಲೂ ನಮ್ಮ ರಾಜ್ಯದಲ್ಲೆಲ್ಲ ಶಾಂತತೆಯು ಹಬ್ಬಿದೆ. ಆ ದುಷ್ಟರಾದ ಮೊಗಲ ಅರಸುಮಕ್ಕಳು ತಂತಮ್ಮೊಳಗೆ ಜಗಳಾಡುತ್ತಿರುವುದರಿಂದ ಅವರ ಭೀತಿಯು ಇಲ್ಲದಂತಾಗಿದೆ. ಆದ್ದರಿಂದ ಆ ಕೆಡಕನೂ ಪುಂಡನೂ ಹಾವಳಿಗಾರನೂ ಮೋಸಗಾರನೂ ಆದ ಸಿವಾಜಿಯ ಪಾರಪತ್ಯ ಮಾಡಲಿಕ್ಕೆ ಇದೇ ತಕ್ಕ ಸಮಯವೆಂದು ತೋರುತ್ತದೆ. ನಮ್ಮ ಸರದಾರನೂ ಅವನ ತಂದೆಯೂ ಆದ ಶಹಾಜಿಗೆ ಅವನನ್ನು ದಂಡಿಸಲಿಕ್ಕೆ ಬರೆದೆವು. ಅದರಿಂದ ಏನೂ ಪ್ರಯೋಜನವಾಗಲಿಲ್ಲ. ಏಕೆಂದರೆ ಶಹಾಜಿಯು "ಅವನು ನನ್ನ ಮಾತು ಕೇಳುವುದಿಲ್ಲ. ಅವನು ನನ್ನ ಮಗನಲ್ಲ. ಅವನನ್ನು ತಾವು ಮನಸ್ಸಿಗೆ ಬಂದಂತೆ ದಂಡಿಸಬಹುದು. ಅವನಿಗೆ ತಕ್ಕ ಶಿಕ್ಷೆಯಾದರೆ ನನಗೆ ಸಂತೋಷವೇ ಹೊರತು ದುಃಖವಿಲ್ಲ," ಎಂದು ಬದಲು ಬರೆದಿದ್ದಾನೆ. ಆದ್ದರಿಂದ ದಂಡೋಪಾಯದಿಂದಲೇ ಅವನನ್ನು ಹಾದಿಗೆ ತರಬೇಕೆಂದು ಸಂಕಲ್ಪಮಾಡಿದ್ದೇವೆ. ತಾವೆಲ್ಲರೂ ಅವನಿಗಿಂತ ವೀರರೂ ಎದೆಗಾರರೂ ಜಾಣರೂ ಆಗಿರುತ್ತೀರಿ. ತಮ್ಮೊಳಗೆ ಯಾರು ಧೈರ್ಯಮಾಡಿ ಅವನ ಮೇಲೆ ದಂಡೆತ್ತಿಹೋಗಿ, ಅವನನ್ನು ಸೆರೆಯಾಳಾಗಿ ತರುವಿರೊ ಅಥವಾ ಅವನ ರುಂಡವನ್ನು ತಂದು ತೋರಿಸುವಿರೊ ಅವರಿಗೆ ನಾವು ನಮ್ಮ ಕೃತಜ್ಞತೆಯನ್ನೂ ಕೊಂಕಣದಲ್ಲಿ ಒಂದು ದೊಡ್ಡ ಸುಬೆಯನ್ನೂ ಕೊಡುವುದಲ್ಲದೆ, ಬಹುಮಾನವನ್ನು ಮಾಡುವೆವು. ಈ ದಂಡಯಾತ್ರೆಯನ್ನು ಕಯ್ಕೊಳ್ಳುವಷ್ಟು ಗಂಡಸುತನವುಳ್ಳವರು ಬೇಗನೆ ಎದ್ದು ಹೇಳಿ, ವೀಳೆಯನ್ನು ತೆಗೆದುಕೊಳ್ಳಿರಿ."

ಈ ಸಭೆಯಲ್ಲಿ ನಮ್ಮ ಚರಿತ್ರನಾಯಕನಿಗೆ ಅನುಕೂಲರಾದ ಕೆಲವು ಸರದಾರರಿದ್ದರು. ಅವರು ತಮ್ಮ ನೆರೆಯಲ್ಲಿ ಕುಳಿತವರ ಕಿವಿಯೊಳಗೆ

“ಸಿವಾಜಿಯ ಮೇಲೆ ದಂಡೆತ್ತಿ ಹೋಗುವವನು ಜೀವಂತನಾಗಿ ತಿರುಗಿ ಬರುವುದು ಕಷ್ಟ” ಎಂದು ಹೇಳತೊಡಗಿದರು. ಸರದಾರರು ಒಬ್ಬರ ಮೋರೆಯನ್ನೊಬ್ಬರು ಮಿಕಿಮಿಕಿ ನೋಡುತ್ತ ಸುಮ್ಮನೆ ಕುಳಿತರು. ಅದನ್ನು ನೋಡಿ ಬಡಿ ಸಾಹೇಬಿನಿಯು “ಏನು? ಎಲ್ಲರು ಸುಮ್ಮನಾದಿರಿ. ನಿಮ್ಮೊಳಗೆ ಒಬ್ಬನಿಗೂ ಆ ಬಂಡುಗಾರನನ್ನು ದಂಡಿಸುವಷ್ಟು ಧೈರ್ಯವಿಲ್ಲದಾಯಿತೇ? ನೀವೆಲ್ಲರೂ ಬಡೆ ಬಾಪಕೆ ಬೇಟಿ (ದೊಡ್ಡವರ ಮಕ್ಕಳು ಮಾತ್ರ) ಆಗಿರುತ್ತೀರೋ? ನೀವು ಯಾರೂ ಎದೆಗೊಳ್ಳದಿದ್ದರೆ ನಾನೇ ದಂಡೆತ್ತಿ ಹೋಗಿ ಆ ಕಾಫರ (ಧರ್ಮಲಂಡ) ನನ್ನು ಸೆರೆಯಾಳಾಗಿ ಹಿಡಿದು ತರುವೆನು” ಎಂದು ಅಬ್ಬರಿಸಿದಳು.

ಆ ವೀರವನಿತೆಯ ಈ ಸೆಡವಿನ ಮಾತುಗಳನ್ನು ಕೇಳಿ ಒಬ್ಬ ಸರದಾರನು ತನ್ನ ಆಸನದಿಂದ ಚಟ್ಟನೆ ಎದ್ದು ಗದ್ದಿಗೆಯ ಮುಂದೆ ಪೊಡಮಡಿದು, ಕಯ್ಜೋಡಿಸಿಕೊಂಡು ನಿಂತು,

ಬೇಗಮ್ ಸಾಹೇಬ, ನಾನು ಈ ಕೆಲಸವನ್ನು ಸಂತೋಷದಿಂದ ಕಯ್ಕೊಳ್ಳುವೆನು. ತಾವು ಚಿಂತಿಸುವ ಕಾರಣವಿಲ್ಲ. ನನಗೆ ವೀಳೆಯನ್ನು ದಯಪಾಲಿಸಿರಿ. ನಾನು ಭಗೀರಥ-ಪ್ರಯತ್ನಮಾಡಿ ಆ ಕಾಫರನನ್ನು ಹಿಡಿದುಕೊಂಡು ಬರುವೆನು, ಅಥವಾ ಅವನ ರುಂಡವನ್ನು ತಂದು ತಮ್ಮ ಅಡಿಯ ಮುಂದಿಡುವೆನು. ನನಗೆ ೨೦,೦೦೦ ರಾಹುತರನ್ನೂ ೩೦,೦೦೦ ಕಾಲಾಳುಗಳನ್ನೂ ಕೊಟ್ಟರೆ ಸಾಕು.

ಬಡಿಸಾಹೇಬಿನಿ.—ಅಫಜುಲ್ಖಾನ (ಆ ಸರದಾರನ ಅಡ್ಡಹೆಸರು), ನಿನ್ನ ಎದೆಗಾರಿಕೆಯನ್ನು ನೋಡಿ ನಾನು ಹಿಗ್ಗಿದೆನು. ನೀವೆಲ್ಲರು ಕೆಳಗೆ ಮೋರೆಮಾಡಿಕೊಂಡು ಕುಳಿತುದನ್ನು ನೋಡಿ ವೀರಶ್ರೀಯು ನಮ್ಮ ರಾಜ್ಯವನ್ನು ಬಿಟ್ಟು ಹೋದಳೋ ಏನೋ ಎಂಬ ಶಂಕೆಯು ನನಗೆ ಬಂದಿತ್ತು. ನಿನ್ನ ಹುರುಪನ್ನು ನೋಡಿ ನನಗೆ ಬಹಳ ಸಂತೋಷವಾಯಿತು. (ವಜೀರನಾದ ಖವಾಸಖಾನನ ಕಡೆಗೆ ನೋಡಿ) ಈ ವೀರನ ವಶಕ್ಕೆ ಸಾಕಷ್ಟು ದಂಡನ್ನೂ ಯುದ್ಧಸಾಮುಗ್ರಿಗಳನ್ನೂ ಕೊಟ್ಟು, ಅವನ ಕೊರಳಲ್ಲಿ ವಿಜಯಶ್ರೀಯು ಮಾಲೆ ಹಾಕುವಂತೆ ಎಲ್ಲ ಏರ್ಪಾಡನ್ನು ಮಾಡಿರಿ.

ದರಬಾರು ಮುಗಿಯಿತು. ಬೇಗಮ್ಮಳೂ ಉಳಿದ ಎಲ್ಲ ಸರದಾರರೂ ಹೊರಟು ಹೋದರು. ಕೆಲವರು ಅವನ ಶೌರ್ಯಧೈರ್ಯಗಳನ್ನು ಹೊಗಳುತ್ತಿದ್ದರು; ಮತ್ತೆ ಕೆಲವರು ಅವನ ಎಚ್ಚರಗೇಡಿತನವನ್ನು ಹಳಿಯುತ್ತಿದ್ದರು. ಅಬ್ದುಲ ಭಟಾರಿ ಅಫಜುಲ್ಖಾನನು ಖವಾಸಖಾನನೊಡನೆ ದಂಡಯಾತ್ರೆಯ ವಿಷಯವಾಗಿ ಎಣಿಕೆ ಮಾಡುತ್ತ ಕುಳಿತನು. ಎಷ್ಟು ಲೆಕ್ಕ ಹಾಕಿದರೂ ೧೦,೦೦೦ ಕ್ಕಿಂತ ಹೆಚ್ಚು ರಾಹುತರನ್ನು ಅಫಜುಲ್ಖಾನನೊಡನೆ ಕಳಿಸಲಿಕ್ಕೆ ಅದಿಲಶಾಹಿಗೆ ಸಾಮರ್ಥ್ಯವಿದ್ದಿಲ್ಲ. ಮೊನ್ನೆ ಮೊಗಲರೊಡನೆ ನಡೆದ ಯುದ್ಧದಿಂದ ಅದಿಲಶಾಹಿಯ ದಂಡು-ಬಂಡಾರಗಳು ಬಡವಾಗಿದ್ದವು. ಅಫಜುಲ್ಖಾನನು ಎಷ್ಟು ಅರೆದಾಡಿದರೂ ವಜೀರನು ಹೆಚ್ಚು ದಂಡನ್ನು ಕಳಿಸಲಿಕ್ಕೆ ಒಡಂಬಡಲೊಲ್ಲನು. ಅಫಜುಲ್ಖಾನನಿಗೆ ಒಂದು ಕಡೆ ಬಾವಿ ಮತ್ತೊಂದುಕಡೆ ಕೆರೆ ಆಯಿತು. ತಾನು ಒಯ್ಯುವ ದಂಡು ಸಿವಾಜಿಗಿಂತ ಸಣ್ಣದಾದ್ದರಿಂದ ಗೆಲವು ಅನಿಶ್ಚಿತವಾಯಿತು; ದಂಡಯಾತ್ರೆಗೆ ಈ ಕಾಲಕ್ಕೆ ಹಿಂದೆಗೆದರೆ, ಜನರಲ್ಲಿ ಅಪಹಾಸ್ಯವಾಗುವ ಸಂಭವವಿತ್ತು. ಆದ್ದರಿಂದ ಅವನು ಈ ವಿಷಯವಾಗಿ ಕೆಲವು ದಿವಸ ಅಳೆದುಹಾಕಿ, ಕಟ್ಟಕಡೆಗೆ ಹಂಚಿಕೆಯಿಂದಲೇ ಸಿವಾಜಿಯನ್ನು ಹಿಡಿಯಬೇಕೆಂದು ಮನಸ್ಸಿನಲ್ಲಿ ನಿರ್ಧಾರಮಾಡಿಕೊಂಡನು. ವಜೀರನು ವಿಶ್ವಪ್ರಯತ್ನಮಾಡಿ ಅವನಿಗೆ ೧೨,೦೦೦ ಕುದುರೆ ಸ್ವಾರರನ್ನೂ ೩೦,೦೦೦ ಕಾಲಾಳುಗಳನ್ನೂ ಒಂದು ಸಣ್ಣ ತೋಫಖಾನೆಯನ್ನೂ ಕೊಟ್ಟನು. ಅಫಜುಲ್ಖಾನನು ಎಲ್ಲ ಸಿದ್ಧತೆಯನ್ನು ಮಾಡಿಕೊಂಡು, ಬಡಿ ಸಾಹೇಬಿನಿಯ ದರ್ಶನಕ್ಕೆ ಹೋಗಿ ಆಕೆಯಿಂದ ಉಡುಗರೆಯನ್ನು ತೆಗೆದುಕೊಂಡು, ಆಕೆಯಮುಂದೆ ಯಥೇಚ್ಛವಾಗಿ ಬಡಾಯಿ ಕೊಚ್ಚಿ, ಸಡಗರದಿಂದಲೂ ಸೆಟವಿನಿಂದಲೂ ರಾಜಧಾನಿಯನ್ನು ಬಿಟ್ಟನು. ಮನುಷ್ಯನು ಬಯಸುವುದೊಂದು ದೇವರು ಮಾಡುವುದು ಮತ್ತೊಂದು ಎಂಬ ಗಾದೆಯಂತೆ, ಇಷ್ಟು ವಿಜೃಂಭಣೆಯಿಂದ ಹೊರಟ ದಂಡು ಸುರಕ್ಷಿತವಾಗಿ ತಿರುಗಿ ಬರಲಿಕ್ಕಿಲ್ಲೆಂದು ಅಲ್ಲಿದ್ದವರೊಳಗೆ ಒಬ್ಬನಿಗಾದರೂ ಹೊಳೆಯಲಿಲ್ಲ* !!! (೧೬೫೯).

---

* ವಿಜಾಪುರದ ಪಡವಲಿಗೆ ತೊರವೆಯ ದಾರಿಯ ಮೇಲೆ ಅಫಜುಲ್ಖಾನನ ೬೦ ಮಂದಿ ಹೆಂಡಂದಿರ ಗೋರಿಗಳೆಂದು ಕೆಲವು ಗೋರಿಗಳನ್ನು ಈಗಲೂ

ಅಫಜುಲ್ಖಾನನು ಕಡುಗಲಿಯಾಗಿದ್ದರೂ ಬ್ರಹ್ಮದ್ವೇಷಿಯೂ ಕ್ರೂರನೂ ನಿರ್ದಯನೂ ಜಂಬದವನೂ ಎಚ್ಚರಗೇಡಿಯೂ ಮೋಸಗಾರನೂ ಆಗಿದ್ದನು. ಸಿವಾಜಿಯ ದಂಡಿನ ಸಾಮರ್ಥ್ಯವು ಅವನಿಗೆ ಚೆನ್ನಾಗಿ ಗೊತ್ತಿದ್ದಿಲ್ಲ. ಆದ್ದರಿಂದ ಅವನು ದಂಡಿನೊಡನೆ ಬಂದು, ತನಗೆ ಎದುರಾಗಲಿಕ್ಕಿಲ್ಲೆಂದು ಅಫಜುಲ್ಖಾನನು ನೆನಿಸಿ, ಅವನನ್ನು ಹೊರಗೆಡವುವ ಉಪಾಯವನ್ನು ಯೋಚಿಸಲಾರಂಭಿಸಿದನು. ಈ ಕಾಲದಲ್ಲಿ ಸಿವಾಜಿಯು ಪ್ರತಾಪಗಡದಲ್ಲಿದ್ದರೂ ಅವನು ಪುಣೆಯಲ್ಲಿರುತ್ತಾನೆಂದು ತಿಳಿಕೊಂಡು ಪುಣೆಯದಾರಿಯನ್ನು ಹಿಡಿದು, ತುಳಜಾಪುರಕ್ಕೆ ಬಂದನು. ಹಾದಿಯಲ್ಲಿ ತುಳಜಾಪುರವು ಹತ್ತಿತು. ಅಲ್ಲಿ ಭೋಸಲೆ ಮನೆತನದ ಕುಲದೇವತೆಯಾದ ಶ್ರೀ ಭವಾನಿಯ ಪ್ರಸಿದ್ಧ ದೇವಸ್ಥಾನವಿರುತ್ತದೆಂದು ಕೇಳಿ, ಅವನ ಬ್ರಹ್ಮದ್ವೇಷವು ತಲೆಗೇರಿತು; ಶ್ರೀ ಭವಾನಿಯ ಶಿಲಾಮೂರ್ತಿಯನ್ನು ಕಿತ್ತಿಸಿ ಒಡೆದು ಪುಡಿಪುಡಿಮಾಡಿಸಿಬಿಟ್ಟನು!! ಈ ದುಷ್ಕೃತ್ಯದಿಂದ ಅವನಿಗೆ ಏನು ಲಾಭವಾಯಿತೋ ದೇವರೇ ಬಲ್ಲ. ಎಲ್ಲ ಹಿಂದೂ ಜನರು ಅವನು ಹಾಳಾಗಿಯೂ ನಿಸ್ಸಂತಾನವಾಗಿಯೂ ಹೋಗಲೆಂದು ಗೋಳಿಟ್ಟರು. ಸಿವಾಜಿಯನ್ನು ಸಿಟ್ಟಿಗೆಬ್ಬಿಸಿ, ಅವನನ್ನು ಕೋಟೆಯ ಹೊರಗೆ ತರಬೇಕೆಂಬ ಉದ್ದೇಶದಿಂದ ಅಫಜುಲ್ಖಾನನು ಈ ಮೂರ್ತಿಯನ್ನು ಒಡಿಸಿದನೆಂದು ಕೆಲವರ ಅಭಿಪ್ರಾಯವಿರುತ್ತದೆ. ಅದು ಹೇಗೇ ಇರಲಿ, ಈ ಕಾಲಕ್ಕೆ ಸಿವಾಜಿಯು ಪುಣೆಯಲ್ಲಿರದೆ, ಪ್ರತಾಪಗಡದಲ್ಲಿರುತ್ತಾನೆಂಬ ಸುದ್ದಿಯು ಅಫಜುಲ್ಖಾನನಿಗೆ ಹತ್ತಿತು. ಕೂಡಲೆ ಅವನು ಪುಣೆಯ ದಾರಿಯನ್ನು ಬಿಟ್ಟು, ಮಾಣಕೇಶ್ವರ, ಪಂಢರಪುರ, ಮಹಾದೇವ ಈ ಊರುಗಳ ಮೇಲೆ ಹಾಯ್ದು ಅಲ್ಲಿದ್ದ ದೇವರ ಮೂರ್ತಿಗಳನ್ನು ಒಡಿಸಿ, ಸಾತಾರೆಯ ಉತ್ತರಕ್ಕೆ ೨೦ ಮೈಲಿಗಿರುವ ತನ್ನ ಉಂಬಳಿಯ ಊರಾದ **ವಾಯಿಗೆ** ಬಂದು, ಅಲ್ಲಿ ಕೆಲವು ದಿವಸ

---

ತೋರಿಸುತ್ತಾರೆ. ಜೀವದಿಂದ ತಿರುಗಿ ಬರಲಿಕ್ಕಿಲ್ಲೆಂಬ ಹೆದರಿಕೆಯಿಂದ ತಾನು ಹೊರಡುವುದಕ್ಕಿಂತ ಮೊದಲು ಅಫಜುಲ್ಖಾನನು ತನ್ನ ೬೦ ಮಂದಿ ಮಡದಿಯರನ್ನು ಕೊಂದು ಆ ಗೋರಿಗಳಲ್ಲಿ ಹುಗಿಸಿದನೆಂದು ಐತಿಹ್ಯವುಂಟು. ಅವನು ಬಡಾಯಿ ಕೊಚ್ಚಿದ್ದು ನಿಜವಿದ್ದರೆ, ಈ ಕ್ರೂರವಾದ ಕೊಲೆಯು ಸುಳ್ಳೆಂದು ಧಾರಾಳವಾಗಿ **ಹೇಳಬಹುದು.**

ನಿಂತು ಅಲ್ಲಿಯ ದೇಶಮುಖರೊಡನೆ ಸಿವಾಜಿಯನ್ನು ಹಿಡಿದೊಯ್ಯಲಿಕ್ಕೆ ಒಳಸಂಚು ನಡಿಸಿದನು. ಒಬ್ಬ ತಲೆಮಾಸಿದ (ಬಡವನಾದ) ಜಮೆದಾರನು ತಾನು ಸಿವಾಜಿಯನ್ನು ಹಿಡಿತರುವೆನೆಂದು ಗುಳಿಗೆ ಕೊಟ್ಟು (ಸುಳ್ಳು ಹೇಳಿ) ಖಾನನಿಂದ ವೀಳೆಯ ತೆಗೆದುಕೊಂಡು ಹೋದನು. ಅಷ್ಟರಲ್ಲಿ ಅವನಿಗೆ ಮತ್ತೊಂದು ಯುಕ್ತಿಯು ಸೂಚಿಸಿತು. ಪ್ರತಾಪಗಡದಂತಹ ಗುಡ್ಡಗಾಡಿನ ನಾಡಿನೊಳಗೆ ರಣಾಂಗಣದಲ್ಲಿ ತನ್ನ ದಂಡಿನೊಡನೆ ಕಾದಿ ಸಿವಾಜಿಯನ್ನು ಗೆಲ್ಲುವುದು ಅಸಂಭವವಾಗಿ ತೋರಿತು. ಆದ್ದರಿಂದ ಏನಾದರು ಆಶೆ ತೋರಿಸಿ, ಸಿವಾಜಿಯನ್ನು ಮೋಸಗೊಳಿಸಬೇಕೆಂಬ ಬಯಕೆಯು ಅವನಲ್ಲಿ ಹೆಚ್ಚಿತು. ಈ ದುರುದ್ದೇಶದಿಂದ ಖಾನನು ತನ್ನ ಗುಮಾಸ್ತನಾದ ಕೃಷ್ಣಾಜಿ ಭಾಸ್ಕರನೆಂಬವನನ್ನು ಸಿವಾಜಿಯ ಬಳಿಗೆ ಪ್ರತಾಪಗಡಕ್ಕೆ ಕಳುಹಿದನು. ಖಾನನು ಶಹಾಜಿಯ ಮಿತ್ರನಾದ್ದರಿಂದ ಸಾಧ್ಯವಿದ್ದಷ್ಟು ಸಿವಾಜಿಯ ಹಿತವನ್ನು ಮಾಡಲೆಳಸುತ್ತಾನೆಂತಲೂ, ಸಿವಾಜಿಯು ಬಂದು ಖಾನನನ್ನು ಕಂಡರೆ ಅವನ ನಾಡುಕೋಟೆಗಳು ಉಳಿಯಬಹುದೆಂತಲೂ ಬಹುಮಾನವನ್ನೂ ಯುದ್ಧಸಾಮಗ್ರಿಗಳನ್ನೂ ಅದಿಲಶಹನಿಂದ ಕೊಡಿಸಬಹುದೆಂತಲೂ, ಸಿವಾಜಿಯು ಸ್ವತಃ ಅದಿಲಶಾಹಿ ದರಬಾರಿಗೆ ಬರಲೊಡಂಬಡದಿದ್ದರೆ, ಒಬ್ಬ ವಕೀಲನನ್ನು ಕಳಿಸಬಹುದೆಂತಲೂ ಸಿವಾಜಿಗೆ ತಿಳಿಸಲಿಕ್ಕೆ ಸೂಚಿಸಿದನು ಮತ್ತು ಸಿವಾಜಿಯನ್ನು ಸಮೂಲವಾಗಿ ನಾಶಮಾಡುವ ತನ್ನ ನಿಜವಾದ ಉದ್ದೇಶವನ್ನು ಅತಿಗೌಪ್ಯವಾಗಿ ಇಡಲಿಕ್ಕೆ ಅಂಗಲಾಚಿ ಬೇಡಿಕೊಂಡನು.

'ಭಾಗಾದಿಯನ್ನು ಬಲಾಚಾರ ಕೇಳಿದಂತೆ' ಎಂಬ ಗಾದೆಯ ಮಾತನ್ನು ಎಲ್ಲ ವಾಚಕರು ಕೇಳಿರಬಹುದು. ಈ ಕಾಲದ ಕೃತ್ರಿಮಶಿಕ್ಷಣವನ್ನು ಹೊಂದಿದವರಂತೆ ಆ ಕಾಲದ ನಮ್ಮ ಪೂರ್ವಜರು ದೇವಲೆಂಡ ಪಿತೃಲೆಂಡರಾಗಿದ್ದಿಲ್ಲ. ಆದ್ದರಿಂದ ಖಾನನು ಪ್ರಸಿದ್ಧಕ್ಷೇತ್ರಗಳಲ್ಲಿದ್ದ ದೇವರ ಮೂರ್ತಿಗಳನ್ನು ನಿರ್ದಾಕ್ಷಿಣ್ಯವಾಗಿ ಒಡಿಸಿದ್ದರಿಂದ ಎಲ್ಲ ಭಾರತೀಯರ ಹೊಟ್ಟೆಯುರಿದು ಸಂತಾಪವು ಉಕ್ಕೇರಿತ್ತು. ಕೃಷ್ಣಾಜಿಯು ಈ ಸಾಮಾನ್ಯ ನಿಯಮಕ್ಕೆ ಅಪವಾದವಾಗಿದ್ದಿಲ್ಲ. ಖಾನನ ವಿಷಯಕವಾದ ದ್ವೇಷವು ಅವನ ಹೃದಯದಲ್ಲಿ ಕುದಿಯುತ್ತಿತ್ತು. ಅವನ ಹೊಟ್ಟೆಯೊಳಗಿನ ಸಿಟ್ಟು

ರಟ್ಟಿಯೊಳಗೆ ಇಲ್ಲುದರಿಂದ ಅವನು ಮುಯ್ಯ ತೀರಿಸಿಕೊಳ್ಳುವ ಸುಸಂಧಿಯನ್ನು ಕಾಯ್ದುಕೊಂಡು ಕುಳಿತಿದ್ದನು. ಖಾನನ ಈ ಮೋಸದ ಮಸಲತ್ತನ್ನು ಕೇಳಿ ಶ್ರೀಭವಾನೀ ವಿಠೋಬರು ತನಗೆ ಸೇಡು ತೀರಿಸಿಕೊಳ್ಳುವ ಉತ್ತಮ ಸಂಧಿಯನ್ನು ಒದಗಿಸಿಕೊಟ್ಟರೆಂದು ಅವನು ಮನಸ್ಸಿನಲ್ಲಿ ಅತಿಶಯವಾಗಿ ಹಿಗ್ಗಿದನು. ಖಾನನಂತಹ ಧರ್ಮದ್ರೋಹಿಗಳನ್ನು ದಂಡಿಸಲಿಕ್ಕೆ ನೆರವಾಗುವ ಸುಯೋಗವು ಪುಣ್ಯಶಾಲಿಗಳ ಹೊರತು ಬೇರೆಯವರಿಗೆ ದೊರೆಯುವ ಸಂಭವವಿಲ್ಲೆಂದು ಅವನು ನಂಬಿದ್ದನು.

ಅತ್ತ ಖಾನನು ದಂಡೆತ್ತಿಬಂದ ಸುದ್ದಿಯು ನಮ್ಮ ಚರಿತ್ರನಾಯಕನಿಗೆ ಬಂತು. ಅವನು ದಾರಿಯಲ್ಲಿ ಮೂರ್ತಿಗಳನ್ನು ಒಡಿಸಿದ ವರ್ತಮಾನವನ್ನು ಕೇಳಿ ಅವನ ಸಿಟ್ಟು ಅಳತೆಗೆಟ್ಟಿತು. ಧರ್ಮಾಭಿಮಾನವೂ ಸ್ವಾಭಿಮಾನವೂ ಸ್ವರಾಜ್ಯಾಭಿಮಾನವೂ ಒಟ್ಟುಗೂಡಿ, ಅವನನ್ನು ಹುರುಪುಗೊಳಿಸಿದವು. ಮಂತ್ರಿಗಳ ಸಭೆಯನ್ನು ಕರೆದು ಅವರೊಡನೆ ಆಲೋಚಿಸಿದನು. ಅವರೆಲ್ಲರೂ ಖಾನನಿಗೆ ರಣದಲ್ಲಿ ಎದುರಾಗುವ ಸಾಮರ್ಥ್ಯವಿಲ್ಲೆಂತಲೂ ಅವನಿಗೆ ಶರಣು ಹೋಗುವುದೇ ಉತ್ತಮ ಉಪಾಯವೆಂತಲೂ ಏಕಕಂಠದಿಂದ ಹೇಳಿದರು. ಈ ಒಟ್ಟುಗೂಡಿದ ಅಭಿಪ್ರಾಯವು ನಮ್ಮ ಚರಿತ್ರನಾಯಕನಿಗೆ ಎಳ್ಳಷ್ಟಾದರೂ ಸೇರಲಿಲ್ಲ. ತನ್ನ ಕುಲದೇವತೆಯಾದ ಶ್ರೀ ಭವಾನಿಯನ್ನು ಒಡಿಸಿದ ರಕ್ಕಸನ ಮರೆ ಹೋಗಲಿಕ್ಕೆ ಅವನ ಧರ್ಮಾಭಿಮಾನವು ಒಪ್ಪಲಿಲ್ಲ. ವಂಚಕನಾದ ಖಾನನಿಗೆ ಶರಣು ಹೋಗಲಿಕ್ಕೆ ಅವನ ಸ್ವಾಭಿಮಾನವು ಒಡಂಬಡಲಿಲ್ಲ; ಅಪರಿಚಿತನಾದ ಆದಿಲಶಾಹಿ ಸರದಾರನ ಮಧ್ಯಸ್ಥಿಕೆಯನ್ನು ಸ್ವೀಕರಿಸಲಿಕ್ಕೆ ಅವನ ಸ್ವರಾಜ್ಯಾಭಿಮಾನವು ಅನುಮೋದಿಸಲಿಲ್ಲ. ಮಂತ್ರಿಗಳ ಹೇಳಿಕೆಯು ಮುಗಿದ ಕೂಡಲೆ ಅವನು ಚಟಕ್ಕನೇ ಎದ್ದು ಒಳಗೆ ಹೋಗಿ, ತನ್ನ ತಾಯಿಯ ಮುಂದೆ ತನಗೆ ಬಂದ **ಕುತ್ತನ್ನು** ವಿವರಿಸಿ ಹೇಳಿದನು. ಆ ವೀರಮಾತೆಯು "ಸಿವಾ, ಏನಾದರೂ ಚಿಂತೆಯಿಲ್ಲ. ಆ ದುಷ್ಟಖಾನನಿಗೆ ಸರ್ವಥಾ ಶರಣು ಹೋಗಬೇಡ ಕಂಡೆಯಾ. ಬೇರೆ ಯಾವದಾದರೊಂದು ಹಂಚಿಕೆಯನ್ನು ಹುಡುಕಿ ತೆಗೆ. ಶ್ರೀ ಭವಾನಿಯು ನಿನಗೆ ಸಾಹಾಯಕಳಾಗಿ ನಿನ್ನ ಕಯ್ಯಿಂದ ತಾನೇ ಅವನನ್ನು ಸಂಹರಿಸುವಳು," ಎಂದು ಹೇಳಿದ್ದನ್ನು ಕೇಳಿ

ಅವನು ಪರಮಾನಂದಭರಿತನಾದನು. ಕೂಡಲೆ ಅವನು ನಂಬಿಗಸ್ತರಾದ ಇಬ್ಬರು ಬೇಹಿನವರನ್ನು ಕರಿಸಿ, ಫಕೀರರ ವೇಷದಿಂದ ಖಾನನ ಪಾಳಯಕ್ಕೆ ಹೋಗಿ ಅಲ್ಲಿ ನಡೆಯುತ್ತಿದ್ದ ವಿದ್ಯಮಾನಗಳನ್ನು ಶೀಘ್ರವಾಗಿ ತಿಳಿಸಬೇಕೆಂದು ಹೇಳಿ, ಮುಂದೆ ಏನು ಮಾಡಬೇಕೆಂಬ ಎಣಿಕೆಯಲ್ಲಿ ಮುಳುಗಿದನು.* ಖಾನನ ದಂಡಿಗೆ ಅನ್ನ ಸಾಮಗ್ರಿಗಳು ದೊರೆಯದಂತೆಯೂ ಅವನ ದಂಡಿನಲ್ಲಿದ್ದ ಮಾವಳರಿಗೂ ಮುಸಲ್ಮಾನರಿಗೂ ಒಡಕು ಹುಟ್ಟುವಂತೆಯೂ ಏರ್ಪಾಡುಗಳು ಆಗುವಷ್ಟರಲ್ಲಿ, ಖಾನನು ಸಿವಾಜಿಯ ಕಡೆಗೆ ತನ್ನೊಬ್ಬ ಗುಮಾಸ್ತನನ್ನು ಕಳಿಸುತ್ತಾನೆಂಬ ಒಸಗೆಯು ಬಂತು.

ಕೃಷ್ಣಾಜಿಯು ಪ್ರತಾಪಗಡಕ್ಕೆ ಬಂದು ಮಾತುಕಥೆ ಆಡಲಿಕ್ಕೆ ಸಿವಾಜಿಯನ್ನು ವಾಯಿಗೆ ಕರೆದನು. ಸಿವಾಜಿಯು ಅವನ ಆದರಾತಿಥ್ಯವನ್ನು ಚೆನ್ನಾಗಿ ಮಾಡಿ, ನಡಿರಳಿನಲ್ಲಿ ಅವನ ಬಿಡಾರಕ್ಕೆ ಹೋಗಿ, ಖಾನನ ನಿಜವಾದ ಉದ್ದೇಶವನ್ನು ಕೇಳಿದನು. ತುಸು ಹೊತ್ತು ಅರೆದಾಟವಾದ ಬಳಿಕ ಸಿವಾಜಿಯು ಅವನಿಗೆ ಹೇಳಿದ್ದೇನಂದರೆ: “ತಾವು ಶ್ರೇಷ್ಠರಾದ ಬ್ರಾಹ್ಮಣರು. ನಾನು ತಮ್ಮ ಶಿಷ್ಯನು. ತಾವು ಭೂಸುರರು. ತಮ್ಮ ಚರಣ ತೀರ್ಥದಿಂದ ನನ್ನ ದೇಹವು ಪುನೀತವಾಗುತ್ತದೆ. ತಮ್ಮಂತಹರು ಆ ದೇವಘಾತಕನೂ ಬ್ರಹ್ಮದ್ವೇಷಿಯೂ ಭ್ರಷ್ಟನೂ ಆದ ಮ್ಲೇಂಛನ ಸೇವೆಯನ್ನು ಮಾಡುವುದು ಉಚಿತವೇ?”

ಕೃಷ್ಣಾಜಿ—ಮಹಾರಾಜ, ತಾವು ಹೇಳುವುದೆಲ್ಲ ಸರಿಯೇ? ನನ್ನ ಮನಸ್ಸಿನಲ್ಲಿ ಈ ಶಂಕೆಯು ಎಷ್ಟೋ ಸಾರಿ ಬಂದಿರುತ್ತದೆ. ಆದರೆ ಮಾಡುವುದೇನು? ಹೊತ್ತು ಬಂದರೆ ಕತ್ತೆಯ ಕಾಲು ಹಿಡಿಯಲಿಕ್ಕೆ ಬೇಕು.

ಸಿವಾಜಿ—ಸ್ವಾಮಿ, ತಮ್ಮ ಶಿಷ್ಯನಾಗಿ ನಾನಿರುವಾಗ ತಾವು ಆ ನೀಚನೂ ದುರ್ಬೀಜನೂ ಆದ ಖಾನನ ಊಳಿಗವನ್ನು ಮಾಡಬಹುದೇ? ಗೋಬ್ರಾಹ್ಮಣರ ಸಂರಕ್ಷಣೆಗಾಗಿ ನನ್ನ ಆಯುಷ್ಯವಿರುತ್ತದೆಂದು ನಾನು

---

* ಆ ದಿನ ರಾತ್ರಿ ಸಿವಾಜಿಯ ಕನಸಿನಲ್ಲಿ ಶ್ರೀಭವಾನಿಯು ಬಂದು “ಧೈರ್ಯ ಮಾಡು; ಹೆದರಬೇಡ; ಅಫಜುಲ್ಖಾನನು ನಿನ್ನ ಕಯ್ಯಿಂದಲೇ ಸಾಯುವನು” ಎಂದು ಹೇಳಿ ಮರೆಯಾದಳಂತೆ.

ಸಾರಿ ಹೇಳುತ್ತೇನೆ. ತಾವು ಆ ದುಷ್ಟನ ಊಳಿಗವನ್ನು ತೊರೆದರೆ, ಹೆಚ್ಚು ಉತ್ಪನ್ನದ ಕೆಲಸವನ್ನು ತಮಗೆ ಕೊಡಲಿಕ್ಕೆ ನಾನು ಸಿದ್ಧನಾಗಿದ್ದೇನೆ. ತಾವು ಅಂತಹ ಭ್ರಷ್ಟನ ಸೇವೆಯನ್ನು ಎಂದೂ ಮಾಡಕೂಡದು.

ಕೃ.—ಮಹಾರಾಜ, ತಾವು ಪ್ರಬಲರಾಗಿ ತುಸುವರ್ಷಗಳು ಮಾತ್ರ ಆದವು. ತಾವು ಸಣ್ಣವರಿರುವಾಗ ನಮ್ಮ ಬ್ರಾಹ್ಮಣರ ಗೋಳು ಕೇಳುವ ವರು ಯಾರಿದ್ದರು? 'ಹೊಟ್ಟೆ ಮಾಡಿತು ಮೂರಾಬಟ್ಟೆ' ಎಂಬ ಗಾದೆಯಂತೆ ಉದರ ನಿರ್ವಾಹಾರ್ಥವಾಗಿ ನಮ್ಮ ಪೂರ್ವಜರು ಈ ದುಷ್ಟ ಯವನರ ಊಳಿಗವನ್ನು ಕಯ್ಕೊಳ್ಳಬೇಕಾಯಿತು. ಮೀರಿ ಬಂದುದಕ್ಕೆ ಮಾಡು ವುದೇನು?

ಸಿ.—ಸ್ವಾಮಿ, ಈಗಲಾದರು ತಾವು ಆ ದುಷ್ಟ ಮ್ಲೇಂಛನ ಊಳಿಗ ವನ್ನು ಏಕೆ ಬಿಡಬಾರದು?

ಕೃ.—ಮಹಾರಾಜ, ಕ್ಷಮಿಸಿರಿ. ತಮ್ಮ ರಾಜ್ಯವು ಇನ್ನೂ ನೆಲೆಗೊಂ ಡಿಲ್ಲ. ಯವನರು ಪ್ರಬಲರಿರುತ್ತಾರೆ. ನಿಮ್ಮ ರಾಜ್ಯವನ್ನು ಯಾವಾಗ ಸೆಳೆದುಕೊಳ್ಳುವರೋ ಗೊತ್ತಾಗುವುದಿಲ್ಲ.

ಸಿ.—ತಾವು ಹೇಳುವುದು ದಿಟವು. ಇಂತಹ ಸಂದರ್ಭದಲ್ಲಿ ಗೋ ಬ್ರಾಹ್ಮಣ ಪ್ರತಿಪಾಲಕನಾದ ನನಗೆ ತಾವು ಮನಸ್ಸಿನಿಂದ ನೆರವಾಗುವುದು ತಮ್ಮ ಕರ್ತವ್ಯವಲ್ಲವೇ?

ಕೃ.—ಮಹಾರಾಜ, ಒಬ್ಬನ ಸೇವೆಯಲ್ಲಿದ್ದು ಅವನ ಹಗೆಗೆ ನೆರವಾ ಗುವುದು ವಿಶ್ವಾಸಘಾತಕತನವಲ್ಲವೇ? ನಾವು ಬ್ರಾಹ್ಮಣರು ಕರಳೊ ಳಗಿನ ಕತ್ತರಿ ಆಗಬಹುದೇ? ಹೊಟ್ಟೆಯೊಳಗೆ ಹೊಕ್ಕು ಬೆನ್ನನ್ನು ಬಿರಿಸ ಬಹುದೇ?

ಸಿ.—ಸ್ವಾಮಿ, ತಾವು ಶಾಸ್ತ್ರಗಳನ್ನು ಓದಿದವರು. ನಾನು ಹುಂಬ ಸಿಪಾಯಿಯು. ಸಾಧುಗಳು ನಮ್ಮ ಧರ್ಮದ್ವೇಷಿಗಳಾದ ಯವನರನ್ನು ವಂಚಿಸಬಹುದೆಂದು ಹೇಳಿದ್ದನ್ನು ಕೇಳಿದ್ದೇನೆ. ಅವರು ಹೇಳುವುದೇ ನಂದರೆ: ನಾವೆಲ್ಲರು ಮಾಡತಕ್ಕ ಕರ್ತವ್ಯಗಳು ಎರಡು ಪ್ರಕಾರದವಿರು ತ್ತವೆ:—೧. ದೇವರ ವಿಷಯದ ಕರ್ತವ್ಯ. ೨. ಮನುಷ್ಯನ ವಿಷಯದ

ಕರ್ತವ್ಯ. ಈ ಎರಡೂ ಕರ್ತವ್ಯಗಳು ಒಂದಕ್ಕೊಂದು ವಿರೋಧಿಸಿದರೆ, ಮನುಷ್ಯನ ಸಂಬಂಧದ ಕರ್ತವ್ಯವನ್ನು ಬದಿಗೊತ್ತಿ, ದೇವರ ಸಂಬಂಧದ ಕರ್ತವ್ಯವನ್ನು ಮಾಡುವುದೇ ಮನುಷ್ಯನ ಶ್ರೇಷ್ಠಧರ್ಮವು.

ಕೃ.—ತಾವು ಹೇಳುವುದೆಲ್ಲ ದಿಟವು. ಕರ್ತವ್ಯಗಳು ಒಂದಕ್ಕೊಂದು ವಿರೋಧಿಸುವಾಗ ಹೆಚ್ಚಿನ ಕರ್ತವ್ಯವನ್ನು ಮಾಡುವುದು ಲೇಸೆಂದು ಧರ್ಮಶಾಸ್ತ್ರವು ಸಾರಿ ಹೇಳುತ್ತದೆ. ಆದರೆ ಜನರಲ್ಲಿ ಅಷ್ಟು ತಿಳಿವಳಿಕೆ ಎಲ್ಲಿ, ಮನೋಧೈರ್ಯವೆಲ್ಲಿ ?

ಸಿ.—ಸ್ವಾಮಿ, ನನ್ನಂತಹ ಬ್ರಾಹ್ಮಣೇತರರಿಗೆ ತಾವು ಹೇಳಿದಂತೆ ತಿಳಿವಳಿಕೆ ಇರುವುದಿಲ್ಲೆಂಬ ಮಾತು ನಿಜವಾದುದೇ ಸರಿ. ಆದರೆ ತಾವು ಬ್ರಾಹ್ಮಣರು, ಬ್ರಾಹ್ಮಣೇತರರ ಗುರುಗಳು, ಉಪದೇಶಕರು, ಹಗಲಿರುಳು ಅವರ ಕಲ್ಯಾಣ ಚಿಂತಿಸುವವರು. ಆಚಾರ ಹೇಳುವುದೂ ಬದನೆಕಾಯಿ ತಿಂಬುವುದೂ ತಮಗೆ ಸಲ್ಲುವುದೇ? ಆ ದುಷ್ಟ ಮ್ಲೇಂಛನನ್ನು ಹೇಗಾದರೂ ಮಾಡಿ ದಂಡಿಸುವುದು ತಮ್ಮ ಆದ್ಯಕರ್ತವ್ಯವಲ್ಲವೇ? ಅದನ್ನು ಕಯ್ಕೊಳ್ಳಲಿಕ್ಕೆ ಶಾಪಾನುಗ್ರಹಶಕ್ತಿಯುಳ್ಳ ಬ್ರಾಹ್ಮಣರ ವಂಶಕರಾದ ತಮ್ಮಂತಹರು ಹಿಂಜರಿಯಬಹುದೇ ? ಬಲ್ಲವರಿಗೆ ಹೆಚ್ಚಿಗೆ ಹೇಳಲಾರೆನು. ಆ ದುಷ್ಟ ಯವನನ ಮನೋರಥವು ಕಯ್ಗೂಡದಂತೆ ಮಾಡುವ ಕೆಲಸದಲ್ಲಿ ತಾವು ಮನಮುಟ್ಟಿ ನನಗೆ ನೆರವಾಗಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ದೇವರು ಪ್ರೇರಿಸಿದಂತೆ ಮಾಡಬಹುದು.

ಸಿವಾಜಿಯ ಈ ಮಾತನ್ನು ಕೇಳಿ ಕೃಷ್ಣಾಜಿಯ ಮನಸ್ಸು ಕರಗಿತು. ಅವನಲ್ಲಿ ಸಂಸ್ಕಾರಜನ್ಯವಾದ ಜ್ಞಾನವು ತಲೆದೋರಿತು. ಅವನ ನೆತ್ತರದಲ್ಲಿ ಅಡಕಾಗಿದ್ದ ಅಧ್ಯಾತ್ಮವಿಚಾರದ ಕಣಗಳು ಉಬ್ಬಿ ಸ್ಫುರಣಹೊಂದಿದವು. ತಾನು ಕಯ್ಕೊಂಡ ಅಧಮವೃತ್ತಿಯು ಧರ್ಮವಿರುದ್ಧವಾದ್ದೆಂಬ ಮನವರಿಕೆಯು ಅವನಿಗೆ ಆಯಿತು. ತನ್ನ ಇಷ್ಟದೇವತೆಗಳನ್ನು ಭಗ್ನ ಮಾಡಿದ ಆ ಅತಿನೀಚನ ವಿರುದ್ಧವಾಗಿ ಪ್ರಯತ್ನಮಾಡುವವರಿಗೆ ಮನಮುಟ್ಟಿ ನೆರವಾಗುವುದು ತನ್ನ ಪವಿತ್ರವಾದ ಕರ್ತವ್ಯವೆಂಬ ತಿಳಿವಳಿಕೆಯು ಅವನಲ್ಲಿ ಹುಟ್ಟಿತು. ಖಾನನ ನಂಬಿಗೆಗಿಂತಲೂ ದೇವಬ್ರಾಹ್ಮ

ಣರ ಸಂರಕ್ಷಣೆಯು ಪುಣ್ಯತರ ಕೆಲಸವೆಂದು ಮನಗಂಡನು. ಎಲ್ಲ ತರದ ಊಹಾಪೋಹಗಳನ್ನು ಮನಸ್ಸಿನಲ್ಲಿ ಅಳೆದು ಹಾಕಿದ ಬಳಿಕ,

ಕೃಷ್ಣಾಜಿ—ಮಹಾರಾಜ, ತಮ್ಮ ಧರ್ಮಶ್ರದ್ಧೆಯನ್ನೂ ಜಾಣತನವನ್ನೂ ನೋಡಿ ನನಗೆ ಬಹಳ ಸಂತೋಷವಾಯಿತು. ನಾನು ತಮಗೆ ಹೇಗೆ ನೆರವಾಗಬೇಕೆಂಬುದನ್ನು ತಿಳಿಸಿರಿ.

ಸಿ.—ಸ್ವಾಮಿ, ತಾವು ನನ್ನ ಗುರುಗಳೆಂದು ಆರಂಭದಲ್ಲೇ ಅರಿಕೆ ಮಾಡಿಕೊಂಡಿದ್ದೇನೆ. ನಮ್ಮೆಲ್ಲರಿಗೂ ಕಡುಹಗೆಯಾದ ಖಾನನನ್ನು ಹೇಗೆ ಕೊಂದು ಭೂಭಾರವನ್ನಿಳಿಸಬೇಕು? ಈಗ ಅವನು ನನ್ನನ್ನು ವಾಯಿಗೆ ಕರೆದ ಉದ್ದೇಶವೇನು?

ಕೃ.—ಉದ್ದೇಶವೇನೋ ಸರಿಯಾಗಿದ್ದಂತೆ ತೋರುವುದಿಲ್ಲ. ನಿನ್ನನ್ನು ಮೋಸಮಾಡಿ ಸೆರೆಹಿಡಿದು ಒಯ್ಯಬೇಕೆಂದು ಅವನ ಮನಸ್ಸಿನಲ್ಲಿದ್ದಂತೆ ತೋರುತ್ತದೆ. ನೀನು ಅಲ್ಲಿಗೆ ಹೋಗುವುದು ಸುರಕ್ಷಿತವಾದ್ದಲ್ಲೆಂದು ಕಾಣುತ್ತದೆ.

ಸಿ.—ತಾವು ನನ್ನ ಮೇಲೆ ಪರಮಾನುಗ್ರಹಮಾಡಿ ಈ ಗುಟ್ಟನ್ನು ತಿಳಿಸಿದಕ್ಕೋಸ್ಕರ ನಾನು ತಮಗೆ ಅತ್ಯಂತವಾಗಿ ಕೃತಜ್ಞನಾಗಿದ್ದೇನೆ. ಖಾನನು ಇಲ್ಲಿಗೇ ಬರುವಂತೆ ಏರ್ಪಾಡು ಮಾಡುವಿರಾ?

ಕೃ.—ಇಲ್ಲಿಗೆ ಅಂದರೆ ಎಲ್ಲಿ?

ಸಿ.—ಈ ಪ್ರತಾಪಗಡದ ಹತ್ತರ.

ಕೃ.—ಅವನನ್ನು ಇಷ್ಟು ಸಮೀಪದಲ್ಲಿ ಬರಗೊಟ್ಟರೆ ನಿನಗೆ ಕೇಡು ಸಂಭವಿಸಲಿಕ್ಕಿಲ್ಲವೇ? ಈ ಗುಡ್ಡಗಾಡಿನಲ್ಲಿ ಅವನಿಗೆ ದಂಡಿನೊಡನೆ ಬರಲಿಕ್ಕೆ ಮಾರ್ಗವಿಲ್ಲ. ಹಾದಿಯಲ್ಲಿ ಹೋಗುವ ದೆವ್ವವನ್ನು ಮನೆಗೆ ಕರೆಕೊಂಡು ಬರಬಹುದೇ? ಮಹಾರಾಜ, ನೋಡಿರಿ, ಚೆನ್ನಾಗಿ ವಿಚಾರ ಮಾಡಿರಿ. ಅವನನ್ನು ಹತ್ತರ ಬರಗೊಟ್ಟರೆ, ಅವನು ಈ ಗಡವನ್ನು ಮುತ್ತಿ ತಮ್ಮನ್ನು ಸೆರೆಹಿಡಿಯಬಹುದು.

ಸಿ.—ಆ ವಿಷಯವಾಗಿ ತಾವು ಉಮ್ಮಳಿಸುವ ಕಾರಣವಿಲ್ಲ. ತಾವು ದಯವಿಟ್ಟು ಅವನು ಇಲ್ಲಿಗೆ ಬರುವಂತೆ ಮಾಡಿದರೆ ಸಾಕು. ಉಳಿದುದನ್ನು ನಾನು ನೋಡಿಕೊಳ್ಳುವೆನು. ಇಲ್ಲಿಗೆ ಬಂದರೆ ಅವನು ಬಲಿಯಲ್ಲಿ ಸಿಕ್ಕಂತಾಯಿತು. ಅವನೂ ಅವನ ದಂಡೂ ತಿರುಗಿಹೋಗಲರಿಯವು.

ಕೃ.—ಅದೇನೊ, ನಮಗೆ ತಿಳಿಯದ ಮಾತು. ನಿನ್ನ ಬೇಡಿಕೆಯನ್ನು ತಿಳಿಸಲಿಕ್ಕೆ ಒಬ್ಬ ಜಾಣನಾದ ವಕೀಲನನ್ನು ಕಳಿಸು. ನಾನು ಅವನಿಗೆ ನನ್ನ ಶಕ್ತಿಮೀರಿ ನೆರವಾಗುವೆನು. ಮತ್ತೇನು?

ಸಿ.—ತಾವು ಈ ಮೇರೆಗೆ ಆಶ್ವಾಸನಕೊಟ್ಟುದರಿಂದ ನಾನು ಧನ್ಯ ನಾದೆನು. ತಮ್ಮ ಉಪಕಾರವು ನನ್ನ ಮೇಲೆ ಹೊರಲಾರದಷ್ಟು ಆಯಿತು. ಇನ್ನು ನಾನು ಬೀಳ್ಕೊಳ್ಳುವೆನು.

ಸಿವಾಜಿಯು ತನ್ನ ಅರಮನೆಗೆ ತಿರುಗಿ ಹೋಗಿ ಮಲಗಿಕೊಂಡನು. ಮುಂದೆ ಏನು ಮಾಡಬೇಕೆಂಬ ಆಲೋಚನೆಯಲ್ಲಿ ಅವನಿಗೆ ನಿದ್ದೆಯೇ ಬರಲಿಲ್ಲ. ಬೆಳಗಿನ ಜಾವಿನಲ್ಲಿ ತುಸು ಜಂಪು ಹತ್ತಿತು. ಶ್ರೀಭವಾನಿಯು ಕನಸಿನಲ್ಲಿ ಬಂದು, “ಮಗನೇ ಅಂಜಬೇಡ, ಎದೆಗೊಳ್ಳು. ನಿನ್ನ ಕಯ್ಯಿಂದಲೇ ನಿನ್ನ ಹಗೆಯು ಮರಣಹೊಂದುವನು” ಎಂದು ಮತ್ತೆ ಹೇಳಿ ಅದೃಶ್ಯಳಾದಳು. ಅವನು ಎದ್ದಾಗ ಹೊತ್ತು ಬಹಳ ಏರಿತ್ತು. ಕೂಡಲೆ ಅಡಬಡಿಸಿಕೊಂಡೆದ್ದು ಮೋರೆಯನ್ನು ತೊಳೆದುಕೊಂಡು, ತಾಯಿಗೆ ಪೊಡಮಡಿದು, ಶ್ರೀ ಭವಾನಿಯ ದರ್ಶನ ತೆಗೆದುಕೊಂಡು, ಓಲಗಕ್ಕೆ ಬಂದು **ಗೋಪೀನಾಥ**ನೆಂಬ ತನ್ನ ನಂಬಿಗಸ್ತನಾದ ಗೃಹಸ್ಥನನ್ನು ಕರೆಯಿಸಿ, ಅವನಿಗೆ ಹೇಳತಕ್ಕುದನ್ನೆಲ್ಲ ಹೇಳಿದನು. ಮುಂದೆ ಎರಡು ಮೂರು ದಿವಸ ಕೃಷ್ಣಾಜಿಯೊಡನೆ ಔಪಚಾರಿಕ ರದಬದಲಿಯ ಮಾತುಗಳು ನಡೆದವು. ಬಳಿಕ ಸಿವಾಜಿಯು ಬೆಲೆಯುಳ್ಳ ವಸ್ತ್ರಾಲಂಕಾರಗಳನ್ನು ಕೃಷ್ಣಾಜಿಗೆ ಉಡುಗರೆಯಾಗಿ ಕೊಟ್ಟು, ಅವನ ಜತೆಯಲ್ಲಿ ಗೋಪೀನಾಥ ಪಂತನನ್ನು ತನ್ನ ವಕೀಲನಾಗಿ ಕಳುಹಿದನು.

ಕೃಷ್ಣಾಜಿ ಗೋಪೀನಾಥ ಪಂತರು ಸುರಕ್ಷಿತವಾಗಿ ವಾಯಿಗೆ ಹೋಗಿ ಮುಟ್ಟಿದರು. ಖಾನನು ಕೃಷ್ಣಾಜಿಯ ಬರುವಿಕೆಯನ್ನು ಎದುರುನೋಡುತ್ತ

ಕುಳಿತಿದ್ದನು. ಅವರು ಬಂದರೆಂದು ತಿಳಿದಕೂಡಲೆ ಅವನು ಕೃಷ್ಣಾಜಿಯನ್ನು ಕರೆಯಿಸಿದನು.

ಅಫಜುಲ್ಖಾನ—ಕೃಷ್ಣಾಜಿಪಂತ, ತಾವು ಹೋದ ಕೆಲಸವು ಫತ್ತೆ (ಜಯಶೀಲ) ಆಯಿತೋ?

ಕೃಷ್ಣಾಜಿ—ಸರಕಾರ, ಫತ್ತೆಯೆಂದರೆ ಮತ್ತೆಂತಹದು? ತಾವು ಈ ದಂಡಯಾತ್ರೆಗೆ ಹೊರಡುವಾಗ ಹಂಗವನ್ನು ಎಡಕ್ಕೂ ಕಾಗೆಯನ್ನು ಬಲಕ್ಕೂ ಕಟ್ಟಿಕೊಂಡು ಹೊರಟಿರುತ್ತೀರಿ. ತಮ್ಮನ್ನು ಬೆನ್ನಟ್ಟಿ ಬಂದ ಜಯಲಕ್ಷ್ಮಿಯು ತಮ್ಮ ಕೆಲಸಕ್ಕೆ ಹೊರಟ ನನ್ನನ್ನು ಹಿಂಬಾಲಿಸಿದಳು. ತಮ್ಮಂತಹ ಪರಾಕ್ರಮಶಾಲಿಗಳು ದಂಡೆತ್ತಿ ಬಂದುದನ್ನು ಕೇಳಿ ಸಿವಾಜಿಯು ಅಂಜಿ **ಹೇತುಕೊಂಡಿದ್ದಾನೆ**. ಹೇಗಾದರು ಮಾಡಿ ತನ್ನನ್ನು ಕಾಪಾಡಬೇಕೆಂದು ನನ್ನ ಕಾಲುಗಳ ಮೇಲೆ ಬಿದ್ದು ಅಂಗಲಾಚಿ ಬೇಡಿಕೊಂಡನು.

ಅ.—(ನಕ್ಕು) ಕಾಫರನಿಗೆ ಈಗ ಎಚ್ಚರ ಹುಟ್ಟಿದಂತೆ ತೋರುತ್ತದೆ. ಇನ್ನೂ ಏನಾಯಿತು? (ಸದ್ದು ಹೊಡೆದು) ನನ್ನ ಹತ್ತರೊಂದು ಬರಲಿ. ಅವನನ್ನು ತಗಣಿ ಹಿಚಿಕಿದ ಹಾಗೆ ಹಿಚಿಕಿ ಬಿಡುವೆನು. ಇಷ್ಟು ದಿವಸ ಅವನು ನಮ್ಮ ದರಕಾರ ಮಾಡುತ್ತಿದ್ದಿಲ್ಲ. * ಈಗ ನಮ್ಮ ಕೈಯಲ್ಲಿ ಸಿಕ್ಕನು. ಅವನನ್ನು ನಿನ್ನ ಸಂಗಡ ಕರೆಕೊಂಡು ಏಕೆ ಬರಲಿಲ್ಲ?

ಕೃ.—ಖಾವಂದ, ನಾನು ತಮಗೆ ಕಾರಣವನ್ನು ಹೇಳಿದೆನಲ್ಲ.

ಅ.—ಅದೇನು? ನನಗೆ ಗೊತ್ತಾಗಲಿಲ್ಲ.

ಕೃ.—ನಾನು ಅವನನ್ನು ತರಲಿಕ್ಕೆ ವಿಶ್ವಪ್ರಯತ್ನಮಾಡಿದೆನು. ಅವನು ಅಂಜಿ ನೆಲಹಿಡಿದಿದ್ದಾನೆ. ತನ್ನಿಂದ ಮರ್‍ಯೋ ಆಗುವುದಿಲ್ಲೆಂದು ಗೋಳಿಟ್ಟನು. ಆದ್ದರಿಂದ ಅವನ ಅರಿಕೆಯನ್ನು ತಿಳಿಸಲಿಕ್ಕೆ ಅವನ ವಕೀಲನನ್ನು ಕರೆದುಕೊಂಡು ಬಂದಿದ್ದೇನೆ. ಬೇಕಾದರೆ ಅವನನ್ನು ಕರೆಯಿಸಿ ಕೇಳಬಹುದು.

---

* ನಮಗೆ ಮಾನ ಕೊಡುತ್ತಿದ್ದಿಲ್ಲ ಅಥವಾ ಹೆದರುತ್ತಿದ್ದಿಲ್ಲ.

ಅ.—ಕೋನ ಹೈ (ಯಾರಿದ್ದೀರಿ)? (ಒಬ್ಬ ಆಳು ಬಂದು ಮುಜುರೆ ಮಾಡಿ ನಿಲ್ಲುತ್ತಾನೆ.) ಆ ಕಾಫರ ಸಿವಾಜಿಯ ವತಿಯಿಂದ ಬಂದ ವಕೀಲ ನನ್ನು ಕರೆ. (ಗೋಪೀನಾಥ ಪಂತನು ಬಂದು ತಕ್ಕರೀತಿಯಿಂದ ಪೊಡ ಮಟ್ಟಿ ಕೃಷ್ಣಾಜಿಯು ತೋರಿಸಿದ ಎಡೆಯಲ್ಲಿ ಕೂಡ್ರುತ್ತಾನೆ.) ತಮ್ಮ ಯಜಮಾನನು ನಮ್ಮ ಬೆಟ್ಟಿಗೆ ಬರಲಿಲ್ಲವೇಕೆ?

ಗೋಪೀನಾಥಪಂತ–ಸರಕಾರ, ನಮ್ಮ ಒಡೆಯರ ಮನಸ್ಸಿನಲ್ಲಿ ತಮ್ಮ ಮಹಾನುಭಾವರ ದರ್ಶನ ತೆಗೆದುಕೊಳ್ಳಬೇಕೆಂಬ ಕುತೂಹಲವು ತುಂಬಿರುತ್ತದೆ ಆದರೆ ಅವರಿಗೆ ಇಲ್ಲಿ ಬರಲಿಕ್ಕೆ ಎದೆಯಾಗಲೊಲ್ಲದು. ನಾವೆಲ್ಲರು ಅವರಿಗೆ ಬೇಕಾದಷ್ಟು ಧೈರ್ಯ ಹೇಳಿದೆವು. ತಾವು ಕೃಷ್ಣಾಜಿ ಪಂತರನ್ನು ಕೇಳಬಹುದು. ಎಷ್ಟು ಹೇಳಿದರೂ ಅವರು ಎದೆಗೊಳ್ಳಲಿಲ್ಲ. ಇಲ್ಲಿಗೆ ಬರಲಿಕ್ಕೆ ಅವರು ಬಹಳ ಹೆದರುತ್ತಾರೆ. ಏನು ಕಾರಣವೋ ದೇವರೇ ಬಲ್ಲ.

ಅ.—ಹೆದರಲಿಕ್ಕೆ ಹೆಂಗಸೇನು? ಕಯ್ಯಲ್ಲಿ ಬಳೆ ಇಟ್ಟುಕೊಂಡಿರು ತ್ತಾನೆಯೇ? ಕೃಷ್ಣಾಜಿ, ಇವನು ಹೇಳುವುದು ನಿಜವೋ?

ಕೃ.—ಅಕ್ಷರಶಃ ನಿಜವಾಗಿರುತ್ತದೆ. ಇವರೆಲ್ಲರು ಸಿವಾಜಿಗೆ ಧೈರ್ಯ ಕೊಟ್ಟರು. ಹೋಗಲಾರೆನೆಂದು ಖಂಡಿತವಾಗಿ ಹೇಳಿದನು.

ಅ.—ಸಿವಾಜಿಯು ಶೂರನಿರಬಹುದೆಂದು ಮಾಡಿದ್ದೆವು. ಅವನು ತೀರ ಹೇಡಿ ಎಂದು ಈಗ ತಿಳಿದು ಬರುತ್ತದೆ. ಅವನು ನಮ್ಮ ದರ್ಶನಕ್ಕೆ ಬರದಿದ್ದರೆ, ನಾವೇ ದಂಡೆತ್ತಿ ಹೋಗಿ ಅವನನ್ನು ಸೆರೆಹಿಡಿಯಬೇಕೇ? ನಮ್ಮ ಸ್ನೇಹಿತನ ಮಗನೆಂಬ ಕಕ್ಕುಲತೆಯಿಂದ ನಾವು ಅವನಿಗೆ ಬರ ಹೇಳಿದೆವು. ಅದಕ್ಕವನು ಕಿವಿಗೊಡಲಿಲ್ಲ. ತನ್ನ ಉದ್ಧುರಟುತನದ ಫಲ ವನ್ನು ಅನುಭೋಗಿಸಲಿ.

ಗೋ.—ಸರಕಾರ, ತಮ್ಮ ಅಪ್ಪಣೆಯನ್ನು ಮೀರಬೇಕೆಂದು ನಮ್ಮ ಮಹಾರಾಜರ ಮನಸ್ಸಿನಲ್ಲಿ ಲವಲೇಶವಾದರೂ ಇಲ್ಲ. ತಾವು ನಿಷ್ಕಾರಣ ವಾಗಿ ಸಿಟ್ಟಾಗಬಾರದೆಂದು ಕಯ್ಜೋಡಿಸಿ ಬೇಡಿಕೊಳ್ಳುತ್ತೇನೆ. ಇಲ್ಲಿಗೆ ಬರಲಿಕ್ಕೆ ಹೆದರಿಕೆಯುಂಟಾದ್ದರಿಂದ ಅಲ್ಲಿಗೆ ತಮ್ಮನ್ನು ಕರೆದರೇ ಹೊರತು

ಬೇರೆ ಏನೂ ಕಾರಣವಿಲ್ಲ. ಅವರ ವಿಷಯವಾಗಿ ತಮ್ಮ ಕಕ್ಕುಲತೆಯು ದಿಟವಾಗಿದ್ದರೆ, ತಾವು ಅಲ್ಲಿ ಬರಲಿಕ್ಕೆ ಅಡ್ಡಿ ಏನು?

ಅ.—ಸಿವಾಜಿಯು ನಮ್ಮ ಕೈಕೆಳಗಿನವನು. ನಾವಿದ್ದಲ್ಲಿ ಅವನು ಬರಬೇಕೋ ಅವನಿದ್ದಲ್ಲಿ ನಾವು ಹೋಗಬೇಕೋ? ಕೃಷ್ಣಾಜಿ, ನಾವು ಅಲ್ಲಿಗೆ ಹೋಗುವುದು ಅಪಮಾನಕರವಲ್ಲವೇ?

ಕೃ.—ತಮ್ಮ ಅಂಬೋಣವು ಸರಿಯಾದ್ದೆಂದು ಎಲ್ಲರು ಒಪ್ಪಿಕೊಳ್ಳುವರು. ತಾವು ಯಜಮಾನರು, ಸಿವಾಜಿಯು ಸೇವಕನು. ತಾನೇ ಇಲ್ಲಿಗೆ ಬರುವುದು ಉಚಿತವೆಂದು ಸಿವಾಜಿಯಾದರೂ ಒಡಂಬಡುತ್ತಾನೆ. ಹೆದರಿಕೆಯ ಮೂಲಕ ತನಗೆ ಬರಲಿಕ್ಕೆ ಆಗುವುದಿಲ್ಲಾದ್ದರಿಂದ ತಾವೇ ಅಲ್ಲಿಗೆ ಬರಬೇಕೆಂದು ಪ್ರಾರ್ಥಿಸುತ್ತಾನೆ. ತಾವು ಶಹಾಜಿ ಮಹಾರಾಜರ ಪರಮ ಮಿತ್ರರಾದ್ದರಿಂದ ಸಿವಾಜಿಯ ಬಳಿಗೆ ಹೋಗುವುದು ಅಪಮಾನಕರವೆಂದು ತೋರುವುದಿಲ್ಲ. ತಾವು ವಿಜಾಪುರಬಿಟ್ಟು ಇಲ್ಲಿಯ ವರೆಗೆ ಅವನಿಗೋಸ್ಕರ ಬಂದಿಲ್ಲವೇ? ಮುಂದೆ ಪ್ರತಾಪಗಡದವರೆಗೆ ಹೋಗುವುದು ಅವಮಾನವೇಕೆ? ಎಳೆಗಂದಿಯು ಕರುವನ್ನು ಅರಿಸಿಕೊಂಡು ಬರುವುದೇ ಹೊರತು ಕರುವು ಎಳೆಗಂದಿಯನ್ನು ಹುಡುಕುತ್ತ ಹೋಗುವುದಿಲ್ಲ.

ಅ.—ನಾವು ಬರಬೇಕಾದರೆ ದಂಡಿನೊಡನೆ ಬರುವೆವು. ದಂಡು ಬರಲಿಕ್ಕೆ ಈ ಗುಡ್ಡಗಾಡಿನಲ್ಲಿ ಹಾದಿ ಎಲ್ಲಿದೆ?

ಗೋ.—ಸಿವಾಜಿಯು ತಮಗೆ ಬೇಕಾದ ಅನುಕೂಲತೆಗಳನ್ನು ಮಾಡಿಕೊಡಲಿಕ್ಕೆ ಸಿದ್ಧನಾಗಿದ್ದಾನೆ. ತಮಗೆ ಬರಲಿಕ್ಕೆ ಎಳ್ಳಷ್ಟಾದರು ತೊಂದರೆ ಆಗಗೊಡುವುದಿಲ್ಲ. ತಾವು ಹೇಳಿದ ಏರ್ಪಾಡುಗಳನ್ನೆಲ್ಲ ನನ್ನ ಯಜಮಾನರಿಂದ ಮಾಡಿಸುವೆನು. ತಾವು ಏನೂ ಚಿಂತೆಮಾಡಕೂಡದು.

ಕೃ.—(ಕಿವಿಯಲ್ಲಿ) ಪ್ರತಾಪಗಡದವರೆಗೆ ಅನ್ನಸಾಮುಗ್ರಿಯನ್ನು ಪೂರೈಸಬೇಕೆಂದು ಹೇಳಿರಿ. ಅನಾಯಾಸವಾಗಿ ಅಲ್ಲಿಯ ವರೆಗೆ ತಮಗೆ ಹೋಗಲಿಕ್ಕೆ ಅನುಕೂಲವಾಯಿತು. ಸಿವಾಜಿಯು ಶರಣು ಬಂದು ತಾವು ಹೇಳಿದ್ದಕ್ಕೆ ಒಡಂಬಟ್ಟರೆ ತಮ್ಮ ಬಯಕೆಯು ಪೂರೈಸಿತು. ಇಲ್ಲವಾದರೆ

ಕೋಟೆಯನ್ನು ಕಯ್ವಶಮಾಡಿಕೊಂಡು ಅವನನ್ನು ಸೆರೆಯಾಳಾಗಿ ಹಿಡಿದು ಕೊಂಡು ಹೋಗಬಹುದು. ಅಲ್ಲಿಗೆ ಹೋಗುವುದರಿಂದ ನಮಗೆ ಎರಡೂ ರೀತಿಯಿಂದ ಲಾಭವೇ ಹೊರತು ನಷ್ಟವಿಲ್ಲ.

ಅ.—ಒಳ್ಳೆಯದು. ಸಿವಾಜಿಯು ನಮ್ಮ ಅತ್ಯಂತ ಸ್ನೇಹಿತನ ಮಗ ನಾದ್ದರಿಂದಲೂ ಇಲ್ಲಿಗೆ ಬರಲಿಕ್ಕೆ ಹೆದರುತ್ತಿರುವುದರಿಂದಲೂ ನಾವೇ ಅಲ್ಲಿಗೆ ಬರುವೆವು. ದಂಡಿಗೆ ಬರಲಿಕ್ಕೆ ಹಾದಿಮಾಡಿಸಲಿಕ್ಕೂ ಅನ್ನ ಸಾಮಗ್ರಿಯನ್ನು ಒದಗಿಸಿ ಕೊಡಲಿಕ್ಕೂ ಸಿವಾಜಿಗೆ ತಿಳಿಸಿರಿ. ನೀವು ತಿರುಗಿ ಹೋಗಬಹುದು. ನೀವು ಬಂದ ಕೆಲಸವಾಯಿತು.

ಗೋಪೀನಾಥಪಂತನು ಏಕಾಂತದಲ್ಲಿ ಕೃಷ್ಣಾಜಿಯನ್ನು ಕಂಡು, ಅವನ ಸಲಹೆಗಳನ್ನು ಕೇಳಿಕೊಂಡು, ಪ್ರತಾಪಗಡಕ್ಕೆ ತಿರುಗಿ ಹೋಗಿ, ತನ್ನ ಒಡೆಯನಿಗೆ ನಡೆದ ಎಲ್ಲ ಮಾತುಗಳನ್ನು ವಿವರವಾಗಿ ಹೇಳಿದನು. ಶ್ರೀ ಭವಾನಿಯ ಕೃಪೆಯಿಂದ ತನ್ನ ಇಷ್ಟಾರ್ಥವು ಕಯ್ಗೂಡಿತೆಂದು ಹಿಗ್ಗಿ, ಅವನು ವಾಯಿಯಿಂದ ಜಾವಳಿ ವರೆಗೆ ಗಿಡಗಳನ್ನು ಕಡಿದು ದಂಡಿಗೆ ಬರ ಲಿಕ್ಕೆ ಹಾದಿಮಾಡಿಕೊಡಬೇಕೆಂತಲೂ ಕಡಿದ ಗಿಡಗಳಿಂದ ಅಡ್ಡದಾರಿ ಗಳನ್ನು ಮುಚ್ಚಿಬಿಡಬೇಕೆಂತಲೂ **ಪಾರ** ಎಂಬ ಹಳ್ಳಿಯ ಹತ್ತರ ಪಾಳಯ ಹಾಕಲಿಕ್ಕೆ ಒಂದು ವಿಸ್ತಾರವಾದ ಬೈಲನ್ನು ಮಾಡಬೇಕೆಂತಲೂ ಹುಕು ಮುಮಾಡಿ, ನೇತಾಜಿಪಾಲಕರನಿಗೆ ದಂಡಿನೊಡನೆ ಬೇಗನೆ ಕೊಂಕಣ ದಿಂದ ಬರಲಿಕ್ಕೆ ಅಪ್ಪಣೆ ಕಳುಹಿದನು. ದಂಡಿಗೆ ಸಾಮಾನುಗಳನ್ನು ಪೂರೈಸಲಿಕ್ಕೆ ಹಾದಿಗುಂಟ (ಹಾದಿಯುದ್ದ) ಅಲ್ಲಲ್ಲಿ ಕಾರಕೂನರನ್ನು ನಿಯ ಮಿಸಿದನು. ಮೋರೋಪಂತ ಪೇಶ್ವೆಯನಿಗೆ ಪಾರದ ಹತ್ತರಿದ್ದ ಅಡವಿ ಯೊಳಗೆ ದಂಡಿನೊಡನೆ ಅಡಗಿಕೊಂಡು ನಿಲ್ಲಲಿಕ್ಕೆ ಹೇಳಿ, ಅವನ ಸಾಹಾ ಯಕ್ಕೆ ತ್ರಿಯಂಬಕ ಭಾಸ್ಕರನನ್ನು ಕೊಟ್ಟನು. ನೇತಾಜಿಪಾಲಕರನನ್ನು ದಂಡಿನೊಡನೆ ಪ್ರತಾಪಗಡದ ಮೂಡಲಿಗಿದ್ದ ಕಾಡಿನಲ್ಲಿರಿಸಿ, ಅವನಿಗೆ ಬೆಂಬಲವಾಗಿ ರಘುನಾಥ ಬಲ್ಲಾಳನನ್ನು ನೇಮಿಸಿ, ಖಾನನ ದಂಡು ಪ್ರತಾಪ ಗಡದ ಮೇಲೆ ಏರಿಬರದಂತೆ ನೋಡಲಿಕ್ಕೆ ಕಟ್ಟಪ್ಪಣೆಯನಿತ್ತನು. ಕಾಳಿಯು ಊದಿದ ಕೂಡಲೆ ನೇತಾಜಿಯು ದಂಡಿನೊಡನೆ ಹೊರಬಿದ್ದು ಪ್ರತಾಪ

ಗಡದ ಮೇಲೆ ಏರಿ ಬರುವ ಹಗೆಗಳ ಮೇಲೆ ಬೀಳಬೇಕೆಂತಲೂ ೫ ತೋಫು ಹಾರಿದ ಕೂಡಲೆ ಮೋರೋಪಂತನು ಪಾರದಲ್ಲಿದ್ದ ಖಾನನ ದಂಡಿನ ಮೇಲೆ ಸಾಗಿ ಹೋಗಬೇಕೆಂತಲೂ ಕಟ್ಟಪ್ಪಣೆಯನ್ನು ಮಾಡಿದನು. ಈ ಎಲ್ಲ ಸಿದ್ಧತೆಯು ಆದ ಬಳಿಕ ಖಾನನಿಗೆ ದಂಡಿನೊಡನೆ ಬರಲಿಕ್ಕೆ ಹೇಳಿ ಕಳುಹಿದನು.

ಈ ಕಾಲಕ್ಕೆ ಅಫಜುಲ್ಖಾನ, ಸಿವಾಜಿ, ಇವರಿಬ್ಬರೂ ತಂತಮ್ಮ ಬಯಕೆಗಳು ಕೂಡಲೆ ಕಯ್ಗೂಡುವವೆಂದು ಹಿಡಿಯಲಾರದಷ್ಟು ಹಿಗ್ಗಿದ್ದರು. ಪ್ರತಿಯೊಬ್ಬನು ಎರಡನೆಯವನನ್ನು ಕೊಂದು ಜಯಭೇರಿಯನ್ನು ಹೊಡಿಸುವೆನೆಂದು ನಿಶ್ಚಯವಾಗಿ ನಂಬಿದ್ದನು. ಸಿವಾಜಿಯು ತನ್ನ ಹತ್ತರ ಬಂದರೆ ಸಾಕು, ಅವನನ್ನು ಹಿಡಿದುಹಿಚಿಕಿ ಹಿಪ್ಪಿಮಾಡಿ, ಅವನ ಗೋಣನ್ನು ಮುರಿದುಬಿಡುವೆನೆಂದು ಅಫಜುಲ್ಖಾನನು ಮನಸ್ಸಿನಲ್ಲಿ ಮಂಡಿಗೆ ಮಾಡಿದ್ದನು. ಶ್ರೀ ಭವಾನಿಯ ಕೃಪೆಯಿಂದ, ನಾರಸಿಂಹನು ಹಿರಣ್ಯಕಶ್ಯಪುವಿನ ಕರಳು ಬಗೆದಂತೆ, ತಾನು ಯುಕ್ತಿಯಿಂದ ಖಾನನ ಕರಳು ಬಗೆದು, ಭೂಭಾರವನ್ನು ಇಳಿಸುವೆನೆಂದು ಸಿವಾಜಿಯು ನೆರೆನಂಬಿದ್ದನು. ಇಬ್ಬರೂ ಎದೆಗಾರರೂ ಗಟ್ಟಿಗರೂ ಮೋಸಗಾರರೂ ಆಗಿದ್ದರು. ಖಾನನಿಗೆ ದೇಹಬಲವೂ ದಂಡಿನ ಬಲವೂ ಹೆಚ್ಚಾಗಿದ್ದವು. ನಮ್ಮ ಚರಿತ್ರನಾಯಕನಿಗೆ ದೈವಬಲವೂ ಬುದ್ಧಿಬಲವೂ ಮೇಲಾಗಿದ್ದವು. ಆದಕಾರಣ ಸಿವಾಜಿಯು ಖಾನನನ್ನು ಅವನ ದಂಡಿನಿಂದ ಅಗಲಿಸಿ, ತನ್ನ ಯುಕ್ತಿ ಬಲದಿಂದಲೂ ದೇವತಾನುಗ್ರಹದಿಂದಲೂ ಖಾನನ ಕಾಯಶಕ್ತಿಯನ್ನು ಮುರಿಬಡಿಯಬೇಕೆಂದು ಮನಸ್ಸಿನಲ್ಲಿ ನಿಶ್ಚಯಿಸಿ, ಆದಕ್ಕೆ ಬೇಕಾದ ಹಂಚಿಕೆಗಳನ್ನು ಮಾಡುವುದರಲ್ಲಿ ನಿಮಗ್ನನಾಗಿದ್ದನು.

ಈ ಮೊದಲೇ ಗೊತ್ತಾದಂತೆ ಖಾನನು ತನ್ನ ದಂಡಿನೊಡನೆ ವಾಯಿಯಿಂದ ಹೊರಟು ರಡತೋಂಡಿ ಗಟ್ಟವನ್ನಿಳಿದು, ಪ್ರತಾಪಗಡದ ತೆಂಕಲಿಗೆ ೧ ಮೈಲಿನ ಮೇಲೆ ಕೊಯಿನಾ ಹೊಳೆಯ ಉಗಮದ ಹತ್ತರ ಇದ್ದ ಪಾರ ಎಂಬ ಹಳ್ಳಿಯಲ್ಲಿ ಪಾಳಯಹಾಕಿ, ತಾನು ಬಂದೆನೆಂದು ತಿಳಿಸಲಿಕ್ಕೆ ಗೋಪೀನಾಥನನ್ನು ಸಿವಾಜಿಯ ಬಳಿಗೆ ಕಳುಹಿದನು. ವಾಯಿಯಿಂದ

ಪಾರದ ವರೆಗೆ ತನ್ನ ಪ್ರಯಾಣವು ಸುಖಕರವಾದ್ದರಿಂದ ಸಿವಾಜಿಯ ಬಗೆ
ಯಲ್ಲಿ ಕೊಂಕು ಇಲ್ಲೆಂದು ಖಾನನಿಗೆ ಮನವರಿಕೆಯಾಯಿತು.

ಅತ್ತ ಸಿವಾಜಿಯು ಪ್ರತಾಪಗಡ ಕೊಯಿನಾ ಹೊಳೆ ಇವುಗಳ ನಡು
ವಿದ್ದ ಒಂದು ದಿನ್ನಿಯ ಮೇಲೆ ದೊಡ್ಡ ಮಂಟಪವನ್ನು ಹಾಕಿಸಿ, ಅದರಲ್ಲಿ
ಗುಡಾರ ಜಮುಖಾನೆ ತಿವಾಸಿಗೆಗಳನ್ನು ಹಾಸಿಸಿ, ತಳಿರುತೋರಣಗಳನ್ನು
ಕಟ್ಟಿಸಿ, ಕುತ್ತನಿಯ ಗಾದೆಗಳನ್ನೂ ಕಿನಕಾಪಿನ ತಕ್ಕೆಗಳನ್ನೂ ಇಡಿಸಿ,
ಖಾನನು ಕೂಡ್ರುವ ಎಡೆಯಲ್ಲಿ ಮುತ್ತಿನ ಜಾಲರವನ್ನು ಕಟ್ಟಿಸಿ ಸಿಂಗರಿ
ಸಿದ್ದನು. ಮರುದಿವಸ ಹಗಲು ೩ ಗಂಟೆಯ ಸುಮಾರಕ್ಕೆ ಅವರಿಬ್ಬರ
ಬೆಟ್ಟಿಯಾಗಬೇಕೆಂದು ಗೊತ್ತಾಗಿತ್ತು. ಸಿವಾಜಿಯನ್ನು ಆದಷ್ಟು ಬೇಗನೆ
ಕೊಲ್ಲಬೇಕೆಂದು ಅತ್ಯುತ್ಸುಕನಾದ ಖಾನನು ಒಂದು ಗಂಟೆಗೇ ಪಲ್ಲಕ್ಕಿ
ಯಲ್ಲಿ ಕುಳಿತು, ೧೫೦೦ ತುಬಾಕಿಯುವರೊಡನೆ ಮಂಟಪಕ್ಕೆ ಹೋಗಲು
ಸಿದ್ಧನಾದನು. ಅದನ್ನು ಕಂಡು ಕೃಷ್ಣಾಜಿಪಂತನು "ಖುದಾವಂದ, ತಾವು
ಇಷ್ಟು ಜನರೊಡನೆ ಹೋದರೆ ಸಿವಾಜಿಯು ಹೆದರಿ ಬರಲಿಕ್ಕಿಲ್ಲ. ಇಷ್ಟ
ದಿವಸ ಬಳಲಿದ್ದೆಲ್ಲ ವ್ಯರ್ಥವಾಗಿ ಹೋಗಬಹುದು" ಎಂದು ಸವಿನಯ
ದಿಂದ ಹೇಳಲು, ಖಾನನು ಎಚ್ಚರಗೊಂಡು ತುಪಾಕಿಯವರನ್ನು ಹಿಂದಕ್ಕೆ
ಕಳುಹಿ, ಇಬ್ಬರು ಗಟ್ಟಿಗರಾದ ಆಳುಗಳನ್ನೂ ಕತ್ತಿಯುವನೆಂದು ಹೆಸರಾದ
**ಸಯ್ಯದ ಬಂದ**ನನ್ನೂ ಕೃಷ್ಣಾಜಿ ಗೋಪೀನಾಥರನ್ನೂ ಸಂಗಡ ಕರೆ
ಕೊಂಡು ಸಭಾಮಂಟಪಕ್ಕೆ ಹೋದನು; ಆ ಮಂಟಪದ ಐಶ್ವರ್ಯವನ್ನು
ನೋಡಿ ಬೆರಗಾಗಿ, ಸಿಟ್ಟಿನಿಂದ "ಜಹಗೀರದಾರನ ಮಗನು ಇಷ್ಟು ಬೆಲಿ
ಯುಳ್ಳ ಮಂಟಪವನ್ನು ಹಾಕಿಸಿ ತನ್ನ ಸಂಪತ್ತಿಯನ್ನು ಮೆರೆಯಿಸಬಹು
ದೇ ?" ಎಂದು ಗರ್ಜಿಸಿದನು. ಅದಕ್ಕೆ ಕೃಷ್ಣಾಜಿಯು "ಮಹಾಸ್ವಾಮಿ,
ಇದು ಸಿವಾಜಿಯ ಸಂಪತ್ತಿನ ಮೆರೆವಣಿಕೆಯಲ್ಲ. ಅದಿಲಶಹನ ಪ್ರತಿನಿಧಿ
ಗಳಾದ ತಮಗೆ ಅರ್ಪಿಸಿದ ಕಾಣಿಕೆ. ತಮಗೆ ಶರಣು ಬಂದ ಬಳಿಕ ಇವೆಲ್ಲ
ವಿಜಾಪುರದ ಅರಮನೆಗೆ ಹೋಗುವ ಒಡವೆಗಳೇ ಸರಿ." ಎಂದು ಹೇಳಿ
ದನು. ಈ ಯುಕ್ತಿಯ ಮಾತನ್ನು ಕೇಳಿ ಸಂತುಷ್ಟನಾಗಿ ಖಾನನು ಸಿವಾಜಿ
ಯನ್ನು ಬೇಗನೆ ಕರೆತರಲಿಕ್ಕೆ ಗೋಪೀನಾಥನನ್ನು ಕಳುಹಿದನು.

ಇತ್ತ ಸಿವಾಜಿಯು ಚಿಲಕತನ್ನು ಹಾಕಿಕೊಂಡು ಅದರ ಮೇಲೆ ಉದ್ದಂಗಿಯನ್ನು ತೊಟ್ಟುಕೊಂಡನು; ತಲೆಗೆ ತಂತಿಯ ಟೊಪ್ಪಿಗೆಯನ್ನು ಹಾಕಿಕೊಂಡು, ಅದರಮೇಲೆ ಪಟಕೆಯನ್ನು ಸುತ್ತಿಕೊಂಡನು; ಎಡಗೈ ಬೆರಳಿಗೆ ವ್ಯಾಘ್ರನಖ (ಹುಲಿಯುಗರು) ಎಂಬುದನ್ನು ಏರಿಸಿಕೊಂಡು, ಬಲಮುಂಗೈಯಲ್ಲಿ **ಬಿಚವೆ** ಎಂಬ ಕಠಾರಿಯನ್ನು ಬಚ್ಚಿಟ್ಟುಕೊಂಡನು. ಈ ಮೇರೆಗೆ ಸನ್ನದ್ಧನಾಗಿ ಏಸಾಜಿಕಂಕ ತಾನಾಜಿ ಮಾಲುಸರೆ ಮುಂತಾದ ಗೆಳೆಯರೊಡನೆ ಹೊರಟು, ತನ್ನ ತಾಯಿಗೆ ಪೊಡಮಡಿದು ಆಕೆಯ ಹರಕೆಯನ್ನು ಹೊಂದಿ, ಸಭಾಮಂಟಪದ ದಾರಿಯನ್ನು ಹಿಡಿದನು. ಕೃಷ್ಣಾಜಿಯು ಅವನು ಅಂಜಂಜುತ್ತ ಬರುವುದನ್ನು ಖಾನನಿಗೆ ತೋರಿಸಿ, "ಖುದಾವಂದ, ಸಿವಾಜಿಯು ಹೇಗೆ ಹೆದರುತ್ತ ಬರುತ್ತಾನೆ, ನೋಡಿರಿ" ಎಂದು ಅರಿಕೆಮಾಡಲು, ಖಾನನು ಸಂತೋಷದಿಂದ ಉಬ್ಬಿದನು. ತನ್ನ ಉಳಿದ ಸಂಗಡಿಗರನ್ನು ಹೊರಗೆ ಬಿಟ್ಟು, ಕತ್ತಿಯನ್ನು ತಿರುವುದರಲ್ಲಿ ಅತಿ ಜಾಣನಾದ ಜೀವಮಹಲ, ಶಂಭೂಜಿ ಕಾವಜಿ ಎಂಬ ಶೂರಸಿಪಾಯಿರಿಬ್ಬರ ಜತೆಯಲ್ಲಿ ಮಂಟಪವನ್ನು ಸೇರಿದನು. ಖಾನನ ಬಳಿಯಲ್ಲಿ ಇಬ್ಬರು ಆಳಿನ ಹೊರತು ಸಯ್ಯದ ಬಂದನು ಇದ್ದುದನ್ನು ಕಂಡು ಸಿವಾಜಿಯು ಅಲ್ಲೇ ನಿಂತು, ಅವನನ್ನು ಹೊರಗೆ ಕಳುಹಬೇಕೆಂದು ಹೇಳಿ ಕಳುಹಿದನು. ಬೆಟ್ಟಗೆ ತವಕಿಸುತ್ತಿದ್ದ, ಖಾನನು ಕೂಡಲೆ ಅವನನ್ನು ಹೊರಗಟ್ಟಿದನು. ತರುವಾಯ ಸಿವಾಜಿಯು ಮುಂದರಿದು ತನ್ನ ಆಳುಗಳನ್ನು ಕೆಳಗಿರಿಸಿ, ಖಾನನು ಕುಳಿತ ಕಟ್ಟೆಯನ್ನೇರಿದನು. ಖಾನನು ಎದ್ದು ನಾಲ್ಕಯ್ದು ಹೆಜ್ಜೆ ಮುಂದಕ್ಕೆ ಬಂದು, ತನ್ನ ಎರಡೂ ಕಯ್ಯಿಂದ ಸಿವಾಜಿಯನ್ನು ಗಟ್ಟಿಯಾಗಿ ಎದೆಗೆ ಅವಚಿಕೊಂಡನು. ಉಸರು ಸಿಕ್ಕದ್ದರಿಂದ ಸಿವಾಜಿಯು ಒದರಿದನು. ಅಷ್ಟರಲ್ಲಿ ಖಾನನು ಎಡಗೈಯಿಂದ ಅವನ ರುಂಡವನ್ನು ಹಿಚಿಕಿ ಹಿಡಿದು, ಬಲಗೈಯಿಂದ ತನ್ನ ಸೊಂಟದಲ್ಲಿ ಜೋತಾಡುತ್ತಿದ್ದ ಕತ್ತಿಯನ್ನು ಒರೆಯಿಂದ ತೆಗೆದು, ಸಿವಾಜಿಯ ಮಗ್ಗಲಿಗೆ ಅದರಿಂದ ಗಟ್ಟಿಯಾಗಿ ಹೊಡೆದನು. ಒಳಗೆ ಚಿಲಕತ್ತು ಇದ್ದುದರಿಂದ ಸಿವಾಜಿಗೆ ನೋವಾಗಲಿಲ್ಲ. ಈ ಹೊಡತದಿಂದ ಅವನು ಎಚ್ಚರಪಟ್ಟು, ತನ್ನ ಎಡಗೈಯಲ್ಲಿದ್ದ ಹುಲಿಯುಗರನ್ನು ಖಾನನ ಕಿಪ್ಪೊಟ್ಟೆಯಲ್ಲಿ ಚುಚ್ಚಿ, ಬಲತೋಳಿನಲ್ಲಿದ್ದ ಕಠಾರಿಯನ್ನು ಅವನ

ಮುಗ್ಗಲಿಗೆ ತಿವಿದನು. ಖಾನನ ಕರಳು ಹೊರಬಿದ್ದುದರಿಂದ ಅವನು ನೆಲಕ್ಕೆ ಬಿದ್ದು "ಘಾತವಾಯಿತು, ನನ್ನನ್ನು ಕೊಲ್ಲುತ್ತಾರೆ, ಉಳಿಸಿಕೊಳ್ಳಿರಿ" ಎಂದು ಗಟ್ಟಿಯಾಗಿ ಕೂಗಿದನು. ಕೂಡಲೆ ಎರಡೂ ಕಡೆಯ ಜನರು ಒಳಗೆ ದುಮುಕಿದರು. ಇಡಿಮುಂಟಪದಲ್ಲೆಲ್ಲ ಗೊಂದಲವೆದ್ದಿತು. ಸಯ್ಯದ ಬಂದನು ಓಡಿ ಬಂದು ಸಿವಾಜಿಯ ತಲೆಯ ಮೇಲೆ ತನ್ನ ಕತ್ತಿಯನ್ನು ಕಸುವಿನಿಂದ ಅಪ್ಪಳಿಸಿದನು. ಆ ಹೊಡತದಿಂದ ಸಿವಾಜಿಯ ಶಿರಸ್ತ್ರಾಣವು ನೆಗ್ಗಿತೇ ಹೊರತು ಅವನಿಗೇನು ಅಪಾಯವಾಗಲಿಲ್ಲ. ಸಯ್ಯದ ಬಂದನು ಎರಡನೆಯ ಸಾರಿ ಹೊಡೆಯುವಷ್ಟರಲ್ಲಿ ಜೀವಮಹಲನು ಹಿಂದಿನಿಂದ ಬಂದು, ಬಂದನ ಬಲತೋಳನ್ನು ಕತ್ತರಿಸಿ ಚಲ್ಲಿದನು. ಈ ಗುದಮುರಿಗೆಯು ನಡೆದಾಗ ಕೆಲವರು ಖಾನನನ್ನು ಎತ್ತಿಕೊಂಡು ಹೋಗಿ ಪಲ್ಲಕ್ಕಿಯಲ್ಲಿರಿಸಿ, ಅವನನ್ನು ಒಯ್ಯಲಿಕ್ಕೆ ಎತ್ತುಗಡೆ ಮಾಡಿದರು. ಏಸಾಜಿಕಂಕ ತಾನಾಜಿ ಮಾಲುಸರೆ ಮುಂತಾದವರು ನಮ್ಮ ಚರಿತ್ರನಾಯಕನನ್ನು ಆ ಗದ್ದಲದಿಂದ ಹೊರಗೆ ತೆಗೆದು, ಸುರಕ್ಷಿತವಾಗಿ ಪ್ರತಾಪಗಡಕ್ಕೆ ಕರೆದುಕೊಂಡು ಹೋದರು. ಶಂಭೂಜಿ ಕಾವಜಿಯು ಕೆಲಜನರೊಡನೆ ಪಲ್ಲಕ್ಕಿಯನ್ನು ಬೆನ್ನಟ್ಟಿ ಹೋಗಿ, ಹೊತ್ತವರ ಕಾಲುಗಳನ್ನು ಕಡಿದುದರಿಂದ ಪಲ್ಲಕ್ಕಿಯು ಕೆಳಗೆ ಬಿತ್ತು. ಆಗ ಕಾವಜಿಯು ಖಾನನ ಕುತ್ತಿಗೆಯನ್ನು ಕೊಯ್ದು, ಅದನ್ನು ತನ್ನ ಒಲ್ಲಿಯಲ್ಲಿ ಸುತ್ತಿಕೊಂಡು, ಅದನ್ನು ಸಿವಾಜಿಗೆ ತೋರಿಸಬೇಕೆಂಬ ಲವಲವಿಕೆಯಿಂದ ಹಾರಿಯಾಡುತ್ತ ನಡೆದನು!!!

ಸಿವಾಜಿಯು ತನ್ನ ಸಂಗಡಿಗರೊಡನೆ ಸುರಕ್ಷಿತವಾಗಿ ಪ್ರತಾಪಗಡಕ್ಕೆ ಹೋಗಿ ಮುಟ್ಟಿದನು. ಕೂಡಲೆ ಕಾಳಿಯನ್ನು ಊದಿದರು; ೫ ತೋಫುಗಳನ್ನು ಹಾರಿಸಿದರು. ತತ್‌ಕ್ಷಣವೇ ನೇತಾಜಿ ಪಾಲಕರನು ತಾನು ಅಡಗಿದ್ದ ಎಡೆಯಿಂದ ದಂಡಿನೊಡನೆ ಹೊರಬಿದ್ದು, ಖಾನನ ಜತೆಯಲ್ಲಿ ಬಂದ ತುಬಾಕಿಯವರ ಮೇಲೆ ಬಿದ್ದು, ಸಿಕ್ಕವರನ್ನು ಕೊಂದು ಗಾಯಮಾಡಿ ಚದರಿಸಿ ಬಿಟ್ಟನು. ಅತ್ತ ಮೋರೋಪಂತನು ತೋಫಿನ ಸಪ್ಪಳವನ್ನು ಕೇಳಿದ ಕೂಡಲೆ ನಾಲ್ಕೂಕಡೆಯಿಂದ ಪಾರದಲ್ಲಿದ್ದ ಪಾಳಯದ ಮೇಲೆ ಬಿದ್ದು, ಎದುರಿಸಿದವರನ್ನು ಕೊಚ್ಚಿ, ಶಸ್ತ್ರವಿಟ್ಟು ಶರಣು ಬಂದವರನ್ನು ಕ್ಷಮಿಸಿ, ಎಲ್ಲ ದಂಡನ್ನು ಹಾಳುಮಾಡಿಬಿಟ್ಟನು. ಒಟ್ಟು ೩೦೦೦ ವಿಜಾ

ಪುರದ ದಂಡಾಳುಗಳು ಈ ಕಡಿದಾಟದಲ್ಲಿ ಸತ್ತರೆಂದು ರಾಜಾಪುರದಲ್ಲಿದ್ದ ಇಂಗ್ರೇಜಿ ವರ್ತಕರು ಬರೆದಿಟ್ಟಿದ್ದಾರೆ. ಈ ಹೊಡೆದಾಟದಲ್ಲಿ ಮರಾಟರಿಗೆ ಲೆಕ್ಕವಿಲ್ಲದಷ್ಟು ಸುಲಿಗೆಯು ದೊರೆಯಿತು. ಎಲ್ಲ ತೋಫಖಾನೆಯೂ, ಬಂಡಿಗಳೂ, ಯುದ್ಧಸಾಮಗ್ರಿಗಳೂ, ನಿಧಿಯೂ, ಡೇರೆಗಳೂ, ದನಗಳೂ, ಉಳಿದ ಹಲವು ತರದ ಸಾಮಾನುಗಳೂ ಮಾವಳರ ಕಯ್ಸೇರಿದವು. ೬೫ ಆನೆಗಳೂ, ४೦೦೦ ಕುದುರೆಗಳೂ, ೧೨೦೦ ಒಂಟೆಗಳೂ, ೨೦೦೦ ಹೊಸರಿವೆಗಳ ಗಂಟುಗಳೂ, ಹತ್ತುಲಕ್ಷ ರೂಪಾಯಿಗಳೂ ನಮ್ಮ ಚರಿತ್ರನಾಯಕನ ವಶಕ್ಕೆ ಬಂದವು. ಸಿಕ್ಕ ಸೆರೆಯಾಳುಗಳೊಳಗೆ ಒಬ್ಬ ಸರದಾರನೂ ಅಫಜುಲ್ಖಾನನ ಇಬ್ಬರು ಮಕ್ಕಳೂ ಭೋಸಲೆ ಲಂಬಾಜಿ ಘಾಟಗೆ ಝೂಝುರರಾವ ಎಂಬ ಇಬ್ಬರು ಮರಾಟೆ ಸರದಾರರೂ ಇದ್ದರು. ಖಾನನ ಹಿರಿಮಗನಾದ ಫಾಜಲ್ಖಾನನಿಂದಲೂ ಅವನ ಕುಟುಂಬದವರಿಂದಲೂ ಲಂಚ ತೆಗೆದುಕೊಂಡು ಖಂಡೋಜಿ ಖೋಪಡೆ (ಕಾಕಡೇ) ಎಂಬ ಸಿವಾಜಿಯ ಒಬ್ಬ ದಳವಾಯಿಯು ಅವರನ್ನು ಸುರಕ್ಷಿತವಾಗಿ ಒಯ್ದು ಕರಹಾಡಕ್ಕೆ ಮುಟ್ಟಿಸಿ ಬಂದುದರಿಂದ ಸಿವಾಜಿಯು ಸಿಟ್ಟಿಗೆದ್ದು, ಅವನನ್ನು ಗಲ್ಲಿಗೆ ಹಾಕಿಸಿದನು; ಸೆರೆಯಾಳಾಗಿ ಸಿಕ್ಕ ಹೆಂಗಸುಹುಡುಗರನ್ನೂ ಬ್ರಾಹ್ಮಣರನ್ನೂ ಅದಿಲಶಾಹಿಯ ದಂಡಿನಲ್ಲಿದ್ದ ಅಧಿಕಾರಿಗಳನ್ನೂ ಬಿಟ್ಟುಕೊಟ್ಟುದಲ್ಲದೆ, ಅವರ ಹಾದಿಯ ಖರ್ಚಿಗೆ ಸಾಕಾಗುವಷ್ಟು ಹಣವನ್ನು ಪ್ರತಿಯೊಬ್ಬನಿಗೆ ಕೊಡಿಸಿದನು!!! ಅವರು ನಮ್ಮ ಚರಿತ್ರನಾಯಕನ ಉದಾರತನವನ್ನು ಹೋದ ಹೋದಲ್ಲಿ ಹೊಗಳಿದರು. ಜೀವದ ಹಂಗುದೊರೆದು ಕಾದಿದ ತನ್ನ ದಂಡಿನವರಿಗೆ ಸಿವಾಜಿಯು ದೊಡ್ಡದೊಡ್ಡ ಇನಾಮುಗಳನ್ನು ಕೊಟ್ಟುದಲ್ಲದೆ, ಕಾಳಗದಲ್ಲಿ ಮಡಿದವರ ಹೆಂಡರು ಮಕ್ಕಳಿಗೆ ಕೆಲಸವನ್ನೂ ಜೀವನಾಂಶವನ್ನೂ ಕೊಟ್ಟು, ಗಾಯಹೊಂದಿದ ಪ್ರತಿಯೊಬ್ಬನಿಗೆ ೨೫ ರಿಂದ ೨೦೦ ರವರೆಗೆ ಹೊನ್ನುಗಳನ್ನು ಉಚಿತವಾಗಿ ಕೊಟ್ಟನು. ತನ್ನ ಮುಖ್ಯ ಮುಖ್ಯ ಸರದಾರರಿಗೆ ಉಂಬಳಿ ಊರುಗಳನ್ನೂ ಆನೆ ಕುದುರೆ ತೊಡಿಗೆಗಳನ್ನೂ ಬೆಲೆಯುಳ್ಳ ಒಡವೆಗಳನ್ನೂ ಪಾರಿತೋಷಿಕವಾಗಿ ಕೊಟ್ಟು, ಎಲ್ಲರನ್ನೂ ಸಂತೋಷಗೊಳಿಸಿದನು.

ಅಫಜುಲ್ಖಾನನ ಕೊಲೆಯಿಂದಲೂ ಬಳಿಕ ನಡೆದ ವಿಷಮಯುದ್ಧದ ಸುಲಿಗೆಯಲ್ಲಿ ದೊರೆದ ಅಪಾರಸುಲಿಗೆಯಿಂದಲೂ ಸಿವಾಜಿಯ ರಾಜ್ಯ ದಲ್ಲೆಲ್ಲ ಉತ್ಸಾಹವು ಹಬ್ಬಿತು. ಜನರ ಮೋರೆಯ ಮೇಲೆ ಕಳೆ ಏರಿತು. ಜನರಲ್ಲಿ ತಮ್ಮ ಅರಸನ ವಿಷಯವಾಗಿ ಅಭಿಮಾನವು ಹೆಚ್ಚಿತು. ಕೆಲವರು ದಾಂಡಿಗನಾದ ಖಾನನನ್ನು ಪುಡಿಯಾಳಾದ ಸಿವಾಜಿಯು ಹೇಗೆ ಕೊಂದ ನೆಂದು ಅಚ್ಚರಿಗೊಂಡರು. ಭಾವಿಕರಾದ ಕೆಲವರು ಶ್ರೀಭವಾನಿಯ ಒಲ್ಮೆ ಯಿಂದ ಅವನಿಗೆ ಆಕಾಲಕ್ಕೆ ಹೆಚ್ಚು ಸಾಮರ್ಥ್ಯವು ಬಂತೆಂದು ಆ ಜಗ ದಂಬೆಯನ್ನು ಪರಿಪರಿಯಾಗಿ ಹೊಗಳಿದರು. ಕೆಲವರು ಸಿವಾಜಿಯ ಮುಂಜಾಗ್ರತೆಯನ್ನೂ ಜಾಣ್ಮೆಯನ್ನೂ ಅದ್ಭುತಶಕ್ತಿಯನ್ನೂ ಕೊಂಡಾಡಿ ದರು. ಶ್ರೀಭವಾನಿಯ ಮೂರ್ತಿಯನ್ನು ಒಡೆದುದರಿಂದ ಖಾನನು ಮಡಿ ದನೆಂದು ಕೆಲವರು ತರ್ಕಿಸಿದರು. ಖಾನನು ಮೋಸವನ್ನು ಬಗೆದುದರಿಂದ ಹತನಾದನೆಂದು ಕೆಲವರು ಊಹಿಸಿದರು. ಖಾನನು ನಿಷ್ಕಪಟಿಯಾದುದ ರಿಂದ ಸಿವಾಜಿಯು ಮೋಸಮಾಡಿ ಅವನನ್ನು ಕೊಂದನೆಂದು ಮುಸಲ್ಮಾ ನರು ಜಾತ್ಯಭಿಮಾನದಿಂದ ನಿಶ್ಚಯಿಸಿದರು.

ಮರಾಟರ ಇತಿಹಾಸವನ್ನು ಬರೆದ ಗ್ರಾಂಟ ಡಫನೆಂಬ ಗೃಹಸ್ಥನು ಒಂದು ತರದ ಉಗ್ರಸ್ವರೂಪದ ಕಾಮಣಿ ಬೇನೆಗೆ ಒಳಗಾಗಿದ್ದನೆಂದು ತಿಳಿಸ ಲಿಕ್ಕೆ ತುಂಬಾ ವಿಷಾದಿಸುತ್ತೇವೆ. ಈ ಇತಿಹಾಸಕಾರನು ಸರಳಹೃದಯ ನಾದ ಅಫಜುಲ್ಖಾನನನ್ನು ಸಿವಾಜಿಯು ಮೋಸಮಾಡಿ ಕೊಂದನೆಂದು ಸ್ಪಷ್ಟವಾಗಿ ಬರೆದಿರುತ್ತಾನೆ. ಈ ಕಾಮಣಿಯು ಅವನನ್ನು ಹಿಡಿಯದಿದ್ದರೆ, ಅವನು ಎಂದಿಗೂ ಈ ಮೇರೆಗೆ ಸಿವಾಜಿಯನ್ನು ನಿಷ್ಕಾರಣವಾಗಿ ದೂಷಿಸ ಲಿಕ್ಕೆ ಎಡೆಗೊಳ್ಳುತ್ತಿದ್ದಿಲ್ಲ. ಅಥವಾ ಇದರಲ್ಲಿ ಅವನ ತಪ್ಪಾದರೂ ಏನಿದೆ? ಕಾಮಣಿಯಾದವರಿಗೆ ಎಲ್ಲ ವಸ್ತುಗಳು ಅರಷಣ್ಣವಾಗಿ ಕಾಣುವುದಿಲ್ಲವೇ?

ನಮ್ಮ ಚರಿತ್ರನಾಯಕನಲ್ಲಿ ನೈತಿಕದೋಷಗಳಿದ್ದಿಲ್ಲೆಂದು ನಾವು ಪ್ರತಿಪಾದಿಸುವುದಿಲ್ಲ. ಅಫಜುಲ್ಖಾನನ ಕೊಲೆಯ ವಿಷಯವಾಗಿ ಗ್ರಾಂಟ ಡಫನು ಅವನ ಮೇಲೆ ಹೊರಿಸುವ ದೋಷಗಳು ಸುಳ್ಳೆಂದು ನಾವು ಖಂಡಿತ ವಾಗಿ ಹೇಳುತ್ತೇವೆ. ಗ್ರಾಂಟ ಡಫನು ಹೇಳುವಂತೆ ಅಫಜುಲ್ಖಾನನು

ನಿಷ್ಕಪಟಿಯೂ ಸರಳಹೃದಯನೂ ಆಗಿರಲಿಲ್ಲ; ಮತ್ತು ಸಿವಾಜಿಯು ಅಪ್ರಮತ್ತನಾದ್ದರಿಂದ ಖಾನನ ಮೋಸಕ್ಕೆ ಒಳಗಾಗದೆ, ತನ್ನ ಆತ್ಮ ಸಂರಕ್ಷಣಾರ್ಥವಾಗಿ ಖಾನನನ್ನು ಕೊಂದನೆಂದು ನಾವು ಒತ್ತಿ ಹೇಳುತ್ತೇವೆ. ಈ ನಿರ್ಣಯಕ್ಕೆ ಆಧಾರಭೂತವಾದ ಸಂಗತಿಗಳು ಕೆಳಗೆ ಬರೆದಂತೆ ಇರುತ್ತವೆ:—

೧. ಅಫಜುಲ್ಖಾನನು ಸಿವಾಜಿಯ ಅಣ್ಣನಾದ ಶಂಭೂಜಿಯನ್ನು ವಿಶ್ವಾಸಘಾತದಿಂದ ಕನಕಗಿರಿಯಲ್ಲಿ ಕೊಲ್ಲಿಸಿದನೆಂದು ಮರಾಟರು ನಂಬಿದ್ದರು.

೨. ಅಫಜುಲ್ಖಾನನ ಗುಮಾಸ್ತನಾದ ಕೃಷ್ಣಾಜಿ ಭಾಸ್ಕರನು ತನ್ನ ಒಡೆಯನು ಮೋಸದಿಂದ ಸಿವಾಜಿಯನ್ನು ಹಿಡಿಯಲಿಕ್ಕೆ ಹೊಂಚುಹಾಕಿಕೊಂಡು ಕುಳಿತಿದ್ದಾನೆಂದು ಸಿವಾಜಿಗೆ ಗುಪ್ತರೀತಿಯಿಂದ ತಿಳಿಸಿದನೆಂದು ಎಲ್ಲ ಮರಾಟ ಬಖೈರುಗಳು ಸ್ಪಷ್ಟವಾಗಿ ಹೇಳುತ್ತವೆ. ಸಿವಾಜಿಯ ಗುಪ್ತ ಚಾರರಾದರೂ ಇದೇ ಸಂಗತಿಯನ್ನು ಆವನಿಗೆ ತಿಳಿಸಿದರು.

೩. ರಾಜಾಪುರದಲ್ಲಿದ್ದ ಇಂಗ್ಲಿಷ ವರ್ತಕರು ಕೆಲಮಟ್ಟಿಗೆ ಆದಿಲ್ ಶಾಹಿಯ ಆಶ್ರಯದಲ್ಲಿದ್ದುದರಿಂದಲೂ ಆ ಸರಕಾರವು ಸಿವಾಜಿಗಿಂತ ಹೆಚ್ಚು ಬಲಿಷ್ಠವಾದ್ದರಿಂದಲೂ ಸಾಮಾನ್ಯವಾಗಿ ಅಫಜುಲ್ಖಾನನಿಗೆ ಹೆಚ್ಚು ಅನುಕೂಲವಾಗಿ ಬರೆಯಬಹುದೆಂದು ಕಾಯಾಸ ಕಟ್ಟಬಹುದು. ಅಂಥವರು ೧೦ ಅಕ್ಟೋಬರ ೧೬೫೯ ಇಸವಿ ದಿವಸ ಬರೆದ ಒಂದು ಪತ್ರದಲ್ಲಿ ಹೇಳುವುದೇನಂದರೆ:—ಸಿವಾಜಿಯನ್ನು ಮುರಿಬಡಿದು ಹಿಡಿತರುವಷ್ಟು ದಂಡಿನ ಸಾಮರ್ಥ್ಯವು ತಮ್ಮಲ್ಲಿ ಇಲ್ಲದುದರಿಂದ ಆದಿಲ್ಶಾಹಿ ಸರಕಾರವು ಕೃತ್ರಿಮ ಸ್ನೇಹ ತೋರಿಸಿ, ಸಿವಾಜಿಯನ್ನು ಹಿಡಿತರಬೇಕೆಂದು ಅಫಜುಲ್ಖಾನನಿಗೆ ಕಟ್ಟುಮಾಡಿದ್ದರು.

೪. ಸಭಾಸದ (೧೬೯೪) ನಿಂದ ಚಿಟ್ನೀಸ (೧೮೧೦) ನ ವರೆಗೆ ಮರಾಟ ಬಖೈರುಗಳನ್ನು ಬರೆದವರೆಲ್ಲರು ಅಫಜುಲ್ಖಾನನೇ ಸಿವಾಜಿಯನ್ನು ಕೊಲ್ಲಲಿಕ್ಕೆ ಮೊದಲು ಯತ್ನಮಾಡಿದನೆಂದು ಸ್ಪಷ್ಟವಾಗಿ ಬರೆಯುತ್ತಾರೆ. ಸಿವಾಜಿಯ ಆಸ್ಥಾನಕವಿಯಾದ ಭೂಷಣನು, ಪರದಾರಾಭಿಲಾಷಿಯಾದ

ಕೀಚಕನನ್ನು ಭೀಮಸೇನನು ಕೊಂದಂತೆ, ತನ್ನನ್ನು ಮೋಸದಿಂದ ಕೊಲ್ಲ ಬಂದ ಅಫಜುಲ್ಖಾನನನ್ನು ಸಿವಾಜಿಯು ಕೊಂದು ಭೂಭಾರವನ್ನಿಳಿಸಿದ ನೆಂದು ಉಲ್ಲೇಖಿಸಿರುತ್ತಾನೆ.

೫. ಸಿವಾಜಿಯು ರಾಮದಾಸಸ್ವಾಮಿಗಳಿಗೆ ಈ ವಿಷಯವಾಗಿ ಬರೆದ ಒಂದು ಪತ್ರವನ್ನು ಮರಾಟಿ ಇತಿಹಾಸ–ಸಂಶೋಧಕರು ಮುದ್ರಿಸಿ ರುತ್ತಾರೆ. ಅದರಲ್ಲಿ ಸಿವಾಜಿಯು ಬರಿಸಿದ್ದೇನಂದರೆ :—"ಖಾನನು ನನ್ನ ತಲೆಯನ್ನು ತನ್ನಕಂಕುಳದಲ್ಲಿ ಹಿಡಿದಾಗ, ಆ ಹಿಡಿತದ ಬಿಗವಿಸಿಂದ ನನ್ನ ಉಸರು ಕಟ್ಟಿತು. ನಾನು ಕಕ್ಕವಿಕ್ಕಿಯಾಗಿ ಬಾಯ್ಬಿಡುವಾಗ ತಮ್ಮನ್ನು (ರಾಮದಾಸಸ್ವಾಮಿಗಳನ್ನು) ನೆನೆದೆನು. ಆ ಸ್ಮರಣೆಯಿಂದ ನನಗೆ ಕಸವು ಬಂದುದರಿಂದ, ನನ್ನ ಕುತ್ತಿಗೆಯನ್ನು ಬಿಡಿಸಿಕೊಂಡೆನು." ಸಿವಾಜಿಯು ಮೊದಲೇ ಖಾನನ ಕರುಳನ್ನು ಬಗಿದಿದ್ದರೆ, ಅವನ ಹಿಡಿತವು ಇಷ್ಟು ಬಿಗಿ ಎಂದೂ ಆಗಲಾರದು. ಆದಕಾರಣ ಈ ಪತ್ರವು ದಿಟವಾಗಿದ್ದರೆ, ಖಾನನು ಸಿವಾಜಿಯ ಕುತ್ತಿಗೆಯನ್ನು ಹಿಚಕಲಿಕ್ಕೆ ಮೊದಲೇ ಪ್ರಯತ್ನ ಮಾಡಿದ ನೆಂದು ಸ್ಪಷ್ಟವಾಗಿ ತೋರುತ್ತದೆ.

೬. ಸಿವಾಜಿಯು ಖಾನನನ್ನು ಮೋಸದಿಂದ ಕೊಲ್ಲಬೇಕೆಂದು ನಿಶ್ಚ ಯಿಸಿ, ಚಿಲಕತ್ತು ತಂತಿಟೊಪ್ಪಿಗೆಗಳನ್ನು ಹಾಕಿಕೊಂಡುದಲ್ಲದೆ ತನ್ನ ದಂಡನ್ನು ಆಯಾ ಎಡೆಗಳಲ್ಲಿ ಗುಪ್ತವಾಗಿಟ್ಟನೆಂದು ಕೆಲವರು ಹೇಳುವರು. ಆದರೆ ಈ ಆರೋಪವು ತೀರ ತಪ್ಪೆಂದೆನ್ನಬಹುದು. ಚಿಲಕತ್ತು ಟೊಪ್ಪಿಗೆ ಗಳು ಖಾನನನ್ನು ಕೊಲ್ಲುವ ಸಾಧನಗಳೇ ? ಅವು ಆತ್ಮಸಂರಕ್ಷಣಾರ್ಥ ವಾಗಿ ಹಾಕಿಕೊಂಡುದವಲ್ಲವೇ? ಖಾನನ ಗುಮಾಸ್ತನು ತನ್ನ ಒಡೆಯನ ಮೋಸದ ಬಯಕೆಯನ್ನು ಮೊದಲೇ ಅವನಿಗೆ ತಿಳಿಸಿದ್ದಿಲ್ಲವೇ? ತಾನು ಖಾನನ ಬಲೆಯಲ್ಲಿ ಸಿಲುಕಿ ಸತ್ತರೆ, ತನ್ನ ಕುಲದೇವತೆಯನ್ನೂ ತನ್ನ ಕುಟುಂಬದವರನ್ನೂ ಪ್ರತಾಪಗಡವನ್ನೂ ಕಾಪಾಡಲಿಕ್ಕೆ ಅವನು ತನ್ನ ದಂಡನ್ನು ಅಲ್ಲಲ್ಲಿ ಇರಿಸಿದ್ದನೆಂದು ಹೇಳಲಿಕ್ಕೆ ಅಡ್ಡಿಯೇನು? ತಾನು ಮುಡಿವರೆ ತನ್ನ ರಾಜ್ಯದ ಏರ್ಪಾಡನ್ನು ಹೇಗೆ ಹೇಗೆ ಮಾಡಬೇಕೆಂಬು ದನ್ನು ಅವನು ವಿವರವಾಗಿ ತನ್ನ ಮಂತ್ರಿಗಳಿಗೆ ತಿಳಿಸಿದ್ದಿಲ್ಲವೇ? ಇಷ್ಟು

ಎಚ್ಚರಿಕೆಯನ್ನೂ ಮುನ್ನೋಟವನ್ನೂ ಅವನು ತೋರಿಸದಿದ್ದರೆ, ಅವನು ಧಡ್ಡನೆಂದು ನಾವು ಜರೆಯುತ್ತಿದ್ದಿಲ್ಲವೇ? ಅವನು ಖಾನನಂತೆ ಕೊಬ್ಬಿ ಮದಾಂಧನಾಗಿ ನಡೆಯದೆ, ಜಾಗರೂಕತೆಯಿಂದ ಮುಂಗಂಡು ಎಲ್ಲ ಏರ್ಪಾಡುಗಳನ್ನು ವಿಚಾರಪೂರ್ವಕವಾಗಿ ಮಾಡಿದ್ದರಿಂದ, ಅವನ ಮೇಲೆ ಅಲ್ಲದ ಸಲ್ಲದ ದೋಷಾರೋಪವನ್ನು ಮಾಡುವುದು ಉಚಿತವೇ? ಎಂದೂ ಆಗಲಾರದು.

೭. ಪಂಡಿತ ಅ. ರಹಮನ್ನರು ಒಂದು ಆಕ್ಷೇಪವನ್ನು ತೆಗೆದು ಕೊಂಡಿರುತ್ತಾರೆ. ಅವರು ಕೇಳುವುದೇನಂದರೆ:—ಅಫಜುಲ್ಖಾನನು ಮೋಸದಿಂದ ಸಿವಾಜಿಯನ್ನು ಹಿಡಿಯಬೇಕೆಂದಾಗಲಿ ಕೊಲ್ಲಬೇಕೆಂದಾಗಲಿ ಮಾಡಿದ್ದರೆ, ತಾನು ಅವನ ಬೆಟ್ಟಿಗೆ ಹೋಗುವಾಗ ತನ್ನ ದಂಡನ್ನು ಪ್ರತಾಪಗಡದ ಮೇಲೆ ಸಾಗಿಹೋಗಲಿಕ್ಕೆ ಅಣಿಮಾಡಿ ಏಕೆ ಇಡಲಿಲ್ಲ? ಖಾನನ ಹೆಮ್ಮೆ ತಿಳಿಗೇಡಿತನಗಳೇ ಈ ಮೆಯ್ಯೊಕ್ಕಿನ ಮುಖ್ಯಕಾರಣಗಳೆಂದು ಧಾರಾಳವಾಗಿ ಹೇಳಬಹುದು. ಅವನು ಅರಿವುಗೇಡಿಯಾಗದಿದ್ದರೆ, ಶ್ರೀ ಭವಾನಿಯ ಮೂರ್ತಿಯನ್ನು ಒಡೆದು, ಎಲ್ಲ ಭಾರತೀಯರನ್ನು ಸಿಟ್ಟಿಗೆಬ್ಬಿಸಿ, ತನ್ನ ಹಗೆಗಳಾಗಿ ಮಾಡಿಕೊಳ್ಳುತ್ತಿದ್ದಿಲ್ಲ. ಅವನು ಕೊಬ್ಬೇರಿದವನಾಗದಿದ್ದರೆ ಸಿವಾಜಿಯಂತೆ ಚಿಲಕತ್ತು ಮುಂತಾದ್ದನ್ನು ಹಾಕಿಕೊಳ್ಳುತ್ತಿದ್ದನು. ಮದಾಂಧನಾಗದಿದ್ದರೆ ತನ್ನ ದಂಡನ್ನು ಸಜ್ಜುಗೊಳಿಸುತ್ತಿದ್ದನು. ಅವನು ಎಚ್ಚರಗೇಡಿಯಾಗದಿದ್ದರೆ, ಅಲ್ಲಿದ್ದ ಸಿವಾಜಿಯ ದಂಡೆಷ್ಟು, ಕೋಟೆಯ ಬಲವೆಷ್ಟು, ಮುಂತಾದ ಸಂಗತಿಗಳ ಬಗ್ಗೆ ಮೊದಲೇ ವಿಚಾರ ಮಾಡುತ್ತಿದ್ದನು. ಸಿವಾಜಿಯು ಒಂದು ಕ್ಷುದ್ರಜಂತು ಎಂಬುದೇ ಅವನ ತಿಳಿವಳಿಕೆ; ಅನನು ತನ್ನ ಹತ್ತಿರ ಬಂದಕೂಡಲೆ ಅವನನ್ನು ಹಿಡಿದು ಹಿಚಿಕಿ ಹಿಂಡಿ ಹಿಪ್ಪಿಮಾಡುವೆನೆಂಬುದೇ ಅವನ ಕೊಬ್ಬು. ಸಿವಾಜಿಯು ತನಗೇನು ಅಪಕಾರಮಾಡಲಾರನೆಂಬುದೇ ಅವನ ಗ್ರಹಿಕೆ; ಸಿವಾಜಿಯು ಸತ್ತ ಬಳಿಕ ಅಥವಾ ಕಯ್ಸೆರೆ ಸಿಕ್ಕ ಬಳಿಕ, ಅವನ ದಂಡು ಕಾದದೇ ಶರಣು ಬರುವುದೆಂಬುದೇ ಅವನ ಹೆಮ್ಮೆ. ಇಂತಹ ಮೆಯ್ಯೊಕ್ಕಿನವನೂ ಅಜಾಗರೂಕನೂ ತಿಳಿಗೇಡಿಯೂ ಆದ ಅಫಜುಲ್ಖಾನನು ಮುನ್ನೋಟದಿಂದ ತನ್ನ ದಂಡನ್ನು ಸಜ್ಜುಮಾಡಿಡುವ ಸಂಭವವೆಲ್ಲಿ?

ಈಯೆಲ್ಲ ಕಾರಣಗಳಿಂದ ಅಫಜುಲ್ಖಾನನೇ ಮೊಟ್ಟಮೊದಲು ಸಿವಾಜಿಯನ್ನು ಕೊಲ್ಲುವ ಎತ್ತುಗಡೆಮಾಡಿದನೆಂತಲೂ ಸಿವಾಜಿಯು ಆತ್ಮಸಂರಕ್ಷಣಾರ್ಥವಾಗಿ ಆವನ ಕರುಳು ಬಗಿದು, ತನ್ನ ಕುತ್ತಿಗೆಯನ್ನು ಅವನ ಹಿಡಿತದಿಂದ ಬಿಡಿಸಿಕೊಂಡು, ತನ್ನ ಕೊಲೆಯನ್ನು ತಪ್ಪಿಸಿಕೊಳ್ಳಲಿಕ್ಕೆ ಖಾನನನ್ನು ಕೊಂದನೆಂತಲೂ ನಿಸ್ಸಂದೇಹವಾಗಿ ಹೇಳುತ್ತೇವೆ.

ಗಾಳಿಬಿಟ್ಟಾಗ ತೂರಿಕೊಳ್ಳಬೇಕೆಂಬ ಗಾದೆಯ ಮಾತಿನ ಸತ್ಯತೆಯನ್ನು ನಮ್ಮ ಚರಿತ್ರನಾಯಕನು ಚೆನ್ನಾಗಿ ಮನಗಂಡಿದ್ದನು. ಆದ್ದರಿಂದ ಅವನು ದುಷ್ಟನಾದ ಅಫಜುಲ್ಖಾನನ ಕೊಲೆಯಾಗಿ, ಅವನ ದಂಡು ಸತ್ತು ಕೆಟ್ಟು ಚದರಿ ದಿಕ್ಕುಪಾಲಾದ ಬಳಿಕ, ಆನಂದದಿಂದ ಹಿಗ್ಗಿ ಊಟ ನೋಟಾಟ ಮುಂತಾದವುಗಳಲ್ಲಿ ವ್ಯರ್ಥವಾಗಿ ಕಾಲಕಳೆಯದೆ, ಗೆಲವಿನಿಂದ ಉಬ್ಬಿದ ತನ್ನ ದಂಡನ್ನು ತೆಗೆದುಕೊಂಡು ಕೊಲ್ಹಾಪುರದ ನಿಟ್ಟ (ದಿಕ್ಕಿ)ನ ಅದಿಲ್‌ಶಾಹಿ ಸಾಡನ್ನೊಳನುಗ್ಗಿ, ಪನ್ಹಾಳಕೋಟೆಯನ್ನು ಹಿಡಿದುಕೊಂಡು, ರತ್ನಾಗಿರಿ ಜಿಲ್ಲೆಯೊಳಗಿನ ಬಂದರಗಳನ್ನೂ ಪಟ್ಟಣಗಳನ್ನೂ ಒಂದರಹಿಂದೊಂದು ಕಯ್ವಶಮಾಡಿಕೊಳ್ಳತೊಡಗಿದನು. ಸಿವಾಜಿಯು ಪನ್ಹಾಳದ ಹತ್ತರಿರುವಾಗ, ಅದಿಲ್ಶಾಹಿಯ ಹುಕುಮಿನಿಂದ ಅಫಜುಲ್ಖಾನನ ಮಗನಾದ ಫಾಜಲ್ಖಾನನೂ ರತ್ನಾಗಿರಿಯಿಂದ ಮಿಜರ್ಾನದ ವರೆಗೆ ಇದ್ದ ಅದಿಲ್ಶಾಹಿಯ ಪ್ರದೇಶದ ಸುಬೇದಾರನಾದ **ರಸ್ತುಮಿಜಮಾನನೂ** ದಂಡಿನೊಡನೆ ಸಿವಾಜಿಯನ್ನು ಅಡ್ಡಗಟ್ಟಲಿಕ್ಕೆ ಬಂದರು. ಈ ರಸ್ತುಮಿಜಮಾನನು ಬಡಿಸಾಹೇಬಳಿಗೆ ಬೇಡಾದವನಾದ್ದರಿಂದ ಸಿವಾಜಿಯೊಡನೆ ಗುಪ್ತವಾಗಿ ಒಪ್ಪಂದಮಾಡಿಕೊಂಡಿದ್ದನು. ಅವನು ತೋರಿಕೆಗೆ ಮಾತ್ರ ದಂಡೆತ್ತಿಬಂದುದರಿಂದ, ಸಿವಾಜಿಯು ಶ್ರಮವಿಲ್ಲದೆ ಅವರಿಬ್ಬರ ದಂಡನ್ನು ಓಡಿಸಿಬಿಟ್ಟನು (೧೬೬೦). ಬಳಿಕ ಆವನು ರತ್ನಾಗಿರಿಜಿಲ್ಲೆಯೊಳಗಿನ ಸ್ಥಳಗಳನ್ನು ತೆಗೆದುಕೊಳ್ಳಲು, ಅಲ್ಲಿದ್ದ ಅಧಿಕಾರಿಗಳು ಆಶ್ರಯಕ್ಕೋಸ್ಕರ ರಾಜಾಪುರಕ್ಕೆ ಹೋದರು. ಈ ರಾಜಾಪುರವು ರಸ್ತುಮಿಜಮಾನನ ಬಂದರವಾದ್ದರಿಂದ ಸಿವಾಜಿಯು ಅವರ ಗೊಡವಿಗೆ ಹೋಗಲಿಲ್ಲ.

---

# ೫ ನೆಯ ಪ್ರಕರಣ

## ಮೊಗಲರೊಡನೆ ಕಡುಹೋರಾಟ; ಆದಿಲ್ಶಾಹಿಯೊಡನೆ ತುಂಟಾಟ.

ಔವರಂಗಜೀಬನು ದಕ್ಷಿಣದ ಸುಬೇದಾರನಾಗಿದ್ದಕಾಲದಲ್ಲಿ ತನಗೆ ಸಿವಾಜಿಯ ನೆರವು ಬೇಕಾದಾಗ ಅವನೊಡನೆ ನಡಿಸಿದ ಪತ್ರವ್ಯವಹಾರವನ್ನೂ ಅವನ ಸಾಹಾಯವು ಬೇಡಾದಾಗ ಆದಿಲ್ಶಾಹಿಗೆ ಬರೆದ ಸಂಗತಿಯನ್ನೂ ಹಿಂದಿನ ಪ್ರಕರಣದಲ್ಲಿ ವಿವರಿಸಿರುತ್ತೇವಷ್ಟೇ. ಈ ಸುಮಾರಿನಲ್ಲಿ ಅವರಂಗಜೀಬನು ತನ್ನ ಎಲ್ಲ ಅಣ್ಣತಮ್ಮಂದಿರನ್ನು ಸೋಲಿಸಿ ಕೊಂದು, ದಿಲ್ಲಿಯ ಪಟ್ಟದಮೇಲೆ ಸುಸ್ಥಿರವಾಗಿ ಕುಳಿತುದರಿಂದ * ಅವನ ಮನಸ್ಸಿನಲ್ಲಿ ಪುಂಡನಾದ ಸಿವಾಜಿಯನ್ನು ಮುರಿಬಡಿಯುವ ಎಣಿಕೆಯು ಬಂತು. ಅಫಜುಲ್ಖಾನನ ಕೊಲೆಯ ಸುದ್ದಿಯು ಬಂದಂದಿನಿಂದ ಸಿವಾಜಿಯ ಮೇಲಿನ ಅವನ ಸಿಟ್ಟಂತೂ ಮೇರೆದಪ್ಪಿತು(೧೬೫೯).

ಇಷ್ಟು ದಿವಸ ಅವರಂಗಜೀಬನ ೨ ನೆಯ ಮಗನಾದ ಮಹಮ್ಮದ ಅಜೀಮನು ದಕ್ಷಿಣದ ಸುಬೇದಾರನಾಗಿದ್ದನು. ಇವನು ಜಾಣನೂ ಬಲ್ಲಿದನೂ ವಿಚಾರಿಯೂ ಮಿತವ್ಯಯಿಯೂ ಅನಲಸನೂ ಆಗಿದ್ದನು. ಇವನು ತನ್ನ ತಂದೆಯ ಸ್ವಾರ್ಥಪರತ್ವವನ್ನೂ ಕಪಟವನ್ನೂ ಹೊಟ್ಟೆಕಿಚ್ಚನ್ನೂ ಅರಿತವನಾದ್ದರಿಂದ, ಸಿವಾಜಿಗೆ ಕೆಲಮಟ್ಟಿಗೆ ಅನುಕೂಲನಾಗಿದ್ದನು. ಸಿವಾಜಿಯು ಪನ್ಹಾಳಕೋಟೆಯನ್ನು ಹಿಡಿದುಕೊಂಡ ಸುದ್ಧಿಯು ಬಂದಕೂಡಲೆ, ಸಿವಾಜಿಯನ್ನು ನಿರ್ನಾಮಮಾಡಬೇಕೆಂಬ ಉತ್ಕಟೇಚ್ಛೆಯಿಂದ ಅವರಂಗಜೀಬನು ತನ್ನ ಮಗನನ್ನು ದರಬಾರಿಗೆ ಕರಿಸಿ, ಸಾಯಿಸ್ತೆಖಾನನೆಂಬ ಶೂರಸರದಾರನನ್ನು ದಕ್ಷಿಣದ ಸುಬೇದಾರನಾಗಿ ನಿಯಮಿಸಿ(ಜುಲೈ) ಸಿವಾಜಿಯನ್ನು ವಿಶ್ವಪ್ರಯತ್ನದಿಂದ ಮುರಿಬಡಿಯಬೇಕೆಂದು ಕಟ್ಟಪ್ಪಣೆಯನ್ನಿತ್ತನು (೧೬೫೯). ಸಿವಾಜಿಯಮೇಲೆ ಬೆಂಕಿಯನ್ನು ಕಾರುತ್ತಿದ್ದ ಅದಿಲ್ಶಾಹಿಯ ಸರಕಾರದವರು ಸಿವಾಜಿಯನ್ನು ದಂಡಿಸುವ ಪ್ರಯತ್ನದಲ್ಲಿ

* ಮೊಗಲ್ಬಾದಶಾಹಿ ಪೂರ್ವಾರ್ಧ, ಪುಟ ೧೫೧–೧೮೫.

ಮೊಗಲರಿಗೆ ಮನಃಪೂರ್ವಕವಾಗಿ ನೆರವಾಗಲಿಕ್ಕೆ ಒಪ್ಪಿಕೊಂಡರು. ಸಿವಾಜಿಯ ನಾಡನ್ನು ಸಾಯಿಸ್ತೆಖಾನನು ಬಡಗಣದಿಂದಲೂ, ಅದಿಲ್ಶಾಹಿಯ ಕರ್ನೂಲದ ಸುಬೇದಾರನಾದ ಸಿದ್ದಿಜೋಹುರನು (ಸಲಾಬತಖಾನನು) ತೆಂಕಣದಿಂದಲೂ, ಸಾವಂತವಾಡಿಯ ದೇಶಮುಖನು ೫,೦೦೦ ದಂಡಿನೊಡನೆ ಮೂಡಣದಿಂದಲೂ, ಜಂಜೀರಾದ ಸುಬೇದಾರನಾದ ಫತ್ತೆಖಾನನು ಪಡುವಣದಿಂದಲೂ ಸಿವಾಜಿಯ ರಾಜ್ಯವನ್ನು ಒಳನುಗ್ಗಬೇಕೆಂದು ಗೊತ್ತಾಯಿತು (೧೬೫೯).

ಸನ್ಯಾಸಿಯ ಮದುವೆಗೆ ಜುಟ್ಟಜನಿವಾರಗಳೆರಡೂ ಬೇಕೆಂಬ ಗಾದೆಯನ್ನು ಓದುವವರು ಕೇಳಿರಬಹುದು. ಮುರಕಳಿಗೆ ಬಂದ ಅದಿಲ್ಶಾಹಿಯಲ್ಲಿ ಸಾಕಷ್ಟು ಹಣದಂಡುಗಳು ಇದ್ದಿಲ್ಲ. ಒಕ್ಕಟ್ಟು ಹುರುಪೂ ಇದ್ದಿಲ್ಲ. ಆದ್ದರಿಂದ ದಕ್ಷಿಣ–ಪಶ್ಚಿಮ–ಪೂರ್ವಗಳ ದಾಳಿಯು ಉತ್ತರದ ದಾಳಿಯಷ್ಟು ಕಸವಿನಿಂದಲೂ ಹುರುಪಿನಿಂದಲೂ ಜರಗಲಿಲ್ಲ. ಸಿದ್ದಿ ಜೋಹುರನು ಅದಿಲ್ಶಾಹಿ ಸರಕಾರವನ್ನು ಲೆಕ್ಕಿಸದ್ದರಿಂದ, ೨ ನೆಯ ಅಲ್ಲಿ ಅದಿಲ್ಶಹನು ತಾನೇ ದಂಡೆತ್ತಿ ಅವನ ಮೇಲೆ ಹೊರಟು, ಅವನ ಹಿಂದಿನ ದುಂಡುಟಿಗೆಯನ್ನು ಕ್ಷಮಿಸಿ, ಅವನನ್ನು ಶರಣುಬರಮಾಡಿಕೊಂಡು, ಅವನಿಗೆ ಹೆಚ್ಚಿನ ದಂಡುಕೊಟ್ಟು, ಸಿವಾಜಿಯನ್ನು ಬೆನ್ನಟ್ಟಲಿಕ್ಕೆ ಕಳುಹಿದನು.

ಅತ್ತ ಸಿವಾಜಿಗೆ ಮೊಗಲ್ ಸುಬೇದಾರನೂ ಅದಿಲ್‌ಶಾಹಿ ಸರಕಾರವೂ ಒಟ್ಟುಗೂಡಿ ತನ್ನ ರಾಜ್ಯವನ್ನೊಳನುಗ್ಗುತ್ತಾರೆಂಬ ಸುದ್ದಿಯು ಗೊತ್ತಾಗಿತ್ತು. ಇದು ತನ್ನ ರಾಜ್ಯಕ್ಕೆ ಬಂದ ದೊಡ್ಡ ಕುತ್ತೆಂದು ಅವನು ತಿಳಿದಿದ್ದರೂ ಸ್ವಲ್ಪಾದರೂ ಹೆದರಲಿಲ್ಲ. ಆ ಕೆಚ್ಚೆದೆಯ ವೀರಶಿರೋಮಣಿಯು ಶಾಂತಮನಸ್ಸಿನಿಂದ ತನ್ನ ನಾಡಿನ ಮೇಲೆ ಎಲ್ಲ ದಿಕ್ಕುಗಳಿಂದ ಬರುವ ದಾಳಿಗಳನ್ನು ತಡೆಯಲಿಕ್ಕೆ ತಕ್ಕ ಏರ್ಪಾಡುಗಳನ್ನು ಮಾಡತೊಡಗಿದನು. ಜಂಜೀರಾದಿಂದ ದಂಡೆತ್ತಿ ಬರುವ ಫತ್ತೇಖಾನನನ್ನು ಎದುರಿಸಲಿಕ್ಕೆ ರಘುನಾಥ ಬಲ್ಲಾಳನನ್ನೂ ಕಲ್ಯಾಣಭಿವಂಡಿ ಪ್ರಾಂತವನ್ನು ಸಂರಕ್ಷಿಸಲಿಕ್ಕೆ ಆಬಾಜಿಸೋನದೇವನನ್ನೂ ಪುರಂಧರ ಸಿಂಹಗಡ ಪ್ರತಾಪಗಡಗಳನ್ನು ಕಾಪಾಡಲಿಕ್ಕೆ ಮೋರೋಪಂತನನ್ನೂ ವಾಡಿಯ

ಸಾವಂತನ ವಿರುದ್ಧವಾಗಿ ಬಾಜಿಘಸಲ್ಕರನನ್ನೂ ನಿಯಮಿಸಿ, ಕೊಲ್ಹಾಪುರ ಪ್ರಾಂತದಲ್ಲಿದ್ದ ಆದಿಲ್ಶಾಹಿ ದಂಡನ್ನು ತಡೆಯಲಿಕ್ಕೆ ಸ್ವತಃ ತಾನೇ ನಿಂತನು.

ಮೊಟ್ಟಮೊದಲು ಉತ್ತರದಿಕ್ಕಿನಿಂದ ಮೊಗಲರ ದಾಳಿಯು ಆರಂಭವಾಯಿತು. ಸಾಯಿಸ್ತೆಖಾನನು ತನ್ನ ಎಲ್ಲ ದಂಡನ್ನು ಸಜ್ಜುಮಾಡಿಕೊಂಡು, ಅಹಮ್ಮದನಗರದಿಂದ ಹೊರಟನು (೨೫ ಫೇಬ್ರುವರಿ ೧೬೬೦).



ಸಾಯಿಸ್ತೆಖಾನ.

ಅವನು ಬರ್ಹಾಣಪುರದಲ್ಲಿರುವಾಗಲೇ ಪುಣೆಯ ದೇಶಪಾಂಡೆಯಾದ ಹೊನ್ನಪ್ಪನೆಂಬವನೂ ಬಾಬಾಜಿ ರಾಮಮೋಹನನೆಂಬ ಮತ್ತೊಬ್ಬ

ಗೃಹಸ್ಥನೂ ಬಂದು, ಖಾನನನ್ನು ಕೂಡಿದರು. ಮೊಗಲರ ದಂಡು ಮುಂದ
ರಿದ ಹಾಗೆ ಮರಾಟರು ಹಿಮ್ಮೆಟ್ಟುತ್ತ ನಡೆದುದರಿಂದ ಸಾಯಿಸ್ತೆಖಾನನು
ಸೋನವಾಡಿಯಿಂದ ಬಾರಾಮತಿಗೆ ಬಂದನು (೫ ಏಪ್ರಿಲ); ಅಲ್ಲಿಂದ ಪಶ್ಚಿ
ಮಕ್ಕೆ ತಿರುಗಿ, ಸಿರವಾಳ ಸಿವಪುರಮಾರ್ಗವಾಗಿ ಪುಣೆಯಿಂದ ೧೬
ಮೈಲು ಮೇಲಿರುವ ಸಾಸವಾಡಕ್ಕೆ ಬಂದನು. ಅದರ ನೆರೆಯಲ್ಲಿ ೩,೦೦೦
ಮರಾಟ ರಾಹುತರು ಅವನನ್ನು ತಡೆಯಲೆಳಸಲು ಅವರನ್ನು ಸೋಲಿಸಿ
ಚದರಿಸಿ, ಪುಣೆಗೆ ಹೋಗಿ ಅಲ್ಲಿ ತನ್ನ ಪಾಳೆಯ ಹಾಕಿದನು (೯ ಮೇ).
ಅಷ್ಟರೊಳಗೆ ಖಾನನು ಕಳಿಸಿದ ಒಂದು ದಂಡಿನ ಭಾಗವು ಉತ್ತರ
ಕೊಂಕಣವನ್ನು ಹಿಡಿದುಕೊಂಡಿತ್ತು.

ಈಗ ಮುಂಬಯಿ ಇಲಾಖೆಯಲ್ಲಿ ೨ ನೆಯ ಪಟ್ಟಣವೆಂದು ಹೆಸರು
ವಾಸಿಯಾದ ಪುಣೆಯು ಆ ಕಾಲಕ್ಕೆ ಒಂದು ಸಣ್ಣ ಹಳ್ಳಿಯಾಗಿತ್ತು.
ಸಾಯಿಸ್ತೆಖಾನನ ಮನಸ್ಸಿನಲ್ಲಿ ಮಳೆಗಾಲವನ್ನು ಅಲ್ಲೇ ಕಳೆಯಬೇಕೆಂ
ದಿತ್ತು. ಆದರೆ ಆ ಊರನ್ನು ತೆರವುಮಾಡುವಾಗ, ಅಲ್ಲಿದ್ದ ಎಲ್ಲ ಕಾಳು
ಮೇವನ್ನು ಸುಟ್ಟು ಊರನ್ನು ಹಾಳುಗೆಡವಿದ್ದರಿಂದಲೂ ಪುಣೆಗೂ ಮೊಗ
ಲರ ರಾಜ್ಯಕ್ಕೂ ನಡುವಿರುವ ಹೊಳೆಗಳು ತುಂಬಿ ಹರಿಯುತ್ತಿದ್ದುದ
ರಿಂದಲೂ ಖಾನನಿಗೆ ಅಲ್ಲಿರುವುದು ಅಶಕ್ಯವಾಯಿತು. ಆದ್ದರಿಂದ
ಅವನು ಅಹಮ್ಮದನಗರಕ್ಕೆ ಸಮೀಪವಾಗಿಯೂ ಪುಣೆಯ ಬಡಗಲಿಗೆ
೧೮ ಮೈಲು ದೂರವಾಗಿಯೂ ಇರುವ **ಚಾಕಣಕೋಟೆಯನ್ನು** ಹಿಡಿದು
ಕೊಂಡು, ಅಹಮ್ಮದನಗರದಿಂದ ಅನ್ನಸಾಮುಗ್ರಿಯನ್ನು ತರಿಸಿಕೊಳ್ಳ
ಬೇಕೆಂದು ನಿಶ್ಚಯಿಸಿ, ಮಳೆಗಾಲವನ್ನು ಲೆಕ್ಕಿಸದೆ, ದಂಡಿನೊಡನೆ ಚಾಕ
ಣಕ್ಕೆ ಹೋದನು (೨೧ ಜೂನ). ಆ ಕಾಲಕ್ಕೆ ಧೋ ಧೋ ಎಂದು ಮಳೆ
ಸುರಿಯುತ್ತಿದ್ದುದರಿಂದಲೂ ಫಿರಂಗಜಿ ನರಸಾಳನೆಂಬೊಬ್ಬ ಶೂರನೂ
ಸ್ವಾಮಿಭಕ್ತನೂ ಆದ ಕಿಲ್ಲೆದಾರನು ಅದನ್ನು ಕಡೆತನಕ ಕಾಪಾಡಿದ್ದ
ರಿಂದಲೂ ಆ ಸೊಟ್ಟಮಣ್ಣಿನ ಕೋಟೆಯನ್ನು ತೆಗೆದುಕೊಳ್ಳಲಿಕ್ಕೆ ಮೊಗಲ
ರಿಗೆ ೫೭ ದಿವಸ ಹಿಡಿಯಿತು. ಕಯ್ಸಾಗದಂತೆ ಆದ ಬಳಿಕ ಫಿರಂಗಜಿ
ನರಸಾಳನು ಖಾನನಿಗೆ ಶರಣುಬಂದನು (೧೫ ಅಗಸ್ಟ). ಅವನ ಶೌರ್ಯ
ಧೈರ್ಯಸಾಹಸಗಳನ್ನು ನೋಡಿ ಬೆರಗಾದ ಖಾನನು ಅವನನ್ನು ಗೌರ

ವಿಸಿ, ಮೊಗಲರ ಊಳಿಗವನ್ನು ಸೇರಲಿಕ್ಕೆ ಸೂಚಿಸಿದನು. ದೇಶಾಭಿಮಾನಿ ಯಾದ ನರಸಾಳನು ಆ ವಿಷಮಯವಾದ ಸೂಚನೆಯನ್ನು ತಿರಸ್ಕರಿಸಿ. ಖಾನನ ಅಪ್ಪಣೆಯನ್ನು ಪಡೆದು, ತನ್ನ ಉಳಿದ ದಂಡಿನೊಡನೆ ತನ್ನ ಒಡೆಯನಿದ್ದೆಡೆಗೆ ಹೋದನು. ಬಳಿಕ ಖಾನನು ಚಾಕಣದಲ್ಲಿ ತುಸು ದಂಡನ್ನಿಟ್ಟು, ಅಹಮ್ಮದನಗರದಿಂದ ಅನ್ನಸಾಮಗ್ರಿಯು ಸುರಕ್ಷಿತ ವಾಗಿ ಬರುವಂತೆ ತಕ್ಕ ಏರ್ಪಾಡನ್ನು ಮಾಡಿ, ಪುಣೆಗೆ ತಿರುಗಿಹೋದನು. ಮರುವರುಷ ಅವನ ದಂಡು ಕಲ್ಯಾಣಭಿವುಂಡಿ ಪ್ರಾಂತವನ್ನು ಹಿಡಿದು ಕೊಂಡಿತು. ಅವನು ಪುಣೆಯಲ್ಲಿ ಸ್ವಸ್ಥವಾಗಿ ಸುಮಾರು ೩ ವರ್ಷ ಕುಳಿತುಬಿಟ್ಟನು (ಸಪ್ಟಂಬರ ೧೬೬೦—ಮೇ ೧೬೬೩). ಸಿವಾಜಿಯ ವಶದಲ್ಲಿದ್ದ ಗುಡ್ಡಗಾಡಿನ ಕೋಟೆಗಳನ್ನು ಹಿಡಿದುಕೊಳ್ಳುವುದರಲ್ಲಿ ಅನವ ಶ್ಯಕವಾಗಿ ಆಗಬಹುದಾದ ಪ್ರಾಣಹಾನಿಯನ್ನು ಉಳಿಸಿಕೊಳ್ಳುವುದೇ ಖಾನನು ಸುಮ್ಮನೇ ಕೂಡ್ರಲಿಕ್ಕೆ ಕಾರಣವಾಗಿತ್ತೆಂದು ಗ್ರಾಂಟ ಡಫರು ಬರೆಯುತ್ತಾರೆ.

ಮೊಗಲರ ದಾಳಿಯನ್ನು ತಡೆಯುವಷ್ಟು ಸಾಮರ್ಥ್ಯವಿಲ್ಲದಿದ್ದರೂ ಸಿವಾಜಿಯು ಆದಿಲ್ಶಾಹಿ ದಂಡುಗಳ ಆಟವನ್ನು ಹೆಚ್ಚಿಗೆ ನಡೆಯಗೊಡ ಲಿಲ್ಲ. ೨ ನೆಯ ಅಲ್ಲಿ ಅದಿಲ್ಶಹನು ಸಿದ್ದಿಜೋಹುರನನ್ನು ಕ್ಷಮಿಸಿ, ಸಿವಾಜಿಯನ್ನು ಕೊಲ್ಹಾಪುರ ಪ್ರಾಂತದಿಂದ ಹೊರಗೆ ಹಾಕಲಿಕ್ಕೆ ಅವ ನನ್ನು ದೊಡ್ಡ ದಂಡಿನೊಡನೆ ಕಳುಹಿದನೆಂದು ಹಿಂದೆ ಹೇಳಿರುತ್ತೇವಷ್ಟೇ. ಈ ಸರದಾರನು ತನಗೆ ಎದುರಾದ ಮರಾಟರ ದಂಡನ್ನು ಸೋಲಿಸಿ, ಸಿವಾಜಿಯು ವಾಸವಾಗಿದ್ದ ಪನ್ಹಾಳ ಕೋಟೆಯನ್ನು ಮುತ್ತಿದನು (ಮೇ ೧೬೬೦). ದಿನದಿನಕ್ಕೆ ಮುತ್ತಿಗೆಯು ಹೆಚ್ಚು ಹೆಚ್ಚು ಬಿಗಿಯಾಗುತ್ತ ನಡೆದುದರಿಂದ, ಸಿವಾಜಿಗೆ ತಾನು ಪಾರಾಗಲಿಕ್ಕೆ ಸಿದ್ದಿಜೋಹುರನನ್ನು ಒಡೆಕೊಳ್ಳುವುದರ ಹೊರತು ಬೇರೆ ಯಾವ ಉಪಾಯವು ತೋಚಲಿಲ್ಲ. ಆದ್ದರಿಂದ ಚದುರನಾದ ನಮ್ಮ ಚರಿತ್ರನಾಯಕನು ಸಿದ್ದಿಜೋಹುರನ ಬಳಿಗೆ ತನ್ನೊಬ್ಬ ನಂಬಿಗಸ್ತನಾದ ವಕೀಲನನ್ನು ಕಳುಹಿ. ಅವನೊಡನೆ ಒಳಸಂಚು ನಡಿಸಿದನು. ಸಿವಾಜಿಯ ಸಾಹಾಯದಿಂದ ಸ್ವತಂತ್ರನಾಗ ಬೇಕೆಂಬ ಲವಲವಿಕೆಯು ಸಿದ್ದಿಯಲ್ಲಿ ಹುಟ್ಟಿದ ಬಳಿಕ. ಸಿವಾಜಿಯು

ಒಂದು ದಿನ ರಾತ್ರಿ ತಾನೇ ಹೋಗಿ ಅವನನ್ನು ಕಂಡನು. ಸಿವಾಜಿಯು ಮೋಸಮಾಡಬಹುದೆಂದು ಹೆದರಿಕೊಂಡ ಸಿದ್ದಿಯು ತನ್ನ ನಂಬಿಗಸ್ತರಾದ ಸರದಾರರೊಡನೆ ಆವನಿಗೆ ಕಾಣಿಸಿಕೊಂಡನು. ಅವರೆಲ್ಲರ ಸಮಕ್ಷಮದಲ್ಲಿ ಒಳಸಂಚಿನ ಶರ್ತುಗಳು ಗೊತ್ತಾಗಿ ಇಬ್ಬರೂ ಆಣೆಕ್ರಿಯೆಗಳನ್ನು ಮಾಡಿದರು. ಅಂದಿನಿಂದ ಮುತ್ತಿಗೆಯು ನಾಮಶೇಷವಾಯಿತು.

ಮುವ್ವರ ಕಿವಿ ಕೇಳಿದ್ದು ಮೂರು ಲೋಕಕ್ಕೆ ಗೊತ್ತಾಗುವುದೆಂಬ ಗಾದೆಯು ಮಾತು ಸಟೆಯಲ್ಲ. ಈ ಒಳಸಂಚಿನ ಸುದ್ದಿಯು ಕೂಡಲೆ ಆದಿಲ್ಶಹನಿಗೆ ಮುಟ್ಟಿತು. ಆವನು ಸಿಟ್ಟುಬೆಂಕಿಯಾಗಿ ಕಣ್ಣುಗಳಿಂದ ಕಿಡಿ ಉದರಿಸುತ್ತ ಇಬ್ಬರೂ ದ್ರೋಹಿಗಳನ್ನು ದಂಡಿಸುವ ಉದ್ದೇಶದಿಂದ ರಾಜಧಾನಿಯನ್ನು ಬಿಟ್ಟನು (೫ ಅಗಸ್ಟ). ಆವನು ಮಿರಜಿಗೆ ಬಂದ ಸುದ್ದಿಯು ಹತ್ತಿದ ಕೂಡಲೆ ಸಿವಾಜಿಯು ತನ್ನ ಕುಟುಂಬದವರನ್ನೂ ಆಲ್ಲಿದ್ದ ೫/೬ ಸಾವಿರ ದಂಡನ್ನೂ ತೆಗೆದುಕೊಂಡು, ಸುರಕ್ಷಿತವಾಗಿ ಕೋಟೆಯನ್ನು ಬಿಟ್ಟು ಹೊರಟನು (೨೫ ಅಗಸ್ಟ). ಈ ಮೋಸವು ತಿಳಿದ ಕೂಡಲೆ ಜೋಹುರನ ಮಗನಾದ ಸಿದ್ದಿ ಅಜೀಜನೂ ಅಫಜುಲ್ಖಾನನ ಮಗನಾದ ಫಾಜಲ್ಖಾನನೂ ದಂಡಿನೊಡನೆ ಅವನನ್ನು ಬೆನ್ನಟ್ಟಿದರು. ಅವರು ಸಮೀಪಕ್ಕೆ ಬಂದಕೂಡಲೆ ಸಿವಾಜಿಯು ಮಲಕಾಪುರದ ಕಣಿವೆಯಲ್ಲಿ ಬಾಜಿಪ್ರಭುದೇಶಪಾಂಡೆ ಎಂಬ ಒಬ್ಬ ಶೂರ ಸರದಾರನನ್ನು ೫,೦೦೦ ದಂಡಿನೊಡನೆ ಬೆನ್ನಟ್ಟಿ ಬರುವವರನ್ನು ತಡೆಯಲಿಕ್ಕೆ ನಿಲ್ಲಿಸಿ, ಉಳಿದ ಜನರೊಡನೆ ತಾನು ವಿಶಾಲಗಡಕ್ಕೆ ಸಾಗಿದನು. ಸಿದ್ದಿ ಅಜೀಜ-ಫಾಜಲ್ಖಾನರು ಒತ್ತರದಿಂದ ಬಂದು ತಮಗೆ ಅಡ್ಡಗಟ್ಟಿ ನಿಂತ ಸಣ್ಣ ಮರಾಟರ ದಂಡನ್ನು ನೋಡಿ ಬೆರಗಾಗಿ ಬೆಂಕಿಕಾರುತ್ತ ಮೂರು ಸಾರಿ ಮರಾಟರ ಮೇಲೆ ಏರಿಬಂದರು. ಎರಡೂ ದಂಡಿನ ನಡುವೆ ಅತಿರಭಸದ ಕಾಳಗವಾಯಿತು. ಎರಡೂ ಪಕ್ಷದವರು ಅತಿಹುರುಪಿನಿಂದ ಕಾದಿದರು. ಮರಾಟರು ಉಸರಿರುವವರೆಗೆ ಹಗೆಗಳೊಡನೆ ಗುದ್ದಿಯಾಡಿದರು. ಕಟ್ಟಕಡೆಗೆ ಬಾಜಿಯೂ ಅವನ ಏಳುನೂರುಮಂದಿ ಸಂಗಡಿಗರೂ ಮರಣೋನ್ಮುಖರಾಗಿ ಬಿದ್ದಿರುವಾಗ ಸಿವಾಜಿಯು ಸುರಕ್ಷಿತವಾಗಿ ಮುಟ್ಟಿದ ಸೂಚನಾರ್ಥವಾದ ತೋಫು ಹಾರಿತು. ಆ ಸಪ್ಪಳವನ್ನು ಕೇಳಿ, ಕೃತಕೃತ್ಯರಾದೆವೆಂದು

ಹಿಗ್ಗಿ ಬಾಜಿಯೂ ಅವನ ಜತೆಗಾರರೂ ಸಂತೋಷದಿಂದ ಪ್ರಾಣಬಿಟ್ಟರು. ಸ್ವಾಮಿಭಕ್ತಿಗಾಗಿ ರಣದಲ್ಲಿ ಪ್ರಾಣಬಿಟ್ಟ ಇಂತಹ ಶೂರರಿಗೆ ವೀರಸ್ವರ್ಗವು ದೊರೆಯುವುದೆಂಬುದರಲ್ಲಿ ಎಳ್ಳಷ್ಟಾದರೂ ಸಂಶಯವಿಲ್ಲ. ಸಿದ್ದಿ ಅಜೀಜ-ಫಾಜಲ್ಖಾನರಿಗೆ ವಿಶಾಲಗಡವನ್ನು ಮುತ್ತಲಿಕ್ಕೆ ಧೈರ್ಯ ಸಾಲದ್ದರಿಂದ ಅವರು ಪಾವನಗಡವನ್ನು ಹಿಡಿಕೊಂಡು, ಪನ್ಹಾಳಕ್ಕೆ ತಿರುಗಿ ಹೋದರು. ಈ ಭಾಗದಲ್ಲಿ ನಮ್ಮ ಚರಿತ್ರನಾಯಕನಿಗೆ ರಣಗಡ, ವಿಶಾಲಗಡ ಈ ಎರಡು ಕೋಟೆಗಳು ಮಾತ್ರ ಉಳಿದವು. ಅಷ್ಟರೊಳಗೆ ಕರ್ನಾಟಕ ದೊಳಗೆ ಬಂಡಾಯವೆದ್ದ ಸುದ್ದಿ ಬಂದುದರಿಂದ ಅದನ್ನು ಮುರಿಯಲಿಕ್ಕೆ ಅದಿಲ್ಶಾಹಿಯ ದಂಡು ಅಲ್ಲಿಗೆ ಹೋಯಿತು. ಆದ್ದರಿಂದ ನಮ್ಮ ಚರಿತ್ರ ನಾಯಕನಿಗೆ ವಿಜಾಪುರ ಸರಕಾರದ ದಾಳಿಯ ಹೆದರಿಕೆಯು ಕಡಮೆ ಯಾದರೂ ಸ್ವಾಮಿಭಕ್ತನಾದ ಬಾಜಿಪ್ರಭುವಿನ ಸಾವಿಗೋಸ್ಕರ ಅವನು ಬಹಳವಾಗಿ ನೊಂದುಕೊಂಡನು.

ಅದಿಲ್ಶಾಹಿಯ ಕಾಟವು ಅನಾಯಾಸವಾಗಿ ತಗ್ಗಿದ್ದರಿಂದಲೂ ಸಾಯಿಸ್ತೆಖಾನನು ಸುಮ್ಮನೇ ಕುಳಿತುದರಿಂದಲೂ ನಮ್ಮ ಚರಿತ್ರನಾಯಕ ನಿಗೆ ಕೆಲಮಟ್ಟಿಗೆ ಬಿಡುವು ದೊರೆಯಿತು. ಅವನು ವಿಶಾಲಗಡದಿಂದ ರಾಯಗಡಕ್ಕೆ ಬಂದು, ಅಲ್ಲಿಂದ ಪುಣೆಯ ನೆರೆಯಲ್ಲಿ ೧೧ ಮೈಲು ದೂರಿರುವ ಸಿಂಹಗಡಕ್ಕೆ ಬಂದು, ಸಾಯಿಸ್ತೆಖಾನನ ಚಲನವಲನ–ವಿಚಾರಗಳನ್ನು ಸೂಕ್ಷ್ಮರೀತಿಯಿಂದ ವಿಚಾರಿಸಿ ತಿಳಿದುಕೊಳ್ಳಲಿಕ್ಕೆ ಪ್ರಯತ್ನಮಾಡತೊಡಗಿ ದನು. ತನ್ನ ಅಷ್ಟಪ್ರಧಾನರ ಸಲಹೆಯನ್ನು ಕೇಳಲು, ಸಾಮದಾನ ಭೇದ ಗಳಿಂದ ಮೊಗಲರನ್ನು ಹಿಂದಟ್ಟಬೇಕೇ ಹೊರತು, ಶಕ್ತಿಯಿಂದ ಕೆಣಕ ಲಿಕ್ಕಾಗುವದಿಲ್ಲೆಂದು ಅವರು ಸ್ಪಷ್ಟವಾಗಿ ಉತ್ತರಕೊಟ್ಟರು. ಸಿವಾಜಿಯು ಸಿಂಹಗಡಕ್ಕೆ ಬಂದ ಸುದ್ದಿಯು ಹತ್ತಿದ ಕೂಡಲೆ, ಅವನು ಯಾವಾಗ ಏನು ಮೋಸಮಾಡುವನೋ ಎಂಬ ಹೆದರಿಕೆಯಿಂದ ಸಾಯಿಸ್ತೆಖಾನನು ತನ್ನ ಪಾಳಯದ ಕಾವಲನ್ನು ಅತಿಬಿಗಿಯಾಗಿ ಮಾಡಿದನು. ಕಾವಲು ಗಾರರ ಮೇಲ್ವಿಚಾರಣೆಗೋಸ್ಕರ ನಂಬಿಗಸ್ತರಾದ ಅಧಿಕಾರಿಗಳನ್ನು ನಿಯ ಮಿಸಿದನು; ಶಸ್ತ್ರಧಾರಿಯಾದ ಪರಕೀಯನು ಪಾಳಯದಲ್ಲಿ ಬರಕೂಡ ದೆಂದು ಕಟ್ಟಪ್ಪಣೆಯನ್ನಿತ್ತನು; ಒಮ್ಮೊಮ್ಮೆ ತಾನೂ ಅಕಸ್ಮಾತ್ತಾಗಿ

ಹೋಗಿ, ಕಾವಲಿನವರಿಗೆ ಎಚ್ಚರಿಕೆ ಕೊಡುತ್ತಿದ್ದನು. ಅಫಜುಲ್ಖಾನನನ್ನು ಕೊಂದಂತೆ ತನ್ನನ್ನಾದರೂ ಯಾವಾಗ ಮೋಸದಿಂದ ಕೊಲ್ಲುತ್ತಾನೋ ಏನೋ ಎಂಬ ಹೆದರಿಕೆಯು ಅವನ ಬಗೆಯಲ್ಲಿ ನೆಲೆಗೊಂಡಿತ್ತು. ತನ್ನ ಪಾಳಯದಲ್ಲಿದ್ದ ಮರಾಟ ರಜಪೂತ ಮುಸಲ್ಮಾನ ಸರದಾರರನ್ನು ಸಿವಾಜಿಯು ಯಾವಾಗ ಒಡೆಕೊಂಡು ತನ್ನ ಘಾತಮಾಡುತ್ತಾನೋ ಎಂಬ ಸಂಶಯವು ಅವನ ಮನಸ್ಸನ್ನು ಎಡೆಬಿಡದೆ ಕಟಿಯುತ್ತಿತ್ತು.

೧೬೬೧ ರಿಂದ ೧೬೬೨ ಜೂನದ ವರೆಗೆ ಮರಾಟರು ಏನು ಮಾಡಿದ ರೆಂಬುದು ಸರಿಯಾಗಿ ತಿಳಿಯುವುದಿಲ್ಲ. ಕಲ್ಯಾಣಭಿವುಂಡಿಯನ್ನು ತಿರುಗಿ ತೆಗೆದುಕೊಳ್ಳಲಿಕ್ಕೆ ಮರಾಟರು ಮಾಡಿದ ಪ್ರಯತ್ನವು ವ್ಯರ್ಥವಾದಂತೆ ತೋರುತ್ತದೆ. ನೇತಾಜಿ ಪಾಲಕರನೆಂಬ ಸಿವಾಜಿಯ ದಳವಾಯಿಯು ಮೊಗಲರ ರಾಜ್ಯವನ್ನು ಹೊಕ್ಕು, ಅಹಮ್ಮದನಗರದ ನೆರೆಯ ಹಳ್ಳಿಗಳನ್ನು ಸುಲಿಯ ತೊಡಗಿದ್ದರಿಂದ, ಮೊಗಲರ ಒಬ್ಬ ದಳವಾಯಿಯು ೭,೦೦೦ ರಾಹುತರೊಡನೆ ಅವನನ್ನು ಬೆನ್ನಟ್ಟಲು, ಅವನು ದಿನಾಲು ೪೫/೫೦ ಮೈಲು ಓಡಿಹೋಗಿ, ತಪ್ಪಿಸಿಕೊಳ್ಳುವಾಗ ವಿಜಾಪುರಪಟ್ಟಣದ ನೆರೆಯಲ್ಲಿ ಮೊಗಲರ ಕಯ್ಯಲ್ಲಿ ಸಿಕ್ಕುವ ಸಂದರ್ಭ ಬಂತು. ಆಗ ಸಿವಾಜಿಯ ಹಿತೈಷಿಯಾದ ರಸ್ತುಮಿಜಮಾನನೆಂಬ ಆದಿಲ್ಶಾಹಿ ಸರದಾರನು, ಮೊಗಲರ ದಳವಾಯಿಗೆ ಕೊಂಕಣ ಪ್ರಾಂತವು ಬಲು ಬಿಕ್ಕಟ್ಟಾಗಿರುತ್ತದೆಂತಲೂ ಅಲ್ಲಿ ಹೋದರೆ ಅವನ ದಂಡು ನಿಶ್ಚಯವಾಗಿ ನಾಶವಾಗುವದೆಂತಲೂ ತಾನೂ ತನ್ನ ದಂಡಿನೊಡನೆ ನೆರವಾಗುವೆನೆಂತಲೂ ಹೇಳಿ, ನೇತಾಜಿಯನ್ನು ಬೆನ್ನಟ್ಟುವುದನ್ನು ಬಿಡಿಸಿದನು (ಮಾರ್ಚ ೧೬೬೩).

ತಾನು ಮಾಡಿದ ಎಲ್ಲ ಪ್ರಯತ್ನಗಳು ವ್ಯರ್ಥವಾದ್ದನ್ನು ಕಂಡು ಸಿವಾಜಿಯು ಚಿಂತೆಯಲ್ಲಿ ಮುಳುಗಿದನು. ಸಾಯಿಸ್ತೆಖಾನನನ್ನು ಪುಣೆಯಿಂದ ಹೇಗೆ ಅಟ್ಟಬೇಕೆಂಬ ಎಣಿಕೆಯು ಅವನ ತಲೆಯನ್ನೆಲ್ಲ ತುಂಬಿಬಿಟ್ಟಿತು. ಖಾನನ ಚಲನವಲನ—ವಿಚಾರಗಳು ಗೂಢಚಾರರ ಮುಖದಿಂದ ಅವನಿಗೆ ಕೆಲಸುಟ್ಟಿಗೆ ಗೊತ್ತಾಗಿದ್ದವು. ರಾಜಕಾರ್ಯದಲ್ಲಿ ಉಪಯೋಗಿಸುವ ಚತುರೋಪಾಯಗಳಲ್ಲಿ ಒಂದನ್ನಾದರೂ ಬಳಿಕೆಯಲ್ಲಿ ತರಲಿಕ್ಕೆ ಪರಿ

ಸ್ಥಿತಿಯು ಅನುಕೂಲವಾಗಿದ್ದಿಲ್ಲ. ಸಾಮೋಪಾಯಕ್ಕೆ ಖಾನನು ಒಡಂಬಡು ವಂತಿದ್ದಿಲ್ಲ. ಏಕೆಂದರೆ ಶರಣು ಬಂದ ಕೂಡಲೆ ಸಿವಾಜಿಯನ್ನು ಸೆರೆಯಾಳಾಗಿ ರಾಜಧಾನಿಗೆ ಕಳಿಸಬೇಕೆಂದು ಬಾದಶಹನ ಒಳಸ್ಸಣೆ ಇತ್ತು. ದಾನೋಪಾಯವು ನಡೆಯುವಂತಿದ್ದಿಲ್ಲ. ಏಕೆಂದರೆ ಖಾನನು ಬಾದಶಹನ ಮಾವನಾದ್ದರಿಂದ ಹಣದ ಬಯಕೆಯು ಅವನಲ್ಲಿ ಎಳ್ಳಷ್ಟಾದರೂ ಇದ್ದಿಲ್ಲ. ದಂಡೋಪಾಯವನ್ನಂತೂ ಉಪಯೋಗಿಸಿ ಅದು ವ್ಯರ್ಥವಾದ್ದನ್ನು ಮೊನ್ನೆ ತಾನೇ ಆದ ಅನುಭವದಿಂದ ಮನಗಂಡಿದ್ದನು. ಇನ್ನು ಉಳಿದ ಭೇದೋಪಾಯವು ಆಕಾಲದ ಪರಿಸ್ಥಿತಿಯಲ್ಲಿ ಶಕ್ಯವಿದ್ದಿಲ್ಲ. ಏಕೆಂದರೆ ಖಾನನ ಬಲಗಯ್ಯಾದ ಯಶವಂತಸಿಂಗನು ಸ್ವಾಮಿಭಕ್ತನೂ ರಾಜನಿಷ್ಠನೂ ಆಗಿದ್ದನು, ಮತ್ತು ಖಾನನ ಬಳಿಯಲ್ಲಿದ್ದ ಮರಾಟ ಸರದಾರರು ಮುಸಲ್ಮಾನರನ್ನು ಹಳಿಯುತ್ತಿದ್ದರೂ ಬಾದಶಹನಿಗೆ ಹೆದರಿ ಸಾಯುತ್ತಿದ್ದರು. ಇಂತಹ ಬಿಕ್ಕಟ್ಟಿನ ಸಂದರ್ಭದಲ್ಲಿ ಯಾವ ಧೈರ್ಯಶಾಲಿಯು, ಯಾವ ಬಲ್ಲಿದನು, ಯಾವ ಜಾಣನು ಮಾಡುವುದಾದರೂ ಏನು? ಇಂತಹ ಪರಿಸ್ಥಿತಿಯಲ್ಲಿ ಸಾಮಾನ್ಯನಾದ ಯಾವ ಮನುಷ್ಯನಿಂದಲೂ ಏನೂ ಆಗಲಿಕ್ಕಿಲ್ಲೆಂದು ವಾಚಕರು ಒಡಂಬಡಬಹುದು.

ಆದರೆ ನಮ್ಮ ಚರಿತ್ರನಾಯಕನು ಅಮಾನುಷವೀರನಾಗಿದ್ದನು; ಅಥವಾ ಅವನಿಗೆ ದೈವಿಕಬೆಂಬಲವಿತ್ತು. ಆದ್ದರಿಂದ ಅವನು ತನ್ನ ಅಮಾನುಷ ಸಾಹಸಧೈರ್ಯಚಾತುರ್ಯಾದಿಗಳಿಂದ ಖಾನನನ್ನು ಪುಣೆಯಿಂದ ಓಡಿಸಲಿಕ್ಕೆ ಒಂದು ಹಂಚಿಕೆಯನ್ನು ಹುಡುಕಿ ತೆಗೆದನು. ಅದು ಅತ್ಯದ್ಭುತವಾದುದೂ ಅಪೂರ್ವವಾದುದೂ ಆದ್ದರಿಂದ ಅದನ್ನು ಇಲ್ಲಿ ಸವಿಸ್ತಾರವಾಗಿ ವರ್ಣಿಸುತ್ತೇವೆ. ಚಾಕಣದ ಕೋಟೆಯು ಕಯ್ವಶವಾದ ಬಳಿಕ ಖಾನನು ೧೬೬೦ ಇಸವಿಯ ಅಗಸ್ಟ ತಿಂಗಳಲ್ಲಿ ಪುಣೆಗೆ ತಿರುಗಿ ಬಂದು, ದಾದೋಜಿ ಕೊಂಡದೇವನು ಸಿವಾಜಿಗೋಸ್ಕರ ಕಟ್ಟಿಸಿದ ಮನೆಯಲ್ಲಿ ಉಳಿಕೊಂಡನೆಂದು ಹಿಂದೇ ಬರೆದಿರುತ್ತೇವಷ್ಟೇ. ಆ ಅರಮನೆಯ ಸುತ್ತಲೂ ಆಳುಕಾವಲುಗಾರರ ಮನೆಗಳೂ ವಾದ್ಯದವರ ಮತ್ತು ಸಣ್ಣ ದೊಡ್ಡ ಅಧಿಕಾರಿಗಳ ಮನೆಗಳೂ ಸುತ್ತುಗಟ್ಟಿದ್ದವು. ಮುಂದೆ ಕೆಲವು ಅಂತರದ

ಮೇಲೆ ಸಿಂಹಗಡದ ದಾರಿಯಲ್ಲಿ ಯಶವಂತಸಿಂಗ ಮಹಾರಾಜನು ತನ್ನ ೧೦,೦೦೦ ದಂಡಿನೊಡನೆ ಪಾಳಯ ಹಾಕಿಕೊಂಡಿದ್ದನು.

ನಮ್ಮ ಚರಿತ್ರನಾಯಕನು ತನ್ನಲ್ಲಿದ್ದ ಚಪಲತಾಧೈರ್ಯಸಾಹಸ ಚಾತುರ್ಯಗಳ ಸಾಹಾಯ್ಯದಿಂದ ತನಗೆ ಬೇಕಾದ ಎಲ್ಲ ಪೂರ್ವಸಿದ್ಧತೆಯನ್ನು ಮಾಡಿಕೊಂಡು, ನೇತಾಜಿ ಪಾಲಕರನನ್ನು ೧,೦೦೦ ದಂಡಾಳುಗಳೊಡನೆ ಖಾನನ ಪಾಳಯದ ಒಂದು ಬದಿಯಲ್ಲಿಯೂ ಪೇಶ್ವೆಯಾದ ಮೋರೋಪಂತನನ್ನು ೧,೦೦೦ ಮಂದಿ ಸಿಪಾಯರೊಡನೆ ಮತ್ತೊಂದು ಬದಿಯಲ್ಲಿಯೂ ಗುಪ್ತವಾಗಿರಿಸಿ, ಖೇಡದ ದೇಶಪಾಂಡೆಯ ಮನೆತನದ ಅಣ್ಣತಮ್ಮಂದಿರಾದ ಬಾಬಾಜಿ ಬಾಪುಜಿ, ಚಿಮಣಾಜಿ ಬಾಪುಜಿ ಎಂಬಿಬ್ಬರನ್ನು ಬೆನ್ನುಗಾವಲಾಗಿ ತೆಗೆದುಕೊಂಡು, ಕೆಚ್ಚೆದೆಯ ನಂಬಿಗಸ್ತರಾದ ಸಾವಿರ ಜನರನ್ನು ಸಂಗಡ ಕರೆದುಕೊಂಡು, ಬೆಳಿಗ್ಗೆ ಊಟ ತೀರಿಸಿಕೊಂಡು ಸಿಂಹಗಡದಿಂದ ಹೊರಟು, ಸಪ್ಪಳಿಲ್ಲದೆ ಮೂರುಸಂಜೆಯಲ್ಲಿ ಪುಣೆಗೆ ಬಂದು ತಲುಪಿದನು (೫ ಎಪ್ರಿಲ ೧೬೬೩). ಊರ ಹೊರಗೆ ೬೦೦ ಜನರನ್ನು ಬಿಟ್ಟು, ತನಗೆ ಬೇಕಾದ ೪೦೦ ಜನರೊಡನೆ ಖಾನನ ಪಾಳಯವನ್ನು ಹೊಕ್ಕನು. ಕಾವಲುಗಾರರು ಕೇಳಲು, ತಾವು ಬಾದಶಾಹಿ ದಂಡಿನ ದಕ್ಷಿಣದ ಸಿಪಾಯರೆಂದು ಹೇಳಿದ್ದರಿಂದ, ಅವರಿಗೆ ಯಾರೂ ಅಡ್ಡಿ ಮಾಡಲಿಲ್ಲ. ಕೆಲಹೊತ್ತು ಅಲ್ಲಿಲ್ಲೆ ಅಡಗಿಕೊಂಡಿದ್ದು, ಎಲ್ಲರು ಮಲಗಿಕೊಂಡ ಬಳಿಕ ನಡಿರುಳಿನಲ್ಲಿ ಖಾನನ ಪಾಳಯವನ್ನು ಹೊಕ್ಕು, ಕಾವಲುಗಾರರನ್ನು ಕೊಂದು ಅಥವಾ ಹೆಡಮುರಿಗೆ ಕಟ್ಟಿ, ಅಲ್ಲಲ್ಲಿ ತನ್ನ ಜನರನ್ನು ಕಾವಲಾಗಿರಿಸಿ, ಖಾನನ ಅಡಿಗೆ ಮನೆಯನ್ನು ಹೊಕ್ಕು ಅಲ್ಲಿ ಎಚ್ಚತ್ತಿದ್ದ ಜನರನ್ನು ಕೊಂದು, ಅಲ್ಲಿಂದ ಒಳಗೆ ಹೋಗಲಿಕ್ಕೆ ನೋಡಲು, ನಡುವಿನ ಗೋಡೆಯಲ್ಲಿ ಮೊದಲಿದ್ದ ಬಾಗಿಲು ಇರಲಿಲ್ಲ!! ಖಾನನ ಮನೆಯ ಹೆಂಗಸರು ಒಳಗಿದ್ದುದರಿಂದ ಖಾನನು ಆ ಬಾಗಿಲನ್ನು ಕಿತ್ತಿಸಿ, ಗೋಡೆಯನ್ನೇರಿಸಿ ಬಿಟ್ಟಿದ್ದನು. ಇಂತಹ ಆಕಸ್ಮಿಕತೊಂದರೆಗೆ ನಮ್ಮ ಚರಿತ್ರನಾಯಕನು ಹೆದರುವವನೇ? ಇದನ್ನು ಮುಂಗಂಡು ಅವನು ಗೋಡೆಯನ್ನು ಕೆಡುವುವ ತಕ್ಕ ಸಾಧನಗಳನ್ನು ತೆಗೆದುಕೊಂಡು ಬಂದಿದ್ದನು. ಗೋಡೆಯನ್ನು ಅಗಿಯುವುದಕ್ಕೆ ತುಸುಹೊತ್ತು ಮಾತ್ರಹತ್ತಿತು. ಆ ಸಪ್ಪಳ

ವನ್ನು ಕೇಳಿ ಎಚ್ಚತ್ತ ಹೆಂಗಸರು, ಖಾನನನ್ನು ಎಬ್ಬಿಸಿದರು. ಅವನು ಅವ
ರನ್ನು ಹುಚ್ಚರಿದ್ದೀರೆಂದು ಜರೆದು, ತನ್ನ ನಿದ್ರೆಯನ್ನು ಕೆಡಿಸಕೂಡದೆಂದು
ನಿಷ್ಠುರವಾಗಿ ಹೇಳಿದನು !!! ಮನುಷ್ಯಹೋಗುವಷ್ಟು ಕಿಂಡಿಯಾದ ಬಳಿಕ
ಶಿವಾಜಿ ಚಿಮಣಾಜಿಯರು ಮೊದಲು ಒಳಹೊಕ್ಕರು. ತರುವಾಯ ೨೦೦
ಮಂದಿ ಅವನ ಜತೆಗಾರರು ಹಿಂಬಾಲಿಸಿದರು. ಒಳಗೆ ದೀವಿಗೆಗಳ ಬೆಳಕು
ಜಳಜಳವಾಗಿ ಬಿದ್ದಿತ್ತು. ಗುಡಾರಪಡದೆಗಳಿಂದ ಮಾಡಿದ ಕೋಣೆಗಳು
ಒಂದರಹಿಂದೊಂದು ಎಡೆಬಿಡದೆ ಸಾಲುಗಟ್ಟಿದ್ದವು. ತನ್ನ ಖಡ್ಗದಿಂದ
ಪಡದೆಗಳನ್ನು ಕತ್ತರಿಸುತ್ತ ಶಿವಾಜಿಯು ಖಾನನು ಮಲಗಿದ್ದ ಕೋಣೆಗೆ
ಹೋದನು. ಅವನ ಹತ್ತರಿದ್ದ ಹೆಂಗಸರು ಗಾಬರಿಯಾಗಿ ಖಾನನನ್ನು
ಎಬ್ಬಿಸಿದರು. ಅವನು ತನ್ನ ಕತ್ತಿಯನ್ನು ತೆಗೆಯುವಾಗ ಶಿವಾಜಿಯು
ತನ್ನ ಕತ್ತಿಯ ಹೊಡತದಿಂದ ಖಾನನ ಕೈ ಹೆಬ್ಬೆಟ್ಟನ್ನು ಕತ್ತರಿಸಿ
ಚಲ್ಲಿದನು. ಅಷ್ಟರಲ್ಲಿ ಜಾಣಳಾದ ಒಬ್ಬ ಹೆಂಗಸು ದೀವಿಗೆಗಳನ್ನು
ಆರಿಸಿ ಬಿಟ್ಟುದರಿಂದ ಮನೆಯಲ್ಲಿ ಕತ್ತಲೆಕವಿಯಿತು. ಕೆಲದಾಸಿಯರು
ಖಾನನನ್ನು ಒಯ್ದು ಸುರಕ್ಷಿತವಾದ ಒಂದು ಕೋಣೆಯಲ್ಲಿಟ್ಟರು. ಆ
ಕತ್ತಲೆಕಾಳಿನಲ್ಲಿ ಗಂಡಸರಾರು? ಹೆಂಗಸರಾರು? ತಿಳಿಯಲಿಲ್ಲ. ಇಬ್ಬರು
ಮರಾಟರು ನೀರುತುಂಬಿದ ಡೋಣಿಯಲ್ಲಿ ಬಿದ್ದು ಚಡಪಡಿಸಿಕೊಂಡೆದ್ದರು.
ಮುಂದೆ ನಡೆದ ಕೊಲೆಯಲ್ಲಿ ಖಾನನ ಮಗನಾದ ಅಬುಲಫಾತನೂ ಒಬ್ಬ
ಮುಸಲ್ಮಾನ ಸರದಾರನೂ ಖಾನನ ೮ ಮಂದಿ ಹೆಂಡಂದಿರೂ ಸತ್ತರು
ಅಥವಾ ದೊಡ್ಡಗಾಯ ಹೊಂದಿದರು. ಪಾಳಯದಲ್ಲೆಲ್ಲ ಹಾಹಾಕಾರ
ಎದ್ದಿತು. ಒದರಾಟ ಚೀರಾಟಗಳು ಹೆಚ್ಚಿದವು. ಎಲ್ಲ ಕಡೆಯಿಂದ ಜನರು
ಖಾನನ ನೆರವಿಗೆ ಬರತೊಡಗಿದರು. ಅರಮನೆಯ ಹೊರಗೆ ಬಾಬಾಜಿ
ಬಾಪುಜಿಯ ಕಯ್ಕೆಳಗಿದ್ದ ೨೦೦ ಮಂದಿ ಮರಾಟರು ಎದುರಾದವರನ್ನು
ಕೊಲ್ಲುತ್ತ ಮಲಗಿದ್ದವರನ್ನು ಹೊಡೆದು ಎಬ್ಬಿಸಿ "ಪಾಹರೆಮಾಡುವುದು
ಹೀಗೆ, ಏನು?" ಎಂದು ಹಾಸ್ಯದಿಂದ ಕೇಳುತ್ತ, ವಾದ್ಯದವರಬಳಿಗೆ ಹೋಗಿ
ವಾದ್ಯಮಾಡಬೇಕೆಂದು ನವಾಬಸಾಹೇಬರ ಅಪ್ಪಣೆಯಾಗಿದೆಂದು ತಿಳಿ
ಸಲು, ಅವರು ವಾದ್ಯಮಾಡಲಾರಂಭಿಸಿದರು. ಈ ವಾದ್ಯದ ಸಪ್ಪಳದಲ್ಲಿ
ಖಾನನ ಅರಮನೆಯ ಗೋಳಾಟವು ಅಡಗಿಹೋಯಿತು. ಆದರೆ ಪಾಳಯ

ವೆಲ್ಲ ಈ ಕಾಲಕ್ಕೆ ಎಚ್ಚತ್ತುದರಿಂದ ಇನ್ನು ಮುಂದೆ ಅಲ್ಲಿ ನಿಲ್ಲುವುದು ಸುರಕ್ಷಿತವಲ್ಲೆಂದೆಣಿಸಿ, ತಮ್ಮ ಜನರನ್ನೆಲ್ಲ ಕರೆದುಕೊಂಡು, ಮೊಗಲರ ಪಕ್ಷದವರಂತೆ ನಟಿಸುತ್ತ ಮರಾಟರು ರಾಜಮಾರ್ಗದಿಂದ ಸುರಕ್ಷಿತವಾಗಿ ಹೊರಟುಹೋದರು. ಮೊಗಲರು ಪಟ್ಟಣದಲ್ಲೇ ಅತ್ತಿತ್ತ ಹುಡುಕುತ್ತ ಹೊತ್ತುಗಳೆದರು. ಈ ಇರಳುಗಾಳಗದಲ್ಲಿ ೬ ಮಂದಿ ಮರಾಟರು ಸತ್ತರು. ಮತ್ತು ೪೦ ಮಂದಿ ಗಾಯವಾದರು. ಖಾನನ ಒಬ್ಬ ಮಗನೂ ಒಬ್ಬ ದಳವಾಯಿಯೂ ೬ ಮಂದಿ ಮಡದಿಯರೂ ೪೦ ಆಳುಗಳೂ ಸತ್ತುದಲ್ಲದೆ, ಅವನ ಬೇರೆ ಇಬ್ಬರು ಮಕ್ಕಳೂ ೮ ಮಂದಿ ಹೆಂಗಸರೂ ಸ್ವತಃ ಸಾಯಿಸ್ತೆಖಾನನೂ ಗಾಯಹೊಂದಿದರು.

ಈ ಅತ್ಯದ್ಭುತವಾದ ಸಾಹಸಕಾರ್ಯದಿಂದ ಸಾಯಿಸ್ತೆಖಾನನಲ್ಲಿ ಸಿವಾಜಿಯು ಹೆದರಿಕೆಯು ಮಿತಿಮೀರಿ ಬೆಳೆಯಿತು; ಸಿವಾಜಿಯಲ್ಲಿ ದೈವಿಕಶಕ್ತಿಯುಂಟೆಂಬ ತಿಳಿವಳಿಕೆಯು ಮೊಗಲರ ದಂಡಿನಲ್ಲಿ ಹೆಚ್ಚಿತು; ಮತ್ತು ಅವನ ಕೀರ್ತಿಯು ದಿಗ್ದೇಶದಲ್ಲಿ ಹಬ್ಬಿತು. ಖಾನನಿಗಂತೂ ಯಾರನ್ನು ನಂಬಬೇಕು, ಯಾರನ್ನು ಬಿಡಬೇಕು ಎಂಬುದು ತಿಳಿಯದ ಹಾಗಾಯಿತು. ಸಿವಾಜಿಯು ಮನುಷ್ಯನಾಗಿರದೆ ಸೈತಾನನಾಗಿರುತ್ತಾನೆಂಬ ತಿಳಿವಳಿಕೆಯು ಅವನಲ್ಲಿ ನೆಲೆಗೊಂಡಿತು. ಯಶವಂತಸಿಂಗ ಮಹಾರಾಜನು ಇಷ್ಟುದಿವಸ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಮರುದಿವಸ ಅವನು ಖಾನನ ಸಮಾಚಾರಕ್ಕೆ ಬರಲು "ನಿನ್ನೆ ರಾತ್ರಿ ಹಗೆಯು ನನ್ನ ಮೇಲೆ ಬಿದ್ದಾಗ, ತಾವು ಅದಕ್ಕೂ ಮೊದಲು ಅವನೊಡನೆ ಕಾದಿ ಮಡಿದಿರೆಂದು ಭಾವಿಸಿದ್ದೆನು," ಎಂದು ಮನಸ್ಸಿಗೆ ಹತ್ತುವಹಾಗೆ ಮಾತಾಡಿದ್ದಲ್ಲದೆ, ಮಹಾರಾಜನ ಅಪ್ರತ್ಯಕ್ಷ-ಸಾಹಾಯದಿಂದಲೇ ಸಿವಾಜಿಯು ಅರಮನೆ ಹೊಕ್ಕು ತನ್ನ ಬೊಟ್ಟು ಕಡಿದನೆಂದು ತನ್ನ ಸೋದರಳಿಯನಾದ ಬಾದಶಹನಿಗೆ ಬರೆದು ತಿಳಿಸಿದನು. ಆದ್ದರಿಂದ ದಕ್ಷಿಣದಲ್ಲೆಲ್ಲ ಮಹಾರಾಜನು ಸಿವಾಜಿಗೆ ಅನುಕೂಲನಾಗಿದ್ದನೆಂಬ ತಪ್ಪುತಿಳಿವಳಿಕೆಯು ಹಬ್ಬಿತು. ಆದರೆ ಸಿವಾಜಿಯು ಒಂದು ಸಂದರ್ಭದಲ್ಲಿ ತನಗೆ ದೇವರ ಹೊರತು ಮನುಷ್ಯರಾರೂ ಪ್ರೇರಿಸಲಿಲ್ಲೆಂದು ಹೇಳಿದ್ದಲ್ಲದೆ, ರಾಜಾಪುರದಲ್ಲಿ ತನ್ನ ಪ್ರತಿನಿಧಿಯಾದ ರಾವಜಿರಾಯನಿಗೆ ಅದರಂತೆ ಸವಿಸ್ತಾರವಾಗಿ ಪತ್ರ ಬರೆಯಿ

ಸಿದನು. ಈ ಕಾರಣಗಳಿಂದ ಯಶವಂತಸಿಂಗ ಮಹಾರಾಜನ ಅಂಗವು ಇದರಲ್ಲಿದ್ದಿಲ್ಲವೆಂದು ಹೇಳಬಹುದು.

ಸಿವಾಜಿಯ ಉದ್ದೇಶವು ಸಫಲವಾಯಿತು. ಕಂಸಾಸುರನಿಗೆ ಕೃಷ್ಣನು ಎಲ್ಲೆಲ್ಲಿಯು ಕಂಡಂತೆ, ಸಾಯಿಸ್ತೆಖಾನನಿಗೆ ಸಿವಾಜಿಯು ಕಾಣಲಾರಂಭಿಸಿದನು. ಅವನಿಗೆ ಪುಣೆಯಲ್ಲಿ ಇರಲಿಕ್ಕೆ ಧೈರ್ಯಸಾಲಲಿಲ್ಲ. ಆದ್ದರಿಂದ ಅವನು ತನ್ನ ಪಾಳಯವನ್ನು ಕಿತ್ತಿಕೊಂಡು, ಕೂಡಲೆ ಅವರಂಗಾಬಾದಿಗೆ ಹೋದನು (೮ ಎಪ್ರಿಲ). ಅವರಂಗಜೇಬ ಬಾದಶಹನು ಕಾಶ್ಮೀರಕ್ಕೆ ಹೋಗುವಾಗ ದಾರಿಯಲ್ಲಿ, ಪುಣೆಯಲ್ಲಿ ನಡೆದ ಅನಾಹುತದ ಸುದ್ದಿಯನ್ನು ಕೇಳಿ, ಸಾಯಿಸ್ತೆಖಾನನು ಎಚ್ಚರಗೇಡಿಯೂ ಅಯೋಗ್ಯನೂ ಆಗಿರುತ್ತಾನೆಂದು ಎಣಿಸಿ, ಅವನನ್ನು ಬಂಗಾಳ ಸುಬೆಗೆ ವರ್ಗಮಾಡಿ, ಅವನಸ್ಥಳದಲ್ಲಿ ತನ್ನ ಮಗನಾದ ಮುಜಮ್ಮನನ್ನು ದಕ್ಷಿಣದ ಸುಬೇದಾರನಾಗಿ ನೇಮಿಸಿದನು (೧ ಡಿಶಂಬರ). ಖಾನನು ೧೬೬೪ ಜನವರಿ ೧೫ ಸುಮಾರಕ್ಕೆ ಅರಸುಮಗನಾದ ಮುಜಮ್ಮನಿಗೆ ದಕ್ಷಿಣದ ಸುಬೆಯನ್ನು ಒಪ್ಪಿಸಿ, ಬಂಗಾಳಕ್ಕೆ ತೆರಳಿದನು.

ಸಾಯಿಸ್ತೆಖಾನನು ನಿರುತ್ಸಾಹನಾಗಿ ನಾಚಿಕೊಂಡು ಸೈತಾನನಾದ ಸಿವಾಜಿಯು ಮತ್ತೇನು ಮಾಡುತ್ತಾನೋ ಎಂಬ ಹೆದರಿಕೆಯಿಂದ ಉಮ್ಮಳಿಸುತ್ತ ಕುಳಿತಿರುವಾಗ, ಅಂಜಿದವರ ಮೇಲೆ ಕಪ್ಪೆಹಾಕಿದರೆಂಬ ಗಾದೆಯಂತೆ, ಸಿವಾಜಿಯು ಅತಿಸಾಹಸದಿಂದ ಅತಿಸಂಪತ್ತಿಯುಳ್ಳ ಮೊಗಲರ ಪಟ್ಟಣವಾದ **ಸುರತ**ವನ್ನು ಸುಲಿದನು (೬ ರಿಂದ ೧೦ ಜನವರಿ ೧೬೬೪). ಇದು ಮುಸಲ್ಮಾನರು ಮಕ್ಕಾಯಾತ್ರೆಗೆ ಹೊರಡುವ ಮುಖ್ಯ ಬಂದರದ ಸ್ಥಳವು. ಸುರತದ ಕೋಟೆಯು ತಾಪ್ತಿಹೊಳೆಯ ತೆಂಕಣ ದಂಡೆಯಲ್ಲಿದ್ದು, ಸಮುದ್ರದಿಂದ ೧೨ ಮೈಲು ದೂರವಾಗಿತ್ತು. ಅದನ್ನು ಹಿಡಿದುಕೊಳ್ಳಲಿಕ್ಕೆ ಸಿವಾಜಿಗೆ ಸಾಧನವಿದ್ದಿಲ್ಲ. ಆದರೆ ಆ ಕೋಟೆಗೆ ಹೊಂದಿ ೪ ಚವರಮೈಲು ಹರವಾದ ಮತ್ತು ಸಧನವಾದ ಸುರತಪಟ್ಟಣವಿತ್ತು. ಅಲ್ಲಿ ನಡೆಯುತ್ತಿದ್ದ ಸಮುದ್ರವ್ಯಾಪಾರದ ಮೇಲಿನ ಸುಂಕವು ಪ್ರತಿವರ್ಷ ಎರಡು ಲಕ್ಷರೂಪಾಯಿ ಮೋಗಲ್ಸರಕಾರಕ್ಕೆ ಬರುತ್ತಿದ್ದುದರಿಂದ, ಅದು

ಮೋಗಲಸಾಮ್ರಾಜ್ಯದಲ್ಲಿ ದೊಡ್ಡ ವ್ಯಾಪಾರದ ಪೊಳಲಾಗಿತ್ತು. ಅದರಲ್ಲಿ ಆಗ ಎರಡು ಲಕ್ಷ ಜನರ ವಸ್ತಿ ಇತ್ತು. ವ್ಯಾಪಾರಿಗಳು ಲಕ್ಷಾಧೀಶರೂ ಕೋಟ್ಯಾಧೀಶರೂ ಆಗಿದ್ದರೂ ಒಟ್ಟುಗೂಡಿ ತಂತಮ್ಮ ಮನೆಮಾರುಗಳನ್ನೂ ಊರನ್ನೂ ಕಾಪಾಡಿಕೊಳ್ಳುವಷ್ಟು ಒಮ್ಮನಸ್ಸಿನವರೂ ಧೈರ್ಯವಂತರೂ ಸ್ವಾವಲಂಬಿಗಳೂ ಆಗಿರಲಿಲ್ಲ. **ಇನಾಯುತ** ಖಾನನೆಂಬವನು ಪಟ್ಟಣದ ಸುಬೇದಾರನಾಗಿದ್ದನು. ಅವನು ಹೇಡಿಯಾಗಿದ್ದುದಲ್ಲದೆ, ಸರಕಾರದಿಂದ ಪ್ರತಿ ತಿಂಗಳು ೫೦೦ ಮಂದಿ ಕಾವಲುಗಾರರ ಸಂಬಳ ತೆಗೆದುಕೊಂಡು, ೧೦/೨೦ ಮಂದಿ ಜವಾನರಿಗೆ ಮಾತ್ರ ತಲಬುಕೊಟ್ಟು ಇಟ್ಟುಕೊಂಡಿದ್ದನು.

ಮಂಗಳವಾರ ೫ ನೆಯ ಜನವರಿ ೧೬೬೪ ಇಸವಿಯ ಬೆಳಿಗ್ಗೆ ಸಿವಾಜಿಯು ಸುರತದಿಂದ ೨೮ ಮೈಲು ದೂರಿರುವ ಒಂದು ಹಳ್ಳಿಯಲ್ಲಿ ದಂಡಿನೊಡನೆ ಇಳಿದಿರುತ್ತಾನೆಂತಲೂ ಬೇಗನೆ ಸುರತವನ್ನು ಲೂಟುಮಾಡಲಿಕ್ಕೆ ಬರುವವನಿದ್ದಾನೆಂತಲೂ ಸುದ್ದಿ ಬಂತು. ಕೂಡಲೆ ಜನರು ಗಾಬರಿಯಾಗಿ, ತಮಗೆ ಮನಬಂದ ದಿಕ್ಕುಗಳಲ್ಲಿ ಹೆಂಡರುಮಕ್ಕಳನ್ನು ಕರೆದುಕೊಂಡು ಓಡಿಹೋಗತೊಡಗಿದರು. ಸುಬೇದಾರನು ಹೆದರಿ ಕಪ್ಪುಗಾಣಿಕೆಯನ್ನು ಕೊಟ್ಟು ಸಿವಾಜಿಯನ್ನು ಹಿಂದಕ್ಕಟ್ಟುವ ಉದ್ದೇಶದಿಂದ ತನ್ನ ಒಬ್ಬ ಗುಮಾಸ್ತನನ್ನು ಅವನ ಬಳಿಗೆ ಕಳುಹಿದನು. ಸಿವಾಜಿಯು ಆ ಗುಮಾಸ್ತನನ್ನು ತಿರುಗಿ ಕಳುಹದೆ, ತನ್ನ ಸಂಗಡ ಕರೆಕೊಂಡು ಮರುದಿವಸ ೫ ತಾಸಿಗೆ ಒತ್ತರದಿಂದ ಸುರತಕ್ಕೆ ಬಂದು, ಬಹರ್ಾಣಪುರದ ಅಗಸೆಯ ಹತ್ತರವಲ್ಲಿದ್ದ ಒಂದು ತೋಟದಲ್ಲಿ ಇಳಿದುಕೊಂಡನು. ಹಿಂದಿನ ರಾತ್ರಿ ಸಿವಾಜಿಯು ಸುರತದ ಸುಬೇದಾರನಿಗೂ ಹಾಜಿ ಸಯ್ಯದ ಬೇಗ, ಬಹರ್ಜಿ ಬೋರಾ, ಹಾಜಿ ಕಾಸೀಮ ಎಂಬ ಮುವ್ವರು ದೊಡ್ಡ ವ್ಯಾಪಾರಿಗಳಿಗೂ ತನ್ನನ್ನು ಕಾಣಬೇಕೆಂದು ಪತ್ರ ಬರೆಯಿಸಿದ್ದನು. ಅವರು ಯಾರೂ ಬೆಟ್ಟಿಗೆ ಬಾರದ್ದರಿಂದ, ಅವನ ದಂಡಿನವರು ಊರನ್ನು ಸುಲಿಯತೊಡಗಿದರು. ಕೋಟೆಯೊಳಗಿದ್ದವರನ್ನು ಹೊರಗೆ ಬರಗೊಡಬಾರದೆಂಬ ಉದ್ದೇಶದಿಂದ ಕೆಲವು ತುಬಾಕಿಯುವರನ್ನು ಕೋಟೆಯ ಸುತ್ತಲು ನಿಲ್ಲಿಸಿದನು. ಕೋಟೆಯ ಕೊತ್ತಳದಿಂದ ಹಾರಿಸಿದ ತೋಪುಗಳು ಊರೊಳಗಿನ ಮನೆಗಳನ್ನು

ಸುಟ್ಟವೇ ಹೊರತು ಮರಾಟರನ್ನು ನೋಯಿಸಲಿಲ್ಲ. ಬುಧವಾರ ಗುರು ವಾರ ಶುಕ್ರವಾರ ಶನಿವಾರ ಈ ನಾಲ್ಕು ದಿವಸಗಳಲ್ಲಿ ಎರಡುಮೂರಂಶ ಪಟ್ಟಣವು ಧ್ವಸ್ತವಾಯಿತು. ಇಂಗ್ಲಿಷರೂ ಡಚ್ಚರೂ ತಂತಮ್ಮ ಉಗ್ರಾಣ ಗಳನ್ನು ಕಾಪಾಡಿಕೊಳ್ಳಲಿಕ್ಕೆ ಸನ್ನದ್ಧರಾಗಿ ನಿಂತುದರಿಂದ, ಮರಾಟರು ಅವರನ್ನು ತಡವಲಿಲ್ಲ. ಡಚ್ಚರ ಉಗ್ರಾಣದ ಹತ್ತರ ಬಹರ್ಜಿಬೋರಾನ ದೊಡ್ಡ ಮುತ್ತುರತ್ನದ ಅಂಗಡಿ ಇತ್ತು. ಅವನು ಆಕಾಲದ ವ್ಯಾಪಾರಿ ಗಳಲ್ಲಿ ಬಹು ಧನಿಕನಾಗಿದ್ದನು. ಆ ಅಂಗಡಿಯನ್ನು ಮರಾಟರು ಶುಕ್ರ ವಾರ ಸಂಜೆಯುವರೆಗೆ ಸಾವಕಾಶವಾಗಿ ಸುಲಿದರು. ಆದರಲ್ಲಿ ೨೮ ಸೇರು (ಏಳುಚಿಟ್ಟೆ) ದೊಡ್ಡದೊಡ್ಡ ಮುತ್ತುಗಳ ಹೊರತು, ಬಲು ಬೆಲೆಯುಳ್ಳ ವಜ್ರಗಳೂ ಪಚ್ಚೆಗಳೂ ರತ್ನಗಳೂ ದೊರೆತವೆಂದು ಹೇಳುತ್ತಾರೆ. ಹಾಜಿ ಸಯ್ಯದ ಬೇಗನ ಅಂಗಡಿಯು ಇಂಗ್ಲಿಷರ ಉಗ್ರಾಣದ ನೆರೆಯಲ್ಲಿತ್ತು. ಅದನ್ನು ಮರಾಟರು ಬುಧವಾರ ನಡುಹಗಲಿನಿಂದ ಗುರುವಾರ ಮಧ್ಯಾಹ್ನದ ವರೆಗೆ ಲೂಟುಮಾಡಿದರು. ಗುರುವಾರ ಮಧ್ಯಾಹ್ನದ ಮೇಲೆ ಕೆಲವು ಇಂಗ್ಲಿಷ ಸಿಪಾಯರು ತಮ್ಮ ಉಗ್ರಾಣಕ್ಕೆ ಹತ್ತಿರಿರುವ ಒಂದು ಅಂಗಡಿಗೆ ಬೆಂಕಿ ಹಚ್ಚಲಿಕ್ಕೆ ಯತ್ನಿಸುತ್ತಿರುವ ಮರಾಟರನ್ನು ಬೆದರಿಸಲಿಕ್ಕೆ ಬಂದಲು, ಸಯ್ಯದ ಬೇಗನ ಅಂಗಡಿಯ ಸುಲಿಗೆಗಾರರು ತಮ್ಮ ಮೇಲೆ ಬೀಳಲಿಕ್ಕೆ ಅವರು ಬಂದರೆಂದು ಹೆದರಿ ಓಡಿಹೋದರು. ಮರುದಿವಸ ಇಂಗ್ಲಿಷರು ಸಯ್ಯದ ಬೇಗನ ಅಂಗಡಿಯ ಮೇಲೆ ತಮ್ಮ ಕಾವಲಿರಿಸಿದ್ದರಿಂದ, ಅವನಿಗೆ ಹೆಚ್ಚಿನ ಲುಕ್ಸಾನೆಯಾಗಲಿಲ್ಲ. ತನ್ನ ಜನರ ಸುಲಿಗೆಯನ್ನು ತಡೆದುದ ರಿಂದ ಸಿವಾಜಿಗೆ ಸಿಟ್ಟು ಬಂತು. ಆದ್ದರಿಂದ ಅವನು ಇಂಗ್ಲಿಷರ ಬಳಿಗೆ ಒಬ್ಬ ಮನುಷ್ಯನನ್ನು ಕಳುಹಿದನು. ಅವನು ಬಂದು ಇಂಗ್ಲಿಷ ಸುಬೇದಾರ ನಿಗೆ ತಿಳಿಸಿದ್ದೇನಂದರೆ:—ಮರಾಟರು ನಿಮ್ಮ ಗುಡವಗೆ ಹೋಗದಿದ್ದರೂ ಸಯ್ಯದಬೇಗನ ಅಂಗಡಿಯನ್ನು ಸುಲಿಯಲಿಕ್ಕೆ ನೀವು ಅಡ್ಡಮಾಡಿದಿರಿ. ಇದು ನ್ಯಾಯವಲ್ಲ. ಸಯ್ಯದನ ಅಂಗಡಿಯನ್ನು ಸುಲಿಯ ಗೊಡಿರಿ. ಇಲ್ಲ ವಾದರೆ ೩ ಲಕ್ಷ ರೂಪಾಯಿ ಕೊಡಿರಿ. ಎರಡೂ ಮಾಡದಿದ್ದರೆ ಸಿವಾಜಿ ಮಹಾರಾಜನು ಸ್ವತಃ ಬಂದು, ನಿಮ್ಮ ವಖಾರಗಳನ್ನು ಸುಟ್ಟು ಬೂದಿ ಮಾ ಡುವುದಲ್ಲದೆ, ನಿಮ್ಮೆಲ್ಲರನ್ನು ಕೊಲ್ಲಿಸಿಬಿಡುವನು. ಈ ಸಂದೇಶವನ್ನು ಕೇಳಿ,

ಆಕ್ಸನ್ಡನ್ನನೆಂಬ ಇಂಗ್ಲಿಷ ಮುಖ್ಯಾಧಿಕಾರಿಯು ಮರುದಿವಸ (ಶನಿವಾರ) ಮುಂಜಾನೆ ಉತ್ತರಕೊಡುವೆನೆಂದು ಹೇಳಿ ಕಳುಹಿದನು. ಅವನು ತನ್ನ ಜತೆಗಾರರೊಡನೆ ಆಲೋಚಿಸಿ ಶನಿವಾರ ಬೆಳಿಗ್ಗೆ ಹೇಳಿ ಕಳುಹಿದ್ದೇನಂದರೆ:—ತಮ್ಮ ಎರಡೂ ಬೇಡಿಕೆಗಳನ್ನು ನಾವು ನಿರಾಕರಿಸುತ್ತೇವೆ. ನಾವು ಓಡಿಹೋಗಲಿಕ್ಕೆ ಮನಸ್ಸುಮಾಡದೆ, ತಮ್ಮನ್ನು ಎದುರುನೋಡುತ್ತ ಕೂಡ್ರುವೆವು. ತಾವು ಏನು ಬೇಕಾದ್ದನ್ನು ಮಾಡಬಹುದು. ತಾವು ಗೊತ್ತು ಮಾಡಿದ ವೇಳೆಗಿಂತ ಒಂದು ಪ್ರಹರ ಮೊದಲೇ ಬಂದರೂ ನಮ್ಮದೇನೂ ಅಡ್ಡಿಯಿಲ್ಲ.” ಈ ಉತ್ತರವನ್ನು ಕೇಳಿ ಸಿವಾಜಿಯು ಸುಮ್ಮನಾದನಂತೆ.

ಸುರತಪಟ್ಟಣದ ಹೇಡಿ ಸುಬೇದಾರನಾದ ಇನಾಯತಖಾನನು ಸಿವಾಜಿಯು ಬರುತ್ತಾನೆಂಬ ಸುದ್ದಿಯನ್ನು ಕೇಳಿದ ಕೂಡಲೇ ಕೋಟೆಗೆ ಓಡಿಹೋದನೆಂದು ಹಿಂದೆ ಹೇಳಿರುತ್ತೇವಷ್ಟೇ. ಈ ದೆಸೆಗೇಡಿಯು ಸಿವಾಜಿಯನ್ನು ಕೊಲ್ಲಲಿಕ್ಕೆ ಕೆಲವು ಜನರನ್ನು ಹುರಿದುಂಬಿಸಿ ಕಳುಹಿದನು (ಗುರುವಾರ). ಒಪ್ಪಂದಮಾಡಿಕೊಳ್ಳಲಿಕ್ಕೆ ಸುಬೇದಾರನ ಕಡೆಯಿಂದ ಬಂದಿರುತ್ತೇವೆಂದು ಹೇಳಿದ್ದರಿಂದ ಕಾವಲುಗಾರರು ಆ ಕೊಲೆಗಡಕರನ್ನು ಒಳಗೆ ಬಿಟ್ಟರು. ಅವರು ಸಿವಾಜಿಯನ್ನು ಕಂಡು ಅವನು ಒಡಂಬಡದಂತಹ ಶರ್ತುಗಳನ್ನು ಅವನ ಮುಂದಿರಿಸಿದರು. ಅದಕ್ಕೆ ಸಿವಾಜಿಯು, ನಿಮ್ಮ ಒಡೆಯನು ಹೆಂಗಸಿನಂತೆ ಓಡಿಹೋಗಿ ಕೋಟೆಯಲ್ಲಿ ಅಡಗಿಕೊಂಡು, ನಾನೂ ಹೆಂಗಸಿದ್ದೇನೆಂದೆಣಿಸಿ, ಇಂತಹ ಶರ್ತುಗಳನ್ನು ಕಳಿಸಿರುತ್ತಾನೇನು? ಎಂದು ಕೇಳಿದನು. ಆದಕ್ಕೆ ಒಬ್ಬ ತುಂಟನಾದ ತರುಣನು “ಸ್ವಾಮಿ, ನಾವೇನು ಹೆಂಗಸರಲ್ಲ; ಇನ್ನೂ ತುಸು ತಮಗೆ ಹೇಳತಕ್ಕದ್ದಿದೆ,” ಎಂದು ಉತ್ತರಕೊಟ್ಟು, ತನ್ನ ಸೊಂಟದಿಂದ ಕಠಾರಿಯನ್ನು ತೆಗೆದು ಸಿವಾಜಿಯನ್ನು ಇರಿಯಲಿಕ್ಕೆ ಭರದಿಂದ ಹೋದನು. ಕೂಡಲೆ ಬೆನ್ನುಗಾವಲಿನವನು ಅವನ ಕಯ್ಯನ್ನು ಒಂದೇ ಹೊಡತಕ್ಕೆ ಕತ್ತರಿಸಿ ಚೆಲ್ಲಿದನು!! ಆ ವೀರ ಕೊಲೆಗಡಕನು ನೆತ್ತರ ಸುರಿಯುತ್ತಿರುವ ತನ್ನ ಮೋಟ ಕಯ್ಯಿಂದಲೇ ಸಿವಾಜಿಯ ಎದೆಯನ್ನು ತಿವಿದು ಅವನನ್ನು ನೆಲದಮೇಲೆ ಉರುಳಿಸಿದನು. ಸಿವಾಜಿಯು ಸತ್ತನೆಂದು ಹಾಹಾಕಾರವಾದ್ದರಿಂದ ಜನರ

ಗುಂಪು ಕೂಡಿತು. ಅಷ್ಟರೊಳಗೆ ಕಾವಲಿಗನು ಆ ಕೊಲೆಗಡಕನ ತಲೆ ಯನ್ನು ಸೀಳಿ ಎರಡು ಹೋಳು ಮಾಡಿಬಿಟ್ಟಿದ್ದನು; ಮತ್ತು ಉಳಿದವರು ಕೊಲೆಗಡಕನ ಜತೆಗಾರರನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದರು. ಸಿವಾ ಜಿಯು ಎದ್ದು ಕತ್ತಿಯನ್ನು ತೆಗೆದುಕೊಂಡು, ನಾಲ್ಕುಜನರ ತಲೆಯನ್ನು ಹಾರಿಸಿ ೨೪ ಮಂದಿಯ ಕಯ್ಗಳನ್ನು ಕಡಿದು, ಉಳಿದವರಿಗೆ ಪ್ರಾಣದಾನ ಕೊಟ್ಟನು!! ಈ ಮೇರೆಗೆ ನಮ್ಮ ಚರಿತ್ರನಾಯಕನ ಮೇಲೆ ಬಂದ ಕುತ್ತು ಪರಿಹಾರವಾಯಿತು.

ಈ ಸುಲಿಗೆಯಲ್ಲಿ ನಮ್ಮ ಚರಿತ್ರನಾಯಕನಿಗೆ ಒಂದು ಕೋಟಿ ರೂಪಾಯಿ ದೊರೆಯಿತು. ಸುರತಕ್ಕೆ ಬಂದ ಕೂಡಲೆ ಸಿವಾಜಿಯು ಸಾರಿದ್ದೇ ನಂದರೆ:—ಅವರಂಗಜೀಬ ಬಾದಶಹನು ನನ್ನ ರಾಜ್ಯವನ್ನೊಳನುಗ್ಗಿ ನನ್ನ ಕೆಲವು ಆಪ್ತರನ್ನು ಕೊಲ್ಲಿಸಿದ್ದರಿಂದ, ಅದರ ಮುಯ್ಯ ತೀರಿಸಿಕೊಳ್ಳ ಲಿಕ್ಕೆ ಬಂದಿರುತ್ತೇನೆ ಹೊರತು ವ್ಯಾಪಾರಿಗಳಿಗೆ, ಇಂಗ್ಲಿಷರಾಗಲಿ ಬೇರೆ ಯವರಾಗಲಿ, ಅಪಾಯಮಾಡಲಿಕ್ಕೆ ಬಂದಿರುವುದಿಲ್ಲ." ಆದರೆ ದಾಳಿ ಗಾರರು ಈ ವಚನವನ್ನು ಪಾಲಿಸದ್ದರಿಂದ ಇದು ಪೊಳ್ಳುಮಾತೇ ಆಯಿತು. ಆಗ್ರಾದ ಒಬ್ಬ ಮುದುಕ ವ್ಯಾಪಾರಿಯು ಆದೇ ತಾನು ೪೦ ಎತ್ತಿನ ಒಜ್ಜೆ ಅರಿವೆಗಳನ್ನು ಮಾರಾಟಕ್ಕೆ ತಂದಿದ್ದನು. ಅವು ಇನ್ನೂ ಮಾರಾಟಾಗದ್ದ ರಿಂದ ಸಿವಾಜಿಗೆ ಕೆಲವು ಬೆಲೆಯುಳ್ಳ ಅರಿವೆಗಳನ್ನು ಕೊಟ್ಟು, ನುಣುಚಿ ಕೊಳ್ಳಲಿಕ್ಕೆ ಎತ್ತುಗಡೆ ಮಾಡಿದನು. ನಗದು ಹಣವನ್ನು ಕೇಳಲು, ಅವನು ಇಲ್ಲೆಂದು ಹೇಳಿದನು. ಆದ್ದರಿಂದ ಸುಲಿಗೆಗಾರರು ಸಿವಾಜಿಯ ಅಪ್ಪಣೆ ಯಂತೆ ಆ ವರ್ತಕನ ಬಲಗಯ್ಯನ್ನು ಕಡಿದು, ಅವನ ಅರಿವೆಗಳನ್ನು ಸುಟ್ಟು ಬಿಟ್ಟರು!!! ಈ ಮೇರೆಗೆ ನಾನಾತರದ ಕ್ರೂರಕೃತ್ಯಗಳಿಂದ ಸಿವಾಜಿಯು ಹಣವನ್ನು ಸೆಳೆದನೆಂದು ಇಂಗ್ಲಿಷ ಡಚ್ಚವ್ಯಾಪಾರಿಗಳು ಬರೆದಿಟ್ಟಿದ್ದಾರೆ. ಮರಾಟರು ಚಿನ್ನ ಬೆಳ್ಳಿ ಮುತ್ತು ರತ್ನಗಳ ಹೊರತು ಬೇರೆ ಸರಕುಗಳನ್ನು ಮುಟ್ಟಲಿಲ್ಲವಂತೆ!!!

ನಾಲ್ಕುದಿವಸ ಹಗಲಿರಳು ಗೆಯ್ದು ಸುಲಿಗೆಯಿಂದ ಮನವಣಿ ಹಣ ದೊರೆದುದರಿಂದಲೂ ಮೊಗಲರ ದಂಡು ಬರುತ್ತದೆಂದು ಸುದ್ದಿ ಬಂದುದ

ರಿಂದಲೂ ಆದಿತ್ಯವಾರ ದಿವಸ (೧೦ ಜನವರಿ ೧೬೬೪) ಮುಂಜಾನೆ ಊಟ ತೀರಿಸಿಕೊಂಡು ಅಲ್ಲಿಂದ ಹೊರಟು, ೧೨ ಮೈಲು ದಾರಿ ನಡೆದು, ಒಂದು ಹಳ್ಳಿಯಲ್ಲಿ ಇಳಿಕೊಂಡನು. ಅವನು ಯಾವಾಗ ಮತ್ತೆ ತಿರುಗಿ ಬರುತ್ತಾನೊ ಎಂಬ ಹೆದರಿಕೆಯಿಂದ ಓಡಿಹೋದ ಜನರು ಮರಳಿ ಬರಲಿಕ್ಕೆ ಎದೆಮಾಡಲಿಲ್ಲ. ಮುಂದಿನ ಶನಿವಾರ (೧೭ ಜನವರಿ) ಮೊಗಲರ ದಂಡು ಬಂದ ಬಳಿಕ, ಹೇಡಿಯಾದ ಸುಬೇದಾರ ಮುಂತಾದವರೆಲ್ಲರು ಬಂದರು. ಇಂಗ್ಲಿಷ ವರ್ತಕರು ಧೈರ್ಯದಿಂದ ತಮ್ಮ ಕೇರಿಯನ್ನು ಕಾಪಾಡಿಕೊಂಡುದರಿಂದ ಎಲ್ಲರು ಅವರನ್ನು ನಿರ್ವ್ಯಾಜವಾಗಿ ಹೊಗಳಿದರು. ಬಾದಶಹನು ಕನಿಕರಬಟ್ಟು ಒಂದುವರ್ಷದ ಸುಂಕವನ್ನು ಬಿಟ್ಟುದಲ್ಲದೆ, ಇಂಗ್ಲಿಷ ಡಚ್ಚರ ಧೈರ್ಯಸಾಹಸಕ್ಕೆ ಮೆಚ್ಚಿ, ಅವರು ಕೊಡಬೇಕಾದ ಸುಂಕದ ದರದಲ್ಲಿ ೧೦೦ ಕ್ಕೆ ೧ ರಂತೆ ಕಡಮೆ ಮಾಡಿದನು.

ಅರಸುಮಗನಾದ ಮುಜಮ್ಮನು ದಕ್ಷಿಣದ ಸುಬೇದಾರನಾಗಿ ಅವರಂಗಾಬಾದಿಗೆ ಬಂದನೆಂದು ಹಿಂದೆ ಹೇಳಿರುತ್ತೇವಷ್ಟೇ. ಅವನು ದುಂದುಗಾರಿಕೆ ಬೇಟೆಗಳಲ್ಲಿ ಕಾಲಕಳೆಯತೊಡಗಿ, ತನ್ನ ಪ್ರೀತಿಯ ದಳವಾಯಿಯಾದ ಯಶವಂತಸಿಂಗ ಮಹಾರಾಜನನ್ನು ಸಿವಾಜಿಯ ಪಾರಪತ್ಯಕ್ಕಾಗಿ ಪುಣೆಗೆ ಕಳುಹಿದನು. ಅವನು ೩/೪ ತಿಂಗಳು ಕೊಂಡಾಣದ ಕೋಟೆಯನ್ನು ವ್ಯರ್ಥವಾಗಿ ಮುತ್ತಿ, ಮದ್ದಿಗೆ ಬೆಂಕಿಹತ್ತಿದ್ದರಿಂದ ನೂರಾರು ಜನರನ್ನು ಕಳಿಕೊಂಡು, "ಉಘೋಲಕ್ಷ್ಮಣ" ಎಂದು ಪುಣೆಗೆ ತಿರುಗಿ ಬಂದನು (ಜೂನ). ಆದಕಾರಣ ಸಿವಾಜಿಯು ಪರೆಯುಚ್ಚಿದ ಹಾವಿನಂತೆ ನಿರ್ಭೀತನಾಗಿ, ಅತ್ತಿಂದಿತ್ತ ಇತ್ತಿಂದತ್ತ ದಂಡೆತ್ತಿಹೋಗಿ, ಮೊಗಲರ ಊರುಗಳನ್ನು ಲೂಟುಮಾಡತೊಡಗಿದನು. ಅವನು ಸುಲಿದ ಊರುಗಳಲ್ಲಿ ಅಹಮ್ಮದನಗರವೇ ದೊಡ್ಡದಾಗಿತ್ತು (ಆಗಷ್ಟ).

ಇತ್ತ ನಮ್ಮ ಚರಿತ್ರನಾಯಕನು ಮೊಗಲರ ರಾಜ್ಯದಲ್ಲಿ ಸುಲಿಗೆ ಕೊಳ್ಳೆಗಳನ್ನು ಮಾಡುತ್ತಿರುವಾಗ, ಅವನ ತಂದೆಯಾದ ಶಹಾಜಿರಾಜನು ಅಕಸ್ಮಾತ್ತಾಗಿ ಕರ್ನಾಟಕದಲ್ಲಿ ಸತ್ತನು (ಜನವರಿ ೧೬೬೪). ಆವನು ಬಿದನೂರಿನ ಸಿವಪ್ಪನಾಯಕನನ್ನು ಜೇರಿಗೆ ತಂದು ತಿರುಗಿ ಹೋಗುವಾಗ,

ಚಿತ್ರದುರ್ಗದ ನೆರೆಯಲ್ಲಿ ಬೇಟೆಯಾಡಲಿಕ್ಕೆ ಹೋದಾಗ, ಅವನ ಕುದುರೆಯ ಮುಂಗಾಲು ಒಂದು ಬಳ್ಳಿಯೊಳಗೆ ತೊಡಕಿದ್ದರಿಂದ, ಅದು ಮುಗ್ಗಡಿಸಿತು. ಶಹಾಜಿರಾಜನು ಕೆಳಗೆ ಬಿದ್ದನು. ಸಂಗಡಿಗರು ಬರುವಷ್ಟರಲ್ಲಿ ಅವನ ಉಸಿರು ಅಡಗಿತು. ಮುಂದಿನ ತಿಂಗಳು ಸಿವಾಜಿಗೆ ಈ ಸುದ್ದಿ ಹತ್ತಿದ್ದರಿಂದ ಅವನು ನೊಂದುಕೊಂಡು, ಉತ್ತರಕ್ರಿಯೆಗಳನ್ನು ಮಾಡಿಸಿ, ಬ್ರಾಹ್ಮಣರಿಗೆ ಭೂರಿದಾನವನ್ನು ಕೊಟ್ಟನು. ನಿಜಾಮಶಾಹಿ ಸರಕಾರವು ಶಹಾಜಿಗೆ ರಾಜಾ ಎಂಬ ಬಿರುದನ್ನು ಕೊಟ್ಟಿದ್ದರಷ್ಟೇ. ಆ ಬಿರುದನ್ನು ಈಗ ಸಿವಾಜಿಯು ತಾನೇ ಧರಿಸಿ, ತನ್ನ ಹೆಸರಿನ ನಾಣ್ಯಗಳನ್ನು ಮಾಡಿಸತೊಡಗಿದನು.

ಈ ಸುಮಾರಿನಲ್ಲಿ ಅವರಂಗಜೇಬ ಬಾದಶಹನು ಬೇನೆಯಿಂದೆದ್ದು ತನ್ನ ಪ್ರಕೃತಿಯನ್ನು ಸುಧಾರಿಸಿಕೊಳ್ಳಲಿಕ್ಕೆ ಕಾಶ್ಮೀರಕ್ಕೆ ಹೋಗಿದ್ದನು. ಸಿವಾಜಿಯು ತನ್ನ ಮಾವನಾದ ಸಾಯಿಸ್ತೆಖಾನನ ಬೆರಳು ಕೊಯ್ದನೆಂತಲೂ ಸುರತಪಟ್ಟಣವನ್ನು ಸುಲಿದನೆಂತಲೂ ರಾಜಾ ಎಂಬ ಬಿರುದನ್ನು ಧರಿಸಿ ಸ್ವತಂತ್ರನಾದ ಅರಸಿನಂತೆ ನಾಣ್ಯಗಳನ್ನು ಹೊಡಿಸ ತೊಡಗಿದನೆಂತಲೂ ಸುದ್ದಿಗಳು ಒಂದರ ಹಿಂದೊಂದು ಬಂದು ಮುಟ್ಟಿದವು. ಅವನು ಸಿವಾಜಿಗೆ **ಗುಡ್ಡದ ಇಲಿ** ಎಂದು ಕರೆಯುತ್ತಿದ್ದನು. ಇಂತಹ ಇಲಿಯು ಮಾಡಿದ ಅತ್ಯದ್ಭುತವಾದ ಕೃತ್ಯಗಳನ್ನು ಕೇಳಿ, ಅವನು ಬೆರಗಾದನು. ಅವನ ಹೊಟ್ಟೆಕಿಚ್ಚು ಭಗ್ಗೆಂದು ಉರಿಯಿತು. ಸುರತವು ಮಕ್ಕಾಯಾತ್ರೆಗೆ ಹೊರಡುವ ಸ್ಥಳವಾದ್ದರಿಂದ ಅದರ ಸುಲಿಗೆಯನ್ನು ಕೇಳಿ, ಅವನಿಗೆ ಬ್ರಹ್ಮೇತಿಸಿಟ್ಟು ಬಂತು. ಆದ್ದರಿಂದ ಅವನು ಚಿಂತಾಗ್ರಸ್ತನಾಗಿ, ಹೇಗಾದರೂ ವಿಶ್ವಪ್ರಯತ್ನಮಾಡಿ ಸಿವಾಜಿಯನ್ನು ಅಡಗಿಸಬೇಕೆಂದು ನಿಶ್ಚಯಿಸಿದನು. ತಾನೇ ಸಿವಾಜಿಯ ಮೇಲೆ ದಂಡೆತ್ತಿ ಹೋಗಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಬಂತು. ಆದರೆ ಅವನ ಪ್ರಕೃತಿಯು ಸದೃಢವಾಗದ್ದರಿಂದಲೂ ಮಾರವಾಡದಲ್ಲಿ ಒಂದು ಸೋಜಿಗವಾದ ಬಂಡಾಯವೆದ್ದು,* ಬಂಡುಗಾರರು ಒಬ್ಬರ ಹಿಂದೊಬ್ಬ ಮೋಗಲ್ಸರದಾರರನ್ನು ಸೋಲಿಸಿದ್ದು

* ಮೋಗಲ್ಬಾದಶಾಹಿ ಪೂರ್ವಾರ್ಧಪುಟ ೧೯೨–೧೯೪.

ದರಿಂದಲೂ ತಾನು ಹೊರಡುವ ಎಣಿಕೆಯನ್ನು ಬದಿಗಿಟ್ಟು, ತನ್ನ ಅತಿಜಯ ಶಾಲಿಯಾದ ಮಿರ್ಜಾರಾಜಾ ಜಯಸಿಂಗನೆಂಬ ಶೂರ ದಳವಾಯಿಯನ್ನು ಸಿವಾಜಿಯ ಪಾರಪತ್ಯಕ್ಕೆ ಕಳುಹಬೇಕೆಂದು ನಿರ್ಧಾರಮಾಡಿದನು (ಸಪ್ಟಂಬರ ೧೬೬೪). ಅವರಂಗಜೀಬನು ಸಂಶಯದ ಸ್ವಭಾವದವನಾದ್ದರಿಂದ ರಾಜಾ ಜಯಸಿಂಗನನ್ನು ಪೂರ್ಣವಾಗಿ ನಂಬಲಿಲ್ಲ. ಅವನನ್ನು ಸಿವಾಜಿಯು ಒಡೆಕೊಳ್ಳಬಹುದೆಂಬ ಹೆದರಿಕೆಯಿಂದ ಅವನು ದಿಲೀರ ಖಾನನೆಂಬ ಒಬ್ಬ ಅಫಗಾಣ ಶೂರಸರದಾರನನ್ನು ಆವನ ಜತೆಗಾರ ನಾಗಿ ನಿಯಮಿಸಿದನು.

ಅಕ್ಬರ ಬಾದಶಹನ ಆಳಿಕೆಯಲ್ಲಿ ರಾಜಾಮಾನಸಿಂಗನು ಹೆಸರುವಾಸಿಯಾದಂತೆ ಶಹಾಜಹಾನ ಅವರಂಗಜೀಬರ ಆಳಿಕೆಯಲ್ಲಿ ರಾಜಾ ಜಯಸಿಂಗನು ಹೆಸರುವಾಸಿಯಾಗಿದ್ದನು. ಇವನು ಅಕ್ಬರ ಬಾದಶಹನು ಸತ್ತವರುಷವೇ ಹುಟ್ಟಿ, ತನ್ನ ೧೨ ನೆಯ ವಯಸ್ಸಿನಲ್ಲಿ ಮೊಗಲರ ದಂಡನ್ನು ಸೇರಿದನು. ಶಹಾಜಹಾನ ಬಾದಶಹನ ಬಹುಕಾಲದ ಆಳಿಕೆಯಲ್ಲಿ ನಡೆದ ಎಲ್ಲ ಕಾಳಗಗಳಲ್ಲಿ ಅವನು ತನ್ನ ಧೈರ್ಯ ಶೌರ್ಯ ಸಾಹಸಾದಿ ಗುಣಗಳನ್ನು ತೋರಿಸಿ, ಬಾದಶಹನ ಮೆಚ್ಚಿಗೆಗೆ ಪಾತ್ರನಾದನು. ಅರಸು ಮಕ್ಕಳಿಗೆ ಮಾತ್ರ ಸಿಕ್ಕಬಹುದಾದ ಚೂಣಿಯ ದಳವಾಯಿತನವು ಅವನಿಗೆ ದೊರೆಯಿತು. ಅವನು ಯುದ್ಧದಲ್ಲಿ ಹೆಸರುವಾಸಿಯಾದಂತೆ ರಾಜ್ಯತಂತ್ರದಲ್ಲಿ ಕುಶಲನೆಂದು ಪ್ರಖ್ಯಾತನಾಗಿದ್ದನು. ಕಾಮ ಕ್ರೋಧ ಮುಂತಾದ ಅರಿಷಡ್ವರ್ಗವನ್ನು ಅವನು ತನ್ನ ಅಧೀನದಲ್ಲಿಟ್ಟುಕೊಂಡುದರಿಂದ, ಜನವಶೀಕರಣ ಕಲೆಯಲ್ಲಿ ಅವನು ಅತಿನಿಷ್ಣಾತನಾಗಿದ್ದನು; ಸವಿಮಾತಿನಿಂದ ಜನರನ್ನು ತನ್ನ ಕಡೆಗೆ ಒಲಿಸಿಕೊಳ್ಳುತ್ತಿದ್ದುದಲ್ಲದೆ, ಹೊಟ್ಟೆಯೊಳಗಿನ ಹರಳು ಕರಗುವಂತೆ ಮಾತಾಡಿ, ಜನರ ಪ್ರೀತಿಯನ್ನು ಗಳಿಸುತ್ತಿದ್ದನು. ಏನಾದರೊಂದು ಸಾಮ್ರಾಜ್ಯದ ಪ್ರಶ್ನವು ಹೊರಟಾಗ, ಶಹಾಜಹಾನನು ತಪ್ಪದೆ ರಾಜಾಜಯಸಿಂಗನನ್ನು ಕರೆಯಿಸುತ್ತಿದ್ದನು ಮತ್ತು ಅವನು ಅದನ್ನು ಸಮರ್ಪಕವಾಗಿ ಬಗೆಹರಿಸಿ, ಬಾದಶಹನ ಕೃತಜ್ಞತೆಗೆ ಪಾತ್ರನಾಗುತ್ತಿದ್ದನು. ಅವನು ೬೦ ವರ್ಷದವನಾದರೂ ಸೋಲೆಂಬುದನ್ನು ಅರಿಯದವನಾಗಿದ್ದನು. ಅವನ ತಾಳ್ಮೆಯೂ ಚದುರತನವೂ

ರೀತಿನಡತೆಗಳೂ ಅಪ್ರತಿಮವಾಗಿದ್ದವು. ಅವನಿಗೆ ತುರ್ಕಿ ಪಾರ್ಸಿ ಉರ್ದು ರಜಪುತ ನುಡಿಗಳು ಚೆನ್ನಾಗಿ ಬರುತ್ತಿದ್ದುದರಿಂದ, ಬೇರೆ ಬೇರೆ ಮಾತಿನ ಜನರುಳ್ಳ ಮೊಗಲರ ದಂಡಿನ ಮುಖ್ಯದಳವಾಯಿ ಆಗಲಿಕ್ಕೆ ಅವನು ತಕ್ಕವನಾಗಿದ್ದನು. ಇಂತಹ ತೇಜಸ್ವಿಯೂ ಮಹಾವೀರನೂ ಬುದ್ಧಿವಂತನೂ ವ್ಯವಹಾರಜ್ಞನೂ ಆದ ರಾಜಾಜಯಸಿಂಗನನ್ನು ಅವರಂಗಜೇಬ ಬಾದಶಹನು ಸಿವಾಜಿಯನ್ನು ಮುರಿಬಡಿಯಲಿಕ್ಕೆ ಆರಿಸಿದನು.

ಇಂತಹ ಅತುಲಪರಾಕ್ರಮಿಯೂ ಅನುಭವಶಾಲಿಯೂ ಆದರೂ ರಾಜಾಜಯಸಿಂಗನು ಸಿವಾಜಿಯ ಮೇಲೆ ದಂಡೆತ್ತಿ ಹೋಗಲಿಕ್ಕೆ ಸಂಶಯಪಟ್ಟನು. ೧. ಅವರಂಗಜೇಬನು ಸಂಶಯುದವನೂ ಹೊಟ್ಟಿಕಿಚ್ಚಿನವನೂ ಆಗಿದ್ದನು. ೨. ಮರಾಟರ ರಾಜ್ಯವು ಗುಡ್ಡಗಾಡಿನ ನಾಡು ಆದ್ದರಿಂದ ದೊಡ್ಡ ದಂಡಿನ ಸುಳಿದಾಟಕ್ಕೆ ನಾನಾತರದ ಅಡಚಣಿಗಳಿದ್ದವು. ೩. ಸಿವಾಜಿಯು ಚದುರನೂ ಚಪಲನೂ ಸಾಹಸಿಯೂ ಕೆಚ್ಚೆದೆಯವನೂ ತಂತ್ರಗಾರನೂ ಜನರ ಪ್ರೀತಿವಿಶ್ವಾಸಕ್ಕೆ ಪಾತ್ರನಾದವನೂ ಆದ್ದರಿಂದ ಯಾವ ಕಾಲಕ್ಕೆ ಎಂತಹ ಬಲೆಯನ್ನೊಡ್ಡಿ ಘಾತಮಾಡುವನೋ ಎಂಬ ಸಂಶಯವು ಅವನಿಗೆ ತುಸುಮಟ್ಟಿಗೆ ತಟ್ಟಿತ್ತು. ಆದರೂ ಅವನು ಸ್ವಾಮಿಭಕ್ತನೂ ರಾಜನಿಷ್ಠನೂ ಆದ್ದರಿಂದ, ದಕ್ಷಿಣದ ಸುಬೇದಾರನ ಎಲ್ಲ ಅಧಿಕಾರವನ್ನು ತನಗೆ ಕೊಟ್ಟರೆ ಮಾತ್ರ ತಾನು ಈ ದಂಡಯಾತ್ರೆಯ ಕೆಲಸವನ್ನು ಕಯ್ಕೊಳ್ಳುವೆನೆಂದು ಸ್ಪಷ್ಟವಾಗಿ ಹೇಳಿ, ಬಾದಶಹನಿಂದ ಆ ಎಲ್ಲ ಅಧಿಕಾರವನ್ನು ಪಡೆದು, ಯಾವತ್ತು ಜೋಡಣೆಯನ್ನು ಮಾಡಿಕೊಂಡು, ದಿಲ್ಲಿಯಿಂದ ಹೊರಟು ನರ್ಮದಾ ನದಿಯನ್ನು ದಾಟಿ (೯ ಜನವರಿ ೧೬೬೫), ಅವರಂಗಾಬಾದಿಗೆ ಬಂದನು (೧೦ ಫೇಬ್ರುವರಿ). ಅಲ್ಲಿ ೩ ದಿವಸ ಮಾತ್ರವಿದ್ದು, ಮಹಾರಾಜಾ ಯಶವಂತಸಿಂಗನನ್ನು ಕೆಲಸದಿಂದ ಬಿಡುಗಡೆಮಾಡಿ, ತನ್ನ ದಂಡಯಾತ್ರೆಗೆ ಬೇಕಾದ ಎಲ್ಲ ಏರ್ಪಾಡುಗಳನ್ನು ಲಕ್ಷಪೂರ್ವಕವಾಗಿ ಮಾಡಿಕೊಂಡು, ಅಲ್ಲಿಂದ ಹೊರಟು ದಾರಿಯೊಳಗೆ ಅಲ್ಲಲ್ಲಿ ಕಾವಲಿಗಾಗಿ ದಂಡುಗಳನ್ನಿರಿಸಿ, ಪುಣೆಗೆ ಬಂದನು (೩ ಮಾರ್ಚ ೧೬೬೫).

ಈ ದಂಡಯಾತ್ರೆಯಲ್ಲಿ ಸಿವಾಜಿಯ ಎಲ್ಲ ಹಗೆಗಳನ್ನು ಎಬ್ಬಿಸಿ ಕೂಡ್ರಿಸಲಿಕ್ಕೆ ರಾಜಾಜಯಸಿಂಗನು ಭಗೀರಥ-ಪ್ರಯತ್ನಮಾಡಿದನೆಂದು ಧಾರಾಳವಾಗಿ ಹೇಳಬಹುದು. ಅವನು ದಿಲ್ಲಿಯನ್ನು ಬಿಡುವುದಕ್ಕಿಂತ ಮೊದಲೇ ಅದಿಲ್ಶಾಹಿ-ಕುತುಬಶಾಹಿಗಳಿಗೆ ಆಶೆತೋರಿಸಿ, ಸಿವಾಜಿಯ ವಿರುದ್ಧವಾಗಿ ಮೊಗಲರಿಗೆ ನೆರವಾಗಲಿಕ್ಕೆ ಪತ್ರಬರೆಯಿಸಿದ್ದನು; ಮೊಗಲರ ದಂಡಿನಲ್ಲಿದ್ದ ಇಬ್ಬರು ಯುರೋಪೀಯರನ್ನು ಪಶ್ಚಿಮದಂಡಿಗೆ ಕಳುಹಿ, ಅಲ್ಲಿದ್ದ ಇಂಗ್ಲಿಷ ಫ್ರೆಂಚ ಡಚ್ಚರನ್ನು ಸಿವಾಜಿಯ ವಿರುದ್ಧವಾಗಿ ಎಬ್ಬಿಸಲಿಕ್ಕೆ ಯತ್ನಮಾಡಿದನು; ಕೆಲ ಬ್ರಾಹ್ಮಣರನ್ನು ಸಿವಾಜಿಯ ರಾಜ್ಯಕ್ಕೂ ಕರ್ನಾಟಕಕ್ಕೂ ಕಳುಹಿ, ಅಲ್ಲಿದ್ದ ಸರದಾರರನ್ನು ತನ್ನ ಕಡೆಗೆ ಒಡೆ ಕೊಳ್ಳಲಿಕ್ಕೆ ಎತ್ತುಗಡೆ ಮಾಡಿದನು. ಈ ಏರ್ಪಾಡಿನಲ್ಲಿ ಎಲ್ಲ ಕಡೆಯಿಂದ ಸಿವಾಜಿಗೆ ಎದ್ದುಲಗಟ್ಟಿಕೊಡುವುದೇ ಅವನ ಇಂಗಿತವಾಗಿತ್ತು, ಮತ್ತು ಅವನ ಬಯಕೆಯು ಬಲುಮಟ್ಟಿಗೆ ಈಡೇರಿತು. ಬಿದನೂರಿನ ನಾಯಕ ನಾದ ಸಿವಪ್ಪನೂ ಬಸವಾಪಟ್ಟಣದ ಪಾಳಯಗಾರನೂ ಜಹ್ವಾರದ ಅರ ಸನೂ ಜಾವಳಿಯ ಮೋರೆಮನೆತನದವರಾದ ಬಾಜಿ ಚಂದ್ರರಾಯ-ಆಬಾಜಿಗೋವಿಂದರಾಯರೂ, ಮಾಣಕೋಜಿ ಧನಗರನೆಂಬ ಬಂಟನೂ ಅಫಜಲ್ಖಾನನ ಮಗನಾದ ಫಾಜಲ್ಖಾನನೂ ತಂತಮ್ಮ ದಂಡುಗಳೊಡನೆ ಬಂದು, ರಾಜಾ ಜಯಸಿಂಗನಿಗೆ ನೆರವಾದರು. ಸ್ವಾರ್ಥಸಾಧಕರಾದ ಯುರೋಪೀಯರು ತಟಸ್ಥರಾಗಿ, ಗೆದ್ದೆತ್ತಿನ ಬಾಲ ಹಿಡಿಯುವ ಎಣಿಕೆಯಲ್ಲಿ ತೊಡಗಿದ್ದರೂ ಜಂಜಿರಾದ ಸಿದ್ದಿಯು ಸಿವಾಜಿಯ ಮೇಲೆ ಎದ್ದನು. ಸುಪೆಪರಗಣೆಯ ಮೊದಲಿನ ಜಹಗೀರದಾರರ ವಂಶಜರಾದ ರಾಮ, ಹನು ಮಂತ ಎಂಬಿಬ್ಬರು ಸಿವಾಜಿಯ ರಾಜ್ಯದ ಎಲ್ಲ ದಾರಿಬಟ್ಟೆಗಳನ್ನು ಚೆನ್ನಾಗಿ ಅರಿತವರಾಗಿದ್ದರು. ಅವರೂ ಬಂದು ಮೊಗಲರನ್ನು ಕೂಡಿದರು. ಪುರಂ ದರದ ಕೋಟೆಯ ಸಂರಕ್ಷಣಾರ್ಥವಾಗಿ ಅದರಡಿಯಲ್ಲಿ ೩೦೦೦ ರಾಹುತರ ಪಥಕ ಒಂದಿತ್ತು. ಅದರ ದಳವಾಯಿಗಳು ಒಡೆದು, ತಮ್ಮ ದಂಡಿ ನೊಡನೆ ಹೋಗಿ ಮೊಗಲರನ್ನು ಸೇರಿದರು!!!

ಜಯಸಿಂಗರಾಜನು ಸಿವಾಜಿಗೆ ಎದ್ದುಲಗಟ್ಟಿ ಕೊಡಲಿಕ್ಕೆ ದೀರ್ಘೋ ದ್ಯೋಗ ಮಾಡಿದಂತೆ ಬಾದಶಹನ ಅಲ್ಲದಸಲ್ಲದ ಹುಕುಮುಗಳನ್ನು ಅಲ್ಲ

ಗಳಿಯಲಿಕ್ಕೆ ಸತತಪ್ರಯತ್ನ ಮಾಡುತ್ತಿದ್ದನು. ಸಂಶಯ ಸ್ವಭಾವದವನಾದ ಅವರಂಗಜೇಬನು ಹಾಗೆ ಮಾಡು ಹೀಗೆ ಮಾಡು ಎಂದು ಒಂದರ ಹಿಂದೊಂದು ಕಳಿಸಿದ ಹುಕುಮುಗಳಿಗೆ ನಿರ್ದಾಕ್ಷಿಣ್ಯದಿಂದ ಉತ್ತರ ಕೊಟ್ಟು, ತನಗೆ ಯೋಗ್ಯಕಂಡ ಏರ್ಪಾಡುಮಾಡಲಿಕ್ಕೆ ಅಪ್ಪಣೆಯನ್ನು ಪಡೆಯುತ್ತಿದ್ದನು. ಬಾದಶಹನು ಅಧಿಕಾರವಿಭಾಗವನ್ನು ಮಾಡಲೆಳಸಲು, ಹಾಗೆಮಾಡಿದರೆ ಸಿವಾಜಿಯಂತಹ ತಂತ್ರಗಾರನಾದ ಪರಾಕ್ರಮಶಾಲಿಯೊಡನೆ ಹೂಡಿದ ಜಗಳವು ಯಶಸ್ವಿಯಾಗಲಾರದೆಂದು ಖಂಡಿತವಾಗಿ ಬರೆದು, ಅವನನ್ನು ಒಡಂಬಡಿಸಿದನು. ಬಳಿಕ ಬಾದಶಹನು ಕೊಂಕಣವನ್ನೊಳನುಗ್ಗಿ ಎಲ್ಲ ಕೋಟೆಗಳನ್ನು ಹಿಡಿಕೊಳ್ಳಬೇಕೆಂದು ಅಪ್ಪಣೆಕೊಡಲು, ಹಾಗೆ ಮಾಡಿದರೆ ಮೊಗಲರ ದಂಡುದಳವಾಯಿಗಳು ಮಣ್ಣುಪಾಲಾಗುವರೆಂತಲೂ ಸಿವಾಜಿಯ ಮುಖ್ಯಕೋಟೆಗಳನ್ನು ಹಿಡಿಕೊಂಡರೆ, ತಲೆಯಿಲ್ಲದ ದೇಹದಂತೆ ಅವನ ನಾಡೆಲ್ಲ ಕಯ್ಸೇರುವದೆಂತಲೂ ನಿರ್ಭಿಡೆಯಿಂದ ಬರೆದು, ಬಾದಶಹನ ಒಪ್ಪಿಗೆಯನ್ನು ಪಡೆದನು. ಅಧಿಕಾರಿಗಳನ್ನು ವರ್ಗಮಾಡುವುದು, ಮನಃಪೂರ್ವಕವಾಗಿ ನೆರವಾದವರಿಗೆ ಇನಾಮು ಜಹಗೀರುಗಳನ್ನು ಹಾಕಿ ಕೊಡುವುದು, ಮೆಯ್ಗಳ್ಳರನ್ನು ದಂಡಿಸುವುದು, ಜೀವದ ಹಂಗು ದೊರೆದು ಕಾದವರಿಗೆ ಬಡ್ತಿಕೊಡುವುದು ಮುಂತಾದ ಎಲ್ಲ ಅಧಿಕಾರವು ಜಯಸಿಂಗರಾಜನ ಕಯ್ಯಲ್ಲೇ ಒಟ್ಟುಗೂಡಿದ್ದರಿಂದ, ಅವನ ಅದಟತನ ಜಾಣ್ಮೆ ಮುನ್ನೋಟಗಳಿಗೆ ಮೆಚ್ಚಿ ಮರುಳಾದ ಜಯಲಕ್ಷ್ಮಿಯು ಅವನಿಗೆ ಪೇರೊಲಿದಳು.

ಜಯಸಿಂಗರಾಜನು ೩ ನೆಯ ಮಾರ್ಚದಿವಸ ಪುಣೆಗೆ ಬಂದನೆಂದು ಹಿಂದೆ ಹೇಳಿರುತ್ತೇವಷ್ಟೇ. ಮಳೆಗಾಲವು ಸಮಿಾಪಿಸಿದ್ದರಿಂದ ಅವನಿಗೆ ಅಲ್ಲಿ ವಿಶ್ರಾಂತಿ ತೆಗೆದುಕೊಳ್ಳಲಿಕ್ಕೆ ಅವಕಾಶ ದೊರೆಯಲಿಲ್ಲ. ಪುಣೆ ಪ್ರಾಂತದ ಯಾವದೋ ಒಂದು ಕೋಟೆಯಲ್ಲಿ ಸಿವಾಜಿಯು ಇರುತ್ತಾನೆಂದು ಗೊತ್ತಾದ್ದರಿಂದ, ಅವನನ್ನು ಹೊರಗೆ ಹೋಗಗೊಡದಂತೆ ಎಲ್ಲ ದಾರಿಗಳನ್ನು ಕಟ್ಟಿ, ಪುರಂದರ ಮುಂತಾದ ಕೋಟೆಗಳನ್ನು ಹಿಡಿಕೊಳ್ಳಬೇಕೆಂದು ನಿಶ್ಚಯಿಸಿ, ಕುತಬುದ್ದೀನಖಾನನೆಂಬ ದಳವಾಯಿಯನ್ನು ೬೦೦೦ ರಾಹುತರೊಡನೆ ಜುನ್ನರ ಲೋಹಗಡಮಾರ್ಗವನ್ನು ಕಟ್ಟಿ, ಲೋಹಗಡ

ದಿಂದ ಯಾರನ್ನೂ ಹೊರಗೆ ಬಿಡಬಾರದೆಂದು ಕಟ್ಟಪ್ಪಣೆಯನಿತ್ತು ಕಳು ಹಿದನು. ಪುಣೆಯ ಕಾವಲಿಗೆ ೪೦೦೦ ರಾಹುತರನ್ನಿರಿಸಿ, ಮೂಡಲದಿಂದ ಯಾರೂ ನೆರವಿಗೆ ಬರಬಾರದೆಂದು ಸುಪೆಯಲ್ಲಿ ಒಂದು ದಂಡನ್ನೂ ತೆಂಕ ಲದಿಂದ ಯಾರೂ ಬರಬಾರದೆಂದು ಶಿರವಾಳದಲ್ಲಿ ಮತ್ತೊಂದು ದಂಡನ್ನೂ ಇರಿಸಿ, ತಾನು ಪುಣೆಯಿಂದ ಹೊರಟು, ಸಾಸ್ವಾಡದಲ್ಲಿ ತನ್ನ ಮುಖ್ಯ ಪಾಳ ಯವನ್ನು ಬಿಟ್ಟನು (೩ ಮಾರ್ಚ). ಹಿಂದಿನ ದಿವಸವೇ ದಿಲೀರಖಾನ ನನ್ನು ದಂಡಿನೊಡನೆ ಪುರಂದರಗಡವನ್ನು ಹೇಗೆ ಮುತ್ತಬೇಕೆಂಬುದನ್ನು ಗೊತ್ತು ಹಚ್ಚಲಿಕ್ಕೆ ಕಳುಹಿದ್ದನು. ಮರುದಿವಸ ಮರಾಟರು ದಿಲೀರ ಖಾನನ ಮೇಲೆ ಬೀಳಲು, ಅವನು ಅವರನ್ನು ಸೋಲಿಸಿ ಓಡಿಸಿ, ಕೋಟೆಯ ಕೆಳಗಿದ್ದ ಹಳ್ಳಿಯನ್ನು ಹಿಡಿಕೊಂಡನು. ಈ ಸುದ್ದಿಯನ್ನು ಕೇಳಿ ರಾಜಾ ಜಯಸಿಂಗನು ತನ್ನ ಮಗನಾದ ಕಿರಾತಸಿಂಗನೊಡನೆ ೩೦೦೦ ದಂಡನ್ನು ದಿಲೀರಖಾನನ ಸಾಹಾಯಕ್ಕೆ ಕಳಿಸಿದ್ದಲ್ಲದೆ, ಮುತ್ತಿಗೆಯ ಸಾಮುಗ್ರಿಗಳನ್ನು ತೆಗೆದುಕೊಂಡು ತಾನೇ ದಿಲೀರಖಾನನಿದ್ದೆಡೆಗೆ ಹೋಗಿ, ಮುತ್ತಿಗೆಯು ಸಫಲವಾಗಲಿಕ್ಕೆ ಏನು ಮಾಡಬೇಕೆಂಬುದನ್ನು ಆಲೋಚಿಸಿ ಗೊತ್ತು ಮಾಡಿದನು (೩೧ ಮಾರ್ಚ).

ಪುರಂದರವು ಒಂದು ಕೋಟೆ ಮಾತ್ರವಲ್ಲ. ಅದು ಭದ್ರವಾದ ಮರಡಿಗಳ ಗುಂಪಾಗಿರುತ್ತದೆ. ಅದರ ಎತ್ತರವಾದ ತುದಿಯು ಕಡಲಿನ ಸಪಾಟಿಗಿಂತ ೪,೫೬೪ ಅಡಿ ಎತ್ತರವಾಗಿಯೂ ಸುತ್ತಲಿನ ಬೈಲಿನಿಂದ ೨,೫೦೦ ಅಡಿ ಎತ್ತರವಾಗಿಯೂ ಇರುತ್ತದೆ. ಅದು ಎರಡು ಸುತ್ತಿನಕೋಟೆ ಯಾಗಿದ್ದು, ಅವುಗಳ ನಡುವಿನ ಅಂತರವು ೩೦೦ ಅಡಿ ಇರುತ್ತದೆ. ಹೊರ ಗಿನ ಕೋಟೆಗೆ ಹೊಂದಿ ವಜ್ರಗಡವೆಂಬ ಒಂದು ಸಣ್ಣಕೋಟೆ ಇದ್ದು, ಅದರ ಹೆಬ್ಬಾಗಿಲು ಪೂರ್ವಕ್ಕೆ ಇರುತ್ತದೆ. ಈ ಕೋಟೆಗೆ **ರುದ್ರಮಾಳ** ವೆಂದೂ ಕರೆಯುತ್ತಾರೆ. ಈ ರುದ್ರಮಾಳ ಅಥವಾ ವಜ್ರಗಡವನ್ನು ಮೊದಲು ಹಿಡಿದುಕೊಳ್ಳಬೇಕೆಂದು ಜಯಸಿಂಗರಾಜನು ಜಾಣತನದಿಂದ ನಿರ್ಣಯಿ ಸಿದನು. ಬಳಿಕ ರುದ್ರಮಾಳದ ಮುಂದೆ ತೋಫಖಾನೆಯೊಡನೆ ದಿಲೀರ ಖಾನನು ನಿಂತನು. ಬಡಗಣ ಬಾಗಿಲನ್ನು ಕಿರಾತಸಿಂಗನು ೩೦೦೦ ದಂಡಿ ನೊಡನೆ ಕಾಯತೊಡಗಿದನು. ತೆಂಕಣ ಪಡುವಣ ದಿಕ್ಕುಗಳಲ್ಲಿ ಎರಡು

ದಂಡುಗಳು ಒಳಗಿರುವ ಮರಾಟರಿಗೆ ಯಾವ ಸಾಹಾಯವೂ ದೊರೆಯ ದಂತೆ ನೋಡಿಕೊಂಡಿದ್ದವು. ಜಯಸಿಂಗರಾಜನು ತನ್ನ ಪಾಳಯವನ್ನು ಪುರಂದರದ ಅಡಿಯಲ್ಲೇ ಹಾಕಿ, ಮುತ್ತಿಗೆಯ ಮೇಲ್ವಿಚಾರವನ್ನು ಎಡೆ ಬಿಡದೆ ಮಾಡಲುದ್ಯೋಗಿಸಿದನು.

ಮೂರು ದೊಡ್ಡ ದೊಡ್ಡ ತೋಫುಗಳು—೧ ಅಬ್ದುಲ್ಲಾಖಾನ, ೨ ಫತ್ತೇಲಸ್ಕರ, ೩ ಹಾಹೇಲಿ—ಅತಿ ಪ್ರಯಾಸದಿಂದ ಗುಡ್ಡದ ಮೇಲೆ ಏರಿಸ ಲ್ಪಟ್ಟವು. ಅವುಗಳ ಎಡೆಬಿಡದ ಹೊಡತಕ್ಕೆ ಹೆಬ್ಬಾಗಿಲೂ ಬುರುಜುಗಳೂ ಚೂರುಚೂರಾಗಿ ಕಳಚಿ ಬಿದ್ದವು (೧೩ ಎಪ್ರಿಲ). ಮೊಗಲರ ಆಘಾತ ವನ್ನು ತಾಳಲಾರದೆ ಕಾವಲುಗಾರರು ಮರುದಿವಸ ಶರಣುಬಂದರು. ಅವ ರಿಗೆ ಜಯಸಿಂಗರಾಜನು ಕ್ರೌರ್ಯವನ್ನು ತೋರಿಸದೆ, ಶೂರರಾದ ಕಾವಲು ಗಾರರನ್ನು ವಸ್ತ್ರಾಲಂಕಾರಗಳಿಂದ ಮನ್ನಿಸಿ, ಎಲ್ಲರಿಗೂ ಪ್ರಾಣದಾನಕೊಟ್ಟ್ಟು ದರಿಂದ ಅವರೆಲ್ಲ ಅವನ ಔದಾರ್ಯವನ್ನು ಹೊಗಳುತ್ತ ತಮ್ಮ ಮನಬಂದ ಕಡೆಗೆ ಹೋದರು. ಇದರಿಂದ ರಾಜನ ಕೀರ್ತಿಯು ಮರಾಟರಲ್ಲಿ ಹಬ್ಬಿ ದುದಲ್ಲದೆ, ಸಿವಾಜಿಯ ಕಸುವು ಕಡಮೆಯಾಯಿತು. ತರುವಾಯ ರಾಜಾ ಜಯಸಿಂಗನು ದಿಲೀರಖಾನನನ್ನು ಪುರಂದರದ ಹೊರಕೋಟೆಯನ್ನು ಮುತ್ತಲಿಕ್ಕೆ ಹಚ್ಚಿ, ಸುತ್ತಲಿನ ಊರುಗಳನ್ನು ಸುಲಿಯಲಿಕ್ಕೆ ಕೆಲವು ದಳ ವಾಯಿಗಳನ್ನು ಕಳುಹಿದನು. ಈ ಮೇರೆಗೆ ದಂಡನ್ನು ಇಬ್ಭಾಗಿಸಲಿಕ್ಕೆ ಎರಡು ಕಾರಣಗಳಿರುತ್ತವೆಂದು ಜಯಸಿಂಗರಾಜನು ಬಾದಶಹನಿಗೆ ಬರೆ ದನು. ಆ ಕಾರಣಗಳಾವವೆಂದರೆ:—೧. ಮುತ್ತಿಗೆಯನ್ನು ಜೋರಿನಿಂದ ನಡಿಸಿ, ನಾಡಿನಲ್ಲಿ ದಾಳಿಮಾಡಲಿಕ್ಕೆ ಕಳಿಸುವಷ್ಟು ಬಾದಶಹನ ದಂಡು ದೊಡ್ಡದಿರುತ್ತದೆಂದು ಸಿವಾಜಿಯನ್ನೂ ಆದಿಲಶಹನನ್ನೂ ಮನಗಾಣಿಸು ವುದು ಮೊದಲನೆಯದು. ೨. ಊರುಗಳನ್ನು ಹಾಳುಗೆಡವಿ, ಜನರನ್ನು ಗೋಳಾಡಿಸಿ, ದೊಡ್ಡ ದಂಡನ್ನು ಒಟ್ಟುಗೂಡಿಸಲಿಕ್ಕೆ ಸಿವಾಜಿಗೆ ಅನುವು ಕೊಡಬಾರದೆಂಬುದು ಎರಡನೆಯದು.

ರಾಜತಂತ್ರವಿಶಾರದರಿಗೆ ತೋರಿಸುವ ಹಲ್ಲು ಒಂದು ಕಚ್ಚುವ ಹಲ್ಲು ಮತ್ತೊಂದು, ಹೀಗೆ ಎರಡು ಹಲ್ಲುಗಳಿರುತ್ತನೆಂಬ ಮಾತು ಎಲ್ಲ

ವಾಚಕರಿಗೂ ಗೊತ್ತಿರಬಹುದು. ರಾಜಾ ಜಯಸಿಂಗನು ಅನುಭವಿಕ ಮುತ್ಸದ್ದಿಯಾದ್ದರಿಂದ ನಿಜವಾದ ಕಾರಣಗಳನ್ನು ತಿಳಿಸಿ ಬಾದಶಹನ ಸಂಶಯಕ್ಕೆ ಪುಟಕೊಟ್ಟು, ಕಯ್ಕೊಂಡ ಕಾರ್ಯವಿಘಾತವನ್ನು ಮಾಡಿ ಕೊಳ್ಳಲೆಳಸದೆ, ತೋರಿಕೆಯ ಕಾರಣಗಳನ್ನು ಮಾತ್ರ ಬರೆದು, ಅವರಂಗ ಜೇಬನನ್ನು ಸಮಾಧಾನಗೊಳಿಸಿ, ತಾನೇ ನಿಜವಾದ ಕಾರಣಗಳ ಪ್ರತೀ ಕಾರವನ್ನು ಮಾಡತೊಡಗಿದನು.

ಅದಿಲ್ಶಾಹಿಯ ಮತ್ತು ಮೋಗಲ್ಬಾದಶಾಹಿಯ ಸರದಾರರ ಲಂಚ ಗುಳಿತನವು ಸಿವಾಜಿಯ ಬೆಳವಣಿಗೆಗೆ ಹೆಚ್ಚು ಅನುಕೂಲವಾಗಿತ್ತೆಂಬ ಸಂಗತಿಯು ಓದುವವರ ಲಕ್ಷದಲ್ಲಿ ಬಂದಿರಬಹುದು. ಬಾದಶಹರಾಗಲಿ ಅರಸರಾಗಲಿ, ಪಾಳೆಗಾರರಾಗಲಿ ಸಂಸ್ಥಾನಿಕರಾಗಲಿ, ಅಧಿಕಾರಿಗಳಾಗಲಿ ಸಂಸ್ಥೆಯ ಮುಖ್ಯಸ್ಥರಾಗಲಿ, ಮನೆಯ ಯಜಮಾನರಾಗಲಿ ಯಾರೇ ಆಗಲಿ ತಂತಮ್ಮ ಕ್ಷೇಮೋತ್ಕರ್ಷಗಳನ್ನು ತಂತಮ್ಮ ಕಯ್ಕೆಳಗಿನವರ ಪ್ರಾಮಾ ಣಿಕತನ ಬುದ್ಧಿ ಧೈರ್ಯ ಸಾಹಸ ಉದ್ಯೋಗ ಉತ್ಸಾಹಗಳ ಪ್ರಮಾಣ ದಿಂದ ಮಾಡಿಕೊಳ್ಳುತ್ತಾರೆ. ಈ ಕಯ್ಕೆಳಗಿನವರಲ್ಲಿ ಉದ್ಯೋಗ ಬುದ್ಧಿ ಪ್ರಾಮಾಣಿಕತನಗಳಿದ್ದರೆ, ಒಡೆಯರು ತಮ್ಮ ಇದ್ದ ಸ್ಥಿತಿಯನ್ನು ಇಟ್ಟು ಕೊಂಡಿರಬಹುದು. ಅವರಲ್ಲಿ ಈ ಗುಣಗಳ ಹೊರತು ಧೈರ್ಯಸಾಹ ಸೋತ್ಸಾಹಗಳಿದ್ದರೆ ಅವರ ಸ್ಥಿತಿಯು ಇದ್ದಕ್ಕಿಂತ ಮೇಲಾಗಬಹುದು. ಯಜಮಾನರಲ್ಲೇ ಈ ಗುಣಗಳಿಲ್ಲದಿದ್ದರೆ, ಅವರು ೨ ನೆಯ ಬಾಜಿರಾಯ ಮುಂತಾದವರಂತೆ ಕೂಡಲೇ ಹಾಳಾಗಿ ಹೋಗಬಹುದು. ಕಯ್ಕೆಳಗಿ ನವರಲ್ಲಿ ಉಳಿದ ಎಲ್ಲ ಗುಣಗಳಿದ್ದು ಪ್ರಾಮಾಣಿಕತನವೊಂದು ಇಲ್ಲದಿದ್ದರೆ, ಆ ರಾಜ್ಯಕ್ಕೆ ಆ ಸಂಸ್ಥಾನಕ್ಕೆ ಆ ಸಂಸ್ಥೆಗೆ ಅಥವಾ ಆ ಮನೆತನಕ್ಕೆ ಕ್ಷಯ ರೋಗವು ಹತ್ತಿತೆಂದು ನಿಶ್ಚಯವಾಗಿ ಹೇಳಬಹುದು. ಇಂತಹ ಕ್ಷಯ ರೋಗದಿಂದಲೇ ಅದಿಲ್ಶಾಹಿಯು ದಿನದಿನಕ್ಕೆ ಸವೆದು ಸೊರಗುತ್ತ ನಡೆ ದಿತ್ತು. ಮೋಗಲ್ಸರದಾರರೊಳಗೂ ಕಾರ್ಯಸಾಧಕನಾದ ಸಿವಾಜಿಗೆ ಇಂತಹ ಲಂಚಗುಳಿಗಳು ದೊರೆದುದರಿಂದ, ಅವನು ನಾನಾತರದಿಂದ ತನ್ನ ಲಾಭವನ್ನು ಈ ಹೊತ್ತಿನವರೆಗೆ ಮಾಡಿಕೊಂಡಿದ್ದನು.

ಆ ಕಾಲಕ್ಕೆ ತಂತ್ರಗಾರಿಕೆ ಸಾಹಸಗಳಲ್ಲಿ ನಮ್ಮ ಚರಿತ್ರನಾಯಕನಿಗೆ ಎಣೆಯಾದವರು ಯಾರೂ ಇದ್ದಿಲ್ಲೆಂದು ಧಾರಾಳವಾಗಿ ಹೇಳಬಹುದು. ರಾಜಾಜಯಸಿಂಗನು ಕಣ್ಣೊಳಗೆ ಎಣ್ಣೆ ಹಾಕಿಕೊಂಡು, ಊಟುಡಿಗೆಯ ಪರಿವೆ ಇಲ್ಲದೆ, ಮೇಲ್ವಿಚಾರಣೆಯನ್ನು ಮಾಡುತ್ತಿದ್ದರೂ ಸಿವಾಜಿಯು ಮೊಗಲರ ಕೆಲ ದಳವಾಯಿಗಳನ್ನು ತನ್ನ ಕಡೆಗೆ ಒಡೆಕೊಂಡನು. ಪುರಂದರದ ಪಡುವಣ ಕಿಂಡಿಯನ್ನು ಕಾಯಲಿಕ್ಕೆ **ದಾವುದಖಾನ ಕುರೇಸಿ** ಎಂಬವನಿದ್ದನು. ಅವನು ಕೆಲಮರಾಟರನ್ನು ಕೋಟೆಯೊಳಗೆ ಬಿಟ್ಟ ಸುದ್ದಿಯು ದಿಲೀರಖಾನನಿಗೆ ಹತ್ತಿದ್ದರಿಂದ, ಅವರಿಬ್ಬರು ಜಗಳಾಡತೊಡಗಿದರು. ಈ ಜಗಳವನ್ನು ಮುರಿಯುವ ಉದ್ದೇಶದಿಂದ ರಾಜಾಜಯಸಿಂಗನು ದಾವುದನನ್ನು ತನ್ನ ದಂಡಿನೊಳಗೆ ಸೇರಿಸಿಕೊಂಡು, ಬೇರೊಬ್ಬನನ್ನು ಪಶ್ಚಿಮದ್ವಾರವನ್ನು ಕಾಪಾಡಲಿಕ್ಕಿಟ್ಟನು. ಅವನೂ ಮರಾಟರಿಗೆ ಅನುಕೂಲವಾಗಿ ನಡೆಯತೊಡಗಿದನು!! ದಾವುದನಂತೂ ಮುತ್ತಿಗೆಯಲ್ಲಿ ದಿಲೀರಖಾನನಿಗೆ ಯಾರೂ ನೆರವಾಗಬಾರದೆಂದು ಬಹಿರಂಗವಾಗಿ ಸಾರುತ್ತಿದ್ದನು. ಮುತ್ತಿಗೆಯಲ್ಲಿ ಅವನಿಗೆ ಸೋಲುಬಂದದನ್ನು ನೋಡಬೇಕೆಂಬುದೇ ಅವನ ಲವಲವಿಕೆಯು!!!

ಇಬ್ಬರನ್ಯಾಯ ಒಬ್ಬರಿಗಾಯ ಎಂಬ ಗಾದೆಯಂತೆ, ದಾವುದ ದಿಲೀರಖಾನರ ಬಡಿದಾಟದಿಂದ ತಾನು ಕಯ್ಕೊಂಡ ಸ್ವಾಮಿಕಾರ್ಯಕ್ಕೆ ಹಾನಿ ತಟ್ಟಬಾರದೆಂಬ ಸದುದ್ದೇಶದಿಂದ ಜಯಸಿಂಗರಾಜನು ಈ ಜಗಳವನ್ನು ಬಾದಶಹನಿಗೆ ತಿಳಿಸದೆ, ತಾನೇ ಅದನ್ನು ತಗ್ಗಿಸಲಿಕ್ಕೆ ಎತ್ನಗಡಿ ಮಾಡಿದನು. ದಾವುದನಿಗೆ ತನ್ನ ನಂಬಿಗಸ್ತರಾದ ಕೆಲವು ದಳವಾಯಿಗಳನ್ನೂ ೬೦೦೦ ದಂಡನ್ನೂ ಕೊಟ್ಟು ರಾಜಗಡ, ಸಿಂಹಗಡ, ರೋಹಿರಾ ಈ ಕೋಟೆಗಳ ಸುತ್ತಲಿರುವ ಊರುಗಳನ್ನು ಸುಲಿದು ಉಧ್ವಸ್ತಮಾಡಲಿಕ್ಕೆ ಕಳುಹಿದನು (೨೫ ಎಪ್ರಿಲ); ಮತ್ತೊಬ್ಬ ದಳವಾಯಿಯಾದ ಕುತ್ಬದ್ದೀನ ಖಾನನನ್ನು ಬಡಗಲಿದ್ದ ಮರಾಟರ ಊರುಗಳಲ್ಲಿ ದಾಳಿ ಮಾಡಲಿಕ್ಕೆ ಕಳುಹಿದನು. ದಾವುದಖಾನನು ರೋಹಿರಾ ರಾಜಗಡ ಸಿಂಹಗಡಗಳ ಸುತ್ತಲಿನ ಹಳ್ಳಿಗಳನ್ನು ಸುಲಿದು ಸುಟ್ಟು, ಸಿವಾಪುರಕ್ಕೆ ಬರುವಷ್ಟರಲ್ಲಿ ಅವರಿಬ್ಬರನ್ನು ತಿರುಗಿ [illegible]

ಸಿಂಹರಾಜನು ಸ್ವಾರರನ್ನು ಕಳುಹಿದನು. ಆದ್ದರಿಂದ ದಾವುದ ಕುತ
ಬುದ್ದೀನರಿಬ್ಬರೂ ಒತ್ತರದಿಂದ ಪುಣೆಗೆ ಬಂದರು (೩ ಮೇ). ಕೂಡಲೆ
ಜಯಸಿಂಹರಾಜನು ಅವರಿಬ್ಬರಿಗೂ ಲೋಹಗಡದ ಮೇಲೆ ದಂಡೆತ್ತಿ
ಹೋಗಲಿಕ್ಕೆ ಅಪ್ಪಣೆಕೊಟ್ಟನು. ಏಕೆಂದರೆ ಸಿವಾಜಿಯು ಅಲ್ಲಿ ದೊಡ್ಡ
ದಂಡನ್ನು ಕೂಡಿಸಿರುತ್ತಾನೆಂಬ ಸುದ್ದಿಯು ಬಂದಿತ್ತು ಮತ್ತು ಅವನ್ನು
ಕೂಡಲೆ ನಾಶಮಾಡುವುದು ಅತ್ಯವಶ್ಯವಾಗಿ ಕಂಡುಬಂತು. ದಾವುದ
ಕುತಬುದ್ದೀನಖಾನರು ಚಿಂಚವಾಡದ ಮಾರ್ಗದಿಂದ ಲೋಹಗಡಕ್ಕೆ
ಹೋಗಿ, ನೆರೆಯ ಹಳ್ಳಿಗಳನ್ನು ಸುಲಿಯತೊಡಗಿದರು. ಕೂಡಲೆ ೫೦೦
ರಾಹುತರೂ ೧೦೦೦ ಕಾಲಾಳುಗಳೂ ಅವರನ್ನು ಕೆಣಕಿದರು. ಮೊಗ
ಲರು ಅವರನ್ನು ಸೋಲಿಸಿ ಓಡಿಸಿಬಿಟ್ಟರು (೫ ಮೇ). ಬಳಿಕ ಬಾಲ
ಘಾಟ ಪೈನಘಾಟಗಳ ಹಳ್ಳಿಗಳನ್ನು ಹಾಳುಮಾಡುತ್ತ ಮೊಗಲರ ದಂಡು
ತಿರುಗಿ ಬಂತು.

ಜಯಸಿಂಹರಾಜನು ಪುಣೆಗೆ ಬಂದು ಸಿವಾಜಿಯ ವಿರುದ್ಧವಾಗಿ
ವ್ಯೂಹವನ್ನು ರಚಿಸುತ್ತಿರುವಾಗ, ಅವನು ಎಲ್ಲಿ ಏನುಮಾಡುತ್ತಿದ್ದನೆಂಬು
ದರ ವಿಷಯವಾಗಿ ಪಂಡಿತ ಯದುನಾಥ ಸರ್ಕಾರವರ ಚರಿತ್ರೆಯಲ್ಲಿ
ಉಲ್ಲೇಖವಿಲ್ಲ. ಕೇಳೂಸಕರರು ಅವನು ಪಶ್ಚಿಮ ಸಮುದ್ರದ ದಂಡೆಯಲ್ಲಿದ್ದ
ನೆಂತಲೂ, ಮೊಗಲರ ಹಾವಳಿಯ ಸುದ್ದಿಯನ್ನು ಕೇಳಿ ಅವನು ಲಗು
ಬಗೆಯಿಂದ ರಾಯಗಡಕ್ಕೆ ಸುರಕ್ಷಿತವಾಗಿ ಬಂದು, ನೇತಾಜಿ ಪಾಲಕರನ
ಸ್ವಾಮಿಭಕ್ತಿಯ ವಿಷಯವಾಗಿ ಸಂಶಯಬಂದುದರಿಂದ ಅವನನ್ನು ಕೆಲಸ
ದಿಂದ ದೂರಮಾಡಿ, ಕರ್ತೋಜಿ (ಪ್ರತಾಪರಾವ) ಗುಜ್ಜರ* ಎಂಬವನನ್ನು
ಸರನೌಬತ್ತನಾಗಿ ನಿಯಮಿಸಿದನೆಂತಲೂ, ಮಂತ್ರಿಗಳೊಡನೆ ಆಲೋಚಿಸಿ
ಜಯಸಿಂಗರಾಜನಿಗೆ ಶರಣುಹೋಗುವುದೇ ಉತ್ತಮ ಮಾರ್ಗವೆಂದು
ನಿಶ್ಚಯಿಸಿದನೆಂತಲೂ ಬರೆಯುತ್ತಾರೆ. ಇಂತಹ ಪ್ರತಾಪಶಾಲಿಯೂ
ಪ್ರತಿಭೆಯುಳ್ಳವನೂ ಆದ ನಮ್ಮ ಚರಿತ್ರನಾಯಕನು ಇಷ್ಟುಬೇಗನೆ

---

* ಈ ಪ್ರತಾಪರಾಯನು ಸಿವಾಜಿಯ ಪ್ರೇರಣೆಯಿಂದ ಜಯಸಿಂಗರಾಜ
ನನ್ನು ಕೊಲ್ಲಲಿಕ್ಕೆ ಯತ್ನಿಸಿ ನಿಷ್ಫಲನಾದನೆಂದು ಸ್ಕಾಟ್‌ಬೇರಿಂಗನೆಂಬ ಆಂಗ್ಲ
ಗ್ರಂಥಕರ್ತನು ಬರೆಯುತ್ತಾನೆ.

ಏನೂ ಪ್ರಯುತ್ನಮಾಡದೆ, ಏಕೆ ಹತವೀರ್ಯನಾದನೆಂಬುದು ಸೋಜಿಗದ ಮಾತೇ ಸರಿ.

ಸಿವಾಜಿರಾಜನು ಎಲ್ಲೇ ಇರಲಿ, ಅವನ ದಳವಾಯಿಗಳು ತಮ್ಮ ಕಯ್ಯಿಂದಾದಷ್ಟು ಮೊಗಲರಿಗೆ ತೊಂದರೆ ಕೊಡಲಿಕ್ಕೆ ಹಿಂದೆಗೆಯಲಿಲ್ಲ. ನೇತಾಜಿ ಪಾಲಕರನನ್ನು ಮಾತ್ರ ಮೊಗಲರು ತಮ್ಮ ಕಡೆಗೆ ಒಡ ಕೊಂಡಿದ್ದರೆಂದು ತೋರುತ್ತದೆ. ಅದು ಹೇಗೇ ಇರಲಿ, ಈ ನೇತಾಜಿ ಯು ಎಪ್ರಿಲದಲ್ಲಿ ಮೊಗಲರ ವಶದಲ್ಲಿದ್ದ ಪರೆಂಡಾಕೋಟೆಯ ಮೇಲೆ ದಂಡೆತ್ತಿಹೋದನು. ಕೂಡಲೆ ಸುಪೆಯಲ್ಲಿಟ್ಟ ಮೊಗಲರ ದಂಡು ಅವ ನನ್ನು ಬೆನ್ನಟ್ಟಿತು. ಆ ಸುದ್ದಿಯನ್ನು ಕೇಳಿ, ಮರಾಟರು ಫಾನಾಫಾನಾ ದರು. ಒಮ್ಮೆ ಕುತಬುದ್ದೀನಖಾನನು **ಉದಯದುರ್ಗಕ್ಕೆ** ಹೋಗಿ ಅಲ್ಲಿ ಕೂಡಿದ ಮರಾಟರ ದಂಡನ್ನು ಚದರಿಸಿ, ಸುತ್ತಲಿನ ಹಳ್ಳಿಗಳನ್ನು ಸುಲಿದನು (ಮೇ). ಮತ್ತೊಮ್ಮೆ ದಾವುದಖಾನನು ಲೋಹಗಡದ ಕೋಟೆಯನ್ನೇರಿ, ಅಲ್ಲಿದ್ದ ಸೈನಿಕರನ್ನು ಕೊಂದು, ೩೦೦ ದಂಡಾಳು ಗಳನ್ನೂ ೩೦೦೦ ದನಗಳನ್ನೂ ಹಿಡಿದುಕೊಂಡುಹೋದನು. ಮತ್ತೊಬ್ಬ ಮೊಗಲರ ದಳವಾಯಿಯು **ನಾರಕೋಟೆ** ಎಂಬಲ್ಲಿ ಒಟ್ಟುಗೂಡಿದ ೩೦೦ ಮರಾಟರಾಹುತರ ಮೇಲೆ ಬಿದ್ದು ಅವರನ್ನು ಸೋಲಿಸಿ ಓಡಿಸಿಬಿಟ್ಟನು. ಈ ಕಾಲಕ್ಕಾದ ಎಲ್ಲ ಚಕಮಕಿಗಳಲ್ಲಿ ಮೊಗಲರಿಗೆ ಬಿಟ್ಟೂಬಿಡದೆ ಗೆಲವು ಬಂದಿತೆಂತಲ್ಲ; ಕೆಲವುಸಾರಿ ಅವರು ಸೋತು ಓಡಿಹೋಗಿರಬಹುದು. ಆದರೆ ಒಟ್ಟನಮೇಲೆ ಜಯಲಕ್ಷ್ಮಿಯು ಮೊಗಲರಿಗೆ ಒಲಿದಿದ್ದಳೆಂದು ಹೇಳಲಿಕ್ಕೆ ಅಡ್ಡಿಯಿಲ್ಲ.

ದಿಲೀರಖಾನನು ವಜ್ರಗಡವನ್ನು ಹಿಡಿದುಕೊಂಡು, ಹೊರಕೋಟೆ ಯನ್ನು ಮುತ್ತಿದನೆಂದು ಹಿಂದೆ ಹೇಳಿರುತ್ತೇವಷ್ಟೆ. ಈ ಕೋಟೆಯ ಬಿಳಿ ಕೊತ್ತಳಗಳು ತೋಫಿನ ಹೊಡಿತದಿಂದ ಒಡೆದಿದ್ದರೂ ಕಾವಲುಗಾರರು ಮೊಗಲರನ್ನು ಗೋಡೆಯ ಹತ್ತರ ಬರಗೊಡಲಿಲ್ಲ. ಆದ್ದರಿಂದ ಬಿಳಿ ಕೊತ್ತಳಕ್ಕೆ ಹೊಂದಿ ಒಂದು ಕಟಗಿಯ ಅಟ್ಟವನ್ನು ಮಾಡಿ, ಅದರಮೇಲೆ ತೋಫುಗಳನ್ನೇರಿಸಬೇಕೆಂದು ಜಯಸಿಂಗರಾಜನು ಹುಕುಮುಮಾಡಿ

ದನು. ಮೊಗಲರು ಕಟ್ಟುತ್ತಿದ್ದ ಅಟ್ಟವನ್ನು ಮರಾಟರು ಸುಟ್ಟದರಿಂದ ಮೊದಲಿನ ಎರಡು ಪ್ರಯತ್ನಗಳು ವ್ಯರ್ಥವಾದವು. ಮೂರನೆಯ ಸಾರಿ ರಾಠೋರ ರೂಪಸಿಂಗನೂ ಪುರೋಹಿತ ಗಿರಿಧರನೂ ಸಿದ್ಧಮಾಡಿಟ್ಟುಕೊಂಡ ಅಟ್ಟವನ್ನು ಒಯ್ದು ಮರಾಟರ ಗುಂಡಿನ ಹೊಡಿತಕ್ಕೆ ಹೆದರದೆ, ಅದನ್ನು ಬಿಳಿಕೊತ್ತಳದ ಮುಂದೆ ಗಟ್ಟಿಯಾಗಿ ಹುಗಿದರು. ಈ ಸಾಹಸವನ್ನು ನೋಡಿ, ಮೊಗಲ್ ದಂಡಾಳುಗಳಿಗೆ ಬಿಗಿಹಿಡಿಯದಷ್ಟು ಹುರುಪು ಬಂತು. ಅವರ ಚಲ್ಲಾಟವು ಹಿಡಿಯಲಾರದಷ್ಟಾಯಿತು. ತೋಪುಗಳನ್ನು ಅಟ್ಟದ ಮೇಲೆ ಏರಿಸುವ ವರೆಗೆ ತಾಳಿರೆಂದು ಎಷ್ಟು ಹೇಳಿದರೂ ಕೇಳದ ಹಾಗಾದರು. ದಿಲೀರಖಾನನ ಅಪ್ಪಣೆಯನ್ನು ಪಡೆಯದೇ ಎಷ್ಟೋ ಮಂದಿ ಕೋಟೆಯ ಗೋಡೆಯನ್ನೇರಿ, ಒಳಗಿದ್ದ ಕಾವಲುಗಾರರೊಡನೆ ಕಾದತೊಡಗಿದರು. ಕಯ್ಗೆ ಕೈ ಹತ್ತಿತು; ಬಾಣಗುಂಡುಗಳ ಮಳೆ ಸುರಿಯಿತು; ಲಟ್ಟಾಲಟ್ಟಿಯು ಪ್ರಾರಂಭವಾಯಿತು. ಪವಾರದ ಭೂಪತಿಸಿಂಗ ಮುಂತಾದ ರಜಪೂತರು ಮಡಿದರು. ಮರಾಟರು ತಾವು ಗೆದ್ದೆವೆಂದು ಹಿಗ್ಗುವಷ್ಟರಲ್ಲಿ, ಕಿರಾತಸಿಂಗ ಮುಂತಾದ ರಜಪೂತರು ಬಂದು ಮರಾಟರನ್ನು ಹಿಂದೋಡಿಸಿದ್ದರಿಂದ, ಅವರು ಬಿಳಿಕೊತ್ತಳಗಳನ್ನು ಮೊಗಲರಿಗೆ ಬಿಟ್ಟುಕೊಟ್ಟು, ಕರಿಕೊತ್ತಳದ ಹಿಂದೆ ಅಡಗಿಕೊಂಡರು. ಆ ದಿವಸ ದೊರೆದ ೩ ಕೊತ್ತಳಗಳಿಂದಲೇ ಸಂತುಷ್ಟನಾಗಿ ದಿಲೀರಖಾನನು ತನ್ನ ದಂಡಿಗೆ ಮುಂದರಿಯಬಾರದೆಂತಲೂ ಇದ್ದ ಸ್ಥಳದಲ್ಲೇ ಕಾಲಿವೆಗಳನ್ನು ಕಡಿದು ಆತ್ಮಸಂರಕ್ಷಣಮಾಡಿಕೊಳ್ಳಬೇಕೆಂತಲೂ ಕಟ್ಟುಮಾಡಿದನು (೩೦ ಮೇ). ಮುಂದೆ ೨ ದಿವಸಗಳಲ್ಲಿ ಸಣ್ಣ ಎರಡು ತೋಪುಗಳು ಅಟ್ಟದ ಮೇಲೆ ಏರಿದವು. ಅವುಗಳ ಹೊಡಿತಕ್ಕೆ ಕರಿಕೊತ್ತಳವು ಒಡೆದು ಚೂರಾಯಿತು. ಮರಾಟರು ಅಲ್ಲಿಂದ ಕಾಲ್ತೆಗೆದರು. ಹಿಂದೆ ಒಂದು ಅಟ್ಟ ಕಟ್ಟಿಕೊಂಡು ಕೆಲಹೊತ್ತು ನಿಂತರು. ಅದೂ ಮುರಿದು ಚೂರಾಯಿತು.

ಇದೇ ಸುಮಾರಿಗೆ ಅಥವಾ ಕೆಲವು ದಿವಸಗಳ ಮುಂಚೆಯೇ **ಮುರಾರ ಬಾಜಿ ಪ್ರಭು** ಎಂಬ ಕೋಟೆಯ ಶೂರಕಿಲ್ಲೆದಾರನು ೩೦೦ ವೀರಸಿಪಾಯರೊಡನೆ ಹೊರಬಿದ್ದು, ೫೦೦೦ ಅಫಗಾಣರೊಡನೆ ಗುಡ್ಡವನ್ನು ಏರಿ ಬರುತ್ತಿದ್ದ ದಿಲೀರಖಾನನ ಮೇಲೆ ಹೋಗಿ ಬಿದ್ದನು. ಎರಡೂ

ದಂಡಿನವರು ಬೆರೆತುಹೋದರು. ೫೦೦ ಮಂದಿ ಪಠಾಣರ ತಲೆಗಳು ನೆಲಕ್ಕೆ ಉರುಳಿದವು. ಮೊಗಲರ ಹೆಚ್ಚು ಸಂಖ್ಯೆಯಿಂದ ಬಾಜಿಯ ಸಂಗಡಿಗರು ಒಬ್ಬರ ಹಿಂದೊಬ್ಬರು ಪ್ರತಿಕ್ಷಣ ಸಾಯುತ್ತಿದ್ದರೂ ಅದನ್ನು ಲೆಕ್ಕಿಸದೆ, ಆ ಮಹಾವೀರನು ದಿಲೀರಖಾನನನ್ನು ಹುಡುಕುತ್ತ ಅವನಿದ್ದಲ್ಲಿಗೆ ಹೋದನು. ಅವನ ಧೈರ್ಯ ಶೌರ್ಯ ಸಾಹಸಗಳನ್ನು ನೋಡಿ ಬೆರಗಾದ ಖಾನನು "ಕಲಿಯೇ, ನಿನ್ನ ಅದಟತನ ಎದೆಗಾರಿಕೆಗೆ ಮೆಚ್ಚಿದೆನು. ಸುಮ್ಮನೇ ಶಸ್ತ್ರವಿಟ್ಟು ಶರಣುಬಾ. ನನ್ನ ದಂಡಿನಲ್ಲಿ ದೊಡ್ಡ ಉದ್ಯೋಗವನ್ನು ಕೊಡುವೆನು" ಎಂದನು. ಅದಕ್ಕೆ ಬಾಜಿಯು "ಛೇ ಹೇಡಿ, ಶರಣು ಬರಲಿಕ್ಕೆ ನಾನು ಮ್ಲೇಂಛನೇ? ನನ್ನ ಮೈಯಲ್ಲಿ ಉಸಿರಾಡುವ ವರೆಗೆ ಶರಣು ಬರುವವನಲ್ಲ" ಎಂದು ಖಾನನನ್ನು ತನ್ನ ಕತ್ತಿಯಿಂದ ಹೊಡೆಯಲಿಕ್ಕೆ ಹೋದನು. ಆಕ್ಷಣವೇ ಖಾನನು ಬಾಣವನ್ನು ಕುತ್ತಿಗೆಗೆ ಗುರಿಯಿಟ್ಟು ಹೊಡೆಯಲು, ಬಾಜಿಯು ಧಪ್ಪೆಂದು ನೆಲಕ್ಕೆಬಿದ್ದು ಸತ್ತನು. ಅವನು ಸತ್ತನೆಂದು ಅಂಜಿ ಓಡಿಹೋಗದೆ, ಅವನ ದಂಡಿನವರೆಲ್ಲ ಸಾಯುವ ವರೆಗೆ ಕಾದಿದರು (೨ ಜೂನ). ಇದಕ್ಕೆನ್ನಬೇಕು ಸ್ವಾರ್ಥ ತ್ಯಾಗ; ಇದಕ್ಕೆನ್ನಬೇಕು ಸ್ವಾಮಿಭಕ್ತಿ; ಇದಕ್ಕೆನ್ನಬೇಕು ಸ್ವದೇಶಾಭಿಮಾನ!!! ಪುರಂದರದ ಹೊರಗಿನ ಕೋಟೆಯ ೫ ಕೊತ್ತಳಗಳೂ ಮೊಗಲರ ಕಯ್ಸೇರಿದವು. ಒಳಗಿನ ಕೋಟೆಯನ್ನು ರಕ್ಷಿಸಲಿಕ್ಕೆ ತೀರ ಸ್ವಲ್ಪ ಜನರು ಉಳಿದಿದ್ದರು. ಜಯಸಿಂಗರಾಜನ ಕಾರ್ಯದಕ್ಷತೆ ಜಾಗರೂಕತೆಗಳ ಮೂಲಕವಾಗಿ ಹೊರಗಿನಿಂದ ಸಾಹಾಯ ಬರುವ ಸಂಭವವು ಎಳ್ಳಷ್ಟಾದರೂ ಇದ್ದಿದ್ದಿಲ್ಲ. ಆದ್ದರಿಂದ ೪/೬ ದಿವಸಗಳಲ್ಲಿ ಪುರಂದರವು ಕಯ್ಬಿಡುವುದೆಂದು ಸಿವಾಜಿಯು ಮನಗಂಡನು. ಅಲ್ಲಿ ಎಷ್ಟೋ ಮರಾಟ ಸರದಾರರ ಕುಟುಂಬಗಳಿದ್ದುದರಿಂದಲೋ ಬೇರೆಯಾವ ಕಾರಣದಿಂದಲೋ ಸಿವಾಜಿಯು ಹತವೀರ್ಯನಾಗಿ ಜಯಸಿಂಗನಿಗೆ ಶರಣುಹೋಗುವ ಆಲೋಚನೆಯನ್ನು ಮಾಡತೊಡಗಿದನು.

ಮೊಗಲರ ದಂಡು ಅವರಂಗಾಬಾದದಿಂದ ಹೊರಟಂದಿನಿಂದ ಸಿವಾಜಿಯು ಅವರೊಡನೆ ಒಪ್ಪಂದಮಾಡಿಕೊಳ್ಳಲಿಕ್ಕೆ ಯತ್ನ ನಡಿಸಿದ್ದನೆಂದು ತೋರುತ್ತದೆ. ಏಕೆಂದರೆ ಜಯಸಿಂಗರಾಜನು ಬಾದಶಹನಿಗೆ ಕಳಿಸಿದ

ಒಂದು ಕಾಗದದಲ್ಲಿ ಬರೆದುದೇನಂದರೆ:—ನಾನು ದಂಡಿನೊಡನೆ **ಪಾಬಲಕ್ಕೆ** ಬಂದಂದಿನಿಂದ ಸಿವಾಜಿಯ ನಿಯೋಗಿಗಳು ಒಪ್ಪಂದದ ಮಾತಾಡಲಿಕ್ಕೆ ಬರಲಾರಂಭಿಸಿದರು. ಪುಣೆಗೆ ಬರುವುದರೊಳಗೆ ೨ ಪತ್ರಗಳು ಬಂದವು. ಅವುಗಳಿಗೆ ಜವಾಬನ್ನು ಕೊಡದ್ದರಿಂದ ನಿಯೋಗಿಗಳು ಮೋರೆ ಬಣಗಿಸಿಕೊಂಡು ತಿರುಗಿಹೋದರು. ಬಳಿಕ ಸಿವಾಜಿಯು ನಂಬಿಗಸ್ತನಾದ **ಕರ್ವಾಜಿ** ಎಂಬವನನ್ನು ಒಂದು ದೊಡ್ಡ ಹಿಂದಿ ಪತ್ರವನ್ನು ಕೊಟ್ಟು ಕಳುಹಿದನು. ಆ ಪತ್ರವನ್ನು ಓದಲಿಕ್ಕೆ ಕೂಡ ನಾನು ಮನಸ್ಸು ಮಾಡದ್ದರಿಂದ ಕರ್ವಾಜಿಯು ಪರಿಪರಿಯಿಂದ ಬೇಡಿಕೊಂಡನು. ಅದರಲ್ಲಿ ಮೊಗಲರು ವಿಜಾಪುರದೊಡನೆ ಯುದ್ಧ ಹೂಡಿದರೆ, ತಾನು ಏಕನಿಷ್ಠೆಯಿಂದ ಬಾದಶಹನಿಗೆ ನೆರವಾಗುವೆನೆಂದು ಸಿವಾಜಿಯು ಬರಿಸಿದ್ದನು. ತನ್ನ ಗುಡ್ಡಗಾಡಿನ ನಾಡಿನಲ್ಲಿ ನಡಿಸಿದ ದಾಳಿಯಿಂದ ಮೊಗಲರಿಗೆ ಯಾವ ಲಾಭವೂ ಆಗಲಿಕ್ಕಿಲ್ಲ ಎಂಬ ಬೆದರೂ ಅದರಲ್ಲಿತ್ತು. ಅದಕ್ಕೆ ನಾನು "ನಿಮ್ಮ ಒಡೆಯನಿಗೆ ಜೀವವೂ ಸುರಕ್ಷಿತೆಯೂ ಬೇಕಾಗಿದ್ದರೆ ಅವನು ಬಾದಶಹನ ಊಳಿಗದವನಾಗಬೇಕು" ಎಂದು ಹೇಳಿ ಕಳುಹಿದೆನು.

ಜಯಸಿಂಗರಾಜನು ಪುಣೆಯನ್ನು ಬಿಡುವುದಕ್ಕಿಂತ ಮೊದಲು ಸಿವಾಜಿಯು ಮೇಲೆ ಬರೆದಂತೆ ಒಪ್ಪಂದದ ಮಾತುಗಳನ್ನು ನಡಿಸಿದನು, ಮತ್ತು ಜಯಸಿಂಗರಾಜನು ಆ ಮಾತುಗಳನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ಸಿವಾಜಿಯನ್ನು ದಿಗ್ಬಂಧನಮಾಡಿ ಪುರಂದರವನ್ನು ಮುತ್ತಲು, ನಮ್ಮ ಚರಿತ್ರನಾಯಕನ ಬಿಗುವು ಕಡಮೆಯಾಯಿತು. "ಕೆಲವು ಕೋಟೆಗಳನ್ನು ಬಿಟ್ಟುಕೊಡುವುದಲ್ಲದೆ, ವಾರ್ಷಿಕ ಕಪ್ಪಗಾಣಿಕೆಯನ್ನು ಕೊಡುತ್ತೇನೆ. ನನಗೆ ಒಡಂಬಡಿಕೆಯ ದಾನವನ್ನು ಕೊಡಿರಿ" ಎಂದು ರಾಯಭಾರಿಗಳ ಮುಖಾಂತರವಾಗಿ ಸಿವಾಜಿಯು ಬೇಡಿಕೊಳ್ಳತೊಡಗಿದನು. ಎಲ್ಲ ಗುಮಾಸ್ತರಿಗೂ ರಾಜಾ ಜಯಸಿಂಗನು "ನಿಮ್ಮ ಯಜಮಾನನು ಶರಣು ಬಂದ ಹೊರತು, ಒಪ್ಪಂದವು ದೊರೆಯಲಾರದು" ಎಂಬ ಒಂದೇ ಉತ್ತರವನ್ನು ಕೊಟ್ಟನು. ತನ್ನ ಅತಿನಂಬಿಗಸ್ತನೂ ಶೂರನೂ ಆದ ಮುರಾರಿ ಬಾಜಿಯು ರಣಾಂಗಣದಲ್ಲಿ ಮಡಿದನೆಂತಲೂ, ಒಂದೆರಡು ದಿವಸಗಳಲ್ಲಿ ಪುರಂದರಕೋಟೆಯು ನಿಶ್ಚಯವಾಗಿ ಹಗೆಗಳ ಕಯ್ಸೇರುವು

ದೆಂತಲೂ ಗೊತ್ತಾದ ಬಳಿಕ ಸಿವಾಜಿಯ ಬಿಗುವು ತೀರ ಸಡಲಿಸಿತು, ಧೈರ್ಯವು ಕುಂದಿತು, ಮುಸಲ್ಮಾನರಿಗೆ ತಲೆಬಾಗಿಸಬಾರದೆಂಬ ಹೇವವು ಹರಿಯಿತು, ಆತ್ಮವಿಶ್ವಾಸವು ಕರಗಿತು. ಕೂಡಲೆ ಅವನು ತನ್ನ ನ್ಯಾಯಾಧೀಶನಾದ ರಘುನಾಥ ಬಲ್ಲಾಳ ಎಂಬವನನ್ನು ಜಯಸಿಂಗ ರಾಜನ ಬಳಿಯಲ್ಲಿ ಕಳುಹಿದನು. ಆವನು ಜಯಸಿಂಗರಾಜನು ಹೇಳಿದ್ದ ಕ್ಕೆಲ್ಲ ಒಡಂಬಟ್ಟು ತಿರುಗಿಬಂದು, ಸಿವಾಜಿಗೆ ಎಲ್ಲ ನಡೆದ ಮಾತುಗಳನ್ನು ವಿವರವಾಗಿ ತಿಳುಹಿದನು (೯ ಜೂನ). ಸಿವಾಜಿಯು ೬ ಮಂದಿ ಬ್ರಾಹ್ಮಣ ರನ್ನು ಸಂಗಡ ಕರೆದುಕೊಂಡು ಪಾಲಿಕೆಯನ್ನೇರಿ ಜಯಸಿಂಗರಾಜನನ್ನು ಕಾಣಲಿಕ್ಕೆ ಬಂದನು (೧೧ ಜೂನ, ಬೆಳಗಿನ ೯ ಗಂಟೆ). ರಘುನಾಥ ಬಲ್ಲಾಳನು ಮುಂದೆ ಬಂದು, ತನ್ನ ಯಜಮಾನನು ಬಂದನೆಂದು ತಿಳಿ ಸಲು, ಜಯಸಿಂಗರಾಜನು ಎಲ್ಲ ಕೋಟೆಗಳನ್ನು ಮೊಗಲರಿಗೆ ಬಿಟ್ಟು ಕೊಡಲಿಕ್ಕೆ ಒಡಂಬಡುತ್ತಿದ್ದರೆ ಮಾತ್ರ ತನ್ನ ಬೆಟ್ಟಿಗೆ ಬರಬೇಕೆಂಬ ತನ್ನ ಅಪ್ಪಣೆಯನ್ನು ಸಿವಾಜಿಗೆ ತಿಳಿಸಬೇಕೆಂದೂ, ಒಪ್ಪಿಕೊಂಡರೆ ಆವನನ್ನು ಎದುರುಗೊಂಡು ಕರೆಕೊಂಡು ಬರಲಿಕ್ಕೆ ತನ್ನಿಬ್ಬ ಗುಮಾಸ್ತರು ಬರುವ ರೆಂದೂ ಹೇಳಿಕಳುಹಿದನು.

ಇತ್ತ ಜಯಸಿಂಗರಾಜನು ತನ್ನ ಡೇರೆಯಲ್ಲಿ ಕಚೇರಿಯನ್ನು ಮಾಡಿ ಕೊಂಡು, ಸಿವಾಜಿಯನ್ನು ಎದುರು ನೋಡುತ್ತ ಕುಳಿತನು. ಸಿವಾಜಿಯು ಡೇರೆಯ ಬಾಗಿಲಿನ ಹತ್ತರ ಬರಲು, ಜಯಸಿಂಗರಾಜನ ಸಬ್ನೀಸನು ಹೊರಗೆ ಹೋಗಿ, ಅವನನ್ನು ಕರೆಕೊಂಡು ಒಳಗೆ ಬಂದನು. ಜಯ ಸಿಂಗರಾಜನು ಎರಡು ಮೂರು ಹೆಜ್ಜೆ ಮುಂದರಿದು, ಅವನನ್ನು ಅಪ್ಪಿ ಕೊಂಡು, ತನ್ನ ಮಗ್ಗಲಿನಲ್ಲಿ ಕುಳ್ಳಿರಿಸಿಕೊಂಡನು. ಸುತ್ತಲು ಬಿಚ್ಚು ಗತ್ತಿಯ ಪಹರೆಯವರು ಎವೆಯಿಕ್ಕದೆ, ಅಫಜುಲ್ಖಾನನನ್ನು ಕೊಂದ ಸಿವಾ ಜಿಯ ಅಂಗಚಲನವನ್ನು ಎಚ್ಚರದಿಂದ ನೋಡುತ್ತ ನಿಂತುಕೊಂಡಿದ್ದರು. ಜಯಸಿಂಗರಾಜ ಸಿವಾಜಿಯರ ಎದುರಿಗೆ ಪುರಂದರದ ಒಳಕೋಟೆಯ ಮುಂದೆ ಕಾವಲಿಗಳಲ್ಲಿ ಸಜ್ಜಾಗಿ ನಿಂತಿದ್ದ ಮೊಗಲಸೈನಿಕರು ಸ್ಪಷ್ಟವಾಗಿ ಕಾಣಿಸುತ್ತಿದ್ದರು. ತಾನು ಹೇಳಿದ ಶರ್ತುಗಳಿಗೆ ಒಡಂಬಡಲಿಕ್ಕೆ ಸಿವಾ ಜಿಯು ಹಿಂದೆ ಮುಂದೆ ನೋಡಬಹುದೆಂಬ ಸಂಶಯದಿಂದ ಜಯಸಿಂಗ

ರಾಜನು ದಿಲೀರಖಾನ ಕಿರಾತಸಿಂಗರಿಗೆ ಸಂಜ್ಞೆಯನ್ನು ಮಾಡಿದನು. ಕೂಡಲೆ ಮೊಗಲರು ಒಳಕೋಟೆಯ ಗೋಡೆಯನ್ನು ಲಗ್ಗೆಹತ್ತಿ, ಎದುರಾದವರನ್ನು ತುಂಡರಿಸಿ, ಆಭಾಗವನ್ನು ಹಿಡಿದುಕೊಂಡು, ಜಯಘೋಷವನ್ನು ಮಾಡತೊಡಗಿದರು. ೮೦ ಮಂದಿ ಮರಾಟರು ರಣಭೂಮಿಯಲ್ಲಿ ಸತ್ತುಬಿದ್ದರು. ಈ ಕೊಲೆಯ ನಾಟಕವನ್ನು ಪ್ರತ್ಯಕ್ಷವಾಗಿ ನೋಡಿ, ಸಿವಾಜಿಯ ಹೃದಯವು ಕರಗಿ ನೀರಾಯಿತು. ಅವನ ಧೈರ್ಯವು ಕುಗ್ಗಿತು; ಯುದ್ಧವನ್ನು ಮುಂದರಿಸುವುದರಿಂದ ಸರ್ವಸ್ವಹಾನಿಯಾಗುವುದೆಂಬ ಭಾವನೆಯು ಅವನಲ್ಲಿ ಬಲಗೊಂಡಿತು. ಕೂಡಲೆ ಅವನು "ಕೋಟೆಯನ್ನು ತಮಗೆ ಒಪ್ಪಿಸುತ್ತೇನೆ; ಕೊಲೆಯನ್ನು ದಯವಿಟ್ಟು ನಿಲ್ಲಿಸಿರಿ" ಎಂದು ಅಂಗಲಾಚಿ ಬೇಡಿಕೊಂಡನು. ಅವನ ಬೇಡಿಕೆಯನ್ನು ಮನ್ನಿಸಿ, ಜಯಸಿಂಗರಾಜನು "ಹೊಡೆದಾಟವನ್ನು ನಿಲ್ಲಿಸಿ, ಒಳಗಿದ್ದವರನ್ನು ಸುರಕ್ಷಿತವಾಗಿ ಹೊರಗೆ ಹೋಗಗೊಡಿರಿ" ಎಂದು ದಿಲೀರಖಾನ ಕಿರಾತಸಿಂಗರಿಗೆ ಹೇಳಿ ಕಳುಹಿದನು. ಆ ಮೊಗಲರ ಅಧಿಕಾರಿಗಳೊಡನೆ ಸಿವಾಜಿಯ ಒಬ್ಬ ಸಂಗಡಿಗನು "ಶತ್ರುಗಳಿಗೆ ಶರಣು ಹೋಗಿರಿ, ಕಾದಬೇಡರಿ" ಎಂದು ಮರಾಟ ಕಾವಲುಗಾರರಿಗೆ ತಿಳಿಸಲಿಕ್ಕೆ ಹೊರಟನು. ಇದೇ ಸಂಧಿಯನ್ನು ಸಾಧಿಸಿ, ಜಯಸಿಂಗರಾಜನು ಒಪ್ಪಂದದ ಮಾತುಕಥೆಗಳನ್ನು ತೆಗೆದನು. ಸಿವಾಜಿಯು ಕೈಮುಗಿದು "ಕುಡಗೋಲು ಕುಂಬಳಕಾಯಿಗಳನ್ನು ತಮ್ಮ ಕೈಯಲ್ಲಿ ಕೊಟ್ಟಿರುತ್ತೇನೆ; ಬೇಕಾದರೆ ಅಡ್ಡ ಹೆಚ್ಚಿರಿ; ಬೇಕಾದರೆ ಉದ್ದ ಹೆಚ್ಚಿರಿ; ತಮಗೆ ಯೋಗ್ಯಕಂಡಂತೆ ಮಾಡಿರಿ; ನನ್ನನ್ನು ಕಾಪಾಡುವ ಹೊರೆಯು ತಮ್ಮ ಮೇಲೆ ಇರುತ್ತದೆ" ಎಂದು ನಮ್ರಭಾವದಿಂದ ಅರಿಕೆಮಾಡಿದನು. ಸಿವಾಜಿಯು ತನ್ನ ಸರಂಜಾಮುವನ್ನು ತಾರದ್ದರಿಂದ ಜಯಸಿಂಗರಾಜನು ತನ್ನ ಕಚೇರಿಯ ಡೇರೆಯನ್ನು ಅವನಿಗೆ ಇಳಿಕೊಳ್ಳಲಿಕ್ಕೆ ಕೊಟ್ಟು, ಅವನ ಊಟುಡಿಗೆಯ ತರದೂದನ್ನು ಸರಿಯಾಗಿ ಮಾಡಿಕೊಟ್ಟನು. ಊಟಮಾಡಿ ತುಸು ವಿಶ್ರಾಂತಿಯನ್ನು ತೆಗೆದುಕೊಂಡ ಬಳಿಕ, ಮತ್ತೆ ಒಪ್ಪಂದದ ಶರ್ತುಗಳ ವಿಚಾರವು ನಡೆಯಿತು. ಜಯಸಿಂಗರಾಜನು ಜಗ್ಗಿಹಿಡಿದಂತೆ ಸಿವಾಜಿಯು ಹಿಂದೆಗೆಯತೊಡಗಿದನು. ಬಾದಶಹನ ಊಳಿಗವನ್ನು ಕಯ್ಕೊಂಡು

ಅವನ ದರಬಾರಿನಲ್ಲಿರುವುದಕ್ಕೆ ಮಾತ್ರ ನಮ್ಮ ಚರಿತ್ರನಾಯಕನು ಏನುಮಾಡಿದರೂ ಒಡಂಬಡಲಿಲ್ಲ. ತಾನು ಬಾದಶಹನ ವಿರುದ್ಧವಾಗಿ ಹಲವು ಅಪರಾಧಗಳನ್ನು ಮಾಡಿದ್ದರಿಂದ ಅವನ ಆಳಾಗಲಿಕ್ಕೆ ಅನರ್ಹನೆಂತಲೂ ತನ್ನ ಮಗನಾದ ಶಂಭೂಜಿಯನ್ನು ತನ್ನ ಬದಲಾಗಿ ಬಾದಶಹನ ಓಲಗಕ್ಕೆ ಕಳಿಸಿಕೊಡಬೇಕೆಂತಲೂ ಪರಿಪರಿಯಾಗಿ ಹೇಳಿಕೊಂಡುದರಿಂದ, ಜಯಸಿಂಗರಾಜನು ಅವನ ಬಯಕೆಯನ್ನು ಪೂರೈಸಿದನು. ನಡಿರಳಿನ ವರೆಗೆ ಹಾಕಿಯಾಟವಾದ ಬಳಿಕ, ಕೆಳಗೆ ಬರೆದ ಶರ್ತುಗಳು ಗೊತ್ತಾದವು (೧೨ ಜೂನ ೧೬೬೫):—

(ಅ) ಮೊಗಲರು ಬೇಡಿದ ೨೩ ಕೋಟೆಗಳನ್ನೂ * ಅವುಗಳ ಸುತ್ತಲಿರುವ ೪ ಲಕ್ಷ ಹೊನ್ನು † ಕಂದಾಯ ತೆರೆಯುವ ಊರುಗಳನ್ನೂ ಸಿವಾಜಿಯು ಮೊಗಲರಿಗೆ ಬಿಟ್ಟುಕೊಡಬೇಕು.

(ಆ) ರಾಜಗಡ ಮುಂತಾದ ೧೨ ಕೋಟೆಗಳನ್ನೂ ಅವುಗಳಿಗೆ ಸೇರಿದ ೧ ಲಕ್ಷಹೊನ್ನಿನ ಊರುಗಳನ್ನೂ ಸಿವಾಜಿಯು ಜಹಗೀರಾಗಿ ಇಟ್ಟುಕೊಂಡು ಮೊಗಲ್ಬಾದಶಹನ ಊಳಿಗವನ್ನು ಮಾಡಬೇಕು.

(ಇ) ಶಂಭುಜಿ (ಸಂಬಾಜಿ) ಯು ೫೦೦೦ ದ ಮನಸಬ್ದಾರನಾಗಿ ಬಾದಶಹನ ಓಲಗದಲ್ಲಿರಬೇಕು.

(ಈ) ಅದಿಲ್ಶಾಹಿಯೊಡನೆ ಮೊಗಲರು ಸದ್ಯದಲ್ಲಿ ಹೂಡಬಹುದಾದ ಯುದ್ಧದಲ್ಲಿ ಸಿವಾಜಿಯು ೨೦೦೦ ರಾಹುತರು ೭೦೦೦ ಕಾಲಾಳುಗಳೊಡನೆ ಮೊಗಲರಿಗೆ ನೆರವಾಗಬೇಕು.

---

* ಸಿವಾಜಿಯು ಮೊಗಲರಿಗೆ ಒಪ್ಪಿಸಿದ ಕೋಟೆಗಳು:—೧ ರುದ್ರಮಾಳ ಅಥವಾ ವಜ್ರಗಡ, ೨ ಪುರಂದರ, ೩ ಕೊಂಡಾನ, ೪ ರೋಹಿರಾ, ೫ ಲೋಹಗಡ, ೬ ಈಶಗಡ, ೭ ತಂಕಿ, ೮ ತಿಕೋಣ, ೯ ನಾಹುಲಿ, ೧೦ ಮುರಂಜನ, ೧೧ ಕ್ಷೀರದುರ್ಗ, ೧೨ ಭಂದರದುರ್ಗ, ೧೩ ತುಳಸಿಖುಲ, ೧೪ ನರದುರ್ಗ, ೧೫ ಖೈಗಡ ಅಥವಾ ಅಂಕೋಲೆ, ೧೬ ಮಾರ್ಗಗಡ ಅಥವಾ ಅತ್ರ, ೧೭ ಕೋಹಾಜ, ೧೮ ವಸಂತ, ೧೯ ನಂಗ, ೨೦ ಕರ್ನಾಳ, ೨೧ ಸೋನಗಡ, ೨೨ ಮನಗಡ, ೨೩ ಖಂಡಕಾಲ (ಕೊಂಡಾಣದ ಹತ್ತಿರದಲ್ಲಿ).

† ಒಂದು ಹೊನ್ನಿನ ಬೆಲೆ ೫ ರೂಪಾಯಿಯಾಗಿತ್ತು.

(ಉ) ಸಿವಾಜಿಯು ಅದಿಲ್ಶಾಹಿಯ ನಾಲ್ಕುಲಕ್ಷ ಹೊನ್ನಿನ ಕೊಂಕಣ ರಾಜ್ಯವನ್ನೂ ೫ ಲಕ್ಷಹೊನ್ನಿನ ಬಾಲ್ಘಾಟಿನ ನಾಡನ್ನೂ ಹಿಡಿದುಕೊಂಡರೆ, ಆ ಎರಡು ಭಾಗಗಳ ಕಪ್ಪಗಾಣಿಕೆಯಾಗಿ ಅವನು ೪೦ ಲಕ್ಷ ಹೊನ್ನುಗಳನ್ನು ಬಾದಶಹನಿಗೆ ೧೩ ವರ್ಷಗಳಲ್ಲಿ ಕೊಡಬೇಕು.

ಈ ಮೇರೆಗೆ ಪುರಂದರದ ಒಪ್ಪಂದವಾದರೂ ದಿಲೇರಖಾನನು ಮುತ್ತಿಗೆಯನ್ನೆಬ್ಬಿಸಲಿಲ್ಲ. ಶೌರ್ಯದಿಂದ ಪುರಂದರ ಕೋಟೆಯನ್ನು ಹಿಡಿಕೊಂಡ ಶ್ರೇಯಸ್ಸು ತನಗೆ ಬರಲಿಲ್ಲೆಂದು ಅವನು ಬಹಳವಾಗಿ ಹಳಹಳಿಸಿದನು. ಸಿವಾಜಿಯು ತನಗೆ ಶರಣು ಬಂದು ಒಪ್ಪಂದಮಾಡಿಕೊಳ್ಳಲಿಲ್ಲೆಂದು, ಅವನ ಎದೆಯಲ್ಲಿ ಹೊಟ್ಟೆಕಿಚ್ಚು ಎದ್ದಿತು. ಅದನ್ನರಿತು ಜಾಣನಾದ ಜಯಸಿಂಗರಾಜನು ಸಿವಾಜಿಯನ್ನು ರಾಜಾರಾಯಸಿಂಗನೊಡನೆ ಖಾನನ ಬೆಟ್ಟಿಗೆ ಕಳುಹಿದನು (೧೨ ಜೂನ). ಅವನು ಸಂತುಷ್ಟನಾಗಿ ಸಿವಾಜಿಗೆ ೨ ಕುದುರೆಗಳನ್ನೂ ಒಂದು ಕತ್ತಿಯನ್ನೂ ಒಂದು ರನ್ನದ ಕಠಾರಿಯನ್ನೂ ಎರಡುಬೆಲೆಯುಳ್ಳ ವಸ್ತ್ರಗಳನ್ನೂ ಉಚಿತವಾಗಿ ಕೊಟ್ಟುದಲ್ಲದೆ, ತಾನೇ ಅವನನ್ನು ಕರೆಕೊಂಡು ಬಂದು ಜಯಸಿಂಗರಾಜನಿಗೆ ಒಪ್ಪಿಸಿದನು. ಹೀಗೆ ಹಂಚಿಕೆ ಮಾಡಿ, ರಾಜಾಜಯಸಿಂಗನು ದಿಲೀರಖಾನನನ್ನು ಸಂತವಿಸಿದನು. ಬಳಿಕ ಅವನು ಆದೇ ದಿವಸ ಕೋಟೆಯಲ್ಲಿದ್ದ ೪೦೦೦ ಯೋಧ್ಧರನ್ನೂ ೩೦೦೦ ಹೆಂಗಸುಹುಡುಗರನ್ನೂ ಸುರಕ್ಷಿತವಾಗಿ ಹೊರಗೆ ಹೋಗಗೊಟ್ಟುದಲ್ಲದೆ, ಅನ್ನಯುದ್ಧಸಾಮುಗ್ರಿಗಳುಳ್ಳ ಆ ಕೋಟೆಯಲ್ಲಿ ತನ್ನ ದಂಡನ್ನಿರಿಸಿದನು. ಮರುದಿವಸ ಪಾಳಯದಲ್ಲೆಲ್ಲ ಹಬ್ಬವಾಯಿತು. ಊಟುಡಿಗೆ ಆಟನೋಟ ಹಾಡುಬಾರಿಸುವಿಕೆಗಳಲ್ಲಿ ಎಲ್ಲರು ಆನಂದದಿಂದ ಕಾಲಕಳೆದರು. ಮೂರನೆಯ ದಿವಸ ಬೆಳಿಗ್ಗೆ ಸಿವಾಜಿಯು ದಾವುದಖಾನನಿಗೆ ಬೆಟ್ಟಿಯಾಗಿ, ಜಯಸಿಂಗರಾಜನನ್ನು ಬೀಳ್ಕೊಂಡು, ರಾಜಗಡಕ್ಕೆ ಹೊರಟನು.† ಜಯಸಿಂಗರಾಜನು

---

† ಸಿವಾಜಿಯು ಪಾಳಯವನ್ನು ಬಿಡುವುದಕ್ಕಿಂತಮೊದಲೇ ಬಾದಶಹನಿಂದ ಅವನಿಗೆ ಒಂದು ಫರ್ಮಾನವೂ ಬಹುಮಾನದ ತೊಡಿಗೆಯೂ ಬಂದವೆಂಬ ಸುದ್ದಿ ಬಂದುದರಿಂದ, ಅವನು ಮೊಗಲ್ಬಾದಶಹನ ಆಸ್ಥಾನದ ರಿವಾಜಿನಂತೆ ೬ ಮೈಲು ಕಾಲಿನಿಂದ ನಡೆದುಹೋಗಿ ಅವುಗಳನ್ನು ಭಕ್ತಿವಿಶ್ವಾಸದಿಂದ ಸ್ವೀಕರಿಸಿದನೆಂದು ಕೆಲವರು ಬರೆಯುತ್ತಾರೆ. ಆದರೆ ಈ ಮಾತು ಎಷ್ಟರ ಮಟ್ಟಿಗೆ ನಿಜವಾದುದೆಂಬುದು ಗೊತ್ತಾಗುವುದಿಲ್ಲ.

ಅವನಿಗೆ ೨ ಆನೆಗಳನ್ನೂ ೨ ಕುದುರೆಗಳನ್ನೂ ಉಚಿತವಾಗಿ ಕೊಟ್ಟುದಲ್ಲದೆ, ಸಿವಾಜಿಯು ಬಹುಪರಿಯಿಂದ ಬೇಡಿಕೊಂಡಕಾರಣ ತನ್ನ ಖಿಲಾತ (ಸಭೆಯ ತೊಡಿಗೆ) ನ್ನು ಅವನಿಗೆ ಮುಚ್ಚುಗೊಟ್ಟನು. ಸಿವಾಜಿಯು ಮೊಗಲರಿಗೆ ಒಪ್ಪಿಸತಕ್ಕ ಕೋಟೆಗಳನ್ನು ಸ್ವಾಧೀನದಲ್ಲಿ ತೆಗೆದುಕೊಳ್ಳಲಿಕ್ಕೆ ಕಿರಾತ ಸಿಂಗನು ಅವನೊಡನೆ ಹೊರಟು ಕೊಂಡನಕ್ಕೆ ಹೋಗಿ, ಆ ಕೋಟೆಯನ್ನು ತನ್ನ ವಶದಲ್ಲಿ ತೆಗೆದುಕೊಂಡನು (೧೮ ಜೂನ). ಸಿವಾಜಿಯು ಅಲ್ಲಿಂದ ಹೊರಟು ರಾಜಗಡಕ್ಕೆ ಹೋಗಿ (೧೫ ಜೂನ), ತನ್ನ ಮಗನಾದ ಸಂಬಾಜಿಯನ್ನು ಉಗ್ರಸೇನ ಕಚವಾ ಎಂಬ ಒಬ್ಬ ವಿಶ್ವಾಸಿಕಗೃಹಸ್ಥನೊಡನೆ ಜಯ ಸಿಂಗರಾಜನ ಪಾಳಯಕ್ಕೆ ಕಳುಹಿದನು (೧೭ ಜೂನ).

ಈ ಸಂದರ್ಭದಲ್ಲಿ ಒಂದು ದೊಡ್ಡ ಪ್ರಶ್ನವು ಉದ್ಭವಿಸುತ್ತದೆ. ನಮ್ಮ ಚರಿತ್ರನಾಯಕನು ಸಾಮಾನ್ಯಪುರುಷನಾಗಿದ್ದಿಲ್ಲ. ಅವನ ಸಾಹಸ ಚಪಲತೆಗಳು ಅತ್ಯದ್ಭುತವಾಗಿದ್ದವು; ಅವನ ಜಾಣ್ಮೆ ಹಂಚಿಕೆಗಾರಿಕೆಗಳು ಹೊಗಳತಕ್ಕಂತಹಗಳಾಗಿದ್ದವು; ಅವನ ಕೆಚ್ಚೆದೆ ತಂತ್ರಗಾರಿಕೆಗಳು ಅವರ್ಣನೀಯುವಾಗಿದ್ದವು; ಅವನ ಶೌರ್ಯ ಧೈರ್ಯಗಳಿಗೆ ಪರಿಮಿತಿಯಿದ್ದಿಲ್ಲ; ಅವನ ಸವಿಮಾತಿಗೆ ಕೇಳುವವರ ಹೊಟ್ಟೆಯೊಳಗಿನ ಹರಳುಗಳು ಕರಗುತ್ತಿದ್ದವು. ಇಂತಹ ಮಹಾಪುರುಷನು ಜಯಸಿಂಗರಾಜನ ಒಂದೆರಡು ತಿಂಗಳಪ್ರಯತ್ನದಿಂದಲೇ ಅವನ ಬಲೆಯಲ್ಲಿ ಸಿಲುಕಿ ಒದ್ದಿಯಾಡತೊಡಗಿದುದು ಸೋಜಿಗವಲ್ಲವೇ? ಮ್ಲೇಂಛರಿಗೆ ತಲೆಬಾಗಿಸಲಿಕ್ಕಿಲ್ಲೆಂದು ಪಂಥ ತೊಟ್ಟ ಸಿವಾಜಿಯುಇಷ್ಟುಬೇಗನೆ ಏನುಕಾರಣ ಮೊಗಲರಿಗೆ ಶರಣುಹೋಗಿ ಜಯಸಿಂಗರಾಜನು ಹೇಳಿದಂತೆ ಕೇಳಲಿಕ್ಕೆ ಒಡಂಬಟ್ಟನು? ಯಾವ ಚರಿತ್ರಕಾರನೂ ಈ ಪ್ರಶ್ನಗಳನ್ನು ಎತ್ತಿ ಅವುಗಳ ಉತ್ತರವನ್ನು ಸಮರ್ಪಕವಾಗಿ ಕೊಡಲಿಕ್ಕೆ ಯತ್ನಮಾಡಿಲ್ಲೆಂದು ತೋರುತ್ತದೆ. ಸಿವಾಜಿಯ ಎಲ್ಲ ಹಾದಿಗಳನ್ನು ಕಟ್ಟಿ, ಅವನ ಊರುಗಳನ್ನು ಸುಲಿದು ಸುಟ್ಟು, ಪುರಂದರಕೋಟೆಯನ್ನು ಹಿಡಿದುಕೊಂಡುದರಿಂದ ಸಿವಾಜಿಯು ಹತವೀರ್ಯನಾಗಿ ಶರಣು ಬಂದನೆಂದು ಪಂಡಿತ ಯದುನಾಥ ಸರ್ಕಾರರು ಬರೆಯುತ್ತಾರೆ. ಆದರೆ ಈ ಕಾರಣಗಳು ಸಾಕಷ್ಟಾಗಿದ್ದವೆಂದು ತೋರುವುದಿಲ್ಲ. ಸಾಯಿಸ್ತೆಖಾನನ ಮುಲಗುವಕೋಣೆಗೆ ಹೋದ ಗೃಹಸ್ಥನಿಗೆ ಮೊಗಲರ ದಂಡನ್ನುತಪ್ಪಿಸಿ, ತನ್ನರಾಜ್ಯ

ದಲ್ಲಿ ಬೇಕಾದಕಡೆಗೆ ಹೋಗಲಿಕ್ಕೆ ದಾರಿ ದೊರೆಯುಲಿಲ್ಲವೇ? ಆ ಗುಡ್ಡ ಗಾಡಿನ ನಾಡಿನಲ್ಲಿ ಕಳ್ಳದಾರಿಗಳು ಯಥೇಷ್ಟವಾಗಿದ್ದಿದ್ದಿಲ್ಲವೇ? ದಾವುದ ಖಾನಮೊದಲಾದವರು ಲಂಚಗುಳಿಗಳಾಗಿರಲಿಲ್ಲವೇ? ಅವನ ಹಿಡಿತದಲ್ಲಿದ್ದ ೩೫/೪೦ ಕೋಟೆಗಳಲ್ಲಿ ಒಂದಾದ ಪುರಂದರಕೋಟೆಯು ಹೋದರೇ ನಾಯಿತು? ಮಳೆಗಾಲವು ಸಮೀಪಿಸಿದ್ದರಿಂದ ಮೊಗಲರು ಬೇರೆ ಕೋಟೆ ಗಳನ್ನು ಮುತ್ತುವ ಸಂಭವವಿದ್ದಿಲ್ಲ. ಮುಂದೆ ಮಳೆಗಾಲದಲ್ಲಿ ಮೊಗಲರಿಗೆ ಯಾವ ವಿಪತ್ತು ಸಂಭವಿಸುತ್ತಿತ್ತೋ ಏನೋ? ಅವರಂಗಜೇಬ ಬಾದಶಹನ ಸಂಶಯುಸ್ವಭಾವದಿಂದ ಮೊಗಲರ ದಂಡಿಗೆ ಏನು ಕೇಡು ಒದಗುತ್ತಿತ್ತೋ ಏನೋ! ಮೊಗಲರದಂಡಿನಲ್ಲಿ ಎಷ್ಟು ಒಡಕುಹುಟ್ಟಿ, ಏನು ಅನರ್ಥವಾಗು ತ್ತಿತ್ತೋ ಏನೋ? "ಅಶುಭಸ್ಯ ಕಾಲಹರಣಮ್" ಎಂಬ ನಾಣ್ಣುಡಿಯಂತೆ ಚತುರನಾದ ನಮ್ಮ ಚರಿತ್ರನಾಯಕನು ಸ್ವಲ್ಪ ದಿವಸ ಬಿಗಿಹಿಡಿದಿದ್ದರೆ, ಕೆಲ ಕಾಲ ತಡೆದಿದ್ದರೆ, ಅವನಿಗೆ ಈ ದೀನಾವಸ್ಥೆಯು ಬರುತ್ತಿದ್ದಿಲ್ಲೆಂದು ಧಾರಾಳ ವಾಗಿ ಹೇಳಬಹುದು. ಕೇಳೂಸಕರ ಕೃಷ್ಣರಾಯರು ಜಯಸಿಂಗರಾಜನೇ ಮೊದಲು ಸಿವಾಜಿಯೊಡನೆ ಒಡಂಬಡಿಕೆಯ ಮಾತುಗಳನ್ನು ನಡಿಸಿದ್ದ ರಿಂದಲೂ ಅವನಿಗೆ ಬಹಳವಾಗಿ ಆಶೆತೋರಿಸಿದ್ದರಿಂದಲೂ ನಮ್ಮ ಚರಿತ್ರ ನಾಯಕನು ಅವನಿಗೆ ತೀರವಶನಾದನೆಂದು ಬರೆಯುತ್ತಾರೆ. ಈ ಬರಹಕ್ಕೆ ಆಧಾರವೇನೂ ಸಿಕ್ಕುವುದಿಲ್ಲ. ಇದಲ್ಲದೆ ಎಲ್ಲರಿಗೂ ಮೀರಿದ ಮೋಸಗಾರ ನಾದ ಸಿವಾಜಿಯು ಜಯಸಿಂಗರಾಜನ ಮಾತಿಗೆ ಮರುಳಾಗುವ ಸಂಭವವು ತೀರಕಡಿಮೆಯಾಗಿರುತ್ತದೆ. ಶೇಷಾದ್ರಿರಡ್ಡಿಯವರೂ ಸರದೇಸಾಯಿಯು ವರೂ ಅದಿಲ್ಶಾಹಿಯ ದಳವಾಯಿಯಾದ ಖವಾಸಖಾನನು ದೊಡ್ಡದಂಡಿ ನೊಡನೆ ಒಳನುಗ್ಗಿ ಮರಾಟರನ್ನು ಮುರಿಬಡಿದುದರಿಂದ, ಸಿವಾಜಿಯು ಇಬ್ಬರು ಪ್ರಬಲರಾದ ಶತ್ರುಗಳನ್ನು ಎದುರಿಸಲಿಕ್ಕೆ ಸಾಮರ್ಥ್ಯವಿಲ್ಲದೆ, ಜಯ ಸಿಂಗರಾಜನ ಮರೆಬಿದ್ದನೆಂದು ಬರೆಯುತ್ತಾರೆ. ಆದರೆ ಅದಿಲ್ಶಾಹಿಯ ಇತಿಹಾಸದಲ್ಲಿ ಇದಕ್ಕೇನೂ ಆಧಾರ ದೊರೆಯುವುದಿಲ್ಲ. ಆದಕಾರಣ ಈ ಬಿಕ್ಕಟ್ಟಿನ ಪ್ರಶ್ನವನ್ನು ಸಮಾಧಾನಕರವಾಗಿ ಬಿಡಿಸಲಿಕ್ಕೆ ಹೊಸ ಐತಿ ಹಾಸಿಕ ಶೋಧಗಳನ್ನು ಮಾಡುವುದು ಅತ್ಯವಶ್ಯಕವಾಗಿರುತ್ತದೆ. ಈ ಶೋಧಗಳಾಗುವ ವರೆಗೆ ಯೋಗ್ಯಕಂಡ ಕೆಲವು ಅನುಮಾನಗಳನ್ನು ಒದು

ವರ ಮುಂದಿರಿಸುವುದು ಯೋಗ್ಯಕಂಡುದರಿಂದ ಅವುಗಳನ್ನು ಇಲ್ಲಿ ಕೊಡುತ್ತೇವೆ:—

(೧) ಜಯಸಿಂಗರಾಜನು ತನ್ನ ಜಾತಿಯ ಕ್ಷತ್ರಿಯನಾದ್ದರಿಂದಲೂ ವಯೋವೃದ್ಧ ಜ್ಞಾನವೃದ್ಧನಾದ್ದರಿಂದಲೂ ನಮ್ಮ ಚರಿತ್ರನಾಯಕನ ಮನಸ್ಸಿನಲ್ಲಿ ಅವನ ವಿಷಯವಾಗಿ ಪ್ರೀತಿವಿಶ್ವಾಸಭಕ್ತಿಗಳು ತಾವಾಗಿಯೇ ಹುಟ್ಟಿದವು.

(೨) ಸಂಶಯಪಿಶಾಚಿಯಾದ ಅವರಂಗಜೇಬ ಬಾದಶಹನು ಸಿವಾಜಿಗೆ ಬೆಟ್ಟಿಯಾಗಕೂಡದೆಂದು ಕಟ್ಟುಮಾಡಿದ್ದರೂ ಜಯಸಿಂಗರಾಜನು ಅವನ ನಿಯೋಗಿಗಳ ಮುಂದೆ ಅವನ ವಿಷಯವಾಗಿ ನಿಷ್ಕಪಟವಾದ ಅಂತಃ ಕರಣವನ್ನು ತೋರಿಸಿದ್ದಲ್ಲದೆ, ಅವನಿಗೆ ದಕ್ಷಿಣದ ಸುಬೇದಾರಿಯು ದೊರೆಯುಬಹುದೆಂಬ ಬಯಲಾಶೆಯನ್ನು ಹಚ್ಚಿಟ್ಟನು.

(೩) ಪುರಂದರವು ೩೫/೪೦ ಕೋಟೆಗಳಲ್ಲಿ ಒಂದಾದರೂ ಅದರಲ್ಲಿ ಸಿವಾಜಿಗೆ ಹತ್ತಿಹೊಂದಿದ ಮತ್ತು ಪ್ರೀತಿಯವರಾದ ಎಷ್ಟೋ ಮಂದಿ ದೊಡ್ಡದೊಡ್ಡ ಸರದಾರರ ಹೆಂಡರುಮಕ್ಕಳು ವಾಸವಾಗಿದ್ದರು ಮತ್ತು ಅವರೆಲ್ಲರು ಸೆರೆಯಾಳುಗಳಾಗಿ ದುಷ್ಟರಾದ ಮ್ಲೇಂಛರ ಕಯ್ಸೇರುವ ಸಂಭವ ವಿತ್ತು.

(೪) ಜಯಸಿಂಗರಾಜನು ಎಲ್ಲ ದಾರಿಗಳನ್ನು ಕಟ್ಟಿ, ಕಾವಲುಗಾರರಿಗೆ ನೆರವಾಗಲಿಕ್ಕೆ ಅಲ್ಲಲ್ಲಿ ದಂಡುಗಳನ್ನು ಇರಿಸಿ, ದಿಗ್ಬಂಧನ ಮಾಡಿದ್ದನು. ಇಂತಹ ಇಕ್ಕಟ್ಟಿನಲ್ಲಿ ಪ್ರಯಾಸಪಟ್ಟು ಸುಳುವು ಹುಡುಕಿಕೊಂಡು ನುಣುಚಿ ಹೋಗುವುದರಿಂದ ವಿಶೇಷವಾದ ಲಾಭವೇನೂ ಆಗುವಂತಿದ್ದಿಲ್ಲ.

(೫) ಅದಿಲ್ಶಾಹಿಯ ದಂಡು ಮರಾಟರ ರಾಜ್ಯವನ್ನು ಒಳನುಗ್ಗಲಿ, ಒಳನುಗ್ಗದೆ ಇರಲಿ, ಆ ಸರಕಾರವು ಸಿವಾಜಿಗೆ ಅನುಕೂಲವಾಗಿರಲಿಲ್ಲ. ಆದ್ದರಿಂದ ಆ ದಂಡು ಯಾವಾಗ ಬರುವುದೋ ಎಂಬ ಹೆದರಿಕೆಯು ನಮ್ಮ ಚರಿತ್ರನಾಯಕನ ಮನಸ್ಸಿನಲ್ಲಿ ಕಟೆಯುತ್ತಿತ್ತು.

ಈ ಕಾರಣಗಳ ಮೂಲಕವಾಗಿ ನಮ್ಮ ಚರಿತ್ರನಾಯಕನು ಜಯಸಿಂಗರಾಜನ ಮರೆಹೊಕ್ಕು ಅವನು ಹೇಳಿದ ಶರ್ತಿಗೆ ಒಡಂಬಟ್ಟು, ಪುರಂ

ದರದ ಒಪ್ಪಂದವನ್ನು ಮಾಡಿಕೊಂಡು, ತನ್ನ ೨೩ ಕೋಟೆಗಳನ್ನು ನಿರ್ವಂಚನೆಯಿಂದ ಮೊಗಲರಿಗೆ ಒಪ್ಪಿಸಿದನು. ಇಷ್ಟೆಲ್ಲ ಸರಿಯಾಗಿ ನಡೆದರೂ ಒಂದು ಮಾತಿನ ವಿಷಯವಾಗಿ ಸಂಶಯವುಳಿಯಿತು. ಸಿವಾಜಿಯು ತನ್ನ ದರಬಾರಿಗೆ ಬಂದು ತನ್ನನ್ನು ಓಲೈಸಬೇಕೆಂದು ಅವರಂಗಜೇಬ ಬಾದಶಹನ ಹಟವಿತ್ತು. ತಾನು ಬಾದಶಹನ ವಿರುದ್ಧವಾಗಿ ಹಲವು ಅಪರಾಧಗಳನ್ನು ಮಾಡಿದ್ದರಿಂದ ಅವನ ಓಲಗದೊಳಗೆ ಕಾಲಿಡಲಿಕ್ಕೆ ತೀರ ಅಯೋಗ್ಯನೆಂದು ಸಿವಾಜಿಯು ಖಂಡಿತವಾಗಿ ಹೇಳಿಬಿಟ್ಟಿದ್ದನು. ಆದ್ದರಿಂದ ಅಡಕೊತ್ತಿನಲ್ಲಿ ಸಿಲುಕಿದ ಅಡಕಿಯಂತೆ ಜಯಸಿಂಗರಾಜನ ಹಾಡಾಯಿತು. ಸೇವಾಧರ್ಮವೇ ಕಠಿಣವಾದುದು. ಅದರೊಳಗೆ ಅವರಂಗಜೇಬನಂತಹ ದುಷ್ಟಚಕ್ರವರ್ತಿಯ ಸೇವೆಯಂತೂ ಅತಿಕಠಿನವಾದುದು.* ಆದ್ದರಿಂದ ಜಯಸಿಂಗರಾಜನು ಮನಸ್ಸಿನಲ್ಲಿ ಚಡಪಡಿಸಿ ಬಹುಕಾಲ ಅಳಿದು ಹಾಕಿ, ಕಟ್ಟಕಡೆಗೆ ಬಾದಶಹನನ್ನು ಸಮಾಧಾನಗೊಳಿಸುವುದಕ್ಕೋಸ್ಕರ ಸಿವಾಜಿಯು ದರಬಾರಿಗೆ ಬರುವನೆಂದು ಬಾದಶಹನಿಗೆ ಬರೆದು ಕಳುಹಿದನು. ಸಂಶಯ ಪಿಶಾಚಿಯಾದ ಅತಿದುಷ್ಟ ಬಾದಶಹನ ಹಟವನ್ನು ಪೂರೈಸಲಿಕ್ಕೆ ಬರೆದ ಈ ಸುಳ್ಳುಮಾತು ಮುಂದೆ ಎಷ್ಟು ಅನರ್ಥಕ್ಕೆ ಕಾರಣವಾಯಿತೆಂಬುದನ್ನು ತಕ್ಕ ಎಡೆಯಲ್ಲಿ ವಿವರಿಸುವೆವು.

ಸಿವಾಜಿಯೊಡನೆ ಹೂಡಿದ ಯುದ್ಧವು ಅತಿ ತೃಪ್ತಿಕರವಾಗಿ ಮುಗಿದುದರಿಂದ ಜಯಸಿಂಗರಾಜನ ಉತ್ಸಾಹವು ಇಮ್ಮಡಿಯಾಗಿ, ಅವನ ಲಕ್ಷ್ಯವು ಅದಿಲ್ಶಾಹಿಯ ಕಡೆಗೆ ಸ್ವಾಭಾವಿಕವಾಗಿ ತಿರುಗಿತು. ಸಿವಾಜಿಯನ್ನು ಅತ್ಯಲ್ಪಕಾಲದಲ್ಲೇ ಮುರಿಬಡಿದಂತೆ, ಅದಿಲಶಹನನ್ನು ಕುಗ್ಗಿಬಡಿಯಬೇಕೆಂಬ ಹವಣಿಕೆಯು ಅವನಲ್ಲಿ ಹುಟ್ಟಿತು. ಆದ್ದರಿಂದ ಅವನು ಅದಿಲ್ಶಾಹಿಯ ಸರದಾರರನ್ನೂ ಜಹಗೀರದಾರರನ್ನೂ ತನ್ನ ಕಡೆಗೆ ಒಲಿಸಿಕೊಳ್ಳಲಿಕ್ಕೆ ಹಣವನ್ನು ನೀರಿನಂತೆ ವೆಚ್ಚಮಾಡತೊಡಗಿದನು. ಅದಿಲ್ಶಾಹಿ ದರಬಾರಿನ ೨ ನೆಯ ಸರದಾರನಾದ ಮುಲ್ಲಾ ಅಹಮ್ಮದನನ್ನು ಮಾತ್ರ

---

* ಸರ್ವಮ್ ಪರವಶಮ್ ದುಃಖಮ್।
ಸರ್ವಮಾತ್ಮವಶಮ್ ಸುಖಮ್॥ ಮನುಸ್ಮೃತಿ.

ಒಡೆಕೊಳ್ಳಲಿಕ್ಕೆ ೩/೪ ಲಕ್ಷರೂಪಾಯಿಗಳು ಅವನ ಕಯ್ಬಿಟ್ಟವು. ಈ ಅಂದಾ ದುಂದಿಯನ್ನು ನೋಡಿ, ಅವರಂಗಜೇಬನು ಸಿಟ್ಟಾದನು. ವಿಜಾಪುರದ ರಾಜ್ಯವು ಕಯ್ಸೇರಿದ ಬಳಿಕ ಈಗ ಖರ್ಚುಮಾಡಿದ ಹಣದ ನಾಲ್ಕಷ್ಟು ಹಣವು ನಿಶ್ಚಯವಾಗಿ ಬರುವುದೆಂದು ಹೇಳಿ, ಜಯಸಿಂಗರಾಜನು ಬಾದ ಶಹನನ್ನು ತಣಿಸಿದನು.

ರಾಜಾಜಯಸಿಂಗನು ಈ ಮೇರೆಗೆ ಅದಿಲ್ಶಾಹಿಯನ್ನು ಬುಡಮೇಲು ಮಾಡಲಿಕ್ಕೆ ವಿಶ್ವಪ್ರಯತ್ನಮಾಡುತ್ತಿದ್ದರೂ ಅದಿಲ್ಶಹನಿಗೆ ತನ್ನ ಗುಟ್ಟನ್ನು ತಿಳಿಯಗೊಡಲಿಲ್ಲ. ಅದಿಲ್ಶಾಹಿಯಿಂದ ಬರತಕ್ಕ ಕಪ್ಪಗಾಣಿಕೆಯನ್ನು ಲೆಕ್ಕಮಾಡಿ, ಬರತಕ್ಕ ಹಣವನ್ನು ವಸೂಲುಮಾಡುವುದು ಮಾತ್ರ ತನ್ನ ಗುರಿಯೆಂದು ಅವನು ಸಾರಿಸಾರಿ ಹೇಳಿದ್ದರಿಂದ, ಅದಿಲ್ಶಹನು ಮೋಸ ಹೋದನು. ಫಿತೂರಾದ ಮುಲ್ಲಾ ಅಹಮ್ಮದನಿಗೆ ತನ್ನ ಕುಟುಂಬದವ ರೊಡನೆ ವಿಜಾಪುರವನ್ನು ಬಿಡಲು ಧೈರ್ಯ ಸಾಲಲಿಲ್ಲ. ಆದ್ದರಿಂದ ಜಯಸಿಂಗರಾಜನು ಅವನನ್ನೇ ಲೆಕ್ಕಮಾಡಲಿಕ್ಕೆ ಕಳುಹಬೇಕೆಂದು ಬರೆದು, ಅವನು ತನ್ನ ಮನೆಯವರೊಡನೆ ಬಂದ ಬಳಿಕ, ಅವನ ಖರ್ಚಿಗೆ ೨ ಲಕ್ಷರೂಪಾಯಿಕೊಟ್ಟು ಅವನನ್ನು ಬಾದಶಹನ ಬಳಿಗೆ ಕಳು ಹಿದನು. ಆದರೆ ಮನುಷ್ಯ ಬಯಸುವುದೊಂದು ದೇವರು ಮಾಡುವುದು ಮತ್ತೊಂದು ಎಂಬ ಗಾದೆಯಂತೆ, ಅವನು ದಾರಿಯೊಳಗೇ ಅಹಮ್ಮದ ನಗರದಲ್ಲಿ ಸತ್ತನು (ದಶಂಬರ ೧೬೬೫).

ಆದಿಲ್ಶಾಹಿರಾಜ್ಯವನ್ನು ಒಳನುಗ್ಗಲಿಕ್ಕೂ ವಿಜಾಪುರವನ್ನು ಮುತ್ತ ಲಿಕ್ಕೂ ಬೇಕಾದ ಎಲ್ಲ ಸಿದ್ಧತೆಯನ್ನು ಜಯಸಿಂಗರಾಜನು ಲಂಚದಿಂ ದಲೂ ಜಾಣ್ಮೆಯಿಂದಲೂ ಮುನ್ನೋಟದಿಂದಲೂ ಮಾಡಿಕೊಂಡನು. ದಂಡಿನವೆಚ್ಚಕ್ಕಾಗಿ ೨ ಲಕ್ಷರೂಪಾಯಿ ದೊರೆದುದರಿಂದ ಸಿವಾಜಿಯು ೯,೦೦೦ ದಂಡಿನೊಡನೆ ಬಂದು ಕೂಡಿದನು. ಕರ್ನಾಟಕದ ಮತ್ತು ಕೊಂಕಣದ ಎಷ್ಟೋ ಮಂದಿ ಜಹಗೀರದಾರರು ತಂತಮ್ಮ ದಂಡು ಕಟ್ಟಿ ಕೊಂಡು ಬಂದು ಸೇರಿದರು. ಮೊಗಲರ ಬೇರೆಬೇರೆ ಕೋಟೆಗಳಿಂದ ೩೦/೪೦ ತೋಫುಗಳು ಬಂದು ತಲಪಿದವು. ಆದರೆ "ಕಾಂಚಾಣವ್

ಕಾರ್ಯಸಿದ್ಧಯೇ” ಎಂಬ ಗಾದೆಯಂತೆ ಹಣದ ಕೊರತೆಯಿಂದ ದಂಡ ಯಾತ್ರೆಗೆ ದೊಡ್ಡ ಕಾಲ್ತೊಡಕುಂಟಾಯಿತು. ಹಿಂದಿನ ೬ ತಿಂಗಳುಗಳ ಸಂಬಳವು ದೊರೆಯದ್ದರಿಂದ, ದಂಡಿನವರು ಮಿಡಕುತ್ತಿದ್ದರು. ಈಗ ಒಂದು ದಿವಸದ ತಡವು ಒಂದು ವರ್ಷದ ಲುಕ್ಸಾನಿಗೆ ಸರಿಯಾಗಿರುತ್ತ ದೆಂದು ಬಾದಶಹನಿಗೆ ಅವನು ಬರೆದನು. ಬೇಗನೆ ಹಣಕಳಿಸಬೇಕೆಂದು ಅಂಗಲಾಚಿ ಬೇಡಿಕೊಂಡನು. ಉಮ್ಮಳಿಸುತ್ತ ಹಣದ ದಾರಿನೋಡಿ ನೋಡಿ ಬೇಸತ್ತ ಬಳಿಕ, ಮಾಳವಾ ಸುಬೆಯಿಂದ ೨೦ ಲಕ್ಷರೂಪಾಯಿಗಳು ಬಂದವು (೧೨ ನವಂಬರ). ಕೂಡಲೆ ದಂಡಿನವರ ಹಿಂದಿನ ಸಂಬಳವನ್ನು ಹಂಚಿ ಪುರಂದರದಿಂದ ಹೊರಟನು (೧೯ ನವಂಬರ).

ಪುರಂದರದಿಂದ ಮಂಗಳವೇಡೆಯ ವರೆಗೆ ಮೊಗಲರ ದಂಡಯಾತ್ರೆಯು ಬಹು ವಿಜೃಂಭಣೆಯಿಂದ ಸಾಗಿತು. ಮರಾಟರ ತುಕಡಿಯಲ್ಲಿ ಸಿವಾಜಿಯೂ ಅವನ ಆಪ್ತನಾದ ನೇತಾಜಿ ಪಾಲ್ಕರನೂ ಮುಖ್ಯಸ್ಥರಾಗಿದ್ದರು. ಈ ನೇತಾಜಿಗೆ ಜನರು ೨ ನೆಯ ಸಿವಾಜಿಯೆಂದು ಕರೆಯುತ್ತಿದ್ದರು. ಇವರಿಬ್ಬರು ಕೋಟೆಗಳನ್ನು ಹಿಡಿದುಕೊಳ್ಳುವುದರಲ್ಲಿ ಧುರೀಣರೆಂದು ಹೆಸರುವಾಸಿಯಾದ್ದರಿಂದ, ಜಯಸಿಂಗರಾಜನು ಇವರಿಗೆ ಅದೇ ಕೆಲಸವನ್ನು ಒಪ್ಪಿಸಿದನು. ಫಲ್ಟನ್, ಥತ್ತೋರಾ, ಖವಾನ, ಮಂಗಳವೇಡೆ, ಈ ಕೋಟೆಗಳು ಒಂದರಹಿಂದೊಂದು ಸಪ್ಪಳಿಲ್ಲದೆ ಮೊಗಲರ ಕಯ್ಸೇರಿದವು (೭ ರಿಂದ ೧೮ ದಶಂಬರ). ಈ ಬಹದ್ದೂರಿಯನ್ನು ಕೇಳಿ ಅವರಂಗಜೇಬ ಬಾದಶಹನು ನಮ್ಮ ಚರಿತ್ರನಾಯಕನಿಗೆ ಒಂದು ಸ್ತುತಿಪತ್ರವನ್ನೂ ಖಿಲಾತನ್ನೂ ಹರಳುಕಟ್ಟಿದ ಕಠಾರಿಯನ್ನೂ ಬಹುಮಾನವಾಗಿ ಕಳುಹಿದನು.

ಮಂಗಳವೇಡೆಯಿಂದ ೮/೧೦ ಮೈಲಿನ ಮೇಲೆ ಅದಿಲ್ಶಾಹಿಯ ೧೨,೦೦೦ ದಂಡು ಮೊಗಲರನ್ನು ಅಡ್ಡಗಟ್ಟಲಿಕ್ಕೆ ಎದುರು ನೋಡುತ್ತಿತ್ತು. ವಿಜಾಪುರದ ಪ್ರಸಿದ್ಧ ದಳವಾಯಿಗಳಾದ ಸರ್ಜಾಖಾನನೂ ಖವಾಸಖಾನನೂ ಈ ದಂಡಿನ ಮುಖ್ಯಸ್ಥರಾಗಿದ್ದರು. ಮುಧೋಳದ ಘೋರ್ಪಡೆ ಜಾಧವರಾಯನೂ ಸಿವಾಜಿಯ ಮಲತಮ್ಮನಾದ ವೆಂಕೋಜಿಯೂ ತಮ್ಮ

ತಮ್ಮ ತುಕಡಿಗಳೊಡನೆ ಈ ದಂಡಿನಲ್ಲಿದ್ದರು. ಅದಿಲ್ಶಾಹಿಯ ದಂಡು ನಾಲ್ಕು ಭಾಗವಾಗಿ ಮೊಗಲರ ಚೂಣಿಯ ಮೇಲೆ ಬಿದ್ದಿತು (೨೫ ದಶಂಬರ). ಬೆಳಗಿನಿಂದ ನಡುಹಗಲಿನ ವರೆಗೆ ಕಡಾಟದ ಕಡಿದಾಟವಾಯಿತು. ದಿಲೀರಖಾನನ ಅಶ್ರಾಂತಶ್ರಮ ಸಾಹಸ ಶೌರ್ಯಗಳಿಂದ ವಿಜಾಪುರದ ದಂಡು ಸೋತು ಓಡಿಹೋಗಿ, ಮೊಗಲರು ಪಾಳಯಕ್ಕೆ ತಿರುಗಿಹೋಗ ಹೊರಟ ಕೂಡಲೆ ಮತ್ತೆ ಅವರ ಮೇಲೆ ಕಾಣಿಸಿಕೊಂಡಿತು. ನೇತಾಜಿಯು ಹಗೆಗಳ ಹೊಡಿತಕ್ಕೆ ಸಿಕ್ಕಿಬಿದ್ದನು. ಆಕ್ಷಣವೇ ಕಿರಾತಸಿಂಗನ ದಂಡು ಅವನ ನೆರವಿಗೆ ಹೋದ್ದರಿಂದ, ಶತ್ರುಗಳು ಪಲಾಯನ ಮಂತ್ರವನ್ನು ಜಪಿಸಿದರು. ರಣರಂಗದಲ್ಲಿ ಆದಿಲ್ಶಾಹಿಯ ಒಬ್ಬ ದಳವಾಯಿಯೂ ೧೫ ಮಂದಿ ನಾಯಕರೂ (captains) ಜಾಧವರಾಯನೂ ಮಡಿದು ಬಿದ್ದರು. ಸಿವಾಜಿ ವೆಂಕೋಜಿಯರು ವಿರುದ್ಧಪಕ್ಷದವರಾಗಿ ಕಾದಿದರು. ಮುಂದೆ ೨ ದಿವಸಗಳ ಬಳಿಕ ಮೊಗಲರ ದಂಡು ಮುಂದೆ ಸಾಗಿ, ೨೧ ಮೈಲಿನ ಮೇಲೆ ಪಾಳಯಹಾಕಿತು. ನೆರೆಯಲ್ಲೆ ಅದಿಲ್ಶಾಹಿಯ ದಂಡು ಇದ್ದ ಸುದ್ದಿ ಬಂದುದರಿಂದ ಜಯಸಿಂಗರಾಜನು ತಾನೇ ಹೋಗಿ ಅದರ ಮೇಲೆ ಬಿದ್ದನು. ಸಿವಾಜಿ ಕಿರಾತಸಿಂಗರು ಒಂದೇ ಅಂಬಾರಿಯಲ್ಲಿ ಕುಳಿತುಕೊಂಡು ಹಗೆಗಳೊಡನೆ ಹೋರಾಡಿದರು. ೩/೪ ತಾಸು ಕಡುಗಾಳಗ ವೆಸಗಿದ ಬಳಿಕ ಶತ್ರುಗಳು ದಿಕ್ಕುಪಾಲಾದರು (೨೭ ದಶಂಬರ).

ಈ ದಂಡಯಾತ್ರೆಯಲ್ಲಿ ಇದೇ ಮೊಗಲರ ಕಡೆಯ ಗೆಲವೆಂದು ಹೇಳಬಹುದು. ಇನ್ನು ಮುಂದೆ ಜಯಲಕ್ಷ್ಮಿಯು ಜಯಸಿಂಗರಾಜನನ್ನು ತೊರೆದು, ಅದಿಲ್ಶಹನ ಬೆನ್ನುಕಟ್ಟಿದಳು. ಮುಂದೆ ಸಾಗಿ, ಜಯಸಿಂಗರಾಜನು ಮಖಾನಪುರ ಅಥವಾ ನಾಗಠಾಣೆಯಲ್ಲಿ ಪಾಳೆಯ ಹಾಕಿದನು (೨೯ ದಶಂಬರ). ಈ ಮೊದಲೇ ಅದಿಲ್ಶಹನು ವಿಜಾಪುರದ ಸುತ್ತಲಿನ ೧೦ ಮೈಲು ಪ್ರದೇಶವನ್ನು ಹಾಳುಗೆಡವಿ, ಮೊಗಲರಿಗೆ ನೀರು ಮೇವು ಕಾಳು ದೊರೆಯದಂತೆ ಮಾಡಿಬಿಟ್ಟಿದ್ದನು. ಮೊಗಲರ ದಂಡಿಗೆ ನೀರುಕೂಳು ದೊರೆಯುವುದು ಪರಾಕಾಷ್ಟವಾಯಿತು. ಅದಿಲ್ಶಹನು ಕೂಡಿಹಾಕಿದ ಕರ್ನಾಟಕದ ದಂಡು ನಾನಾತರದಿಂದ ಹಗೆಗಳಿಗೆ ಎದ್ದಲಗಟ್ಟ ಕೊಡತೊಡಗಿತು. ವಿಜಾಪುರದ ಒಬ್ಬ ಸರದಾರನಾದರೂ ಬಂದು ಮೊಗಲ

ರನ್ನು ಕೂಡಲಿಲ್ಲ. ಅನಾಯಾಸವಾಗಿ ವಿಜಾಪುರವು ಕಯ್ಸೇರುವುದೆಂಬ ಬಯಲಾಶೆಗೊಳಗಾಗಿ ಜಯಸಿಂಗರಾಜನು ಮುತ್ತಿಗೆಗೆ ಬೇಕಾದ ತೋಪು ಗಳನ್ನು ತಂದಿದ್ದಿಲ್ಲ. ಆದಿಲ್ಶಹನು ವಿಜಾಪುರದ ಕೋಟೆಯನ್ನು ಭದ್ರ ಪಡಿಸಿ ಅವನ್ನು ಕಾಪಾಡಲಿಕ್ಕೆ ಬೇಕಾದ ಎಲ್ಲ ಏರ್ಪಾಡುಗಳನ್ನು ಮಾಡಿ ದ್ದನು. ಇದಲ್ಲದೆ ವಿಜಾಪುರದ ದಳವಾಯಿಗಳಾದ ಸರ್ಜಾಖಾನನೂ ಸಿದ್ದಿ ಮಸೌದನೂ ಮೊಗಲರ ರಾಜ್ಯವನ್ನು ಒಳನುಗ್ಗಲಿಕ್ಕೆ ದಂಡಿನೊಡನೆ ಹೋಗಿದ್ದರು.

ಇಷ್ಟು ದಿವಸ ಎಡೆಬಿಡದೆ ಜಯಶೀಲನಾದ ಜಯಸಿಂಗರಾಜನ ಮನಸ್ಸಿನಸ್ಥಿತಿಯು ಈಗ ಹೇಗಾಗಿರಬಹುದೆಂಬುದನ್ನು ವಾಚಕರೇ ಊಹಿಸ ಬಹುದು. ಎಷ್ಟು ಆಳೆದು ಹಾಕಿದರೂ ಮುಂದರಿಸಲಿಕ್ಕೆ ಮಾರ್ಗವೇ ತೋಚಲಿಲ್ಲ. ಆದ್ದರಿಂದ ನಿರುಪಾಯನಾಗಿ ಹಿಂದಿರುಗಿ ಹೋಗಬೇಕೆಂದು ನಿಶ್ಚಯಿಸಿ ಪಾಳಯವನ್ನು ಕಿತ್ತಿ ಹೊರಟನು (೫ ಜನವರಿ ೧೬೬೬). 'ಗೂಳಿ ಬಿದ್ದರೆ ಆಳಿಗೊಂದು ಕಲ್ಲು,' ಎಂಬ ಗಾದೆಯಂತೆ ಕರ್ನಾಟಕ ದಂಡಿನ ಹುರುಪು ಹೊಮ್ಮಿತು. ಅವರು ತಿರುಗಿ ಹೋಗುವ ಮೊಗ ಲರ ದಂಡನ್ನು ಪರಿಪರಿಯಿಂದ ಕಾಡಿದರು. ಕೊನೆಗೆ ಮೊಗಲರು ಪರೆಂಡಾದಿಂದ ೧೬ ಮೈಲು ದೂರಿರುವ ಸುಲ್ತಾನಪುರಕ್ಕೆ ಬಂದು ಮುಟ್ಟಿ ದರು (೨೭ ಜನವರಿ).

'ಛಿದ್ರೇಷ್ವನರ್ಥಾ ಬಹುಲೀ ಭವಂತಿ' ಎಂಬ ಸಕ್ಕದನಾಣ್ಣುಡಿ ಯಂತೆ ವಿಜಾಪುರ ದಂಡಯಾತ್ರೆಯು ನಿಷ್ಫಲವಾದ್ದರಿಂದ ಮೊಗಲರ ಪಾಳ ಯದಲ್ಲಿ ಜಗಳಹುಟ್ಟಿತು. ದಿಲೇರಖಾನನು ಜಯಸಿಂಗರಾಜನನ್ನು ವಿರೋಧಿ ಸಲಿಕ್ಕೆ ಯಾವಾಗಲೂ ಸಂಧಿಯನ್ನು ಹುಡುಕುತ್ತಿದ್ದನು. ಈ ದಂಡಯಾತ್ರೆ ಯಲ್ಲಿ ಬಂದ ಸೋಲಿನ ಮುಖ್ಯಕಾರಣವು ಶಿವಾಜಿಯ ವಿಶ್ವಾಸಘಾತಕತನ ವಾದ್ದರಿಂದ ಅವನನ್ನು ಸೆರೆಹಿಡಿದು ಕೊಲ್ಲಬೇಕೆಂದು ಖಾನನು ಜಯಸಿಂಗ ರಾಜನೊಡನೆ ಹಾಕಿಯಾಡತೊಡಗಿದನು. ಈ ಕಾರಣವು ಸಮಂಜಸ ವಾದ್ದಲ್ಲೆಂದು ತೋರಿದರೂ ಶಿವಾಜಿಗೆ ಅಪಾಯಸಂಭವಿಸಬಹುದೆಂಬ ಹೆದ ರಿಕೆಯು ಜಯಸಿಂಗರಾಜನ ಮನಸ್ಸಿನಲ್ಲಿ ಹುಟ್ಟಿತು. ಅವನು ಶಿವಾಜಿಗೆ

ಅಭಯದಾನಕೊಟ್ಟದ್ದರಿಂದ ಸಿವಾಜಿಯ ಇಚ್ಛೆಯಂತೆ ಅವನನ್ನು ಪನ್ಹಾಳ ಕೋಟೆಯನ್ನು ಹಿಡಿದುಕೊಳ್ಳಲಿಕ್ಕೆ ಕಳುಹಿಬಿಟ್ಟನು (೧೧ ಜನವರಿ). ಅವನೂ ನೇತಾಜಿಯೂ ತಮ್ಮ ದಂಡಿನೊಡನೆ ಹೋಗಿ ೩ ತಾಸು ರಾತ್ರಿ ಇರುವಾಗಲೇ ಪನ್ಹಾಳಕೋಟೆಗೆ ಲಗ್ಗೆಯನ್ನು ಹತ್ತಿದರು. ಕಾವಲುಗಾರರು ಎಚ್ಚರುಳ್ಳವರಿದ್ದುದರಿಂದ ಅವರ ಮೇಲೆ ಗುಂಡುಬಾಣಗಳ ಮಳೆಗರೆದರು. ಆ ಕೋಟೆಯನ್ನು ಹಿಡಿದುಕೊಳ್ಳುವುದು ಅಸಾಧ್ಯವಾಗಿ ತೋರಿದ್ದರಿಂದ ನಮ್ಮ ಚರಿತ್ರನಾಯಕನು ವಿಶಾಲಗಡಕ್ಕೆ ಹೋಗಿ ಆದಿಲ್ಶಾಹಿ ರಾಜ್ಯವನ್ನು ಸುಲಿಯಲಿಕ್ಕೆ ದಂಡು ಕಳುಹಿದನು. ಮತ್ತು ಸತತಸ್ವಾರ್ಥದೃಷ್ಟಿಯುಳ್ಳ ನೇತಾಜಿ ಪಾಲ್ಕರನು ತನ್ನ ಒಡೆಯನೊಡನೆ ಜಗಳಾಡಿ ಆದಿಲ್ಶಾಹಿಯಿಂದ ೪ ಲಕ್ಷ ಹೊನ್ನು ಲಂಚ ತೆಗೆದುಕೊಂಡು ಮೊಗಲರ ನಾಡನ್ನು ಒಳನುಗ್ಗಲಿಕ್ಕೆ ಹೊರಟನು. *

---

## ೬ ನೆಯ ಪ್ರಕರಣ

### ಬಾದಶಾಹನ ಬೆಟ್ಟಿ.

ನಮ್ಮ ಚರಿತ್ರನಾಯಕನು ಪನ್ಹಾಳಗಡವನ್ನು ಹಿಡಿದುಕೊಳ್ಳಲಿಕ್ಕೆ ನೇತಾಜಿಯೊಡನೆ ಹೊರಟು, ಬಯಕೆಗೆಟ್ಟು ವಿಶಾಲಗಡಕ್ಕೆ ಹೋದನೆಂತಲೂ ನೇತಾಜಿಯು ದುಡ್ಡಿನಾಶೆಯಿಂದ ಬತಗೆಟ್ಟು ಮೊಗಲ್ನಾಡಿನಲ್ಲಿ ಕೊಳ್ಳೆ ಸುಲಿಗೆಯನ್ನು ಮಾಡತೊಡಗಿದನೆಂತಲೂ ಹಿಂದಿನಪ್ರಕರಣದಲ್ಲಿ ಹೇಳಿರುತ್ತೇವಷ್ಟೆ. ಈ ಸುದ್ದಿಯು ತಿಳಿದುದರಿಂದ (೨೦ ಜನವರಿ ೧೬೬೬) ಜಯಸಿಂಗರಾಜನು ಬೆದರಿದನು. ಏಕೆಂದರೆ ಗೋವಲಕೊಂಡದ ಕುತುಬ

* ಜಯಸಿಂಗರಾಜನು ಈ ವಂಚಕನಿಗೆ ೩೮,೦೦೦ ರೂಪಾಯಿಗಳನ್ನೂ ೫ ಸಾವಿರದ ಮನಸಬ್ದಾರಿಯನ್ನೂ ಕೊಡಿಸಿ, ತನ್ನ ಕಡೆಗೆ ಒಡೆಕೊಂಡನು (ಮಾರ್ಚ ೧೬೬೬). ಮುಂದೆ ೬ ತಿಂಗಳಲ್ಲೇ ಮೊಗಲರು ಅವನನ್ನು ಸೆರೆಹಿಡಿದು ದಿಲ್ಲಿಗೆ ಕಳುಹಿದರು. ಅಲ್ಲಿ ಅವನು ಮುಸಲ್ಮಾನನಾಗಿ ತನ್ನ ಜೀವವನ್ನು ಉಳಿಸಿಕೊಂಡನು (ಫೆಬ್ರುವರಿ ೧೬೬೭).

ಶಹನು ಆದಿಲ್ಶಹನಿಗೆ ನೆರವಾಗಲಿಕ್ಕೆ ದೊಡ್ಡ ದಂಡನ್ನು ಕಳಿಸಿದ ಸುದ್ದಿಯು ಈ ಮೊದಲೇ ಅವನಿಗೆ ಮುಟ್ಟಿತ್ತು. ನೇತಾಜಿಯಂತೆ ಸಿವಾಜಿಯನ್ನು ಶತ್ರುಗಳು ತಮ್ಮ ಕಡೆಗೆ ಒಡೆಕೊಂಡರೆ ಎರಡು ದಂಡುಗಳ ನಡುವೆ ಸಿಕ್ಕಿ ತನ್ನ ದಂಡು ನುಚ್ಚುನುರಿಯಾಗಬಹುದೆಂಬ ಭಯವು ಜಯಸಿಂಗರಾಜನಲ್ಲಿ ಹುಟ್ಟಿತು. ಆದ್ದರಿಂದ ಆ ಅನುಭವಿಕಮುತ್ಸದ್ದಿಯು ಸಿವಾಜಿಯನ್ನು ವಿಶ್ವ ಪ್ರಯತ್ನಮಾಡಿ ದರಬಾರಿಗೆ ಕರಿಸಿಕೊಳ್ಳಬೇಕೆಂದು ಬಾದಶಹನಿಗೆ ಸೂಚಿ ಸಿದ್ದಲ್ಲದೆ, ತಾನು ಅವನನ್ನು ದಿಲ್ಲಿಗೆ ಹೋಗಲಿಕ್ಕೆ ಒಡಂಬಡಿಸುವುದಕ್ಕೆ ಭಗೀರಥಪ್ರಯತ್ನ ಮಾಡತೊಡಗಿದನು. ಏಕೆಂದರೆ ದಿಲೀರಖಾನನು ಸಿವಾಜಿಯೊಡನೆ ಹಗೆತೊಟ್ಟವದರಿಂದ ಅವನನ್ನು ದಂಡಿನೊಡನೆ ತನ್ನ ಪಾಳಯದಲ್ಲಿಟ್ಟುಕೊಳ್ಳಲಿಕ್ಕೆ ಅನುವಿದ್ದಿಲ್ಲ. ಅವನು ರಾಯಗಡದಲ್ಲೇ ಉಳಿದರೆ ಯಾವಾಗ ಆದಿಲ್ಶಾಹಿಯನ್ನು ಕೂಡುವನೋ ಎಂಬ ಅಂಜಿಕೆಯಿತ್ತು. ಆದ್ದರಿಂದ ಅವನನ್ನು ದಿಲ್ಲಿಗೆ ಅಟ್ಟಿ, ನಿಶ್ಚಿಂತನಾಗಬೇಕೆಂದು ಜಯಸಿಂಗ ರಾಜನು ಸ್ವಾಭಾವಿಕವಾಗಿ ಹವಣಿಸಿದನು. ಸಿವಾಜಿಯಂತಹ ಧೂರ್ತ ನಾದ ಚತುರನು ಅವನ ಬಲೆಗೆ ಬಿದ್ದುದು ಸೋಜಿಗದ ಮಾತೇ ಸರಿ.

ಆರ್ಯಧರ್ಮದ ಕಡುದ್ವೇಷಿಗಳಾದ ಮುಸಲ್ಮಾನರಿಗೆ ತಲೆಬಾಗಿಸ ಲಿಕ್ಕಿಲ್ಲೆಂದು ಹೇವುತೊಟ್ಟ ನಮ್ಮ ಚರಿತ್ರನಾಯಕನು ಈ ಕಾಲಕ್ಕೆ ತನ್ನ ಪಂಥವನ್ನು ಮರೆತು, ಕಪಟಿಯೂ ತಂತ್ರಗಾರನೂ ವೇದಧರ್ಮದ್ವೇಷಿಯೂ ಆದ ಅವರಂಗಜೀಬ ಬಾದಶಹನ ದರ್ಶನಕ್ಕೆ ಹೋಗಲೊಡಂಬಟ್ಟುದು ಅತ್ಯಾಶ್ಚರ್ಯಕರವಾದ ಸಂಗತಿಯೆಂದು ಯಾರುತಾನೆ ಒಡಂಬಡಲಿಕ್ಕಿಲ್ಲ? ಹೊತ್ತುಬಂದರೆ ಕತ್ತೆಯಕಾಲು ಹಿಡಿಯಬೇಕೆಂಬ ಗಾದೆ ಏನೋ ಇರುತ್ತದೆಂಬುದು ನಿಜವಾದ ಮಾತು. ಆದರೆ ಅಂತಹ ದೊಡ್ಡಕುತ್ತೇನು ನಮ್ಮ ಚರಿತ್ರನಾಯಕನಿಗೆ ಈಕಾಲಕ್ಕೆ ಒದಗಿದ್ದಿಲ್ಲ. ಪುರಂದರದ ಒಪ್ಪಂದದ ಕಾಲಕ್ಕೆ ಬಾದಶಹನ ಆಳಾಗಬೇಕೆಂದು ಜಯಸಿಂಗರಾಜನು ಎಷ್ಟು ಒತ್ತಾಯ ಮಾಡಿದರೂ ಅದಕ್ಕೆ ಒಳಗಾಗದೆ, ತಾನು ಬಾದಶಹನ ಊಳಿಗ ವನ್ನು ಸೇರಲಿಕ್ಕೆ ಅಯೋಗ್ಯನೆಂತಲೂ ಅವನ ದರ್ಶನಕ್ಕೆ ಹೋಗುವದಿಲ್ಲೆಂತಲೂ ಖಂಡಿತವಾಗಿ ಹೇಳಿ ತಪ್ಪಿಸಿಕೊಂಡಿದ್ದನು; ಆದರೆ ಈಗ

ಜಯಸಿಂಗರಾಜನ ಪುತ್ರನಿರ್ವಿಶೇಷವಾದ ಕಕ್ಕುಲತೆಯಿಂದಲೂ ಬುದ್ಧಿ ಚಾತುರ್ಯದಿಂದಲೂ ಮುಂಗಾಲ್ಪುಟಿಗೆಯ ಮಾತುಗಳಿಂದಲೂ ಸಿವಾಜಿಯು ತನ್ನ ಮೊದಲಿನ ಊತನ್ನು ಮರೆತು ಹೆಚ್ಚಿನ ಒಣಾಸೆಗೆ ಒಳಗಾದನು. ಬಾದಶಹನ ದರ್ಶನದಿಂದ ಅವನ ಒಲುಮೆಯನ್ನು ಸಂಪಾದಿಸಿ, (೧) ಜಂಜೀರಾದ ಸಿದ್ದಿಯನ್ನು ತನ್ನ ಕಯ್ಕೆಳಗೆ ಮಾಡಿಕೊಂಡು ಕಡಲಿನ ಒಡೆತನವನ್ನು ದೊರಕಿಸಬೇಕೆಂತಲೂ; (೨) ಅದಿಲ್ಶಾಹಿ ಕುತುಬಶಾಹಿಗಳಲ್ಲಿ ತನ್ನ **ಚೌಥಾಯಿ** ಹಕ್ಕನ್ನು ಕೂಡ್ರಿಸಬೇಕೆಂತಲೂ; (೩) ದಕ್ಷಿಣದ ಮೊಗಲ್ಸುಬೇದಾರನಾಗಬೇಕೆಂತಲೂ, (೪) ತನ್ನ ಮಗನಾದ ಸಂಬಾಜಿಯನ್ನು ಬಾದಶಹನ ದರಬಾರಿನಲ್ಲಿ ಸುವ್ಯವಸ್ಥಿತವಾಗಿ ಇರಿಸಬೇಕೆಂತಲೂ ಮನಸ್ಸು ಮಾಡಿ, ಅವನು ಆಗ್ರಾಕ್ಕೆ ಹೋಗಬೇಕೆಂದು ಬಯಸಿದನು. ಈಕಾಲಕ್ಕೆ ಹುಟ್ಟಿದ ಅತ್ಯಾಸೆಯೇ ಅವನನ್ನು ಗತಿಗೆಡಿಸಿತು. ಜಯಸಿಂಗರಾಜನ ಸೂಚನೆಯಂತೆ ಬಾದಶಹನು ಸಿವಾಜಿರಾಜನಿಗೆ ಆಮಂತ್ರಣವನ್ನು ಕಳುಹಿ, ಅವರಂಗಾಬಾದದ ತಿಜೋರಿಯಿಂದ ಅವನ ಖರ್ಚಿನ ಬಗ್ಗೆ ೧ ಲಕ್ಷ ರೂಪಾಯಿ ಕೊಡಿಸಿದ್ದಲ್ಲದೆ, ದಾರಿಯಲ್ಲಿದ್ದ ಎಲ್ಲ ಅಧಿಕಾರಿಗಳಿಗೆ ಸಿವಾಜಿ ರಾಜನ ಮಾನಪಾನ ಆದರಾತಿಥ್ಯಗಳನ್ನು ಶಹಾಜಾದನಂತೆ ಮಾಡಬೇಕೆಂದು ಕಟ್ಟಪ್ಪಣೆಯನ್ನಿತ್ತನು.

ಅತ್ತ ಸಿವಾಜಿರಾಜನು ತನ್ನ ರಾಜ್ಯದ ಏರ್ಪಾಡನ್ನು ಬಲೆಚ್ಚರದಿಂದ ಮಾಡತೊಡಗಿದನು. ತನ್ನ ತಾಯಿಯನ್ನು ರಾಜ್ಯ ಸಂರಕ್ಷಕಳಾಗಿ ನಿಯಮಿಸಿ ೧ ಮೋರೋಪಂತ ಪೇಶ್ವೆ, ೨ ನಿಳೋಜಿ ಸೋನದೇವ ಮುಜುಮುದಾರ, ೩ ಅಣ್ಣಾಜಿ ದತ್ತಾತ್ರಯ ಸುರನೀಸ ಈ ಮುವ್ವರಿಗೆ ಎಲ್ಲ ರಾಜ್ಯಭಾರವನ್ನು ಒಪ್ಪಿಸಿದನು; ಎಲ್ಲ ಕಿಲ್ಲೆದಾರರಿಗೆ ಇರಳಿನಲ್ಲಿ ಯಾರಿಗೂ ಒಳಗೆ ಬಿಡಬಾರದೆಂತಲೂ ಕೋಟೆಗಳ ಸಂರಕ್ಷಣೆಗೋಸ್ಕರ ಬೇಕಾದ ಎಲ್ಲ ಅಧಿಕಾರವನ್ನು ತಾವೇ ನಡಿಸಬೇಕೆಂತಲೂ ಕಟ್ಟುಮಾಡಿದನು. * ಈ ಮೇರೆಗೆ

* ಒಂದುದಿನ ರಾತ್ರಿ ಸಿವಾಜಿ ರಾಜನು ತನ್ನ ಕಿಲ್ಲೆದಾರರು ತನ್ನ ಅಪ್ಪಣೆಯನ್ನು ಹೇಗೆ ಪಾಲಿಸುತ್ತಾರೆಂಬುದನ್ನು ನೋಡುವುದಕ್ಕೋಸ್ಕರ ಒಂದು ಕೋಟೆಗೆ ಹೋಗಿ, ತಾನು ಬಂದೇನೆಂದು ಹೇಳಿ ಬಾಗಿಲು ತೆರೆಯಲಿಕ್ಕೆ ಅಪ್ಪಣೆ ಮಾಡಿದನು. ಅವನು ಎಷ್ಟು ಅಬ್ಬರಿಸಿದರೂ ಬಾಗಿಲನ್ನು ತೆಗೆಯದೆ ಆ ಕಿಲ್ಲೆ

ಎಲ್ಲ ರಾಜ್ಯದ ಏರ್ಪಾಡನ್ನು ಲಕ್ಷ್ಯಪೂರ್ವಕವಾಗಿ ಮಾಡಿಕೊಂಡು, ರಘು ನಾಥಪಂತ ಕೋರ್ಡೆ ಎಂಬ ವಕೀಲನನ್ನು ತಾನು ಬರುತ್ತೇನೆಂದು ಬಾದಶಹನಿಗೆ ತಿಳಿಸಲಿಕ್ಕೆ ಮುಂದೆ ಕಳುಹಿ, ಶ್ರೀ ಭವಾನಿಯ ಪ್ರಸಾದ ವನ್ನೂ ತಾಯಿಯ ಆಜ್ಞೆಯನ್ನೂ ಪಡೆದು, ಶುಭ ಮುಹೂರ್ತದ ದಿವಸ ರಾಜಗಡದಿಂದ ಹೊರಟನು (ಮಾರ್ಚ ೧೬೬೬). ಅವನ ಸಂಗಡ ಅವನ ಮಗನಾದ ಶಂಭೂಜಿಯೂ, ನಿರಾಜಿ ರಾವಜಿ ಶಹಣೆ, ತ್ರಿಯಂಬಕಜಿ ಸೋನದೇವ ಡಬೀರ ಎಂಬಿಬ್ಬರು ಮಂತ್ರಿಗಳೂ, ದತ್ತಾಜಿ ತ್ರಿಯಂಬಕ, ಮಾಣಕೊ ಹರಿ ಸಬ್ನೀಸ ಎಂಬಿಬ್ಬರು ಕಾರಕೂನರೂ ಹಿರೋಜಿ ಫರ್ಜಂದ, ರಾಘೊ ಮಿತ್ರ, ದಾವಲಜಿ ಗಾಡಗೆ, ಜಿವಾ ಮಹಲ್ಯಾ ಎಂಬ ನಾಲ್ವರು ಆಳುಗಳೂ ೧೦೦೦ ಮಂದಿ ರಾಹುತರೂ ೩೦೦೦ ಕಾಲಾಳುಗಳೂ ಇದ್ದರು. ಇಷ್ಟು ಪರಿವಾರದೊಡನೆ ಸಿವಾಜಿ ರಾಜನು ಆಗ್ರಾಯಾತ್ರೆಗೆ ಹೊರಟು ದಾರಿಯಲ್ಲಿ ಜಯಸಿಂಗರಾಜನ ಬೆಟ್ಟಿಗೋಸ್ಕರ ಅವರಂಗಾಬಾದಕ್ಕೆ ಹೋದನು.

ಸ್ವಾಭಿಮಾನವು ಮನುಷ್ಯನಿಗೆ ಅವಶ್ಯವಾಗಿರುವುದಲ್ಲದೆ, ಸಮಾಜ ದಲ್ಲಿ ಅವನ ಯೋಗ್ಯತೆಯ ಅಥವಾ ಬೆಲೆಯ ದರ್ಶಕವಾಗಿರುತ್ತದೆ. ಗ್ರ್ಯಾಟನ್ನನೆಂಬ ಒಬ್ಬ ಐರಿಶ್ ಗ್ರಂಥಕಾರನು ಬರೆಯುವುದೇನೆಂದರೆ, ಕೃತಜ್ಞತೆಗೋಸ್ಕರ ಯಾವ ಹೆಂಗಸೂ ತನ್ನ ಮಾನವನ್ನೂ, ಯಾವ ಗಂಡಸೂ ತನ್ನ ಸ್ವಾಭಿಮಾನವನ್ನೂ ಯಾವ ಜನಾಂಗವೂ ತನ್ನ ಸ್ವಾತಂ ತ್ರ್ಯವನ್ನೂ ಕಳಕೊಳ್ಳಕೂಡದು. ಸ್ವಾಭಿಮಾನದ ಮಹತ್ವವನ್ನರಿತ ನಮ್ಮ ಚರಿತ್ರನಾಯಕನು ಅದಕ್ಕೆ ಕುಂದುಕೊರತೆಯನ್ನು ತಂದವರನ್ನು ಎಂದೂ ಕ್ಷಮಿಸುತ್ತಿದ್ದಿಲ್ಲ. ಅವನು ಅವರಂಗಾಬಾದಕ್ಕೆ ಬಂದ ಕೂಡಲೆ ಅಲ್ಲಿಯ ಸುಬೇದಾರನು ಅವನನ್ನು ಎದುರುಗೊಳ್ಳಲಿಕ್ಕೆ ತಾನೇ ಬರದೆ, ತನ್ನ ಕಯ್ಕೆಳ ಗಿನ ಒಬ್ಬ ಅಧಿಕಾರಿಯನ್ನು ಕಳುಹಿದನು. ಅದನ್ನು ಕಂಡು ಸಿವಾಜಿ

---

ದಾರನು ಅವನನ್ನು ಕಾಪಾಡಲಿಕ್ಕೆ ತುಬಾಕಿ ಬಿಲ್ಲುಗಳನ್ನು ತೆಗೆದುಕೊಂಡು ಕೊತ್ತಳದ ಮೇಲೆ ನಿಂತನೇ ಹೊರತು ಬೆಳಗಾಗುವ ವರೆಗೆ ಬಾಗಿಲು ತೆರೆಯ ಲಿಲ್ಲ. ಅವನ ವಿಧೇಯತ್ವವನ್ನು ನೋಡಿ ಮೆಚ್ಚಿ ಸಿವಾಜಿ ರಾಜನು ಅವನಿಗೆ ಇನಾಮು ಕೊಟ್ಟನಂತೆ.

ರಾಜನು ಮುನಿದು, ಆ ಸುಬೇದಾರನ ಬೆಟ್ಟಿಗೆ ಹೋಗದೆ, ತನಗೋಸ್ಕರ ಮಾಡಿಟ್ಟ ಬಿಡಾರಕ್ಕೆ ನೇರಾಗಿ ಹೋದನು. ಅದನ್ನು ಕಂಡು ಸುಬೇದಾರನ ಸೊಕ್ಕು ಇಳಿಯಿತು. ಅವನು ಪಶ್ಚಾತ್ತಾಪಪಟ್ಟು ಸಿವಾಜಿರಾಜನನ್ನು ಕಂಡು ಕ್ಷಮೆ ಬೇಡಿಕೊಂಡುದರಿಂದ ಸಿವಾಜಿರಾಜನು ಅವನಿಗೆ ತಿರುಗಿ ಬೆಟ್ಟಿಕೊಟ್ಟನು.* ಅಲ್ಲಿರುವಾಗ ಜಯಸಿಂಗರಾಜನು ಅವನಿಗೊಂದು ದೊಡ್ಡ ಮೇಜವಾನಿಯನ್ನು ಮಾಡಿಸಿ ಉಡುಗೊರೆಕೊಟ್ಟು, ಬಾದಶಹನಿಗೂ ತನ್ನ ಮಗನಾದ ರಾಮುಸಿಂಗನಿಗೂ ತನ್ನ ಗೊತ್ತಿನ ಸರದಾರರಿಗೂ ಪತ್ರಗಳನ್ನು ಕೊಟ್ಟು, ಅವನ ಜೀವಕ್ಕೆ ಯಾವತರದಿಂದಲೂ ಭಯವು ಬರಲಿಕ್ಕಿಲ್ಲೆಂದು ಅಭಯದಾನವನ್ನಿತ್ತು, ಅವನು ತಿರುಗಿ ಬರುವವರೆಗೆ ಅವನ ರಾಜ್ಯಕ್ಕೆ ಏನೂ ಕೇಡು ಬರದಂತೆ ನೋಡಿಕೊಳ್ಳುವೆನೆಂದು ಮಾತುಕೊಟ್ಟು, ಅವನಿಗೆ ಹೋಗಲಿಕ್ಕೆ ಅಪ್ಪಣೆಯನ್ನು ದಯಪಾಲಿಸಿದನು.† ಮುಂದೆ ದಾರಿಹಿಡಿದು ಹೋಗುವಾಗ ಹಾದಿಯಲ್ಲಿ ಬಾದಶಹನಿಂದ ಒಂದು ಖಿಲಾತೂ ಪತ್ರವೂ ಬಂದು ತಲುಪಿದವು. ಆ ಪತ್ರದಲ್ಲಿ ಸಿವಾಜಿರಾಜನು ಸ್ವಸ್ಥಚಿತ್ತದಿಂದ ಬೇಗನೆ ದರಬಾರಿಗೆ ಬಂದು, ತಾನು ಮಾಡುವ ಬಹುಮಾನವನ್ನು ಕಯ್ಕೊಂಡು, ಸುರಕ್ಷಿತವಾಗಿ ತನ್ನ ರಾಜ್ಯಕ್ಕೆ ತಿರುಗಿ ಹೋಗಬಹುದೆಂದು ಬರೆದಿತ್ತು. ಮುಂದೆ ಹೊರಟು ಸಿವಾಜಿರಾಜನು ಆಗ್ರಾಪಟ್ಟಣದ ಹೊರಮುಗ್ಗಲು ಇಳಿಕೊಂಡು, ತಾನು ಬಂದ ಸುದ್ದಿಯನ್ನು ಬಾದಶಹನಿಗೆ ಹೇಳಿಕಳುಹಿದನು. ಬಾದಶಹನಿಂದ ಬಂದ ಕೆಲವು ಸರದಾರರು ಅವನನ್ನು ಎದುರುಗೊಂಡು ಊರೊಳಗೆ ಕರೆದೊಯ್ದು ಒಂದು ವಿಸ್ತಾರವಾದ ಅತಿಥಿಗೃಹದಲ್ಲಿ ಇಳಿಸಿದರು (೯ ಮೇ ೧೬೬೬).

ನಮ್ಮ ಚರಿತ್ರನಾಯಕನಿಗೆ ಬಾದಶಹನ ಬೆಟ್ಟಿಗೋಸ್ಕರ ಬಹಳ ದಿವಸ ಎದುರು ನೋಡುತ್ತ ಕೂಡ್ರ ಬೇಕಾಗಲಿಲ್ಲ. ಅವನು ಹೋದ ೩ ನೆಯ ದಿವಸವೇ ಬಾದಶಹನ ೫೦ ನೆಯ ಹುಟ್ಟಿದದಿವಸದ ದರಬಾರ

* ಅಭಿಮಾನೋ ಧನಮೇಷಾಮ್ ಚಿರಂಜೀವಂತು ತೇ ನರಾಃ ।
ಅಭಿಮಾನವಿಹೀನಾನಾಮ್ ಕಿಮ್ ಧನೇನ ಕಿಮಾಯುಷಾ ॥

† ಕೇಳೂಸಕರ ಪುಟ ೨೭೭.

ವಿತ್ತು. ಆಗ ಬರಬೇಕೆಂದು ಬಾದಶಹನು ಹೇಳಿಕಳುಹಿದನು. ಆ ದಿವಸ ಬಾದಶಹನ ತುಲಾಭಾರವಾಗುವದಿತ್ತು. ಸಾವಿರಾರು ಮಂದಿ ಸರದಾರರು ಬೆಲೆಯುಳ್ಳ ಅಂದಚಂದದ ಉಡುಪುತೊಡಪುಗಳನ್ನು ಹಾಕಿಕೊಂಡು, ಸಿಂಹಾಸನದ ಸುತ್ತಲೂ ಭಯಭಕ್ತಿಯಿಂದ ಸಾಲುಸಾಲಾಗಿ ತಕ್ಕ ಎಡೆಯಲ್ಲಿ ನಿಂತಿದ್ದರು. ರಾಮುಸಿಂಗನ ಜತೆಯಲ್ಲಿ ಸಿವಾಜಿ ಸಂಬಾಜಿಯರೂ ಅವರ ೧೦ ಜನ ಅನುಯಾಯಿಗಳೂ ದಿವಾನಖಾನೆಯನ್ನು ಹೊಕ್ಕಕೂಡಲೆ ಎಲ್ಲರ ಕಣ್ಣುಗಳು ಅವರ ಕಡೆಗೆ ತಿರುಗಿದವು. ಅಫಜುಲ್ಖಾನನನ್ನು ದ್ವಂದ್ವ ಯುದ್ಧದಲ್ಲಿ ಕೊಂದ, ಅಂತಃಪುರದಲ್ಲಿ ಸಾಯಿಸ್ತೆಖಾನನ ಬೆರಳನ್ನು ಕೊಯ್ದ, ಗುಡ್ಡದ ಇಲಿ ಎಂದು ಬಾದಶಹನು ಹಾಸ್ಯಮಾಡುತ್ತಿರುವ ಅದ್ಭುತಚರಿತ್ರನಾದ ಸಿವಾಜಿರಾಜನನ್ನು ಸಭಿಕರು ಎವೆಯಿಕ್ಕದೆ ಮನದಣಿ ನೋಡಿ ಆಶ್ಚರ್ಯಚಕಿತರಾದರು. ಸಿವಾಜಿರಾಜನ ಜತೆಗಾರರು ಬಾದಶಹನ ಮುಂದೆ ೧೫೦೦ ಮೊಹರುಗಳನ್ನೂ ೬೦೦೦ ರೂಪಾಯಿಗಳನ್ನೂ ಕಾಣಿಕೆಯಾಗಿ ಇರಿಸಿದರು. ಬಾದಶಹನು ನಗೆಮೋರೆಯಿಂದ "ಸಿವಾಜಿರಾಜನೆ ಬಾ" ಎಂದು ಒಡನುಡಿದನು. ಸಿವಾಜಿರಾಜನು ಗದ್ದಿಗೆಯ ಹತ್ತರ ಹೋಗಿ ನೆಲಮುಟ್ಟಿ ಮೂರುಸಲಾಮುಗಳನ್ನು ಮಾಡಿದನು. ಬಾದಶಹನು ಸನ್ನೆಮಾಡಿದ ಕೂಡಲೆ ರಾಮುಸಿಂಗನು ಅವನನ್ನು ಕರೆಕೊಂಡುಹೋಗಿ ೨ ನೆಯ ದರ್ಜೆಯ ಸರದಾರರೊಳಗೆ ನಿಲ್ಲಿಸಿದನು.

ನಮ್ಮ ಚರಿತ್ರನಾಯಕನಿಗೆ ತುಂಬಾ ಸ್ವಾಭಿಮಾನವಿತ್ತೆಂದು ಹಿಂದೆ ಹೇಳಿರುತ್ತೇವಷ್ಟೆ. ಜಯಸಿಂಗರಾಜನ ಬಣ್ಣದ ಮಾತುಗಳಿಂದ ಬಾದಶಹನು ತನಗೆ ಹೆಚ್ಚು ಆದರತೋರಿಸಿ ಬಹುಮಾನಮಾಡುವನೆಂಬ ತಿಳಿವಳಿಕೆಯು ಅವನಲ್ಲಿ ನೆಲೆಗೊಂಡುದರಿಂದ ಈಗ ಬಾದಶಹನು ತೋರಿಸಿದ ಅನಾದರವನ್ನು ಕಂಡು ಅವನು ಬಹಳ ನೊಂದುಕೊಂಡು,

ರಾಮುಸಿಂಗ, ನಾನು ನಿಂತಲ್ಲಿ ಬಾದಶಹನು ಕಾಣಿಸುವುದಿಲ್ಲ!! ನಾನು ನಿಂತ ಸಾಲಿನ ಸರದಾರರ ದರ್ಜೆಯಾವುದು?

ರಾಮುಸಿಂಗ—ಅಯ್ದು ಸಾವಿರ ಮನಸಬ್ದಾರರದು.

ಸಿವಾಜಿ—ಛಿಸ್. ನನ್ನ ೭ ವರ್ಷದ ಮಗನೂ ನನ್ನ ಕಯ್ಕೆಳಗಿನ ನನಾದ ನೇತಾಜಿಯೂ ೫ ಸಾವಿರದ ಮನಸಬ್ದಾರರಾಗಿರುತ್ತಾರೆ. ನನ್ನ

ನೆರವಿನಿಂದ ಬಾದಶಹನಿಗೆ ಎಷ್ಟೋ ಲಾಭವಾಗಿರುತ್ತದೆ. ಹೀಗಿದ್ದು ನನ್ನ ಯೋಗ್ಯತೆಯು ಅವರಷ್ಟೇ ಏನು ? ಈ ದರಬಾರಿನಲ್ಲಿ ಕತ್ತೆಕುದುರೆಗಳು ಸಮವಾಗಿ ಎಣಿಸಲ್ಪಡುತ್ತವೆಯೋ ? ಬಾದಶಹನಿಗೆ ನಾನು ಮಾಡಿದ ಉಪಕಾರವೆಲ್ಲವೂ ಇಷ್ಟುದೂರ ಬರುವುದಕ್ಕೆ ನಾನು ತೆಗೆದುಕೊಂಡ ಶ್ರಮವೂ ಹೊಳೆಯೊಳಗೆ ಹುಣಸೆಹಣ್ಣು ತೊಳೆದಂತಾದವೋ ?(ನಿಟ್ಟೆಸುರು ಬಿಟ್ಟು) ಒಳ್ಳೆಯದು. ಈ ಮುಂದಿನ ಸಾಲಿನವರ ದರ್ಜೆ ಯಾವುದು ?

ರಾ.—ಅವರು ೬ ಮತ್ತು ೭ ಸಾವಿರದ ಮನಸಬ್ದಾರರು.

ಸಿ.—ಈ ಸಾಲಿನಲ್ಲಿ ಯಶವಂತಸಿಂಗರಾಜನಿಲ್ಲವೇ ?

ರಾ.—ಅಹುದು (ಬೆರಳಿನಿಂದ ತೋರಿಸಿ) ಅವನೇ ಯಶವಂತಸಿಂಗ ರಾಜನು.

ಸಿ.—ನನಗೆ ಬೆನ್ನು ತೋರಿಸಿ ಹೋದ ಯಶವಂತಸಿಂಗನು ನನಗಿಂತ ಹೆಚ್ಚಿನವನೇ ? ಈ ದರಬಾರಿಗೆ ಧಿಕ್ಕಾರವಿರಲಿ!!! ಇಂತಹ ಅವಮಾನವನ್ನು ಸಹಿಸಲಾರೆನು, ನನಗೆ ಈ ಜೀವವೇ ಬೇಡ. ನಿಮ್ಮ ಕಠಾರಿಯನ್ನು ಕೊಡಿರಿ. ಅದನ್ನು ಇರಿದುಕೊಂಡು ಇಲ್ಲೇ ಪ್ರಾಣ ಬಿಡುವೆನು.

ರಾ.—ತಮ್ಮಂತಹ ವಯೋವೃದ್ಧರೂ ತಿಳಿವಳಿಕೆಯುಳ್ಳವರೂ ಶೂರರೂ ಹೀಗೆ ಹುಚ್ಚುಚ್ಚು ಬಡಿಯುವುದು ಸರಿಯೇ ? ತುಸು ತಾಳಿರಿ. 'ತಾಳಿದವನೇ ಬಾಳಿಯಾನು' ಎಂಬ ಗಾದೆಯು ತಮಗೆ ಗೊತ್ತಿದ್ದ ಮಾತೇ ಸರಿ. ತುಲಾಭಾರವಾದ ಬಳಿಕ ಬಾದಶಹರು ತಮಗೆ ಮಾಡತಕ್ಕ ಬಹುಮಾನವನ್ನು ಮಾಡಿಯಾರು, ಸಿಟ್ಟಿನ ಕಯ್ಯಲ್ಲಿ ಬುದ್ಧಿಯನ್ನು ಕೊಡುವುದು ತಮ್ಮಂತಹರಿಗೆ ಉಚಿತವಲ್ಲ. ಸ್ವಲ್ಪ ಸಮಾಧಾನ ಹಿಡಿಯಿರಿ.

ಸಿ.—(ಸಿಟ್ಟಿನಿಂದ ಕಣ್ಣು ಕೆಂಪಗೆ ಮಾಡಿಕೊಂಡು ಒತ್ತಿಯಾಗಿ) ಏನು ರಾಮಸಿಂಗ? ಏನು ಮಾತಾಡುತ್ತೀರಿ ? ನಿಮ್ಮ ಅಭಿಮಾನವೆಲ್ಲ ಅಳಿದು ಹೋಗಿದೆ. ನೀವು ಹುಳಿತ ಕಾಯಿಯಂತೆ ಆಗಿರುತ್ತೀರಿ. ನಿಮ್ಮಲ್ಲಿ ಸ್ವಾರ್ಥವು ಹೆಚ್ಚಿದ್ದರಿಂದ ನಿಮ್ಮ ವೃತ್ತಿಯು ಶ್ವಾನವೃತ್ತಿಯಾಗಿರುತ್ತದೆ.

ನಿಮಗೆ ಏನು ಮಾಡಿದರೂ ಏನು ಅಂದರೂ ಎಗ್ಗೇ ಇಲ್ಲ. 'ಅಡಕೆಗೆ ಹೋದ ಮಾನ ಆನೆಕೊಟ್ಟರೂ ಬಾರದು.' ನನ್ನಿಂದ ಈ ಅವಮಾನ ವನ್ನು ತಾಳುವುದಾಗುವುದಿಲ್ಲ. ಉಶ್ ! ಶಿವ!! ಶಿವ!! (ಎಂದು ಮೈಯ್ಮರೆದು ನೆಲಕ್ಕೆ ಬೀಳುತ್ತಾನೆ).

ಸಿವಾಜಿರಾಜನು ಎಚ್ಚರದಪ್ಪಿ ಬಿದ್ದಕೂಡಲೆ ಸರದಾರರೊಳಗೆ ಗೊಂದಲವೆದ್ದಿತು. ಆ ಗದ್ದಲವನ್ನು ಕೇಳಿ ಬಾದಶಹನು ಏನೆಂದು ಕೇಳಿದನು. ಅದಕ್ಕೆ ರಾಮಸಿಂಗನು ಲಾಕ್ಷಣಿಕ ಶಬ್ದಗಳಿಂದ "ಕಾಡಿನಲ್ಲಿ ಅಡ್ಡಾಡಿದ ಹುಲಿಯು ದರಬಾರಿನ ಸೆಕೆಯಿಂದ ತಳಮಳಿಸಿ ಅಸ್ವಸ್ಥವಾಗಿರುತ್ತದೆ", ಎಂದು ಉತ್ತರಕೊಟ್ಟನು. ಬಾದಶಹನು ಅವನನ್ನು ನೆರೆಯಲ್ಲಿದ್ದ ಕೋಣೆಗೆ ಒಯ್ದು ಗುಲಾಬಿನೀರು ಸಿಂಪಡಿಸಿ ಉಪಚಾರ ಮಾಡಿ, ಎಚ್ಚರಗೊಂಡ ಬಳಿಕ ಅವನ ಬಿಡಾರಕ್ಕೆ ಒಯ್ಯಬೇಕೆಂದು ಅಪ್ಪಣೆಯನ್ನು ದಯಪಾಲಿಸಿದನು. ಸಿವಾಜಿರಾಜನು ಆಶೆಬಟ್ಟು ತನ್ನ ಮೊದಲಿನ ಸಂಕಲ್ಪದ ವಿರುದ್ಧವಾಗಿ ಬಹುದೂರದಿಂದ ಬಂದು, ತೆಗೆದುಕೊಂಡ ಬಾದಶಹನ ಬೆಟ್ಟಿಯು ಈ ಮೇರೆಗೆ ವಿಪರೀತವಾಗಿ ಪರಿಣಮಿಸಿತು. ಮನುಷ್ಯನು ಬಯಸುವುದೊಂದು ದೇವರು ಮಾಡುವುದು ಮತ್ತೊಂದು!!!

ಬಾದಶಹನು ತನ್ನ ಮನಸ್ಸಿನಲ್ಲಿ ದರಬಾರು ಮುಗಿದ ಬಳಿಕ ಸಿವಾಜಿರಾಜನಿಗೆ ಒಂದು ಆನೆಯನ್ನೂ ಒಂದು ಖಿಲಾತನ್ನೂ ಕೆಲವು ರತ್ನಗಳನ್ನೂ ಕೊಡಬೇಕೆಂದು ಮಾಡಿದ್ದನು. ಆದರೆ ಸಿವಾಜಿರಾಜನು ಬಿಡಾರಕ್ಕೆ ಹೋದಬಳಿಕ, ಬಾದಶಹನು ವಿಶ್ವಾಸಘಾತ ಮಾಡಿದನೆಂತಲೂ ಜಯಸಿಂಗರಾಜನು ಕೊಟ್ಟ ವಚನಗಳನ್ನು ಮುರಿದನೆಂತಲೂ ಮುಕ್ತಕಂಠವಾಗಿ ಹೇಳತೊಡಗಿದನು. ಈ ಎಲ್ಲ ಮಾತುಗಳು ಬಾದಶಹನ ಕಿವಿಗೆ ಮುಟ್ಟಿದ್ದರಿಂದ ಅವನು ಬಹುಮಾನವನ್ನು ಕೊಡುವ ವಿಚಾರವನ್ನು ಅಷ್ಟಕ್ಕೆ ನಿಲ್ಲಿಸಿ, ಸಿವಾಜಿರಾಜನನ್ನು ಊರೊಳಗೆ ಇರಗೊಡಲಿಕ್ಕೆ ಹೆದರಿ, ಪಟ್ಟಣದ ಹೊರಬದಿಯಲ್ಲಿದ್ದ ಜಯಪುರದ ಅರಮನೆಯಲ್ಲಿರಿಸಬೇಕೆಂತಲೂ ರಾಮಸಿಂಗನು ಅವನನ್ನು ಎಚ್ಚರದಿಂದ ಕಾಯಬೇಕೆಂತಲೂ ಕಟ್ಟು ಮಾಡಿದನು. ಮುಂದೆ ಕೆಲವು ದಿವಸಗಳ ತರುವಾಯ ಹೆಚ್ಚು ಸಂಶಯ ಬಂದು

ದರಿಂದ ಬಾದಶಹನು ಜಯಪುರದ ಅರಮನೆಯ ಸುತ್ತಲು ದಂಡಿನ ಕಾವಲಿರಿಸಿ, ನಾಲ್ಕೂ ದಿಕ್ಕಿಗೂ ನಾಲ್ಕು ತೋಪುಗಳನ್ನಿಡಿಸಿದನು. ಅತಿಥಿಯಾಗಿ ಬಂದ ಸಿವಾಜಿಯು ಬಾದಶಹನ ಸೆರೆಯಾಳಾದನು. ದೈವಗತಿಯು ಅತಿವಿಚಿತ್ರವಾದುದು.

ಇತ್ತ ಸಿವಾಜಿಯು ತನ್ನ ಮೇಲೆ ಬಾದಶಹನು ದಿನ ಒಂದಕ್ಕೆ ಹೆಚ್ಚು ಹೆಚ್ಚು ಸಿಟ್ಟಾದುದನ್ನು ನೋಡಿ ಬೆದರಿದನು. ತನ್ನ ಮಹತ್ವಾಕಾಂಕ್ಷೆಯನ್ನು ಪೂರೈಸಿಕೊಳ್ಳುವುದರ ಬದಲು ಸೆರೆಯಾಳಾಗಿ ಆಗ್ರಾದಲ್ಲಿ ಕೂಡ್ರಬೇಕಾಯಿತೆಂದು ಬಹಳವಾಗಿ ಹಳಹಳಿಸಿದನು. ಬಾದಶಹನನ್ನು ಕಂಡು ಅವನ ಮುಂದೆ ತನ್ನ ಹೊಟ್ಟೆಯೊಳಗೆ ಇದ್ದುದನ್ನೆಲ್ಲ ತೋಡಿಕೊಳ್ಳಬೇಕೆಂದು ಮಿತಿಮೀರಿ ಹವಣಿಸಿದನು. ಮಾಟಗಾರನೆಂದು ಖ್ಯಾತಿಗೊಂಡ ಸಿವಾಜಿಗೆ ಸಂಶಯದ ತವರಮನೆಯಾದ ಅವರಂಗಜೇಬನು ತನ್ನ ದಿವಾನಖಾನೆಯಲ್ಲಿ ಕಾಣಿಸಿಕೊಳ್ಳುವನೇ? ಬೆಟ್ಟಿಗೆ ಬರಕೂಡದೆಂದು ತಿರುಗಿ ಹೇಳಿಕಳುಹಿದನು. ತನ್ನ ವಕೀಲನಾದ ರಘುನಾಥ ಕೋರ್ಡೆಯನ ಮುಖಾಂತರವಾಗಿ ಅತಿಮಹತ್ವದ ಲಾಭಕರವಾದ ಒಂದು ಸಂಗತಿಯನ್ನು ಬಾದಶಹನಿಗೆ ಗುಪ್ತವಾಗಿ ತಿಳಿಸಬೇಕಾಗಿದೆ ಎಂದು ಹೇಳಿಕಳುಹಲು, ಸಾಯಿಸ್ತೆಖಾನನ ಭಾವಮೈದುನನಾದ ಜಾಫರಖಾನನು ಅದಕ್ಕೆ ಕಲ್ಲುಹಾಕಿದನು. ವಜೀರನು ಬೆಟ್ಟಿಕೊಟ್ಟಾಗ ಅವನ ಹೆಂಡತಿಯಾದ ಸಾಯಿಸ್ತೆಖಾನನ ತಂಗಿಯು ಬೇಗನೆ ಆವನನ್ನು ಅಪ್ಪಣೆಕೊಟ್ಟು ಕಳುಹಬೇಕೆಂದು ಒತ್ತಾಯ ಮಾಡಿದ್ದರಿಂದ "ಏಕಾಗಲೊಲ್ಲದು, ಒಳ್ಳೆಯದು" ಎಂಬ ಎರಡು ಮಾತುಗಳನ್ನು ಹೇಳಿ, ಅವನನ್ನು ಕಳಿಸಿಬಿಟ್ಟನು. ಈ ಎಲ್ಲ ಹೆಣಗಾಟದಿಂದ ತನ್ನ ಸಂಗಡಿಗರನ್ನು ತಿರುಗಿ ಕಳುಹಲಿಕ್ಕೆ ಅಪ್ಪಣೆಯು ದೊರೆಯಿತೇ ಹೊರತು, ತನ್ನ ಮತ್ತು ತನ್ನ ಮಗನ ಬಿಡುಗಡೆಯಾಗಲಿಲ್ಲ. ಆದ್ದರಿಂದ ನಮ್ಮ ಚರಿತ್ರನಾಯಕನು ನಿರಾಶನಾಗಿ ದುಮ್ಮಾನದಿಂದ ದುಗಡಿಗೆ ಈಡಾಗಿ, ಹೇಗಾದರೂ ಮಡುಕಬೇಕೆಂಬ ಎಣಿಕೆಯಲ್ಲಿ ಮುಳುಗಿದನು

ಅತ್ತ ಜಯಸಿಂಗರಾಜನು ಸಿವಾಜಿರಾಜನ ದುರವಸ್ಥೆಯನ್ನು ಕೇಳಿ ಮನಸ್ಸಿನಲ್ಲಿ ಮರ ಮರ ಮರಗಿದನು. ಅವನು ಆದಿಲ್ಶಾಹಿಯೊಡನೆ

ಹೂಡಿದ ಯುದ್ಧವು ಮೊಗಲರಿಗೆ ಪ್ರತಿಕೂಲವಾಗಿ ನಡೆದಿತ್ತು. ಆದಕಾರಣ ರಾಜಕೀಯ ದೃಷ್ಟಿಯಿಂದ ಸಿವಾಜಿರಾಜನು ಆಗ್ರಾದಲ್ಲಿರುವುದೇ ಒಳಿತಾದರೂ ಅವನನ್ನು ಸೆರೆಯಲ್ಲಿಡುವುದಾಗಲಿ ಕೊಲ್ಲಿಸುವುದಾಗಲಿ ಮೊಗಲ ಸಾಮ್ರಾಜ್ಯಕ್ಕೆ ಅತ್ಯನಿಷ್ಟಕರವೆಂದು ಅವನು ನೆರೆನಂಬಿದ್ದನು. ಆದರೂ ಅವನು ಸಿವಾಜಿಗೆ ಜೀವಕ್ಕೆ ಏನೂ ಅಪಾಯತಟ್ಟಲಿಕ್ಕಿಲ್ಲೆಂತಲೂ ಬಾದಶಹನು ಅವನನ್ನು ಸುರಕ್ಷಿತವಾಗಿ ತಿರುಗಿ ಬರಗೊಡುವನೆಂತಲೂ ಪ್ರಮಾಣಪೂರ್ವಕವಾಗಿ ವಚನಕೊಟ್ಟುದರಿಂದ ಅವನ ನಿರ್ಬಂಧದ ಸುದ್ದಿಯನ್ನು ಕೇಳಿ ಬಹಳವಾಗಿ ಚಡಪಡಿಸಿ, ಬಾದಶಹನಿಗೆ ಒಂದರ ಮೇಲೊಂದು ಪತ್ರ ಬರೆದನು. ಅವುಗಳಲ್ಲಿ ಸಿವಾಜಿಯನ್ನು ಆದರದಿಂದ ಉಪಚರಿಸಿ ಮಿತ್ರನಾಗಿ ಮಾಡಿಕೊಂಡರೆ, ಸಾಮ್ರಾಜ್ಯಕ್ಕೆ ಅಪರಿಮಿತ ಲಾಭವಾಗುವುದೆಂತಲೂ ಅವನನ್ನು ಸೆರೆಯಿಟ್ಟರೆ ಅಥವಾ ಕೊಲ್ಲಿಸಿದರೆ ಬಾದಶಹನ ಮತ್ತು ಅವನ ಅಧಿಕಾರಿಗಳ ಮಾತಿನ ಮೇಲೆ ಜನರ ವಿಶ್ವಾಸವು ತಪ್ಪಿ, ಅನರ್ಥಕ್ಕೆ ಕಾರಣವಾಗಬಹುದೆಂತಲೂ ಸಾರಿದೂರಿ ಬರೆದಿತ್ತು. ಸಂಶಯ–ಪಿಶಾಚಿಯಾದ ಅವರಂಗಜೇಬನು ಇಂತಹ ಕಾಗದಗಳನ್ನು ಸಡ್ಡೆಮಾಡುವನೇ? ರಾಣಿವಾಸದ ಹೆಂಗಸರ ಮಾತಿಗೆ ಕಿವಿಗೊಟ್ಟು ಅವನನ್ನು ಕೊಲ್ಲಿಸುವ ವಿಚಾರ ಮಾಡಲಿಲ್ಲೆಂಬುದು ಸಿವಾಜಿಯ ಪುಣ್ಯಪ್ರಭಾವವೇ ಸರಿ. ಅವರಂಗಜೇಬನು ಮೊದಲು ಸಿವಾಜಿಯ ನಡತೆಯ ವಿಷಯವಾಗಿ ಹೊಣೆಯಾಗಬೇಕೆಂದು ರಾಮಸಿಂಗನಿಗೆ ಹೇಳಿದನು. ಹಾಗೆ ತನ್ನ ಮಗನಿಗೆ ಒತ್ತಾಯಮಾಡಕೂಡದೆಂದು ಜಯಸಿಂಗರಾಜನು ಖಂಡಿತವಾಗಿ ಬರೆದನು. ಹಿಂದುವಾದ ರಾಮಸಿಂಗನು ಸಿವಾಜಿಗೆ ಜಾಮೀನಾಗಲಿಕ್ಕೆ ತಕ್ಕವನಲ್ಲೆಂಬ ಎಣಿಕೆಯಿಂದಲೋ ಬೇರೆ ಕಾರಣದಿಂದಲೋ ಬಾದಶಹನು ಆ ವಿಚಾರವನ್ನು ಬಿಟ್ಟುಕೊಟ್ಟು, ನೇತಾಜಿ ಪಾಲ್ಕರನನ್ನು ಕಳಿಸಿದಂತೆ ಸಿವಾಜಿಯನ್ನು ಅಫಗಾಣಿಸ್ಥಾನಕ್ಕೆ ಕಳಿಸಿಕೊಡಬೇಕೆಂದು ಆಲೋಚನೆ ಮಾಡಿದನು. ಹಾಗೆ ಮಾಡಿದರೆ ಮರಾಟರು ಆದಿಲ್ಶಾಹಿಪಕ್ಷವನ್ನು ಹಿಡಿಯಬಹುದೆಂಬ ಹೆದರಿಕೆಯಿಂದಲೋ ದಾರಿಯಲ್ಲಿ ಸಿವಾಜಿಯು ತಪ್ಪಿಸಿಕೊಳ್ಳಬಹುದೆಂಬ ಸಂಶಯದಿಂದಲೋ ಆ ಆಲೋಚನೆಯನ್ನು ಬದಿಗೊತ್ತಿದನು. ಕೊನೆಗೆ ತಾನೇ ದಕ್ಷಿಣಕ್ಕೆ ಹೋಗ

ಬೇಕೆಂತಲೂ ಸಿವಾಜಿಯನ್ನು ಆಗ್ರಾದಲ್ಲಿಟ್ಟು ರಾಮಸಿಂಗನನ್ನು ಆಗ್ರಾದ ಕಿಲ್ಲೆದಾರನಾಗಿಯೂ ಸಿವಾಜಿಯ ಕಾವಲುಗಾರನಾಗಿಯೂ ನಿಯಮಿಸ ಬೇಕೆಂತಲೂ ಬಾದಶಹನ ಮನಸ್ಸಿನಲ್ಲಿ ವಿಚಾರವು ಹುಟ್ಟಿತು. ಸಿವಾಜಿ ಯನ್ನು ಆಗ್ರಾದಲ್ಲಿರಿಸುವುದಕ್ಕೆ ಒಡಂಬಟ್ಟರೂ ತನ್ನ ಮಗನನ್ನು ಅವನ ಕಾವಲುಗಾರನಾಗಿ ಮಾಡಲಿಕ್ಕೆ ಜಯಸಿಂಗರಾಜನು ಒಪ್ಪಿಕೊಳ್ಳಲಿಲ್ಲ. ಅದಿಲ್ಯಾಹಿಯೊಡನೆ ನಡೆದ ಯುದ್ಧವು ಅನುಕೂಲವಾಗಿ ಮುಗಿದ ಬಳಿಕ ಸಿವಾಜಿಯನ್ನು ತಿರುಗಿ ತನ್ನ ರಾಜ್ಯಕ್ಕೆ ಕಳಿಸಿಕೊಡಬೇಕೆಂದು ಬಾದ ಶಹನು ಕಟ್ಟಕಡೆಗೆ ನಿಶ್ಚಯಿಸಿದನು. ಆದರೆ ಸಿವಾಜಿಯ ದುರ್ದೈವದಿಂದ ಆ ಯುದ್ಧವು ಅನುಕೂಲವಾಗದೆ ದಿನದಿನಕ್ಕೆ ಹೆಚ್ಚೆಚ್ಚು ಪ್ರತಿಕೂಲವಾಗಿ ಯೇ ಪರಿಣಮಿಸಿತು.

ಈ ಕಾಲಕ್ಕೆ ನಮ್ಮ ಚರಿತ್ರನಾಯಕನ ಸ್ಥಿತಿಯು ಅತಿಶೋಚನೀಯ ವಾಗಿತ್ತು. ಸೆರೆಯಿಂದ ಬಿಡುಗಡೆ ಹೊಂದಲಿಕ್ಕೆ ದಾರಿಯೇ ತೋರಲಿಲ್ಲ. ಬಾದಶಹನ ಬೆಟ್ಟಿಯಂತೂ ದೊರೆಯುಲಸಾಧ್ಯವಾಯಿತು. ವಜೀರನು ಅವನ ಬಿನ್ನಹವನ್ನು ಲೆಕ್ಕಿಸಲಿಲ್ಲ. ಉಳಿದ ಸರದಾರರು ತಮ್ಮಿಂದೇನೂ ಸಾಹಾಯವಾಗಲಾರದೆಂದು ಸ್ಪಷ್ಟವಾಗಿ ಹೇಳಿಬಿಟ್ಟರು. ಬಾದಶಹನ ಸಂಶಯದುಷ್ಟತನಗಳಿಂದ ತನ್ನನ್ನು ಕಾಪಾಡಿಕೊಳ್ಳುವುದೇ ರಾಮಸಿಂಗ ನಿಗೆ ಸಾಕುಬೇಕಾಯಿತು. ಕಂಗೆಟ್ಟಾಗ ಸಿವಾಜಿಯು ತನ್ನ ಮಗನನ್ನು ತಬ್ಬಿಕೊಂಡು ಕಂಬನಿಗಳನ್ನು ಸುರಿಸುತ್ತಿದ್ದನು. ಒಮ್ಮೊಮ್ಮೆ ಸ್ವಸ್ಥಚಿತ್ತ ನಾಗಿ ಶ್ರೀಭವಾನಿಯನ್ನು ಮರೆಹೊಕ್ಕು, ಅನನ್ಯಭಾವದಿಂದ ಆಕೆಯನ್ನು ಬೇಡಿಕೊಳ್ಳುತ್ತಿದ್ದನು. ಶ್ರೀಭವಾನಿಯ ಕೃಪೆಯಿಂದಲೋ ಅವನ ಮೇಲ್ಬು ದ್ಧಿಯಿಂದಲೋ ಒಂದು ದಿನ ಅವನಿಗೆ ಪಾರಾಗುವ ಒಂದು ಹಂಚಿಕೆಯು ಹೊಳೆಯಿತು. ಕೂಡಲೆ ಅವನ ಮುಖದ ಮೇಲೆ ಕಳೆಬಂದು ನಗೆಮೋರೆ ಯವನಾದನು. ಮರುದಿವಸದಿಂದ ಅವನು ಬೇನೆಯ ಸೋಗುಹಾಕಿ ಹಾಸಿಗೆಯ ಮೇಲೆ ಮಲಗಿಕೊಳ್ಳಲಾರಂಭಿಸಿದನು (೧ ಅಗಷ್ಟ). ದಿನಾಲು ನೂರಾರು ರೂಪಾಯಿಗಳ ಮೇವಾಮಿಟಾಯಿಗಳನ್ನು ತರಿಸಿ ಶ್ರೀಭವಾನಿಗೆ ನೈವೇದ್ಯತೋರಿಸಿ, ದೊಡ್ಡ ದೊಡ್ಡ ಬಿದರಿನ ಜಲ್ಲಿಗಳಲ್ಲಿ ತುಂಬಿ, ಆ ಜಲ್ಲಿ ಗಳನ್ನು ದೊಡ್ಡ ಹಗ್ಗದಿಂದ ಕಟ್ಟಿ ಆ ಹಗ್ಗಗಳ ತುದಿಗಳನ್ನು ಒಂದು

ಕೋಲಿಗೆ ಸಿಕ್ಕಿಹಾಕಿ, ಎರಡೆರಡು ಆಳುಗಳು ಒಂದೊಂದು ಜಲ್ಲಿಯನ್ನು ಹೊತ್ತುಕೊಂಡು ಹೋಗಿ, ಫಕೀರರಿಗೂ ಬ್ರಾಹ್ಮಣರಿಗೂ ಸರದಾರರಿಗೂ ಆ ಮಿಟಾಯಿಗಳನ್ನು ಹಂಚಿ ಬರಲಾರಂಭಿಸಿದರು. ೭/೮ ದಿವಸಗಳ ವರೆಗೆ ಕಾವಲುಗಾರರು ಜಲ್ಲಿಗಳನ್ನು ಪರೀಕ್ಷಿಸಿ, ಅವುಗಳಲ್ಲಿ ಮಿಟಾಯಿಯ ಹೊರತು ಬೇರೆ ಏನೂ ಇರುವುದಿಲ್ಲೆಂದು ಮನಗಂಡು, ಮುಂದೆ ಅವು ಗಳನ್ನು ನೋಡದೆ ಬಿಡತೊಡಗಿದರು. ಇದೇ ಸುಸಂಧಿಯೆಂದೆಣಿಸಿ, ಸಿವಾ ಜಿಯು ತನ್ನ ಜತೆಗಾರರನ್ನು ಒಬ್ಬರ ಹಿಂದೆ ಮತ್ತೊಬ್ಬರಾಗಿ ಊರು ಹೊರಗೆ ಗೊತ್ತುಮಾಡಿದ ಸ್ಥಳಕ್ಕೆ ಕಳುಹಿಬಿಟ್ಟನು. ಬಳಿಕ ಒಂದು ದಿನ ಮೂರುಸಂಜೆಯಲ್ಲಿ ಜಾಣನಾದ ಸಿವಾಜಿಯು ತಾನು ಬಹಳ ಅಸ್ವಸ್ಥನಾದುದರಿಂದ ಯಾರೂ ಒಳಗೆ ಬಂದು ತನಗೆ ತೊಂದರೆಕೊಡ ಬಾರದೆಂದು ಕಾವಲುಗಾರರಿಗೆ ಹೇಳಿಕೊಂಡು, ತನ್ನ ಮಂಚದ ಮೇಲೆ ತನ್ನಷ್ಟೇ ನಿಲುವುಳ್ಳ ಹಿರಾಜಿ ಫರ್ಜಂದ ನೆಂಬವನನ್ನು ಮಲ ಗಿಸಿ, ಅವನ ಬಲಗಯ್ಯಲ್ಲಿ ತನ್ನ ಚಿನ್ನದ ಖಡೆಯನ್ನು ಹಾಕಿ, ಆ ಮುಂಗೈಯನ್ನು ಮಾತ್ರ ಹೊರಗೆ ಕಾಣಿಸುವಂತೆ ಬಿಟ್ಟು, ತುಂಬಾ ಮುಸುಕು ಹಾಕಿ, ತಾನೂ ತನ್ನ ಮಗನೂ ಒಂದೊಂದು ಜಲ್ಲಿಯಲ್ಲಿ ಕುಳಿತು, ಆ ಜಲ್ಲಿಗಳ ಹಿಂದಕ್ಕೂ ಮುಂದಕ್ಕೂ ಒಂದೊಂದು ಮಿಟಾಯಿಯ ಜಲ್ಲಿಯನ್ನು ಒಯ್ಯುವಂತೆ ಏರ್ಪಾಡುಮಾಡಿ, ಕಾವಲುಗಾರರ ಸಂಶ ಯಕ್ಕೆ ಈಡಾಗದೆ ಸುರಕ್ಷಿತವಾಗಿ ನಿಯಮಿಸಿದ ಎಡೆಗೆ ಹೋದನು (೧೯ ಅಗಸ್ಟ ೧೬೬೬). ಅಲ್ಲಿಂದ ಸಿವಾಜಿ ಸಂಬಾಜಿಯರು ಆಗ್ರಾದಿಂದ ೬ ಮೈಲು ದೂರಿರುವ ಒಂದು ಹಳ್ಳಿಗೆ ನಡೆದು ಹೋದರು. ಅಲ್ಲಿ ಸಿವಾ ಜಿಯ ನ್ಯಾಯಾಧೀಶನಾದ ನೀರಾಜಿರಾವಜಿಯು ಕುದುರೆಗಳನ್ನು ಸಿದ್ಧ ಮಾಡಿಕೊಂಡು, ಅವನ ದಾರಿಯನ್ನು ನೋಡುತ್ತ ಕುಳಿತಿದ್ದನು. ಅವನು ಮಗನೊಡನೆ ಪಾರಾಗಿ ಬಂದುದನ್ನು ಕಂಡು, ಅಲ್ಲಿದ್ದ ಅವನ ಜತೆಗಾರ ರಿಗೆ ಅತ್ಯಾನಂದವಾಯಿತು. ಆದರೆ ಬಾದಶಹನ ರಾಹುತರು ಯಾವಾಗ ಬೆನ್ನಟ್ಟಿ ಬರುತ್ತಾರೋ ಎಂಬ ಹೆದರಿಕೆಯು ಅವರೆಲ್ಲರ ಮನಸ್ಸಿನಲ್ಲಿ ಕಟೆ ಯುತ್ತಿದ್ದುದರಿಂದ ಅವರಿಗೆ ಹೆಚ್ಚು ಮಾತಾಡಲಿಕ್ಕೆ ಕೂಡ, ಬಿಡುವು ದೊರೆ ಯಲಿಲ್ಲ. ಸಿವಾಜಿ ಸಂಬಾಜಿಯವರೂ ನೀರಾಜಿರಾವಜಿಯೂ ದತ್ತಾತ್ರ

ಯ ತ್ರಿಯಂಬಕನೂ ರಾಘೋ ಮಿತ್ರನೂ ಮೈಯ್ಯೆಲ್ಲ ಬೂದಿಬಡಿಕೊಂಡು, ಫಕೀರರ ವೇಷತೊಟ್ಟು, ಮಥುರೆಯ ದಾರಿಯನ್ನು ಹಿಡಿದರು; ಉಳಿದ ವರೆಲ್ಲ ತಮ್ಮ ಮನೆಯ ದಾರಿಯನ್ನು ಹಿಡಿದರು.

ಅತ್ತ ಸಿವಾಜಿಯು ಮಟಾಮಾಯನಾದನೆಂದು ಗೊತ್ತಾದಕೂಡಲೆ, ರಾಜಧಾನಿಯಲ್ಲಿ ದೊಡ್ಡ ಗೊಂದಲವೆದ್ದಿತು. ಅವನು ತಪ್ಪಿಸಿಕೊಂಡು ಹೋದ ದಿವಸ ರಾತ್ರಿಯೂ ಮರುದಿವಸ ಬೆಳಗಿನಲ್ಲಿಯೂ ಕಾವಲುಗಾರರು ಬಂದು ಹಣಕಿಹಾಕಿ, ಸಿವಾಜಿಯು ಖಡೆಯಿದ್ದ ಮುಂಗಯ್ಯನ್ನೂ ಕಾಲ್ಬಿಸೆಗೆ ಒಬ್ಬ ಹುಡುಗನು ಕಾಲೊತ್ತುತ್ತ ಕುಳಿತುದನ್ನೂ ನೋಡಿ, ಅವನು ಜಡ್ಡಿನಿಂದ ಮಲಗಿರುತ್ತಾನೆಂದೆಣಿಸಿ, ಮನಸ್ಸಿನ ಸಮಾಧಾನ ಮಾಡಿಕೊಂಡು ಹೋದರು. ಹಗಲು ೯ ತಾಸಿನ ಸುಮಾರಕ್ಕೆ ಹಿರಾಜಿಯು ಎದ್ದು ತನ್ನ ಆಳಿನೊಡನೆ ಹೊರಗೆ ಹೋಗುವಾಗ ಕಾವಲುಗಾರರಿಗೆ "ಸದ್ದು ಮಾಡಬೇಡಿರಿ. ಸಿವಾಜಿಗೆ ನಿದ್ದೆ ಬರುವ ಮದ್ದನ್ನು ಕೊಟ್ಟಿರುತ್ತಾರೆ" ಎಂದು ಎಚ್ಚರಗೊಟ್ಟು ಹೊರಟುಹೋದನು. ಮುಂದೆ ಕೆಲಹೊತ್ತು ಹೋದಬಳಿಕ ಮನೆಯೊಳಗೆ ಏನೂ ಸದ್ದಿಲ್ಲದುದನ್ನೂ ದಿನದಂತೆ ಜನರು ಹೋಗಿಬರುವುದು ಕಟ್ಟಾದ್ದನ್ನೂ ಜನರ ಸುಳಿದಾಟವು ನಿಂತುಹೋದ್ದನ್ನೂ ಕಂಡು ಕಾವಲಿನವರಿಗೆ ಸಂಶಯವು ಬಂದು, ಒಳಗೆಹೋಗಿ ನೋಡುತ್ತಾರೆ, ಹಾಸಿಗೆಯು ಬರಿದಾಗಿತ್ತು ಮತ್ತು ಕಾಲೊತ್ತುವ ಹುಡುಗನೂ ಇದ್ದಿಲ್ಲ!! ಅದನ್ನು ನೋಡಿ ಅವರು ದಿಗಿಲುಗೊಂಡರು; ಎದೆ ಒಡೆದು ನೀರಾಯಿತು! ಮುಂದೆ ತಮ್ಮ ಹಾಡು ಏನಾಗುವುದೋ ಎಂದು ಬೆದರಿ ಬೆಂಡಾದರು. ಹಾಗೂ ಹೀಗೂ ಧೈರ್ಯಮಾಡಿಕೊಂಡು, ತಮ್ಮ ದಳವಾಯಿಯಾದ ಫುಲಾದಖಾನನ ಬಳಿಗೆ ಹೋಗಿ, ನಡೆದ ಸಂಗತಿಯನ್ನು ತಿಳಿಸಿದರು. ಅವರು ಹೇಳಿದ್ದನ್ನು ಕೇಳಿ ಅವನು ಬೆಚ್ಚಿಬೆರಗಾದನು. ಸಿವಾಜಿಯು ತಪ್ಪಿಸಿಕೊಂಡು ಹೋದ ಪ್ರಕಾರದ ಕಲ್ಪನೆಯು ಕೂಡ ಅವನ ಬಗೆಯಲ್ಲಿ ಬರಲಿಲ್ಲ. ಆದ್ದರಿಂದ ಸಿವಾಜಿಯು ತನ್ನ ಮಾಟಗಾರಿಕೆಯಿಂದಲೇ ಮಾಯವಾದನೆಂದು ನೆರೆನಂಬಿ, ಎಡಗಯ್ಯಲ್ಲಿ ಜೀವಹಿಡಿದುಕೊಂಡು ಬಾದಶಹನ ಸನ್ನಿಧಿಗೆ ಕತ್ತಲಾದ ಬಳಿಕ ಹೋಗಿ, ಅವನ ಮುಂದೆ ಅಡ್ಡಬಿದ್ದನು.

ಬಾದಶಹ—ಫುಲಾದಖಾನ, ಸಿವಾಜಿಯು ಮೇಲಿಟ್ಟ ಪಹರೆಯ ಬಂದೋಬಸ್ತು ಚೆನ್ನಾಗಿದೆಯೋ?

ಫುಲಾದಖಾನ—ಖುದಾವಂದ, ಹಗಲಿರಳು ನಿದ್ದೆ ನೀರಡಿಕೆಯನ್ನು ತೊರೆದು ಬಲೆಚ್ಚರದಿಂದ ಕಣ್ಣೊಳಗೆ ಎಣ್ಣೆಹಾಕಿಕೊಂಡುಕಾಯುತ್ತಿದ್ದರೂ ಆ ಸೈತಾನನು ಒಂದು ತಾಸಿನಲ್ಲೇ ಮಟಾಮಾಯವಾದನು. ನಡುಹಗಲು ಅವನು ಮಂಚದ ಮೇಲೆ ಮಲಗಿದ್ದನ್ನು ನಾನೇ ಕಣ್ಣಾರೆ ನೋಡಿ ಊಟ ಕ್ಕೋಸ್ಕರ ಮನೆಗೆ ಬಂದೆನು. ಊಟತೀರಿಸಿಕೊಂಡು ತಿರುಗಿ ಹೋಗು ವುದರೊಳಗೇ ಅವನು ಇಲ್ಲದಂತಾದನೆಂದು ಸುದ್ದಿಬಂತು.

ಬಾ—ಏನು? ಸಿವಾಜಿ ಓಡಿಹೋದನೇ? ಘಾತವಾಯಿತು!!! ನೀನು ಊಟಕ್ಕೆ ಬಂದೀದಿ, ಕಾವಲುಗಾರರು ಮಲಗಿಕೊಂಡಾರ. ಅದೇ ಸಂಧಿಯನ್ನು ಸಾಧಿಸಿ ಸಿವಾಜಿ ಓಡಿಹೋಗಿಯಾನೆ!! ಪಹರೆ ಚೆನ್ನಾಗಿ ಮಾಡಿದಿರಿ. ನಿಮಗೆ ಸಂಬಳ ಕೊಡುವುದು ದಂಡ.

ಫು—ಸರಕಾರ, ಕ್ಷಮಿಸಿರಿ, ಕಾವಲುಗಾರರು ಕಣ್ಣಿಗೆ ಕಣ್ಣು ಹಚ್ಚಿಲ್ಲ. ಅವರು ಎಚ್ಚರದಿಂದ ಪಹರೆ ಮಾಡುತ್ತಿದ್ದರೆಂದು ನಾನು ಕುರಾಣದ ಮೇಲೆ ಶಪಥಮಾಡಿ ಹೇಳುತ್ತೇನೆ. ಒಂಬತ್ತು ತಾಸಿನ ಸುಮಾರಕ್ಕೆ ಸಿವಾಜಿಯ ಇಬ್ಬರು ಆಳುಗಳು "ಸಿವಾಜಿಯು ನಿದ್ದೆ ಹತ್ತಿ ಮಲಗಿರು ತ್ತಾನೆ; ನಾವು ಪೇಟೆಗೆ ಹೋಗಿ ಬರುತ್ತೇವೆ; ಜೋಕೆ" ಎಂದು ಹೇಳಿ ಹೋದರಂತೆ. ಮುಂದೆ ಒಂದು ತಾಸಿನ ಮೇಲೆ ಹೋಗಿ ನೋಡಲು ಮಂಚವು ಬರಿದಾಗಿತ್ತು. ಅವನು ಹಕ್ಕಿಯಾಗಿ ಹಾರಿ ಹೋಗಿರಬಹುದು ಅಥವಾ ನೆಲದಲ್ಲಿ ಅಡಗಿಕೊಂಡಿರಬಹುದು. ಅವನು ದೊಡ್ಡ ಮಾಟ ಗಾರನೆಂದು ಹೆಸರುವಾಸಿಯಾಗಿರುತ್ತಾನೆ.

ಬಾ.—ಹುಚ್ಚುಚ್ಚು ಬಡಿಯಬೇಡ. ಮನುಷ್ಯರು ಎಂದಾದರೂ ಹಕ್ಕಿಯಾಗಬಹುದೇ?

ಫು.—ಅವನು ದೊಡ್ಡ ಜಾದುಗಾರನಾಗಿರುತ್ತಾನೆಂದು ಎಲ್ಲರು ಹೇಳುತ್ತಾರೆ. ಹಾಗಿಲ್ಲದಿದ್ದರೆ ಅವನು ಖಾನಸಾಹೇಬರು ಮಲಗಿದ

ಕೋಣೆಯನ್ನು ಹೊಕ್ಕು ಅವರ ಬೆರಳುಗಳನ್ನು ಕೊಯ್ದು ೨೦,೦೦೦ ದಂಡಿನೊಳಗಿಂದ ಪಾರಾಗಿ ಹೋಗಬಹುದೇ? ಅವನು **ಬಡಾ** ಜಾದುಗಾರ!!

ಬಾ.—ಬಸ್, ಸಾಕು ನಿನ್ನ ಹಾಳುಹರಟೆ. ನೀನು ಬೇಖೂಬನಿದ್ದಿ. ನಿನ್ನ ದುರ್ಲಕ್ಷತೆಯಿಂದಲೇ ಸಿವಾಜಿಯು ಓಡಿಹೋದನು. ಅವನು ಎಲ್ಲಿಯಾದರೂ ಈ ಪಟ್ಟಣದಲ್ಲೇ ಅಡಗಿಕೊಂಡಿರಬಹುದು. ವಿಪ್ರಪ್ರಯತ್ನ ಮಾಡಿ ಅವನನ್ನು ಹುಡುಕಿ ಹಿಡಿತರಲಿಕ್ಕೇ ಬೇಕು. ಅವನನ್ನು ತರದಿದ್ದರೆ ನಿನ್ನ ಕುತ್ತಿಗೆಯು ನಿನ್ನ ಹೆಗಲಮೇಲೆ ಉಳಿಯಲಿಕ್ಕಿಲ್ಲ. ನಿಲ್ಲಬೇಡ, ನಡೆ, ನಮ್ಮ ದೊಡ್ಡ ದಳವಾಯಿಗೆ ಈಗಲೇ ಇಲ್ಲಿ ಬರಲಿಕ್ಕೆ ಹೇಳಿ ಹೋಗು.

ಫುಲಾದಖಾನನು ಅಳುಮೋರೆ ಮಾಡಿಕೊಂಡು ಹೊರಟು ಹೋದನು. ಮುಖ್ಯ ದಳವಾಯಿಯು ಬಂದ ಕೂಡಲೆ ಬಾದಶಹನು ಒಂಟೆಸ್ವಾರರನ್ನೂ ಕುದುರೆಸ್ವಾರರನ್ನೂ ವರ್‍ಹಾಡ ಖಾನದೇಶಗಳ ದಾರಿಯನ್ನು ಹಿಡಿದು ಹೋಗಿ, ಸಿವಾಜಿಯನ್ನೂ ಅವನ ಅನುಯಾಯಿಗಳನ್ನೂ ಹುಡುಕಿ ಹಿಡಿದುತರಬೇಕೆಂದು ಕಟ್ಟುಮಾಡಿ ಕಳುಹಿದನು. ಇಷ್ಟರಿಂದಲೇ ಬಾದಶಹನ ಮನಸ್ಸಿನ ಸಮಾಧಾನವಾಗಲಿಲ್ಲ. ಪಾತಾಳದೊಳಗಿದ್ದರೂ ಸಿವಾಜಿಯನ್ನು ಹುಡುಕಿ ತೆಗೆಯಬೇಕೆಂಬ ಲವಲವಿಕೆಯು ಅವನಲ್ಲಿ ಹುಟ್ಟಿದ್ದರಿಂದ ಬಾದಶಹನು ತನ್ನ ರಾಜ್ಯದ ಎಲ್ಲ ಸುಬೇದಾರರಿಗೆ ಸಿವಾಜಿಯನ್ನು ಹೇಗಾದರೂ ಮಾಡಿ ಗೊತ್ತು ಹಚ್ಚಿ, ತನ್ನ ಬಳಿಗೆ ಕಳಿಸಬೇಕೆಂದು ಒಟ್ಟುಹುಕುಮನ್ನು ಕಳುಹಿದ್ದಲ್ಲದೆ, ಹಿಡಿದು ಕೊಟ್ಟವರಿಗೆ ಇನಾಮು ದೊರೆಯುವುದೆಂದು ಸಾರಿದನು. ಆದ್ದರಿಂದ ಸಾಮ್ರಾಜ್ಯದ ಎಲ್ಲ ಭಾಗಗಳಲ್ಲಿ ಲಕ್ಷಾವಧಿ ಜನರು ನಮ್ಮ ಚರಿತ್ರನಾಯಕನ ಶೋಧದಲ್ಲಿ ತೊಡಗಿದರು.*

---

* ಕಯ್ಗೆ ಸಿಕ್ಕ ಕೆಲ ಮರಾಟ ಬ್ರಾಹ್ಮಣರನ್ನು ಹೊಡೆದು ಬಡಿದು, ರಾಮಸಿಂಗನ ಫಿತೂರಿಯಿಂದ ಸಿವಾಜಿಯು ತಪ್ಪಿಸಿಕೊಂಡನೆಂದು ಅವರಿಂದ ಹೇಳಿಸಿ, ಬಾದಶಹನು ಅವನ ಮನಸಬ್ದಾರಿಯನ್ನು ಕಸಿಕೊಂಡು ಅವನನ್ನು ಮನೆಗೆ ಕಳುಹಿದನು!!!

ಅವರಂಗಜೀಬ ಬಾದಶಹನು ಅತಿಜಾಗರೂಕನೆಂದು ಹೆಸರುವಾಸಿಯಾಗಿದ್ದನು. ಆದರೆ ನಮ್ಮ ಚರಿತ್ರನಾಯಕನು ಅವನಿಗಿಂತ ಹೆಚ್ಚು ಜಾಗರೂಕನಾದ್ದರಿಂದ ಅವನ ಹಿಡಿತಕ್ಕೆ ಸಿಕ್ಕುಬೀಳದೆ, ನುಣಚಿ ಪಾರಾದನು. ತಾನು ತನ್ನ ದೇಶದ ದಾರಿಯನ್ನು ಹಿಡಿದರೆ, ಬಾದಶಹನು ತನ್ನನ್ನು ಬೆನ್ನಟ್ಟಲಿಕ್ಕೆ ಕಳುಹಿದವರ ಕಯ್ಯಲ್ಲಿ ತಾನು ಸಿಕ್ಕಬಹುದೆಂದು ಮುಂಬಗೆದು, ಆ ದಾರಿಯನ್ನು ಬಿಟ್ಟು, ಮಥುರೆಯ ಹಾದಿಯನ್ನು ಹಿಡಿದಿದ್ದನು. ಇದಲ್ಲದೆ ಬಾದಶಹನು ಅವನನ್ನು ಹಿಡಿಯಲಿಕ್ಕೆ ಕಳುಹಿದ ಸ್ವಾರರಿಗಿಂತ ೨೪ ತಾಸು ಮೊದಲೇ ಆಗ್ರಾಪಟ್ಟಣವನ್ನು ಬಿಟ್ಟುದರಿಂದ ಅವನು ಅವರ ಕಯ್ಗೆ ಸಿಗುವ ಸಂಭವವು ತೀರ ಕಡಮೆಯಾಗಿತ್ತು. ಆ ಕಾಲಕ್ಕೆ ಸಿವಾಜಿಯು ಆಗ್ರಾದಿಂದ ೩೦-೪೦ ಮೈಲು ದೂರವಾಗಿದ್ದರೂ ಅವನ ಇಂದ್ರಜಾಲ-ಮಹೇಂದ್ರಜಾಲಕ್ಕೆ ಹೆದರಿಕೊಂಡಿದ್ದ ಬಾದಶಹನು, ಅವನು ರಾಜಧಾನಿಯಲ್ಲೇ ಎಲ್ಲಿಯಾದರೂ ಅಡಗಿಕೊಂಡಿದ್ದು ಇರಳಿನಲ್ಲಿ ತನ್ನ ಕೋಣೆಯೊಳಗೆ ಬರಬಹುದೆಂಬ ಅಂಜಿಕೆಯಿಂದ ಎರಡು ಮೂರು ವಾರ ಗಡದ್ದಾಗಿ ನಿದ್ದೆಮಾಡಲಿಲ್ಲ!!! ಅವನು ಹೋದಂದಿನಿಂದ ಒಂದು ತಿಂಗಳ ವರೆಗೆ ಅವನನ್ನು ಹುಡುಕುವ ಗದ್ದಲವೂ ಜನರನ್ನು ಸಂಶಯದಿಂದ ಹಿಡಿಯುವ ಗೊಂದಲವೂ ಹಬ್ಬಿದ್ದವು!!!

ಅತ್ತ ಸಿವಾಜಿಯು ಆಗ್ರಾಪಟ್ಟಣವನ್ನು ಬಿಟ್ಟ ೬ ತಾಸಿನಲ್ಲಿ ಮಥುರೆಗೆ ಹೋದನು. ಚಿಕ್ಕ ಹುಡುಗನಾದ ಶಂಭೂಜಿಯು ತೀರ ದಣಿದುದರಿಂದ ವಿಶ್ರಾಂತಿಗೋಸ್ಕರ ಒಂದು ದಿವಸ ಅಲ್ಲೇ ನಿಲ್ಲಬೇಕಾಯಿತು. ಸುದೈವದಿಂದ ಮೋರೊ ತ್ರಿಯಂಬಕ ಪೇಶವೆಯ ಭಾವಮೈದುನರಾದ ಕೃಷ್ಣಾಜಿ, ಕಾಶಿ, ವಿಸಾಜಿ ಎಂಬ ಮುವ್ವರು ಅಣ್ಣತಮ್ಮಂದಿರು ಅಲ್ಲಿ ವಾಸಮಾಡಿಕೊಂಡಿದ್ದರು. ಸೀರಾಜಿಗೆ ಅವರ ಗುರುತು ಇದ್ದುದರಿಂದ ಅವನು ಅವರಿಗೆ ಬೆಟ್ಟಿಯಾಗಿ, ಸಿವಾಜಿರಾಜನ ನಿಜಸ್ಥಿತಿಯನ್ನು ತಿಳಿಸಿದನು. ಆ ಸ್ವಾರ್ಥತ್ಯಾಗಿಗಳಾದ ಪ್ರಾಮಾಣಿಕ ದೇಶಾಭಿಮಾನಿಗಳು ಶಂಭೂಜಿಯನ್ನು ತಮ್ಮ ಬಳಿಯಲ್ಲಿ ಇಟ್ಟುಕೊಳ್ಳಲಿಕ್ಕೆ ಒಡಂಬಟ್ಟುದಲ್ಲದೆ, ತಮ್ಮೊಳಗೆ ಹಿರಿಯನಾದ ಕೃಷ್ಣಾಜಿಪಂತನನ್ನು ಸಿವಾಜಿಯೊಡನೆ ವಾರಣಾಸಿಯ

ವರೆಗೆ ಕಳುಹಿದರು. ಮಥುರೆಯಲ್ಲಿ ಸಿವಾಜಿಯು ಗಡ್ಡಮಿಾಸೆಗಳನ್ನು ಬೋಳಿಸಿಕೊಂಡು ಸನ್ಯಾಸಿಯ ವೇಷವನ್ನು ಧರಿಸಿದನು. ಅವನ ಸಂಗಡ ಲಿದ್ದ ೪೦/೫೦ ಜನರು ಉದಾಸಿಗೋಸಾವಿ ಬೈರಾಗಿಗಳ ಸೋಗನ್ನು ಹಾಕಿ, ಒಟ್ಟುಗೂಡಿದ್ದರೆ ಸರಕಾರದವರಿಗೆ ಸಂಶಯಬರಬಹುದೆಂಬ ಹೆದರಿಕೆ ಯಿಂದ ೩/೪ ಜನರದೊಂದೊಂದು ಗುಂಪುಮಾಡಿಕೊಂಡು, ಸಮಯ ಬಂದಾಗ ಒಬ್ಬರಿಗೊಬ್ಬರು ನೆರವಾಗುವಂತೆ ಹತ್ತತ್ತಿರದಲ್ಲೇ ಇರುತ್ತಿದ್ದರು. ನಮ್ಮ ಚರಿತ್ರನಾಯಕನಂತಹ ಮಹಾಪುರುಷನು ತಪ್ಪಿಸಿಕೊಂಡು ಓಡಿ ಹೋಗುವಾಗ ಸರಕಾರದವರಾಗಲಿ ಬೇರೆಯವರಾಗಲಿ ಅವನನ್ನು ಗುರು ತಿಸಿ ಹಿಡಿದುಕೊಟ್ಟು, ಬಾದಶಹನಿಂದ ಬಹುಮಾನವನ್ನು ಪಡೆಯ ಬೇಕೆಂದು ಹವಣಿಸುವವರು ಎಷ್ಟೋ ಜನರು ಇರುವುದು ಸ್ವಾಭಾವಿಕ ವಾದ ಮಾತೇ ಸರಿ. ಇಂತಹ ಕುತ್ತುಗಳು ಒದಗಿದಾಗ ನಮ್ಮ ಚರಿತ್ರ ನಾಯಕನು ಏನು ಹಂಚಿಕೆ ಮಾಡಿ ಪಾರಾದನೆಂಬುದನ್ನು ಇಲ್ಲಿ ವಿವರಿ ಸುತ್ತೇವೆ.

(೧) ಸಿವಾಜಿಯು ಮಥುರೆಯಿಂದ ಪ್ರಯಾಗಕ್ಕೆ ಹೋಗುವಾಗ ಅಲ್ಲಿ ಕುಲಿಖಾನನೆಂಬ ಫೌಜದಾರನಿಗೆ ಸಂಶಯಬಂದು ಅವನನ್ನು ತಡೆದು ವಿಚಾರಮಾಡತೊಡಗಿದನು. ಕೆಚ್ಚೆದೆಯವನಾದ ಸಿವಾಜಿಯು ರಾತ್ರಿ ಯಲ್ಲಿ ತಾನೊಬ್ಬನೇ ಹೋಗಿ ಫೌಜದಾರನನ್ನು ಕಂಡು, ತಾನು ಸಿವಾಜಿ ಎಂದು ತಿಳಿಸಿ ಒಂದು ಲಕ್ಷರೂಪಾಯಿ ಬೆಲೆ ಬಾಳುವ ಒಂದು ವಜ್ರವನ್ನೂ ಒಂದು ಮಾಣಿಕವನ್ನೂ ಅವನಿಗೆ ಲಂಚವಾಗಿ ಕೊಟ್ಟು ಬಿಡುಗಡೆ ಹೊಂದಿದನು.

(೨) ಪ್ರಯಾಗದಲ್ಲಿ ಗಂಗಾಯಮುನೆಯ ಸಂಗಮದಲ್ಲಿ ಜಳಕ ಮಾಡಿ ಸಿವಾಜಿಯು ವಾರಣಾಸಿಗೆ ಹೋದನು. ಅಲ್ಲಿ ಬೆಳಗು ಮುಂಜಾನೆ ಗಂಗಾಸ್ನಾನಕ್ಕೆ ಹೋಗಲು, ಸುರತದ ಬಾಬಾ ಎಂಬ ಒಬ್ಬ ಬ್ರಾಹ್ಮಣನು ಅವನ ಕಣ್ಣಿಗೆ ಬಿದ್ದನು. ಕೂಡಲೆ ಸಿವಾಜಿಯು ಅವನ ಬಳಿಗೆ ಹೋಗಿ ಅವನ ಕಯ್ಯಲ್ಲಿ ಒಂಬತ್ತು ರತ್ನಗಳನ್ನೂ ೯ ಅಸ್ರಾಪಿವರಹಗಳನ್ನೂ ೯ ಹೊನ್ನುಗಳನ್ನೂ ಇರಿಸಿ, ತೀರ್ಥವಿಧಿಯನ್ನು ಮಾಡಿಸಬೇಕೆಂದು ಬೇಡಿ ಕೊಂಡನು. ಕ್ಷೌರಮಾಡಿಸಿ ಸ್ನಾನದ ಮಂತ್ರಹೇಳಿ ಸಂಕಲ್ಪವನ್ನು

ಮಾಡಿಸುತ್ತಿರುವಾಗ ಆಗ್ರಾದಿಂದ ಸ್ವಾರರು ಬಂದುದರಿಂದ, ಸಿವಾಜಿಯನ್ನು ಹುಡುಕುವ ಗೊಂದಲವೆದ್ದಿತು. ಆಗ ಆ ಗುಜರಾತಿ ಬ್ರಾಹ್ಮಣನು ತನ್ನ ಮುಂದೆ ಕುಳಿತ ಯಜಮಾನನನ್ನು ದಿಟ್ಟಿಸಿ ನೋಡತೊಡಗಲು, ಚಾಣಾಕ್ಷನಾದ ಸಿವಾಜಿಯು ಅಲ್ಲಿಂದ ಚಟಕ್ಕನೆ ಎದ್ದು ಕಣ್ಮರೆಯಾದನು. ಅದೇ ದಿವಸ ಬಾಬಾನು ಕಾಶಿಯನ್ನು ಬಿಟ್ಟು ಸುರತಕ್ಕೆ ಹೋಗಿ ಸಿವಾಜಿಯು ಕೊಟ್ಟ ರತ್ನಗಳನ್ನು ಮಾರಿ ಒಂದು ದೊಡ್ಡ ಮನೆಯನ್ನು ಕಟ್ಟಿಸಿಕೊಂಡು ವೈದ್ಯಕಿಯಿಂದ ಜೀವನ ಮಾಡತೊಡಗಿದನು. *

(೩) ಕಾಶಿಯಿಂದ ತಪ್ಪಿಸಿಕೊಂಡು ಹೊರಟು ಸಿವಾಜಿಯು ಗಯೆಗೆ ಹೋಗಿ ಅಲ್ಲಿ ಗಯಾಶ್ರಾದ್ಧಮಾಡಿ ಪಿತೃಗಳಿಗೆ ಪಿಂಡಗಳನ್ನರ್ಪಿಸಿ, ಜಗನ್ನಾಥಪುರಿಯ ದಾರಿಯನ್ನು ಹಿಡಿದನು. ಹಾದಿಯಲ್ಲಿ ಒಂದು ಕುದುರೆಯನ್ನು ಕೊಂಡು ರೂಪಾಯಿಗಳು ಇಲ್ಲುದರಿಂದ ಕೆಲವು ವರಹಗಳನ್ನೇ ಕೊಟ್ಟನು. ಅಷ್ಟು ಬಹಳ ಹಣವನ್ನು ತನ್ನ ಸೊಟ್ಟಕುದುರೆಗೆ ಕೊಟ್ಟುದನ್ನು ನೋಡಿ ದಿಗಿಲುಗೊಂಡು, ಆ ಕುದುರೆಯವನು "ಈ ಸೊಟ್ಟಕುದುರೆಗೆ ಇಷ್ಟು ಹಣಕೊಡಬೇಕಾದರೆ ತಾವು ಸಿವಾಜಿ ಮಹಾರಾಜರೇ ಇರಲಿಕ್ಕೇ ಬೇಕು" ಎಂದು ಉಸರಿದನು. ಆ ಮಾತನ್ನು ಕೇಳಿ ಸಿವಾಜಿಯು ಹೆದರಿ, ಟಣ್ಣನೆ ಹಾರಿ ಕುದುರೆಯ ಮೇಲೆ ಕುಳಿತು, ವರಹ ತುಂಬಿದ ತನ್ನ ಚೀಲವನ್ನು ಕುದುರೆಯವನ ಮುಂದೆ ಒಗೆದು ಕುದುರೆಯನ್ನು ಓಡಿಸಿಕೊಂಡು ಹೋದನು.

(೪) ಜಗನ್ನಾಥಪುರಿಗೆ ಹೋದ ಬಳಿಕ ನಮ್ಮ ಚರಿತ್ರನಾಯಕನಿಗೆ ತುಸುವಿಶ್ರಾಂತಿ ದೊರೆಯಿತು. ಆದ್ದರಿಂದ ಅವನು ಭಕ್ತಿಪೂರ್ವಕವಾಗಿ ಒಡ್ಡಿ ಜಗನ್ನಾಥನನ್ನು ಪೂಜಿಸಿ, ಗೊಂಡವನ ಹೈದರಾಬಾದ ವಿಜಾಪುರ ಪ್ರಾಂತಗಳ ಮಾರ್ಗವಾಗಿ ರಾಯಗಡಕ್ಕೆ ನಡೆದನು. ಹಾದಿಯೊಳಗೆ ಇಂದೂರಿನ ಹತ್ತರ ಗೋದಾವರಿಯ ದಂಡೆಯಲ್ಲಿದ್ದ ಒಂದು ಹಳ್ಳಿಯಲ್ಲಿ

---

* ಮುಂದೆ ಕೆಲವು ವರ್ಷಗಳಾದ ಬಳಿಕ ಬಾಬಾನು ಕಾಫಿಖಾನನೆಂಬ ಇತಿಹಾಸಕಾರನಿಗೆ ಈ ಸಂಗತಿಯನ್ನು ಹೇಳಿದನಂತೆ. ಕಾಫಿಖಾನನ ಇತಿಹಾಸ, ಸಂಪುಟ ೨, ಪುಟ ೨೧೯-೨೨೦.

ಒಬ್ಬ ಒಕ್ಕಲಿಗನ ಮನೆಯಲ್ಲಿ ಇಳಿಕೊಂಡನು. ಆ ಒಕ್ಕಲಿಗನ ಮುಪ್ಪಿನ ತಾಯಿಯು ಅವನ ಮುಂದೆ ರಾಗಿಮುದ್ದಿಯನ್ನಿಟ್ಟು, ಹೇಳಿದ್ದೇನಂದರೆ:

ಸ್ವಾಮಿ, ಬಡವರ ಮನೆಗೆ ಭಾಗೀರಥೀದೇವಿಯು ಬಂದಂತೆ ತಾವು ಬಂದಿರುತ್ತೀರಿ. ತಮಗೆ ಮೃಷ್ಟಾನ್ನಭೋಜನ ಮಾಡಿಸಿ ಕೃತಕೃತ್ಯ ಳಾಗಬೇಕೆಂದು ನನ್ನ ಲವಲವಿಕೆ ಇತ್ತು. ಆದರೆ ಮಾಡುವುದೇನಿದೆ? ಆ ಚಂಡಾಳ ಸಿವಾಜಿಯ ದಂಡಿನವರು ಮೊನ್ನೆ ಬಂದು ಊರನ್ನು ಸುಲಿದು ನಮ್ಮ ಮನೆಯೊಳಗಿದ್ದ ಅರಿವೆಯಂಚಡಿ ಕಾಳುಕಡಿಗಳನ್ನೆಲ್ಲ ಬಳಿದುಕೊಂಡು ಹೋದರು. ಅವರ ಹೆಂಡಂದಿರು ರಂಡಿಗಳಾಗಲಿ; ಅವರ ವಂಶ ಉರಿಯಲಿ; ಅವರ ಮನೆ ಸಿಸಸ್ಮಿತಾನವಾಗಲಿ: ಸ್ವಾಮಿ, ಆ ಖೋಡಿ ಸಿವಾಜಿಯು ಎಲ್ಲಿರುವನು?

ಸಿವಾಜಿ.—ಅಮ್ಮಾ, ನಾನು ಬಡಸನ್ಯಾಸಿಯು; ತೀರ್ಥಾಟನ ಮಾಡುತ್ತ ಹೊರಟಿರುತ್ತೇನೆ. ತಾವು ಕೇಳುವ ಸಿವಾಜಿ ಯಾರೋ ನನಗೆ ಗೊತ್ತಿಲ್ಲ.

ಮುದಕಿ.—ತಮಗೆ ಸಿವಾಜಿ ಯಾರೆಂಬುದು ಗೊತ್ತಿಲ್ಲವೇ? ಅವ ನೊಬ್ಬ ದೊಡ್ಡ ಪುಂಡನು. ಅವನಿಗೆ ಶ್ರೀಭವಾನಿಯು ವರವನ್ನು ಕೊಟ್ಟಿರುತ್ತಾಳಂತೆ.

ಸಿವಾಜಿ.—ಜನರನ್ನು ಗೋಳಾಡಿಸಲಿಕ್ಕೆ ಜಗದಂಬೆಯು ಅವನಿಗೆ ವರವನ್ನು ಕೊಟ್ಟಿರುತ್ತಾಳೇನು? ಹಾಗಿದ್ದರೂ ಇರಬಹುದು. ರಾವಣ ಭಸ್ಮಾಸುರಾದಿಗಳು ಈಶ್ವರನಿಂದ ವರಪಡೆದು ಜನರನ್ನು ಗೋಳಾಡಿಸ ಲಿಲ್ಲವೇ? ಅಮ್ಮಾ, ಆ ಸಿವಾಜಿ ಯಾರು?

ಮು.—ಅವನು ಶಹಾಜಿ ಭೋಸಲೆ ಎಂಬ ಒಬ್ಬ ಪಾಳೆಯಗಾರನ ಮಗನು. ತಂದೆಯು ವಿಜಾಪುರದ ಅರಸನ ಊಳಿಗದಲ್ಲಿದ್ದರೂ ಮಗನು ಆ ಸರಕಾರದ ಜಹಗೀರದಾರನನ್ನು ಕೊಂದು ತನ್ನ ನಾಡನ್ನು ಬೆಳಿಸಿ ಕೊಂಡಿರುತ್ತಾನೆ. ಮೊನ್ನೆ ದಿಲ್ಲಿ ಬಾದಶಹನ ದಳವಾಯಿಯು ಅವನನ್ನು ಸದೆಬಡಿದು ಸೋಲಿಸಿದ್ದರಿಂದ ಅವನು ಬಾದಶಹನ ಬೆಟ್ಟಿಗೆ ದಿಲ್ಲಿಗೆ

ಹೋಗಿ ಅಲ್ಲಿಂದ ತಪ್ಪಿಸಿಕೊಂಡು ಓಡಿ ಹೋಗಿರುತ್ತಾನಂತೆ. ಆದ್ದರಿಂದ ಅವನನ್ನು ಎಲ್ಲಿಯಾದರೂ ಕಂಡಿರೋ ಹೇಗೆಂದು ತಮ್ಮನ್ನು ಕೇಳಿದೆನು.

ಸಿ.—ಅಮ್ಮಾ, ಬಾದಶಹನ ಬೆಟ್ಟಿಗೆ ಹೋದ ಸಿವಾಜಿಯು ತಪ್ಪಿಸಿಕೊಂಡು ಹೋಗಲಿಕ್ಕೆ ಕಾರಣವೇನು? ಅವನು ಬಾದಶಹನನ್ನು ಕಂಡು ತಿರುಗಿ ಬರಬಹುದು.

ಮು.—ದಿಲ್ಲಿ ಬಾದಶಹನು ಬಹಳ ಕೆಟ್ಟವನಂತೆ; ಹಿಂದುಗಳ ಕಡು ಹಗೆಯಂತೆ; ಸಿವಾಜಿಯನ್ನು ಸವಿಮಾತಿನಿಂದ ಕರೆಯಿಸಿಕೊಂಡು ವಿಶ್ವಾಸ ಘಾತದಿಂದ ಸೆರೆಯಲ್ಲಿಟ್ಟನಂತೆ; ಮತ್ತು ಭವಾನಿಯ ಅನುಗ್ರಹವುಳ್ಳ ಸಿವಾಜಿಯು ಕಾವಲುಗಾರರು ನೋಡುನೋಡುತ್ತ ಒಮ್ಮಿಂದೊಮ್ಮೆ ಮಟಾಮಾಯ ಆದನಂತೆ.

ಸಿ.—ಅಮ್ಮಾ, ಆ ಸಿವಾಜಿಗೆ ಜಾದುಗಿರಿ ಬರುತ್ತದೇನು?

ಮು.—ಇಲ್ಲ, ಸ್ವಾಮಿ, ಇಲ್ಲ. ಅವನು ಬಲುಕೆಚ್ಚೆದೆಯವನೂ, ಜಾಣನೂ, ದೇವರು ಬ್ರಾಹ್ಮಣರಲ್ಲಿ ಭಕ್ತಿವಿಶ್ವಾಸವುಳ್ಳವನೂ ಬಡವರನ್ನು ಕಾಪಾಡುವವನೂ ಆಗಿರುತ್ತಾನೆ. ಅವನು ಭವಾನಿಯ ಉಪಾಸಕನು. ಆ ದೇವಿಯ ಪರಮಭಕ್ತನು.

ಸಿ.—ಏನಮ್ಮಾ? ನಿನ್ನ ಮಾತಿನ ಅಭಿಪ್ರಾಯವೇ ನನಗೆ ಆಗಲೊಲ್ಲದಲ್ಲ!! ಸಿವಾಜಿಯು ಬಹಳ ಕೆಟ್ಟವನೂ ಜನರನ್ನು ನೋಯಿಸುವವನೂ ಎಂದು ಒಮ್ಮೆ ಹೇಳುತ್ತಿ; ಮತ್ತೊಮ್ಮೆ ಅವನು ಧರ್ಮಿಷ್ಟನೂ, ದರಿದ್ರರಕ್ಷಕನೂ ಇರುತ್ತಾನೆಂದು ಬಣ್ಣಿಸುತ್ತಿ. ಇವುಗಳೊಳಗೆ ದಿಟವಾವುದು? ಧರ್ಮಿಷ್ಟನಾದವನಿಗೆ ಜನರನ್ನು ಗೋಳಾಡಿಸುವುದು ಪಾಪವೆಂದು ಗೊತ್ತಿರಬೇಕು.* ನಿಮ್ಮಂತಹ ಬಡಸಾತ್ವಿಕರನ್ನು ಪೀಡಿಸುವವನು ದೇವರು ಬ್ರಾಹ್ಮಣರಲ್ಲಿ ವಿಶ್ವಾಸವಿಟ್ಟು ಫಲವೇನು? ನಿಮ್ಮಂತಹ ಬಡಬಗ್ಗರನ್ನು ಆಳಿಕಿಸುವವನು ಧರ್ಮಿಷ್ಟನೋ? ಅಂತಹವನನ್ನು ಬಾದಶಹನು

* ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಮ್ ಗ್ರಂಥಕೋಟಿಭಿಃ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್ ॥

ಸೆರೆಹಿಡಿದರೆ ಏನು ಅನ್ಯಾಯವಾಯಿತು? ಅವನು ತನ್ನ ದುಷ್ಟತನದ ಫಲವನ್ನನುಭವಿಸಲಿ. ನಾವು ಅವನ ವಿಷಯವಾಗಿ ಕನಿಕರಬಡುವುದೇಕೆ?

ಮುದಕಿ.—ಸ್ವಾಮಿ, ಕ್ಷಮಿಸಿರಿ. ನಾನು ಹೆಂಗಸು ಅಬಲೆ. ತಮಗೆ ಹೇಳುವುದರಲ್ಲಿ ಎಬಡತಬಡಾಯಿತು. ಸಿವಾಜಿಯು ಒಳ್ಳೆಯವನು. ಅವನ ದಂಡಿನ ಮೂಳಗಳೇ ಅಲ್ಲದ ಸಲ್ಲದ ಕೆಲಸ ಮಾಡುವವರು; ಜನರನ್ನು ಹಿಂಸಿಸುವವರು. ಸಿವಾಜಿಯು ಬಡವರ ಬೆನ್ನುಗಟ್ಟುವವನೆಂತಲೂ ಪರರ ಹೆಂಗಸರನ್ನು ತಾಯಿಯಂತೆ ಮನ್ನಿಸುವವನೆಂತಲೂ ತಾಯಿತಂದೆಗಳಲ್ಲಿ ಭಕ್ತಿ ವಿಶ್ವಾಸವುಳ್ಳವನೆಂತಲೂ ಹಗೆಗಳಿಗೆ ಕಲ್ಲೆದೆಯವನೆಂತಲೂ ಹೆಸರುವಾಸಿಯಾಗಿರುತ್ತಾನೆ. ಪಾಪ, ಅವನನ್ನು ಹಳಿಯಲಾರೆನು. ಅವನನ್ನು ಪುರಡಿಸಿದರೆ ನನ್ನ ಬಾಯಲ್ಲಿ ಹುಳಬೀಳಬಹುದು. ನಾನು ಆ ಪಾಪಕ್ಕೆ ಗುರಿಯಾಗಲಾರೆನು. ಅವನ ವಿಷಯವಾಗಿ ನನ್ನ ಬಾಯಿಂದ ಕೆಡಕು ಶಬ್ದ ಹೊರಟಿದ್ದರೆ, ಅದು ನನ್ನ ನಾಲಿಗೆ ತಪ್ಪೆಂದು ಎಣಿಸಿ, ನನ್ನನ್ನು ಕ್ಷಮಿಸಿ, ಅವನನ್ನು ಹರಿಸರಿ.

ಸಿವಾಜಿ.—ನಾರಾಯಣ, ನಾರಾಯಣ, ನಾರಾಯಣ, ಜಯ ಜಗದಂಬೆ, ಜಯಭವಾನಿ !!!

(೫) ಬೆಳಿಗ್ಗೆ ಬೆಳ್ಳಿ (ಶುಕ್ರ) ಮೂಡಿದಕೂಡಲೆ ಸಿವಾಜಿಸೀರಾಜಿಯರು ಮುದಕಿಯ ಮನೆಯನ್ನು ಬಿಟ್ಟು, ಮುಂದಕ್ಕೆ ಸಾಗಿ ಒಂದುದಿನ ಮೂರುಸಂಜೆಯ ಹೊತ್ತಿಗೆ ರಾಜಗಡದ ಅರಮನೆಯ ಬಾಗಿಲಮುಂದೆ ನಿಂತು, ಮಹಾಮಾತುಶ್ರೀಯವರಾದ ಜೀಜಿಬಾಯಿಯವರಿಗೆ ಇಬ್ಬರು ಸನ್ಯಾಸಿಗಳು ಬಂದಿರುತ್ತಾರೆಂದು ತಿಳಿಸಲಿಕ್ಕೆ ಕಾವಲುಗಾರರಿಗೆ ಹೇಳಿದರು. ಆಕೆಯು ಅವರನ್ನು ಒಳಗೆ ಬರಗೊಡಬೇಕೆಂದು ಅಪ್ಪಣೆ ಕೊಡಲು, ಅವರು ಒಳಗೆ ಹಿಗ್ಗಿನಿಂದ ನುಗ್ಗಿದರು. ಅವರು ಪಡಸಾಲೆಯಲ್ಲಿ ಬಂದಕೂಡಲೆ ಜೀಜಿಬಾಯಿಯು ಎದ್ದು ಅವರನ್ನು ನಮಸ್ಕರಿಸಿ ಅವರ ಉದ್ದಿಶ್ಯವಾಗಿರಿಸಿದ ಪೀಠಗಳನ್ನಲಂಕರಿಸಬೇಕೆಂದು ಬಿನ್ನವಿಸಿದಳು. ಸೀರಾಜಿಯು ಆಕೆಯನ್ನು ಆಶೀರ್ವದಿಸಿ ಒಂದು ಆಸನದಮೇಲೆ ಕುಳಿತುಕೊಂಡನು. ಸಿವಾಜಿಯು ತನ್ನತಾಯಿ ನಿಂತಲ್ಲಿಗೆ ಹೋಗಿ ಆಕೆಯ ಕಾಲಿಗೆ ಬಿದ್ದನು.

ಜೀಜಿಬಾಯಿ.—ಸ್ವಾಮಿ, ಇದೇನು ಅನ್ಯಾಯ. ತಾವು ನನ್ನಂತಹ ಪಾಪಿಷ್ಟಳಿಗೆ ಪೊಡಮಡಿಯಬಹುದೇ? ಎಂದುಸರಿ ಅಡಬಡಿಸಿ ಹಿಂದಕ್ಕೆ ಸರಿದು ತನ್ನ ಸ್ಥಳದಲ್ಲಿ ಹೋಗಿ ಕುಳಿತಳು. ಸಿವಾಜಿಯು ಆಕೆ ಕುಳಿತಲ್ಲಿಗೆ ಹೋಗಿ ಆಕೆಯ ತೊಡೆಯಮೇಲೆ ತನ್ನ ತಲೆಯನ್ನಿಟ್ಟು ಮಲಗಿ ಕೊಂಡನು. ಜೀಜಿಬಾಯಿಯು ದಿಗಿಲುಗೊಂಡು ಹುಳುಹುಳು ಅವನ ಮೋರೆಯನ್ನು ಎಷ್ಟು ನೋಡಿದರೂ ಅವನ ಗುರುತು ಹತ್ತಲಿಲ್ಲ.

ಸಿವಾಜಿ.—ಅಮ್ಮಾ, ನನ್ನಗೊತ್ತು ಹತ್ತಲೊಲ್ಲದೇನು?

ಜೀಜಿ.—(ದಿಗಿಲುಬಿದ್ದು, ನಿಟ್ಟಿಸಿ ಅವನನ್ನು ನೋಡಿ, ತಲೆಯ ಮೇಲೆ ಕಯ್ಯಾಡಿಸಿ, ಒಂದು ಕಲೆಯಿಂದ ಅವನು ತನ್ನ ಮಗನೆಂದು ಗುರುತಿಸಿ), "ಅಯ್, ಸಿವಬಾ, ಎತ್ತಾಗಿದೆಯೋ ಅಪ್ಪ, ನಿನ್ನ ಗುರುತೇ ಹತ್ತಲಿಲ್ಲ. ಹಗಲಿರಳು ನೀನು ಯಾವಾಗ ಸುರಕ್ಷಿತವಾಗಿ ತಿರುಗಿ ಬರುತ್ತೀಯೊ ಎಂದು ಉಮ್ಮಳಿಸುತ್ತಿದ್ದೆನು. ದೇವತಾನುಗ್ರಹದಿಂದ ನೀನು ಎಲ್ಲ ಸಂಕಟಗಳಿಂದ ಪಾರಾಗಿ ಬಂದೆ. ಶ್ರೀ ಭವಾನಿಗೆ ಜಯವಾಗಲಿ" ಎಂದು ಆನಂದಾಶ್ರುಗಳನ್ನು ಸುರಿಸುತ್ತಾಳೆ.

ಸಿ.—ಅಮ್ಮಾ, ನಿನ್ನ ಆಶೀರ್ವಾದದಿಂದಲೂ ಶ್ರೀ ಭವಾನಿಯ ಕೃಪೆಯಿಂದಲೂ ನಾನು ಈ ಕುತ್ತಿನಿಂದ ಪಾರಾಗಿಬಂದು ನಿನ್ನಡಿಗೆರಗಿದೆನು. ಸಾಯಂಕಾಲಕ್ಕೆ ಶ್ರೀ ಭವಾನಿಗೆ ಅಮೃತಾಭಿಷೇಕವನ್ನೂ ಪಲ್ಲಕ್ಕಿಯ ಸೇವೆಯನ್ನೂ ಮಾಡಿಸು. ನಡೆ, ಗುಡಿಗೆ ಹೋಗೋಣ.

ಜೀ.—ಸಿವಬಾ, ತುಸು ತಾಳು. ಸ್ನಾನಮಾಡಿ ಬೇರೆ ವಸ್ತ್ರಗಳನ್ನು ಹಾಕಿಕೊ, ಬಳಿಕ ಗುಡಿಗೆ ಹೋಗೋಣ. ಬಾಳಾ, ಶಂಭು ಎಲ್ಲಿದ್ದಾನೆ.

ಸಿ.—ಶಂಭು ಇಲ್ಲ. ಹಿಂದಿನಿಂದ ಎಲ್ಲ ಹೇಳುವೆನು. ಈಗ ಅವನ ವಿಷಯವಾಗಿ ಏನೂ ಕೇಳಬೇಡ. ನನಗೊಬ್ಬನಿಗೆ ಬರಬೇಕಾದರೆ ಮುಸ್ತು ಆಯಿತು.

ತಾಯಿ ಮಗ ಇಬ್ಬರು ಕಯ್ಗೆ ಕೈಹಿಡಿಕೊಂಡು ಒಳಗೆ ಹೋದರು. ಸೀರಾಜಿಯು ಬೀಳ್ಕೊಂಡು ಮನೆಗೆ ತೆರಳಿದನು. ಮರುದಿವಸ ಸಿವಾಜಿಯು

ತನ್ನ ತಾಯಿಗೂ ಹೆಂಡತಿಗೂ ಶಂಭೂಜಿಯು ಒಂದು ಗುಪ್ತಸ್ಥಾನದಲ್ಲಿ ಸುಖರೂಪವಾಗಿರುತ್ತಾನೆಂದರುಹಿ ಸಂತೈಸಿ, ರಾಜಕಾರಣದ ನಿಮಿತ್ತವಾಗಿ ಅವನು ಸತ್ತನೆಂದು ಸುಳ್ಳುಸುದ್ದಿಯನ್ನು ಹುಟ್ಟಿಸಿ, ತಾನು ವ್ಯಸನಾಕ್ರಾಂತನಾದಂತೆ ಕೆಲದಿವಸ ನಟಿಸಿದನು. ಸಿವಾಜಿಯು ತಿರುಗಿಬಂದ ಸುದ್ದಿಯೂ ಶಂಭುಜಿಯು ಮಡಿದ ಸುದ್ದಿಯೂ ಏಕಕಾಲಕ್ಕೆ ಅವನ ರಾಜ್ಯದಲ್ಲೆಲ್ಲ ಹರಡಿದ್ದರಿಂದ ಸಂತೋಷಸೂಚಕವಾದ ಉತ್ಸವಗಳು ಹೆಚ್ಚಾಗಿ ನಡೆಯಲಿಲ್ಲ (ದಶಂಬರ ೧೬೬೬). ಮುಂದೆ ನಾಲ್ಕಾರು ತಿಂಗಳು ಕಳೆದು ಹೋದ ಬಳಿಕ ಶಂಭುಜಿಯ ಸಾವಿನ ವಿಷಯವಾಗಿ ಮೊಗಲರ ಸಂಶಯವು ದೂರಾದ್ದರಿಂದ, ಸಿವಾಜಿಯು ಮಥುರೆಗೆ ಕಾಗದ ಬರೆದು ಶಂಭುಜಿಯನ್ನು ಕರೆಯಿಸಿದನು. ಕೃಷ್ಣಾಜಿ, ಕಾಶಿ, ವಿಸಾಜಿ ಈ ಮುವ್ವರು ಅವನನ್ನು ಕರೆದುಕೊಂಡು ಬಂದರು. ಹಾದಿಯಲ್ಲಿ ಒಬ್ಬ ಮೋಗಲ್ ಅಧಿಕಾರಿಗೆ ಸಂಶಯ ಬಂದುದರಿಂದ ಅವರು ಶಂಭುಜಿಯೊಡನೆ ಒಂದೇಎಲೆಯಲ್ಲಿ ಊಟಮಾಡಿ, ಆ ಸಂಶಯವನ್ನು ದೂರಮಾಡಿ ಪಾರಾಗಿ ಬಂದರು. ಸಂತುಷ್ಟನಾದ ಸಿವಾಜಿಯು ಅವರಿಗೆ ವಿಶ್ವಾಸರಾಯರೆಂಬ ಬಿರುದನ್ನೂ ಒಂದುಲಕ್ಷ ಮೊಹರುಗಳನ್ನೂ ಕೊಟ್ಟುದಲ್ಲದೆ, ೧೦,೦೦೦ ಹೊನ್ನುಗಳನ್ನು ವರ್ಷಾಸನೆಯಾಗಿ ಹಾಕಿಕೊಟ್ಟನು. ಅದರಂತೆ ತನ್ನೊಡನೆ ವಿಶ್ವಾಸದಿಂದ ಕಷ್ಟಪಟ್ಟ ಜತೆಗಾರರಿಗೆ ಇನಾಮನ್ನೂ ಜಹಗೀರನ್ನೂ ಕೊಟ್ಟು ತೃಪ್ತಿಗೊಳಿಸಿದನು (೧೬೬೭).

ಸಿವಾಜಿರಾಜನು ಸುರಕ್ಷಿತವಾಗಿ ತನ್ನ ನಾಡಿಗೆ ಹೋಗಿ ಮುಟ್ಟಿದನೆಂಬ ಸುದ್ದಿಯು ಬಾದಶಹನಿಗೆ ಮುಟ್ಟಿದ ಕೂಡಲೆ ಅವನು ಬಹಳವಾಗಿ ತಳಮಳಿಸಿದನು. ಅವನು ಸಾಯುವ ಮುಂದೆ ಬರೆದಿಟ್ಟುದೇನಂದರೆ, "ರಾಜ್ಯದಲ್ಲಿ ನಡೆಯುವ ಎಲ್ಲ ಚಿಕ್ಕದೊಡ್ಡ ಸಂಗತಿಗಳನ್ನು ತಪ್ಪದೆ ತಿಳಿದುಕೊಳ್ಳುವುದೇ ಸರಕಾರದ ಮುಖ್ಯವಾದ ಆಧಾರಸ್ತಂಭವು. ಒಂದು ಅರಕ್ಷಣದ ಎಚ್ಚರಗೇಡಿತನವು ಅರಸರನ್ನು ಆಮರಣಾಂತವಾಗಿ ಗೋಳಿಸುತ್ತದೆ. ನೋಡಿರಿ, ಆ ಕೀಳನಾದ ಸಿವಾಜಿಯು (ರಾಮಸಿಂಗಫುಲಾದ ಖಾನರ) ಎಚ್ಚರಗೇಡಿತನದಿಂದ ತಪ್ಪಿಸಿಕೊಂಡು ಹೋದುದರಿಂದ ನಾನು ಸಾಯುವ ವರೆಗೆ ಯುದ್ಧದಲ್ಲಿ ಒದ್ದಿಯಾಡಬೇಕಾಯಿತು." ತನ್ನಲ್ಲಿದ್ದ

ನಿಜವಾದ ದೋಷಗಳ ಬಗ್ಗೆ ಬಾದಶಹನಿಗೆ ಪಶ್ಚಾತ್ತಾಪ ಹುಟ್ಟಿದ್ದರೆ ಒಳಿತಾಗುತ್ತಿತ್ತು.

ಸಾಯುವವರೆಗೆ ಯಾರಿಗೂ ಸುಖಿಯೆನ್ನಕೂಡದು ಎಂಬ ಬೀರಬಲ್ಲನ ಉತ್ತರದ ದೃಷ್ಟಾಂತವು ಜಯಸಿಂಗರಾಜನ ಅಂತ್ಯಕಾಲದ ಸ್ಥಿತಿಯಿಂದ ಸ್ಪಷ್ಟವಾಗಿ ಕಂಡುಬರುತ್ತದೆ. ಚಿಕ್ಕಂದಿನಿಂದ ಧೈರ್ಯ ಶೌರ್ಯ ಸಾಹಸ ಚಾತುರ್ಯಗಳನ್ನು ತೋರಿಸಿ, ಏಕನಿಷ್ಠೆಯಿಂದ ಬಾದಶಹನ ಊಳಿಗವನ್ನು ಮಾಡಿ, ವಿಜಯಿ ಎಂದು ಹೆಸರು ಪಡೆದ ಆ ಮಹಾವೀರನ ಈ ಕಾಲದ ಗೋಳನ್ನು ಬಣ್ಣಿಸಲಳವಲ್ಲ. ವಿಜಾಪುರದ ಮುತ್ತಿಗೆಯಲ್ಲಿ ಅಪಯಶಸ್ಸು ಬಂದುದರಿಂದಲೂ ಲಂಚಕೊಡುವುದರಲ್ಲಿ ಹಣವು ಹೇರಳವಾಗಿ ವೆಚ್ಚಾದ್ದರಿಂದಲೂ ಕುತುಬಶಾಹಿ ಅದಿಲ್ಶಾಹಿ ದಂಡುಗಳು ಒಟ್ಟುಗೂಡಿ ಮೊಗಲರನ್ನು ಅಲ್ಲಲ್ಲಿ ಸೋಲಿಸತೊಡಗಿದ್ದರಿಂದಲೂ ತನ್ನ ಅಭಯವಚನದ ವಿರುದ್ಧವಾಗಿ ಬಾದಶಹನು ಸಿವಾಜಿಯನ್ನು ಸೆರೆಯಲ್ಲಿಟ್ಟುದರಿಂದಲೂ ಅವನ ದುಃಖಕ್ಕೆ ಪಾರವೇ ಇದ್ದಿಲ್ಲ. ಅವನು ಸಿವಾಜಿಯ ವಿಷಯವಾಗಿ ಬಾದಶಹನಿಗೆ ಆಗಿಂದಾಗ ಬರೆದ ಕಾಗದಗಳ ಸಾರಾಂಶವನ್ನು ಹಿಂದೆ ಕೊಟ್ಟಿರುತ್ತೇವಷ್ಟೆ. ಈಗ ಸಿವಾಜಿಯು ಅವರಂಗಜೇಬನು ಒಡ್ಡಿದ ಬಲೆಯಿಂದ ತಪ್ಪಿಸಿಕೊಂಡು ತನ್ನ ರಾಜ್ಯಕ್ಕೆ ತಿರುಗಿ ಬಂದನೆಂಬ ಸುದ್ದಿಯನ್ನು ಕೇಳಿ, ಅವನ ಎದೆಯು ಒಡೆದು ನೀರಾಯಿತು; ಅವನ ಅಳಲು ಉಕ್ಕೇರಿತು. ಸಿವಾಜಿಯು ಓಡಿಹೋದಂದಿನಿಂದ ಬಾದಶಹನ ಸಿಟ್ಟು ಅವನ ಮೇಲೂ ಅವನ ಮಗನ ಮೇಲೂ ಹೊಟ್ಟೆಹಿಡಿಯಲಾರದಷ್ಟು ಹೆಚ್ಚಿತ್ತು. ಆದಕಾರಣ ಅವನು ಪಿಸ್ಪಪ್ರಯತ್ನಮಾಡಿ ಬಾದಶಹನ ಒಲುಮೆಯನ್ನು ಸಂಪಾದಿಸಲಿಕ್ಕೆ ಹಾತೊರೆಯುತ್ತಿದ್ದನು.

ಕಾಲಮಹಿಮೆಯು ಅತಿವಿಚಿತ್ರವಾದುದು. ಮೊದಲು ಬ್ರಹ್ಮತೇಜಸ್ಸಿನ ಬಲವೇ ನಿಜವಾದ ಬಲವೆಂದು ಸಪ್ರಮಾಣವಾಗಿ ಮನಗಂಡ ಕ್ಷತ್ರಿಯರ ವಂಶಜರಾದ ರಜಪೂತರಲ್ಲಿ ಈಗ ಮೊಗಲರು ಕ್ಷಾತ್ರಬಲವೇ ನಿಜವಾದ ಬಲವೆಂಬ ತಿಳಿವಳಿಕೆಯನ್ನು ನೆಲೆಗೊಳಿಸಿದ್ದರು. ಆದಕಾರಣ ಸಿವಾಜಿಗೆ ಅಭಯವಚನವನ್ನು ಕೊಟ್ಟು ಅದನ್ನು ಪಾಲಿಸಲಿಕ್ಕೆ ಹೆಣಗಿದ

ಮತ್ತು ಅವನನ್ನು ಸೆರೆಯಲ್ಲಿಡದೆ ಪ್ರೀತಿಯಿಂದ ಸ್ನೇಹಿತನಾಗಿ ಮಾಡಿ ಕೊಳ್ಳಬೇಕೆಂದು ಹಟದಿಂದ ಬರೆದ ಜಯಸಿಂಗರಾಜನು ಈಗ ಬಾದಶಹನ ಪ್ರೀತಿಯನ್ನು ಸಂಪಾದಿಸುವುದಕ್ಕೋಸ್ಕರ ಸಿವಾಜಿಯನ್ನು ಮೋಸದಿಂದ ಕೊಲ್ಲಿಸಲಿಕ್ಕೆ ಅಣಿಯಾದನು. ಈ ಸಮಯದಲ್ಲಿ ಅವನು ವಜೀರನಿಗೆ ಒಂದು ಪತ್ರ ಬರೆದನು. ಅದರಲ್ಲಿ ಬಾದಶಹನು ಒಡಂಬಟ್ಟರೆ ತಾನು ಉಚ್ಚಕುಲದ ಕ್ಷತ್ರಿಯನಾದರೂ ಸಿವಾಜಿಯ ಮಗಳನ್ನು ತನ್ನ ಮಗನಿಗೆ ತೆಗೆದುಕೊಳ್ಳುವ ಮಾತುಕಥೆನಡಿಸಿ, ಅವನನ್ನು ಅವರಂಗಾಬಾದಿಗೆ ಕರೆ ಯಿಸಿಕೊಂಡು ತಿರುಗಿ ಹೋಗುವಾಗ ಅವನನ್ನು ಮೋಸದಿಂದ ಕೊಲ್ಲಿಸುವೆ ನೆಂದು ಬರೆದಿತ್ತು. ಸುದೈವದಿಂದ ಸಂಶಯಪಿಶಾಚಿಯಾದ ಅವರಂಗ ಜೇಬನು ಆ ಮಾತಿಗೆ ಒಡಂಬಡದೆ ಜಯಸಿಂಗರಾಜನನ್ನು ದಕ್ಷಿಣದಿಂದ ಕರೆಯಿಸಿ ತನ್ನ ಮಗನಾದ **ಮುಜಾಮನನ್ನು** ದಕ್ಷಿಣದ ಸುಬೇದಾರ ನಾಗಿ ನಿಯಮಿಸಿದನು. ಬಯಕೆಗೆಟ್ಟ ಜಯಸಿಂಗರಾಜನು ದಿಲ್ಲಿಗೆ ಹೋಗುವಾಗ ದಾರಿಯಲ್ಲಿ ಬರ್ಹಾಣಪುರದೊಳಗೆ ಎದೆಯೊಡಕೊಂಡು ಸತ್ತನು (೨ ಜುಲೈ ೧೬೬೭).

---

## ೭ ನೆಯ ಪ್ರಕರಣ

### ಮಾಂಡಲಿಕತನದ ವಿಸರ್ಜನೆಯೂ ಮೊಗಲರೊಡನೆ ಕುಸ್ತಿಯೂ.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಮುಜಮಶಹನು ಯಶವಂತ ಸಿಂಗನೊಡನೆ ಅವರಂಗಾಬಾದಿಗೆ ಬಂದು ದಕ್ಷಿಣದ ಸುಬೇದಾರನಾದನು (ಮೇ ೧೬೬೭). ಇವರಿಬ್ಬರೂ ಅನುಕೂಲರಾದ್ದರಿಂದ ನಮ್ಮ ಚರಿತ್ರ ನಾಯಕನಿಗೆ ಮೊಗಲರ ಹೆದರಿಕೆಯು ಕಡಮೆಯಾಗಿತ್ತು. ಆದರೂ ತಾನು ತಪ್ಪಿಸಿಕೊಂಡು ಬಂದ ಬಗ್ಗೆ ತನ್ನ ಮೇಲೆ ಕೆಂಡವನ್ನು ಕಾರುತ್ತಿದ್ದ ಬಾದ ಶಹನು ಯಾವಾಗ ತನ್ನನ್ನು ದಂಡಿಸಲಿಕ್ಕೆ ದಂಡನ್ನು ಕಳುಹುತ್ತಾನೋ ಎಂಬ ಅಂಜಿಕೆಯು ಅವನ ಮನಸ್ಸಿನಲ್ಲಿ ಕಟಿಯುತ್ತಿತ್ತು. ಆದ್ದರಿಂದ ಅವನು ಬಾದಶಹನಿಗೆ ಒಂದು ಪತ್ರವನ್ನು ಬರೆದನು. ಅದರಲ್ಲಿ ತಾನು

ಶರಣಾಗತನಾಗಿ ಬಂದಿರುತ್ತೇನೆಂತಲೂ ದಯವಿಟ್ಟು ತನ್ನನ್ನು ಕ್ಷಮಿಸಿದರೆ ತನ್ನ ಮಗನನ್ನು ೪೦೦ ದಂಡಿನೊಡನೆ ಮುಜುಮುಶಹನ ಕಯ್ಕೆಳಗೆ ಇಡುವೆನೆಂತಲೂ ಬರೆದಿತ್ತು (ಎಪ್ರಿಲ ೧೬೬೭). ಕೋಪದಿಂದ ಕುದಿಯುತ್ತಿದ್ದ ಬಾದಶಹನು ಈ ಪತ್ರಕ್ಕೆ ಉತ್ತರವನ್ನು ಕೊಡಲೇ ಇಲ್ಲ; ಮತ್ತು ಅವನ ಪಾರಪತ್ಯಕ್ಕೆ ದಂಡನ್ನಾದರೂ ಕಳುಹಲಿಲ್ಲ. ಏಕೆಂದರೆ ಅವನ ಹೊಟ್ಟೆಯಲ್ಲಿದ್ದ ಸಿಟ್ಟು ಆ ಕಾಲಕ್ಕೆ ಅವನ ರಟ್ಟೆಯಲ್ಲಿದ್ದಿಲ್ಲ. ಅವನ ಬೊಕ್ಕಸವೆಲ್ಲ ಬರಿದಾಗಿತ್ತು; ಅವನ ದಂಡೆಲ್ಲ ಪೇಶಾವರದಲ್ಲೆದ್ದ ಯುಸುಫಜಾಯರ ಬಂಡಾಯವನ್ನು ಮುರಿಯುವುದರಲ್ಲಿ ತೊಡಗಿತ್ತು. ಈ ಒಳಗಿನ ಮಟ್ಟು ಗೊತ್ತಾಗದ್ದರಿಂದ ಸಿವಾಜಿಯು ತನ್ನ ಗೆಳೆಯನಾದ ಯಶವಂತಸಿಂಗನ ಮಧ್ಯಸ್ಥಿಕೆಯನ್ನು ಬೇಡಿಕೊಂಡು ಅವನಿಗೊಂದು ಪತ್ರ ಬರೆದನು. ಅದರಲ್ಲಿ ಬಾದಶಹನು ತನ್ನನ್ನು ನಿಷ್ಕಾರಣವಾಗಿ ಹೊರ ಚಲ್ಲಿರುತ್ತಾನೆಂತಲೂ, ಅವನು ಹಾಗೆ ಮಾಡದಿದ್ದರೆ ಕಂದಹಾರವನ್ನು ಬಾದಶಹನಿಗೋಸ್ಕರ ಗೆಲ್ಲಬೇಕೆಂಬ ಲವಲವಿಕೆಯು ತನ್ನಲ್ಲಿ ಹುಟ್ಟಿತ್ತೆಂತಲೂ, ಪ್ರಾಣವನ್ನು ರಕ್ಷಿಸಿಕೊಳ್ಳಲಿಕ್ಕೆ ತಾನು ಓಡಿಬಂದೆನೆಂತಲೂ, ತನ್ನ ಆಶ್ರಯದಾತನಾದ ಜಯಸಿಂಗರಾಜನು ಮಡಿದುದರಿಂದ ಯಶವಂತಸಿಂಗನು ದಯವಿಟ್ಟು ತನ್ನ ಬೆನ್ನುಕಟ್ಟಬೇಕೆಂತಲೂ, ಬಾದಶಹನು ತನ್ನನ್ನು ಕ್ಷಮಿಸಿದರೆ ತನ್ನ ಮಗನನ್ನು ದಂಡಿನೊಡನೆ ಅವರಂಗಾಬಾದಿನಲ್ಲಿ ಇಡುವೆನೆಂತಲೂ ಬರೆದಿತ್ತು. ಆ ಬರಹವನ್ನು ನೋಡಿ ಮುಜಮುಯಶವಂತಸಿಂಗರು ಸಿವಾಜಿಯೊಡನೆ ಒಪ್ಪಂದ ಮಾಡಿ ಅವನನ್ನು ಮಾಂಡಲಿಕನಾಗಿ ಮಾಡಿಕೊಳ್ಳುವುದು ಹೆಚ್ಚು ಕ್ಷೇಮಕರವೆಂದು ಬಾದಶಹನಿಗೆ ಬರೆದು ತಿಳಿಸಿದರು (೯ ಮಾರ್ಚ ೧೬೬೮). ಬಾದಶಹನಿಗೆ ಬೇರೆ ಮಾರ್ಗವು ತೋಚದ್ದರಿಂದ ಈ ಸೂಚನೆಗೆ ತನ್ನ ಒಪ್ಪಿಗೆಯನ್ನು ಕೊಟ್ಟನು. ಕೆಳಗೆ ಕೊಟ್ಟ ಶರ್ತುಗಳಂತೆ ಒಪ್ಪಂದವಾಯಿತು :—

೧. ಅವರಂಗಜೇಬಬಾದಶಹನು ಸಿವಾಜಿಯು ರಾಜನೆಂದು ಒಡಂಬಡಬೇಕು.

೨. ಶಂಭೂಜಿಯು ಮನಸಬ್ದಾರನಾಗಿ ದಂಡಿನೊಡನೆ ಅವರಂಗಾಬಾದಿನಲ್ಲಿದ್ದು ಮುಜಮುಶಹನಿಗೆ ನೆರವಾಗಬೇಕು.

೩. ಈ ದಂಡಿನ ವೆಚ್ಚಕ್ಕಾಗಿ ಬಾದಶಹನು ವರ್‍ಹಾಡದಲ್ಲಿ ಕೆಲವು ಗ್ರಾಮಗಳನ್ನು ಸಿವಾಜಿಗೆ ಜಹಗೀರು ಹಾಕಿಕೊಡಬೇಕು. †

೪. ಚಾಕಣದ ಕೋಟೆಯನ್ನೂ ಪುಣೆಸುಪೆ ಪ್ರಾಂತಗಳನ್ನೂ ಮೊಗಲರು ಸಿವಾಜಿಗೆ ಬಿಟ್ಟುಕೊಡಬೇಕು.*

ಈ ಒಪ್ಪಂದವು ಸಿವಾಜಿಗೆ ಬೇಕಾಗಿದ್ದರೂ ಬಾದಶಹನಿಗೆ ಅವಶ್ಯವಾಗಿರಲಿಲ್ಲ. ತನ್ನ ಎಲ್ಲದಂಡು ಪೇಶಾವರದಲ್ಲಿ ತೊಡಗಿದ್ದರಿಂದ ಅವನು ದಿಕ್ಕುಗಾಣದೆ ಇದಕ್ಕೆ ಒಡಂಬಟ್ಟು, ಅನುಕೂಲವಾದ ಕಾಲವನ್ನು ಎದುರು ನೋಡುತ್ತಿದ್ದನು. ಇತ್ತ ಸಿವಾಜಿಗೆ ದೇಶಾಟನದ ಶ್ರಮವು ಹೆಚ್ಚಾದ್ದರಿಂದ ವಿಶ್ರಾಂತಿಯು ಬೇಕಾಗಿತ್ತು. ಇದಲ್ಲದೆ ತನ್ನ ರಾಜ್ಯದಾಡಳಿತದ ಏರ್ಪಾಡನ್ನು ಸರಿಯಾಗಿ ಮಾಡಬೇಕೆಂಬ ವಿಚಾರವು ಅವನ ಮನಸ್ಸಿನಲ್ಲಿ ಈ ಕಾಲಕ್ಕೆ ಹುಟ್ಟಿತ್ತು. ಆದಕಾರಣ ಅವನು ೨,೫೦೦ ದಂಡಿನೊಡನೆ ಶಂಭುಜಿಯನ್ನೂ ಅವನ ಸಂರಕ್ಷಣಾರ್ಥವಾಗಿ ದಳವಾಯಿಯಾದ ಪ್ರತಾಪರಾವ ಗುರ್ಜರನನ್ನೂ ನ್ಯಾಯಾಧೀಶನಾದ ನೀರಾಜಿರಾವಜಿಯನ್ನೂ ಅವರಂಗಾಬಾದಿಗೆ ಕಳುಹಿ, ೨,೫೦೦ ದಂಡನ್ನು ವರ್‍ಹಾಡದಲ್ಲಿ ತನಗೆ ಹೊಸದಾಗಿ ದೊರೆದ ಊರುಗಳಿಗೆ ಕಳುಹಿದನು. ಈ ೫,೦೦೦ ಮರಾಟರ ದಂಡು ಮುಂದೆ ಎರಡುವರ್ಷ ಮೊಗಲ್‌ಬಾದಶಹನ ನಾಡಿನಿಂದ ಪುಷ್ಟವಾಯಿತೆಂದು ಸಭಾಸದನೆಂಬ ಚರಿತ್ರಕಾರನು ಸ್ಪಷ್ಟವಾಗಿ ಬರೆಯುತ್ತಾನೆ.

ಈ ಅವರಂಗಾಬಾದಿನ ಒಪ್ಪಂದಕ್ಕೆ ಅವರಂಗಜೇಬನು ಮನಃ ಪೂರ್ವಕವಾಗಿ ಒಪ್ಪಲಿಲ್ಲೆಂದು ಮೇಲೆ ಬರೆದಿರುತ್ತೇವಷ್ಟೇ. ಪೇಶಾವರದಲ್ಲಿ ತೊಡಗಿದ ದಂಡು ತೆರವಾದ ಕೂಡಲೆ ಆ ದುಷ್ಟಪ್ರಾಣಿಯ ಮನಸ್ಸಿನಲ್ಲಿ ಸಿವಾಜಿಯನ್ನು ಹೇಗೆ ಮತ್ತೆ ತನ್ನ ಬಲೆಯಲ್ಲಿ ಹಿಡಿಯಬೇಕೆಂಬ ವಿಚಾರವು ತುಂಬಿತು. ಮುಜಮುಶಹಸಿವಾಜಿಯರು ಒಟ್ಟುಗೂಡಿ ತನ್ನನ್ನು ಪಟ್ಟ

---

† ಸರಂಜಾಮುದ ಬಗ್ಗೆ ಬಾದಶಹನು ವರ್‍ಹಾಡದ ಅವಢೆ, ಬಾಲಾಪುರ ಎಂಬೆರಡು ತಾಲೂಕುಗಳನ್ನು ಸಿವಾಜಿಗೆ ಕೊಟ್ಟನೆಂದು ಕೇಳೂಸಕರರು ಬರೆಯುತ್ತಾರೆ, ಪುಟ ೩೦೭.

* ರಡ್ಡಿ, ಪುಟ ೧೭೭.

ದಿಂದ ತಳ್ಳಬಹುದೆಂಬ ಹಳವಂಡವು ಆ ಸಂಶಯಪಿಶಾಚಿಯನ್ನು ಮುಸು
ಕಿತು. ಇದಲ್ಲದೆ ಅವನಿಗೆ ಈ ಕಾಲಕ್ಕೆ ದುಡ್ಡಿನ ಅಡಚಣೆಯು ಹೇಳ
ಕೂಡದಷ್ಟು ಆಯಿತು. ಈ ಮೂರು ಕಾರಣಗಳಿಂದ ಬಾದಶಹನು ಸಿವಾಜಿ
ಯೊಡನೆ ಕಾಲುಕೆದರಿ ಜಗಳತೆಗೆಯಬೇಕೆಂದು ನಿಶ್ಚಯಿಸಿ, ೧೬೬೬ ರಲ್ಲಿ
ಸಿವಾಜಿಯು ಆಗ್ರಾಕ್ಕೆ ಹೊರಟಾಗ ಅವನ ದಾರಿಯ ವೆಚ್ಚಕ್ಕಾಗಿ ಕೊಟ್ಟ
ಒಂದು ಲಕ್ಷ ರೂಪಾಯಿಗಳನ್ನು ಸಿವಾಜಿಯಿಂದ ಇಸುಕೊಳ್ಳಬೇಕೆಂತಲೂ
ಅವನು ಆ ಹಣವನ್ನು ಕೊಡುವ ವರೆಗೆ ವರ್ಹಾಡದಲ್ಲಿ ಅವನಿಗೆ ಜಹಗೀರಾಗಿ
ಕೊಟ್ಟ ಊರುಗಳಿಗೆ ಮುಟ್ಟುಗೋಲುಹಾಕಬೇಕೆಂತಲೂ ಫರ್ಮಾನವನ್ನು
ತೆಗೆದನು. ಈ ಫರ್ಮಾನವು ಅವರಂಗಾಬಾದಿಗೆ ಮುಟ್ಟುವುದಕ್ಕಿಂತ
ಮೊದಲು ಸಿವಾಜಿಗೆ ಅದರ ಸುದ್ದಿ ಬಂದುದರಿಂದ, ಅವನು ವರ್ಹಾಡದಲ್ಲಿದ್ದ
ತನ್ನ ದಳವಾಯಿಗೆ ಒತ್ತರದಿಂದ ಹೊರಟು ಬರಬೇಕೆಂದು ತಿಳಿಸಿದನು
(ದಶಂಬರ ೧೬೬೯). ಪ್ರತಾಪರಾವಗುರ್ಜರ ಮುಂತಾದವರನ್ನು ಹಿಡಿಯ
ಬೇಕೆಂದು ಮತ್ತೊಂದು ಹುಕುಮು ಬರುವುದರೊಳಗೇ ಅನುಕೂಲರಾದ
ಮುಜಮುಶಹ-ಯಶವಂತಸಿಂಗರು ಎಲ್ಲ ಮರಾಟ ಸರದಾರರನ್ನು ತಿರುಗಿ
ಹೋಗಗೊಟ್ಟುದರಿಂದ ಬಾದಶಹನ ಬಯಕೆಯು ಬಯಲಾಯಿತು.
ಅವನು ಸಿಟ್ಟಿಗೆದ್ದು ಸಿವಾಜಿಯನ್ನು ಮುರಿಬಡಿಯುವ ಉದ್ದೇಶದಿಂದ
ರಾಜಧಾನಿಯಿಂದ ಕೆಲ ದಂಡುದಳವಾಯಿಗಳನ್ನು ಕಳಿಸಿದ್ದಲ್ಲದೆ, ದೇವ
ಗಡದಿಂದ ದಿಲೀರಖಾನನನ್ನೂ ಖಾನದೇಶದಿಂದ ದಾವುದಖಾನನನ್ನೂ
ಮುಜಮುಶಹನಿಗೆ ನೆರವಾಗಲಿಕ್ಕೆ ಕಳುಹಿದನು (ಜನವರಿ ೧೬೭೦).

ಈ ಜಗತ್ತಿನಲ್ಲಿ ಪ್ರತಿಯೊಬ್ಬನು ತನ್ನ ಆತ್ಮವನ್ನು ಎತ್ತಿಹಿಡಿಯ
ಬಹುದು ಇಲ್ಲವೆ ಅದನ್ನು ಹತ್ತಿಕ್ಕಬಹುದು; ಪ್ರತಿಯೊಬ್ಬನು ತನಗೆ
ತಾನೇ ಆಪ್ತನು, ತನಗೆ ತಾನೇ ಹಗೆಯು ಎಂಬ ಭಗವದ್ವಾಕ್ಯವು ಅಕ್ಷ
ರಶಃ ನಿಜವಾಗುತ್ತದೆ. * ಪ್ರತಿಯೊಂದು ವ್ಯಕ್ತಿಯಾಗಲಿ ಜನಾಂಗವಾಗಲಿ

---

* ಉದ್ಧರೇದಾತ್ಮನಾಽತ್ಮಾನಮ್ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥
ಶ್ರೀಮದ್ಭಗವದ್ಗೀತಾ, ಅ. ೬, ಶ್ಲೋ. ೫.

ತಮ್ಮ ತಮ್ಮ ಉತ್ಕರ್ಷಾಪಕರ್ಷಗಳನ್ನು ತಾವೇ ಮಾಡಿಕೊಳ್ಳುವರು. ಪ್ರತಿಯೊಬ್ಬ ಮನುಷ್ಯನು ತನ್ನ ಆತ್ಮಶಕ್ತಿಯನ್ನು ಅಂದರೆ ನೈತಿಕಬಲವನ್ನು ಬೆಳಿಸಿಕೊಂಡು ತನ್ನ ಸ್ಥಿತಿಯೋಗ್ಯತೆಗಳನ್ನು ಹೆಚ್ಚಿಸಿಕೊಳ್ಳಬಹುದು. ಇಲ್ಲವೆ ಆತ್ಮಶಕ್ತಿಯನ್ನು ಕುಗ್ಗಿಸಿಕೊಂಡು ತನ್ನನ್ನೂ ತನ್ನವರನ್ನೂ ಕೀಳ್ಗಿಸೆಗೆ ತಂದುಕೊಳ್ಳಬಹುದು. ಈ ಸಾರ್ವತ್ರಿಕಸಿದ್ಧಾಂತದಂತೆ ಎಡೆಬಿಡದೆ ನಡೆದಿರುವ ಮನೆತನಗಳ ಏರಿಳಿತವನ್ನು ಕಣ್ಣಾರ ಕಾಣದ ಅಥವಾ ಕಿವಿಯಾರ ಕೇಳದ ವಾಚಕನು ಒಬ್ಬನೂ ಇರಲಿಕ್ಕಿಲ್ಲೆಂದು ಎದೆತಟ್ಟಿ ಹೇಳಲಿಕ್ಕೆ ಏನೂ ಅಡ್ಡಿಯಿಲ್ಲ.

ಆತ್ಮಶಕ್ತಿಯನ್ನು ವೃದ್ಧಿಗೊಳಿಸಲಿಕ್ಕೆ ಇಂದ್ರಿಯನಿಗ್ರಹ ಪರೋಪಕಾರಬುದ್ಧಿ ಸ್ವಾರ್ಥತ್ಯಾಗಗಳು ಬಲವಾದ ಸಾಧನಗಳಾಗಿರುವಂತೆ ಅದನ್ನು ಕುಗ್ಗಿಬಡಿಯಲಿಕ್ಕೆ ದ್ವೇಷ, ಮೋಹ, ಮತ್ಸರ, ಸ್ವಾರ್ಥಪರತ್ವಗಳು ಸಮರ್ಥವಾದ ಕಾರಣಗಳಿರುತ್ತವೆ. ಅವರಂಗಜೇಬಬಾದಶಹನಲ್ಲಿ ಹಗೆತನವೂ, ಸಂಶಯವೂ, ಮೋಸವೂ, ಹೊಟ್ಟೆಕಿಚ್ಚೂ, ಅತ್ಯಾಸೆಯೂ ಕುತ್ತಿಗೆ ಮಟ್ಟ ತುಂಬಿದ್ದವು. ಆದಕಾರಣ ಅವನ ಪೂರ್ವಜರು ತಮ್ಮ ನೈತಿಕಬಲದಿಂದಲೂ ದೇಹಬುದ್ಧಿಸಾಮರ್ಥ್ಯದಿಂದಲೂ ಎಡೆಬಿಡದೆ ತೋಳಲಿ ಬಳಲಿ ನೆಲೆಗೊಳಿಸಿದ ಮೊಗಲ್ಬಾದಶಾಹಿಯ ಗದ್ದಿಗೆಯ ಹೊಂದಿಸಿದ ಕಲ್ಲುಗಳು ಸಡಲಿಸಿದವು. ಅವನು ಹೇಡಿಯೂ, ಅಳ್ಳೆದೆಯುವನೂ, ಎಚ್ಚರಗೇಡಿಯೂ, ಹೆಡ್ಡನೂ, ಮೈಯ್ಗಳ್ಳನೂ, ದುಂದುಗಾರನೂ ಆಗಿದ್ದರೆ, ಅವನ ಜೀವಮಾನದಲ್ಲೇ ಅವನ ಗದ್ದಿಗೆಯ ಕಲ್ಲುಗಳು ದಿಕ್ಕಾಗೊಂದಾಗಿ ಬೀಳುತ್ತಿದ್ದವು. ಅವನ ನೈತಿಕಾವನತಿಯಿಂದ ಉಂಟಾದ ಕೇಡನ್ನು ಅವನ ಬುದ್ಧಿಧೈರ್ಯಶೌರ್ಯಾದಿ ಗುಣಗಳು ಕೆಲಮಟ್ಟಿಗೆ ಮಾತ್ರ ತಡೆದವು. ಆದ್ದರಿಂದ ಅವನು ತನ್ನಶತ್ರು ತಾನೇ ಆದನೆಂದು ಧಾರಾಳವಾಗಿ ಹೇಳಬಹುದು.

ಅವರಂಗಜೇಬನಿಗೆ ಯಾರಲ್ಲಿಯೂ ವಿಶ್ವಾಸವಿದ್ದಿಲ್ಲ. ಆದ್ದರಿಂದ ಅವನನ್ನು ಯಾರೂ ನಂಬುತ್ತಿರಲಿಲ್ಲ. ಅವನ ಮಕ್ಕಳು ದಳವಾಯಿಗಳು ಸರದಾರರು ಎಲ್ಲರು ಎಡಗಯ್ಯಲ್ಲಿ ಜೀವಹಿಡಿದುಕೊಂಡು ಅವನ ಊಳಿಗ

ವನ್ನು ಮಾಡುತ್ತಿದ್ದರು. ಏಕೆಂದರೆ ಅವನು ಸಂಶಯಪಿಶಾಚಿಯಾದ್ದ ರಿಂದ ಯಾವಕಾಲಕ್ಕೆ ತಮ್ಮ ಮೇಲೆ ಮುನಿದು ಘಾತಮಾಡುವನೆಂಬ ಹೆದರಿಕೆಯು ಯಾವಾಗಲೂ ಎಲ್ಲರಲ್ಲಿಯೂ ಕುದಿಯುತ್ತಿತ್ತು. ಅವನಿಗೆ ಯಾರಲ್ಲಿಯೂ ವಿಶ್ವಾಸವಿಲ್ಲುದರಿಂದ ಒಬ್ಬನನ್ನು ಸುಬೇದಾರನಾಗಿ ನಿಯ ಮಿಸಿ, ಮತ್ತೊಬ್ಬ ಅವನ ವಿರೋಧಿಯನ್ನು ಅವನ ದಳವಾಯಿಯಾಗಿ ಮಾಡಿ, ಅವನಿಂದ ಆ ಮೇಲಧಿಕಾರಿಯ ಹುಳಕನ್ನು ತಿಳಿದುಕೊಳ್ಳಲಿಕ್ಕೆ ಹವಣಿಸುತ್ತಿದ್ದನು. ಈ ತರದ ಅವ್ಯವಸ್ಥೆಯಿಂದ ಅವನ ಸುಬೇದಾರರು ತಮ್ಮ ಕಯ್ಕೆಳಗಿನವರೊಡನೆ ಗುದ್ದಿಯಾಡುವುದರಲ್ಲಿ ಕಾಲಕಳೆಯುತ್ತಿದ್ದು ದರಿಂದ, ತಮ್ಮ ಸುಬೆಯನ್ನು ಶತ್ರುಗಳಿಂದ ಕಾಪಾಡಲಿಕ್ಕೂ ಪ್ರಜೆಗಳನ್ನು ಸಂರಕ್ಷಿಸಲಿಕ್ಕೂ ಅಸಮರ್ಥರಾಗಿದ್ದರು. ಅನುಭವಶಾಲಿಯೂ ಮುತ್ಸ ದ್ದಿಯೂ ಆದ ಜಯಸಿಂಗರಾಜನು ಹೇಗೆ ದಿಲೀರಖಾನನನ್ನು ಸಂತೈಸಿ ಅವನಿಂದ ಪುರಂದರಕೋಟೆಯ ಮುತ್ತಿಗೆಯನ್ನು ಮುಂದರಿಸಿದನೆಂಬು ದನ್ನೂ ಮುಂದೆ ಕೃತಘ್ನನಾದ ಬಾದಶಹನು ಅವನನ್ನು ಹೇಗೆ ಗೋಳಾಡಿ ಸಿದನೆಂಬುದನ್ನೂ ಹಿಂದೆ ವಿವರಿಸಿರುತ್ತೇವೆ. ಜಯಸಿಂಗರಾಜನಂತಹ ಮುತ್ಸದ್ದಿತನವು ಮುಜಮುಶಹನಿಗೆ ಎಲ್ಲಿಂದ ಬರಬೇಕು? ದಿಲೀರಖಾನ ನಿಗೂ ಅರಸುಮಗನಿಗೂ ವರ್ಮವಿದ್ದುದರಿಂದ ದಿಲೀರನು ಬಾದಶಹನ ಅಪ್ಪಣೆಯಂತೆ ಅವರಂಗಾಬಾದಿಗೆ ಬಂದರೂ ಅವನನ್ನು ಕಾಣಲಿಲ್ಲ ಮತ್ತು ಅವನ ಹುಕುಮನ್ನು ಮನ್ನಿಸಲಿಲ್ಲ. ಆದ್ದರಿಂದ ಮುಜಮುಶಹನು ದಿಲೀ ರನು ಬಂಡುಗಾರನಿರುತ್ತಾನೆಂದು ಬಾದಶಹನಿಗೆ ತಿಳಿಸಿದನು. ಅರಸು ಮಗನು ತನ್ನನ್ನು ಸೆರೆ ಹಿಡಿಯಲಿಕ್ಕೆ ಹವಣಿಸುತ್ತಾನೆಂದು ದಿಲೀರಖಾನನು ಬರೆದನು. ಸಂಶಯಗ್ರಸ್ತ ಬಾದಶಹನು ಮತ್ತೊಬ್ಬ ಸರದಾರನನ್ನು ಈ ಜಗಳದ ಗುಟ್ಟನ್ನು ಹೊರಗೆಡವಲಿಕ್ಕೆ ಕಳುಹಿದನು. ಅವನು ಅಲ್ಲಿಗೆ ಹೋಗಿ ಅವರವರಂತೆ ಬಾರಿಸಿ, ಇಬ್ಬರ ವೈಮನಸ್ಸನ್ನು ಹೆಚ್ಚಿಸಿದನೇ ಹೊರತು ಕಡಸು ಮಾಡಲಿಲ್ಲ. ಮುಜಮುಶಹನ ಉಪಟಲವು ಹೆಚ್ಚಾದ್ದ ರಿಂದ ದಿಲೀರನು ದಂಡಿನೊಡನೆ ಗುಜರಾಥಕ್ಕೆ ಓಡಿಹೋದನು. ಮುಜಮು ಶಹನು ಅವನನ್ನು ದಂಡಿನೊಡನೆ ಬೆನ್ನಟ್ಟಲು, ಖಾನದೇಶದ ಸುಬೇದಾರ ನಾದ ದಾವುದಖಾನನು ಅವನನ್ನು ತಾಪಿ ಹೊಳೆಯ ಮೇಲೆ ಅಡ್ಡಗಟ್ಟಿ

ದನು; ಮತ್ತು ದಿಲೀರನು ಗುಜರಾಥದ ಸುಬೇದಾರನನ್ನು ಮರೆಹೊಕ್ಕನು. ಬಾದಶಹನ ಅಪ್ಪಣೆಯಂತೆ ಮುಜಮುಶಹನು ಅವರಂಗಾಬಾದಿಗೆ ತಿರುಗಿ ಹೋದ್ದರಿಂದ ತಂದೆ ಮಕ್ಕಳ ಜಗಳವು ನಿಂತಿತು (ಸಪ್ಟಂಬರ ೧೬೭೦). ಮುಜಮುಶಹ-ಯಶವಂತಸಿಂಗರು ಸಿವಾಜಿಯೊಡನೆ ಒಳಸಂಚು ನಡಿಸಿದ್ದಾರೆಂಬ ದಿಲೀರಖಾನನ ಆರೋಪವನ್ನು ಕೆಲಮಟ್ಟಿಗೆ ನಂಬಿ ಬಾದಶಹನು ಯಶವಂತಸಿಂಗನನ್ನು ಮುಜಮುಶಹನಿಂದ ಅಗಲಿಸಿ, ಅವನನ್ನು ಬರ್ಹಾಣಪುರಕ್ಕೆ ಕಳುಹಿದನು (೧೬೭೦ ಎಪ್ರಿಲದಿಂದ ಸಪ್ಟಂಬರವರೆಗೆ).

ಮೊಗಲ್ದ ಳವಾಯಿಗಳು ತಂತಮ್ಮೊಳಗೆ ಜಗಳಾಡಿ ಒಬ್ಬರ ಕುತ್ತಿಗೆಯನ್ನು ಮತ್ತೊಬ್ಬರು ಹಿಚಕುತ್ತ ಕುಳಿತಿರುವ ಸಂದರ್ಭದಲ್ಲಿ ಪರಾಕ್ರಮಶಾಲಿಯಾದ ನಮ್ಮ ಚರಿತ್ರನಾಯಕನು ತನ್ನ ಹಿತವನ್ನು ಸಾಧಿಸಿಕೊಳ್ಳದೆ ಸುಮ್ಮನೆ ಕಯ್ಯುಮ್ಮಚ್ಚಿಕೊಂಡು ಕೂಡ್ರುವ ಸಂಭವವುಂಟೇ? ಎಂದೂ ಇಲ್ಲ.

ಪ್ರತಾಪರಾಯನೂ ನೀರಾಜಿಪಂತನೂ ಸ್ವಾರರೊಡನೆ ಅವರಂಗಾಬಾದನ್ನು ಬಿಟ್ಟು ಸುರಕ್ಷಿತವಾಗಿ ರಾಜಗಡಕ್ಕೆ ಬಂದಕೂಡಲೆ ಸಿವಾಜಿರಾಜನು ಪುರಂದರದ ಒಪ್ಪಂದದಂತೆ ತಾನು ಬಿಟ್ಟುಕೊಟ್ಟ ಕೋಟೆಗಳನ್ನು ತಿರುಗಿ ಹಿಡಿದುಕೊಳ್ಳಲಿಕ್ಕೆ ದಂಡನ್ನು ಕಳುಹಿದನು (ಜನವರಿ ೧೬೭೦). ಮೊಗಲರು ಇನ್ನೂ ಯುದ್ಧಕ್ಕೆ ಸಿದ್ಧರಾಗದ್ದರಿಂದ ಒಂದರ ಹಿಂದೊಂದು ಕೋಟೆಗಳು ಮರಾಟರ ಕಯ್ಸೇರಿದವು. ಕೊಂಡಾಣದ ಕೋಟೆಯನ್ನು ಹಿಡಿದುಕೊಳ್ಳಲಿಕ್ಕೆ ಅವರಿಗೆ ಬಹಳ ಶ್ರಮವಾಯಿತು. ಏಕೆಂದರೆ ಅಲ್ಲಿ ಉದಯಭಾನು ಎಂಬ ಶೂರ ರಜಪುತಸರದಾರನು ಕಿಲ್ಲೇದಾರನಾಗಿದ್ದನು. ಒಂದು ದಿನ ಕತ್ತಲೆಯ ರಾತ್ರಿಯಲ್ಲಿ ಸಿವಾಜಿಯ ಚಿಕ್ಕಂದಿನ ಗೆಳೆಯನಾದ ತಾನಾಜಿ ಮಾಲುಸರೆಯು ೩೦೦ ಮಂದಿ ಗಟ್ಟಿಗರಾದ ಮಾವಳರನ್ನು ಸಂಗಡ ಕರೆಕೊಂಡು ಹೊರಟು, ಕೊಂಡಾಣದ ನೆರೆಯಲ್ಲಿದ್ದ ಕೆಲ ಮಿಾನುಗಾರರನ್ನು ಮಾರ್ಗದರ್ಶಕರಾಗಿ ತೆಗೆದುಕೊಂಡು, ಕಲ್ಯಾಣದ ಬಾಗಿಲಿನ ಹತ್ತರ ಗಿಡ್ಡಾದ ಕೋಟೆಯನ್ನು ಹಗ್ಗದ ನಿಚ್ಚಣಿಕೆಯಿಂದ ಹತ್ತಿ ಕೋಟೆಯನ್ನು ಒಳಹೊಕ್ಕು, ಮಲಗಿದ ರಜಪುತರನ್ನು ಕೊಲ್ಲತೊಡಗಿದರು. ಆ ಗದ್ದಲಕ್ಕೆ ಎಲ್ಲರು ಎಚ್ಚತ್ತುದರಿಂದ ತುಮುಲಯುದ್ಧವು ಎಸಗಿತು. ತಾನಾಜಿ

ಉದಯಭಾನು ಇವರಿಬ್ಬರೂ ದ್ವಂದ್ವಯುದ್ಧದಲ್ಲಿ ಮಡಿದರು. ಹೆದರಿದ ಮಾವಳರನ್ನು ತಾನಾಜಿಯ ತಮ್ಮನಾದ ಸೂರ್ಯಾಜಿಯು ಹುರಿದುಂಬಿಸಿ, ಕೋಟೆಯನ್ನು ಹಿಡಿದುಕೊಂಡು ಕುದುರೆಯ ಲಾಯಕ್ಕೆ ಬೆಂಕಿ ಹಚ್ಚಲು, ಅಲ್ಲಿಂದ ೯ ಮೈಲಿನ ಮೇಲಿದ್ದ ಸಿವಾಜಿಯು ಆ ಉರಿಯನ್ನು ನೋಡಿ ಹಿಗ್ಗಿದನು. ಬಳಿಕ ೨ ತಾಸಿನ ಮೇಲೆ ತಾನಾಜಿಯು ಸತ್ತನೆಂಬ ಸುದ್ದಿ ಬಂದುದರಿಂದ ಬಹಳವಾಗಿ ಹಳಹಳಿಸಿ, ತಾನಾಜಿಯ ಸ್ಮರಣಾರ್ಥವಾಗಿ ಕೊಂಡಾಣಕ್ಕೆ **ಸಿಂಹಗಡ** ಎಂಬ ನಾಮಕರಣವನ್ನು ಮಾಡಿದನು (ಜನವರಿ ೧೬೭೦).*

ಮುಂದೆ ಒಂದು ತಿಂಗಳ ಮೇಲೆ ಸಿವಾಜಿಯು ಪುರಂದರಕೋಟೆಯನ್ನು ಹಿಡಿದುಕೊಂಡು **ಚಾಂದೂರ** ಎಂಬ ಹಳ್ಳಿಯನ್ನು ಸುಲಿದನು. ಈ ಲೂಟಿಯಲ್ಲಿ ಅವನಿಗೆ ೧ ಆನೆಯೂ ೧೨ ಕುದುರೆಗಳೂ ೪೦,೦೦೦ ರೂಪಾಯಿಗಳೂ ದೊರೆತವು. ಬಳಿಕ ಅವನು ಮಾಹುಲಿ ಕೋಟೆಯನ್ನು ಮುತ್ತಲು, ಅಲ್ಲಿಯ ಮನೋಹರದಾಸನೆಂಬ ಶೂರ ಕಿಲ್ಲೆದಾರನು ಅವನ ದಂಡನ್ನು ಓಡಿಸಿಬಿಟ್ಟನು. ಆದರೂ ಸಿವಾಜಿಯು ಎದೆಗೆಡದೆ ಕಲ್ಯಾಣ ಭಿವಂಡಿಯನ್ನು ಹಿಡಿದುಕೊಂಡನು (ಮಾರ್ಚ ಮತ್ತು ಎಪ್ರಿಲ). ತರುವಾಯ ಮನೋಹರದಾಸನು ಮಾಹುಲಿ ಕಿಲ್ಲೆದಾರಿಯನ್ನು ಬಿಟ್ಟು ಹೋದ್ದರಿಂದ, ಸಿವಾಜಿಯು ಅದನ್ನು ಎರಡನೆಯ ಸಾರಿ ಮುತ್ತಿ ಕಯ್ವಶಮಾಡಿಕೊಂಡನು. ಮುಂದೆ ೫/೬ ತಿಂಗಳು ಮರಾಟರು ಮೊಗಲರ ರಾಜ್ಯವನ್ನು ಸೇರಿ ಒಂದೇಸವನೇ ಊರುಗಳನ್ನು ಲೂಟುಮಾಡಿ, ಹೇರಳ ಹಣವನ್ನು ಹೇರಿಕೊಂಡು ಹೋದರು. ಅಹಮ್ಮದನಗರ ಜುನ್ನರ ಪರೆಂಡಾ ಇವುಗಳ

* ಒಂದು ಮರಾಟೆ ಲಾವಣಿಯಲ್ಲಿ ಹೇಳಿರುವುದೇನಂದರೆ:—ಒಂದುದಿನ ಪಗಡಿಯಾಟದಲ್ಲಿ ಜೀಜಿಬಾಯಿಯು ಸಿವಾಜಿಯನ್ನು ಸೋಲಿಸಲು, ಆ ಸೋಲಿನ ಪರಿಹಾರಾರ್ಥವಾಗಿ ಏನುಕೊಡಬೇಕೆಂದು ಅವನು ಕೇಳಲು, ಕೊಂಡಾಣದ ಕೋಟೆಯನ್ನು ಕೊಡಬೇಕೆಂದು ಜೀಜಿಬಾಯಿಯು ಉತ್ತರಕೊಟ್ಟಳು. ಕೂಡಲೆ ತನ್ನಮಗನ ಮದುವೆಗೋಸ್ಕರ ತನ್ನಹಳ್ಳಿಗೆಹೋದ ತಾನಾಜಿಯನ್ನು ಮದುವೆ ಬಿಡಿಸಿ ಕರಿಸಿ, ಅವನನ್ನು ಕೊಂಡಾಣಕೋಟೆಯನ್ನು ಹಿಡಿದುಕೊಳ್ಳಲಿಕ್ಕೆ ಕಳಿಸಿ, ಅದು ಕಯ್ವಶವಾದ ಬಳಿಕ ಅದನ್ನು ತನ್ನ ತಾಯಿಗೆ ಕೊಟ್ಟನಂತೆ.

ನೆರೆಯಲ್ಲಿದ್ದ ೫೧ ಹಳ್ಳಿಗಳು ಲೂಟಾದವು. ಮೊಗಲ್ದಳವಾಯಿಗಳು ಒಳ ಜಗಳದಿಂದ ಹತವೀರ್ಯರಾದ ಕಾರಣ, ಅವರನ್ನು ತಡೆಯುವವರೇ ಇದ್ದಿಲ್ಲ. ಖಾನದೇಶದ ಸುಬೇದಾರನಾದ ದಾವುದಖಾನನೊಬ್ಬನು ಮಾತ್ರ ಈ ಕಾಲದಲ್ಲಿ ಬಾದಶಹನ ಮಾನವನ್ನು ಕಾಯ್ದನು. ಅವನ ದಂಡು ಸಣ್ಣ ದಿದ್ದರೂ ಅವನು ಮುಡುಕಿ ಮರಾಟರ ಮೇಲೆ ಬಿದ್ದು ಪುರ್ನೇರ, ಜುನ್ನರ, ಮಾಹುಲಿ ಈ ಪ್ರಾಂತಗಳಿಂದ ಮರಾಟರನ್ನು ಓಡಿಸಿದ್ದಲ್ಲದೆ, ಸಿವಾಜಿಯ ರಾಜ್ಯವನ್ನು ಒಳನುಗ್ಗಿದನು. ಈ ಶೌರ್ಯಸಾಹಸಗಳಿಗಾಗಿ ಬಾದಶಹನು ಅವನನ್ನು ತುಂಬಿದ ದರಬಾರದಲ್ಲಿ ಮನದಣಿ ಹೊಗಳಿದನು.

ಮುಂದೆ ಮಳೆಗಾಲವು ಸುರುವಾದ್ದರಿಂದ ಮೊಗಲರೂ ಮರಾಟರೂ ತಂತಮ್ಮ ಸಿದ್ಧತೆಯನ್ನು ಮಾಡತೊಡಗಿದರು. ಗುಜರಾತದ ಸುಬೇದಾರ ನಾದ ಬಹದ್ದೂರಖಾನನು ಅದಿಲ್ಶಹನಿಂದ ೧೨,೦೦೦ ರಾಹುತರನ್ನು ತನ್ನ ನೆರವಿಗೆ ಬರಮಾಡಿಕೊಂಡುದಲ್ಲದೆ, ಮುಂಬಯಿಯ ಇಂಗ್ರೇಜಿ ವ್ಯಾಪಾರಿ ಗಳಿಂದ ಸಾಕಷ್ಟು ಮದ್ದುಗುಂಡುಗಳನ್ನು ತರಿಸಿಕೊಂಡನು. ಸಿವಾಜಿಯು ಕಲ್ಯಾಣದಲ್ಲಿ ತನ್ನ ರಾಹುತರನ್ನು ಕೂಡಿಹಾಕುತ್ತಿದ್ದುದರಿಂದ ಅವನು ಗುಜರಾತದ ಮೇಲೆ ದಂಡೆತ್ತಿ ಹೋಗುತ್ತಾನೆಂಬ ಸುದ್ದಿಯು ದೇಶದಲ್ಲೆಲ್ಲ ಹಬ್ಬಿತು (ಸಪ್ಟಂಬರ ೧೬೭೦). ಲೂಟಿಯನ್ನು ಮುಂಬಗೆದು ಸುರತದಲ್ಲಿದ್ದ ಇಂಗ್ರೇಜಿ ವರ್ತಕರು ತಮ್ಮ ಖಜಾನೆ ಸರಕು ಕಚೇರಿಗಳನ್ನು ಸುರತಪಟ್ಟಣ ದಿಂದ ತೆಗೆದು, ಅದರ ನೆರೆಯಲ್ಲಿದ್ದ ಸ್ವಾಲಿ ಎಂಬ ಸಣ್ಣ ನಡುಗಡ್ಡೆಗೆ ಒಯ್ದು, ತಮ್ಮ ವಖಾರವನ್ನು ಬರಿದು ಮಾಡಿಬಿಟ್ಟರು. ಉಳಿದ ವ್ಯಾಪಾರಿ ಗಳು ಸಾಧ್ಯವಿದ್ದಮಟ್ಟಿಗೆ ತಂತಮ್ಮ ಸಂರಕ್ಷಣದ ಉಪಾಯಗಳನ್ನು ಕಯ್ಕೊಂಡರು. ಆದರೆ ಎಚ್ಚರಗೇಡಿಯಾದ ಸುರತದ ಸುಬೇದಾರನು ತನ್ನ ಪಟ್ಟಣದ ಸಂರಕ್ಷಣೆಗೋಸ್ಕರ ತಕ್ಕ ಏರ್ಪಾಡನ್ನು ಮಾಡದೆ, ತನ್ನ ಕಯ್ಕೆಳ ಗಿದ್ದ ೩೦೦ ದಂಡಾಳುಗಳನ್ನಿಟ್ಟುಕೊಂಡು ಸ್ವಸ್ಥವಾಗಿ ಕುಳಿತುಬಿಟ್ಟನು!!! ೨ ನೆಯ ಅಕ್ಟೋಬರ ದಿವಸ ಸಿವಾಜಿಯು ೨೦ ಮೈಲು ದೂರಿರುತ್ತಾನೆಂಬ ಸುದ್ದಿಯು ಬಂತು. ಸುಬೇದಾರನೂ ಉಳಿದ ಅಧಿಕಾರಿಗಳೂ ವರ್ತಕರೂ ಅಡಬಡಿಸಿ ಕೋಟೆಯನ್ನು ಹೊಕ್ಕರು. ಮರುದಿವಸ ೧೫,೦೦೦ ರಾಹುತ ರೊಡನೆ ಸಿವಾಜಿಯು ಬಂದನು. ಮೊದಲಿನ ಸುಲಿಗೆಯು ಆದ ಬಳಿಕ

ಬಾದಶಹನು ಆ ಪಟ್ಟಣದ ಸುತ್ತಲು ಗೋಡೆಯನ್ನು ಹಾಕಿಸಿದ್ದನು. ಹೊಟ್ಟೆಯ ಕಿಚ್ಚಿಗೋಸ್ಕರ ಕಾವಲುಗಾರರು ಕೆಲಹೊತ್ತು ಕಾದಿ ಕಾಲಿಗೆ ಬುದ್ಧಿಹೇಳಿದ್ದರಿಂದ, ಮರಾಟರು ಮನದಣಿಯಾಗಿ ಮೂರುದಿವಸ ಸುರತ ಪಟ್ಟಣವನ್ನು ೨ನೆಯ ಸಾರಿ ಸುಲಿದರು (ಅಕ್ಟೋಬರ ೩ ರಿಂದ ೫). ಇಂಗ್ಲೀಷ ಫ್ರೆಂಚ ಡಚ್ಚ ವರ್ತಕರು ತಮ್ಮತಮ್ಮ ಶಕ್ತ್ಯಾನುಸಾರ ಕಪ್ಪಗಾಣಿಕೆ ಯನ್ನು ಒಪ್ಪಿಸಿ, ತಮ್ಮ ವಖಾರಗಳನ್ನು ಉಳಿಸಿಕೊಂಡರು. ಮಕ್ಕಾಯಾತ್ರೆ ಯಿಂದ ಅದೇ ತಾನೇ ಮರಳಿ ಬಂದ ಕಾಶಗಡದ ಮಾಜಿ ಅರಸನು ಕೆಲ ಹೊತ್ತು ಮರಾಟರನ್ನು ಕೆಣಕಿ ಕೋಟೆಗೆ ಓಡಿಹೋದ್ದರಿಂದ, ಅವನ ಚಿನ್ನದ ಪಲ್ಲಕ್ಕಿಯೂ ಬೆಲೆಯುಳ್ಳ ಒಡವೆಗಳೂ ಮರಾಟರ ಕಯ್ಸೇರಿದವು. ಈ ಲೂಟಿಯಲ್ಲಿ ಸಿವಾಜಿಗೆ ಒಟ್ಟು ೬೬ ಲಕ್ಷ ರೂಪಾಯಿ ಬೆಲೆಬಾಳುವ ಸುಲಿಗೆಯು ಸಿಕ್ಕಿತೆಂದು ಸರಕಾರದವರು ಹಿಂದಿನಿಂದ ಲೆಕ್ಕಮಾಡಿ ನಿರ್ಣಯಿಸಿದರು. ಮೂರನೆಯ ದಿವಸ ನಡುಹಗಲಿನಲ್ಲಿ ಸಿವಾಜಿಯು ಒಮ್ಮಿಂದೊಮ್ಮೆ ಸುರತವನ್ನು ಬಿಟ್ಟು ಹೊರಟುಹೋದನು (೫ ಅಕ್ಟೋಬರ). ಅವನು ಇಷ್ಟು ಅವಸರದಿಂದ ಹೋದ ಕಾರಣವು ಗೊತ್ತಾಗುವುದಿಲ್ಲ.

ಈ ಲೂಟಿಯಿಂದ ಪ್ರತ್ಯಕ್ಷವಾಗಿ ಸುರತಪಟ್ಟಣಕ್ಕೂ ಪರಂಪರೆಯಾಗಿ ಮೊಗಲಸಾಮ್ರಾಜ್ಯಕ್ಕೂ ತಟ್ಟಿದ ಹಾನಿಯನ್ನು ಸಿವಾಜಿಯು ಒಯ್ದ ಸುಲಿಗೆ ಯಿಂದ ಗೊತ್ತುಮಾಡುವುದು ದೊಡ್ಡತಪ್ಪೆಂದು ಹೇಳಲಿಕ್ಕೆ ಏನೂ ಅಡ್ಡಿ ಯಿಲ್ಲ. ಈ ಸುಲಿಗೆಯಿಂದ ಈ ಹೆಸರುವಾಸಿಯಾದ ಪಡಮೂಲೆಯ ವ್ಯಾಪಾರವೇ ಕುಗ್ಗಿತು. ಸಿವಾಜಿಯು ಹೋದ ಬಳಿಕ ಒಂದು ತಿಂಗಳ ವರೆಗೆ ಅಲ್ಲಿ ಸುಬೇದಾರನಾಗಲಿ ಯಾವತರದ ಸರಕಾರವಾಗಲಿ ಇದ್ದಿಲ್ಲ. ಮುಂದೆ ೨/೩ ತಿಂಗಳ ಮೇಲೆ ಸಿವಾಜಿಯು ಬರುತ್ತಾನೆಂಬ ಹೂಲಿಯು ಆಗಿಂದಾಗ ಏಳುತ್ತಿತ್ತು. ಪರದೇಶದ ವ್ಯಾಪಾರಿಗಳು ಹೂಲಿ ಎದ್ದಕೂಡಲೆ ತಮ್ಮ ಸರಕು ಗಳನ್ನು ಸ್ವಾಲಿನಡುಗಡ್ಡೆಗೆ ಒಯ್ಯುತ್ತಿದ್ದರು. ಪರಸ್ಥಳದ ವರ್ತಕರು ಅಲ್ಲಿ ನಿಂತು ವ್ಯಾಪಾರಮಾಡಲಿಕ್ಕೆ ಧೈರ್ಯಸಾಲದೆ, ತಮ್ಮ ಅಂಗಡಿ ಮಳಿಗೆ ಗಳನ್ನು ಮಾರಿ ಬೇರೂರಿಗೆ ಹೋದರು. ಪರವೂರಿನ ಜನರು ತಮ್ಮತಮ್ಮ ಸರಕುಗಳನ್ನು ಅಲ್ಲಿಗೆ ಕಳುಹುವುದಕ್ಕೆ ಹಿಂದೆಗೆದರು. ಮರಾಟರು ಎಲ್ಲಿ ಯಾದರೂ ಸಮೀಪದಲ್ಲಿ ಬಂದರೆಂಬ ಸುದ್ದಿಯು ತಿಳಿದ ಕೂಡಲೆ ಜನರು

ಗುಳಿಕಟ್ಟಿಕೊಂಡು ಹೊರಹೊರಡುತ್ತಿದ್ದರು. ಈ ಕ್ರಮವು ಮುಂದೆ ವರ್ಷಗಳ ವರೆಗೆ ಒಂದೇ ಸವನಾಗಿ ನಡೆದುದರಿಂದ ಸುರತಪಟ್ಟಣದ ವ್ಯಾಪಾರವು ಅಳಿದು, ಅದರ ಐಶ್ವರ್ಯವು ಇಲ್ಲದಂತಾದುದು ಆಶ್ಚರ್ಯವಲ್ಲ. ಇದಲ್ಲದೆ ಸಿವಾಜಿಯು ೨ ಸಾರಿ ಸುರತವನ್ನು ಸುಲಿದರೂ ಇಂಗ್ಲೀಷ ಫ್ರೆಂಚ ಡಚ್ಚರ ವಖಾರಗಳಿಗೆ ಕಯ್ಯುಚ್ಚದ್ದರಿಂದ ಅವರು ಒಳಗಿಂದೊಳಗೇ ಅವನಿಗೆ ಅನುಕೂಲರಾಗಿರಬಹುದೆಂಬ ಸಂಶಯುವು ಬಾದಶಹನಲ್ಲಿ ಹುಟ್ಟಿ, ಅವನು ಅವರ ಸರಕುಗಳ ಮೇಲಿನ ಸುಂಕವನ್ನು ನಿರ್ದಾಕ್ಷಿಣ್ಯದಿಂದ ವಸೂಲು ಮಾಡತೊಡಗಿದನು. ಆದ್ದರಿಂದ ಅವರು ಆ ಸ್ಥಳದಲ್ಲಿ ನಡೆಯುತ್ತಿದ್ದ ವ್ಯಾಪಾರವನ್ನು ಕಡಮೆ ಮಾಡಿ ಬೇರೆ ಕಡೆಗೆ ಒಯ್ಯುವ ಎಣಿಕೆಯಲ್ಲಿ ಮುಳುಗಿದರು.

ಸುರತದ ಸುಲಿಗೆಯ ಸುದ್ದಿಯು ಬಂದಕೂಡಲೆ ಮುಜಮಶಹನು ದಾವುದಖಾನನನ್ನು ಬರ್ಹಾಣಪುರದಿಂದ ಕರಿಸಿ, ಅವನನ್ನು ದಂಡಿನೊಡನೆ ಸಿವಾಜಿಯನ್ನು ಅಡ್ಡಗಟ್ಟಲಿಕ್ಕೆ ಕಳುಹಿದನು. ಎರಡು ದಂಡುಗಳೂ **ಮುಲ್ಹೀರ** ಕೋಟೆಯ ನೆರೆಯಲ್ಲಿ **ವಣಿದಿಂಡೋರಿ** ಎಂಬಲ್ಲಿ ಕೂಡಿದವು. ಮೊಗಲರ ದಂಡು ಮರಾಟರ ದಂಡಿನ ದಶಾಂಶವಾಗಿದ್ದರೂ ಕೆಚ್ಚೆದೆಯುವ ನಾದ ದಾವುದಖಾನನು ಹಗೆಗಳ ಮೇಲೆ ಬಿದ್ದು, ತೋಫುಗಳ ಸಹಾಯ ದಿಂದ ಅವರನ್ನು ಚದರಿಸಿಬಿಟ್ಟನು (ಅಕ್ಟೋಬರದ ಕೊನೆ). ಬಳಿಕ ಅವನು ಗಾಯಹೊಂದಿದ ತನ್ನ ದಂಡಾಳುಗಳನ್ನು ಅವರಂಗಾಬಾದಿಗೆ ಕಳುಹಿ, ತಾನು ನಾಸಿಕಕ್ಕೆ ಹೊರಟುಹೋದನು. ಆದರೆ ಅಲ್ಲಿ ಬಹಳ ದಿವಸ ನಿಲ್ಲಲಿಕ್ಕೆ ಮರಾಟರು ಅವನಿಗೆ ಅನುವು ಕೊಡಲಿಲ್ಲ. ವಣಿದಿಂಡೋರಿ ಕಾಳಗವಾದ ಬಳಿಕ ಸಿವಾಜಿಯು ತಾನು ತಂದ ಸುಲಿಗೆಯನ್ನು ರಾಜಗಡಕ್ಕೆ ಮುಟ್ಟಿಸಿ, ತನ್ನ ದಂಡನ್ನು ೩ ಭಾಗಗಳಾಗಿ ಮಾಡಿ, ಎರಡುಭಾಗಗಳನ್ನು ಪ್ರತಾಪರಾವ ಮೋರೋತ್ರಿಯಂಬಕಪಿಂಗಳೆಯುವರ ಕಯ್ಯೊಳಗೆ ಕೊಟ್ಟು, ಸಂಪತ್ತುಳ್ಳ ಖಾನದೇಶ ವರ್ಹಾಡ ಪ್ರಾಂತಗಳನ್ನು ಒಳನುಗ್ಗಿದನು (ದಶಂಬರ ೧೬೭೦). ಯಶವಂತಸಿಂಗನಿದ್ದ ಖಾನದೇಶದ ರಾಜಧಾನಿಯಾದ ಬರ್ಹಾಣಪುರವನ್ನು ಸುಲಿಯದೆ, ಅದರಿಂದ ೨ ಮೈಲಿನ ಮೇಲಿರುವ ಬಹದ್ದೂರಪುರವನ್ನು ಲೂಟುಮಾಡಿ, ವರ್ಹಾಡಪ್ರಾಂತವನ್ನು ಹೊಕ್ಕು

ಸಧನವಾದ **ಕರಿಂಜಾ–ನಂದುರಬಾರ** ಪಟ್ಟಣಗಳನ್ನು ಸೂರೆಗೊಂಡನು. ಮೋರೋಪಂತನು ಔಂಧ ಮುಂತಾದ ಪಟ್ಟಣಗಳನ್ನು ಸುಲಿದನು. ಈ ಸುಲಿಗೆಗಳಲ್ಲಿ ಅವರಿಗೆ ಒಂದುಕೋಟಿ ರೂಪಾಯಿ ದೊರೆತವು. ಬಳಿಕ ಅವರಿಬ್ಬರು ಸಿವಾಜಿಯನ್ನು ಕೂಡಿ **ಸಾಲ್ಹೇರಿ, ಧೋಡಪ್ಪ** ಕೋಟೆಗಳನ್ನು ಮುತ್ತಿದರು. ತಾವು ಸುಲಿದ ಊರುಗಳ ಜನರಿಂದ, ಮೊಗಲ್ಬಾದಶಹನಿಗೆ ಕೊಡುವ ಕಂದಾಯದ ಚತುರ್ಥಾಂಶವನ್ನು ಸಿವಾಜಿರಾಜನಿಗೆ ಕೊಡುತ್ತೇವೆಂದು ಲೇಖಗಳನ್ನು ಮರಾಟರು ತೆಗೆದುಕೊಂಡರು. ಇದೇ ಮರಾಟರ **ಚೌಥಾಯಿ** ಹಕ್ಕಿನ ಆರಂಭವು.

ಸಿವಾಜಿಯು ಖಾನದೇಶವನ್ನು ಒಳನುಗ್ಗಿದಾಗ ದಾವುದಖಾನನ ಮಗನೂ ಯಶವಂತಸಿಂಗನೂ ಹಣದ ಸಲುವಾಗಿ ಬರ್ಹಾಣಪುರದಲ್ಲಿ ಜಗಳಾಡುತ್ತಿದ್ದರು. ಮುಜಮಶಹನ ಖರ್ಚಿಗಾಗಿ ಯಶವಂತಸಿಂಗನು ೫ ಲಕ್ಷರೂಪಾಯಿ ಬೇಡಲು, ದಾವುದಖಾನನ ಮಗನು ಬಾದಶಹನ ಅಪ್ಪಣೆಯ ಹೊರತು ಕೊಡಲಾರೆನೆಂದು ಸ್ಪಷ್ಟವಾಗಿ ಹೇಳಿದನು. ಈ ವಿಷಯವಾಗಿ ಅವರು ತಮ್ಮ ತಮ್ಮೊಳಗೆ ಬಡಿದಾಡುತ್ತ ಕುಳಿತುದರಿಂದ ಮರಾಟರನ್ನು ಎದುರಿಸಲಿಕ್ಕೆ ಯಾರೂ ಇದ್ದಿಲ್ಲ. ಈ ಸುದ್ದಿಯನ್ನು ಕೇಳಿ ದಾವುದನು ಲಗುಬಗೆಯಿಂದ ಖಾನದೇಶಕ್ಕೆ ಓಡಿ ಬಂದನು. ಅವನು ಬರುವಷ್ಟರೊಳಗೆ ಸಾಲ್ಹೇರಿಯ ಕೋಟೆಯು ಸಿವಾಜಿಯ ಕಯ್ಸೇರಿತ್ತು (೫ ಜನವರಿ ೧೬೭೧). ಆದ್ದರಿಂದ ಅವನು ಮರಾಟರನ್ನು ಬೆನ್ನಟ್ಟಲಿಕ್ಕೆ ಹೊರಡ ಬೇಕೆಂಬಷ್ಟರೊಳಗೆ ಬಾದಶಹನಿಂದ ಒಂದು ಹುಕುಮು ಬಂತು. ಅದರಲ್ಲಿ ಮಹಬತ್ಖಾನನೆಂಬುವನು ದಕ್ಷಿಣದ ಮುಖ್ಯ ದಳವಾಯಿಯಾಗಿ ನೇಮಿಸಲ್ಪಟ್ಟಿರುತ್ತಾನೆಂತಲೂ ದಾವುದನು ಅವನ ಕಯ್ಕೆಳಗೆ ಕೆಲಸ ಮಾಡಬೇಕೆಂತಲೂ ಬರೆದಿತ್ತು. ಅದನ್ನು ನೋಡಿ ಅವನ ಮನಸ್ಸು ಕಜೀಲ (ನಿರುತ್ಸಾಹಿ) ಆಯಿತು. ತಾನು ನಿದ್ದೆ ನೀರಡಿಕೆ ಎನ್ನದೆ ಜೀವದ ಹಂಗುದೊರೆದು ಕಾದುತ್ತಿದ್ದರೂ ತನಗೆ ಹೆಚ್ಚಿನ ಹುದ್ದೆ ದೊರೆಯಲಿಲ್ಲೆಂದು ಮಿಡಕಿ, ತನ್ನನ್ನು ದರಬಾರಿಗೆ ಕರಿಸಿಕೊಳ್ಳಬೇಕೆಂದು ಬಾದಶಹನನ್ನು ಬಿನ್ನವಿಸಿ, **ಕಾಂಚನ** ಎಂಬ ಕಣಿವೆದಾರಿಯಲ್ಲಿ ಪಾಳೆಯ ಹಾಕಿಕೊಂಡು ನಿಂತನು. ಬಾದಶಹನು ಅವನ ಅರಿಕೆಗೆ ಕಿವಿಗೊಟ್ಟು, **ಬಾಗಲಾಣ**

ಪ್ರಾಂತವನ್ನು ಕಾಯುವ ಕೆಲಸವನ್ನು ಅವನಿಗೆ ಕೊಟ್ಟನು. ಹೊಸ ದಳವಾಯಿಯಾದ ಮಹಬತ್ಖಾನನು ದಾವುದನೊಡನೆ **ಅಹಿವಂತ ಕೋಟೆ** ಯನ್ನು ಮುತ್ತಿದನು. ಒಳಗಿದ್ದ ಮರಾಟರು ದಾವುದನಿಗೆ ಶರಣುಬಂದುದ ರಿಂದ ಮಹಬತ್ತನು ಹೊಟ್ಟೆಕಿಚ್ಚಿನಿಂದ ಅವನ ವಿರುದ್ಧವಾಗಿ ಬಾದಶಹ ನಿಗೆ ಬರೆದು ತಾನು ನಾಸಿಕಕ್ಕೆ ಹೋಗಿ, ಸುಮ್ಮನೆ ಅಲ್ಲಿ ೩ ತಿಂಗಳು ಕಾಲ ಕಳೆದು ಅಲ್ಲಿಂದ ಪಾರ್ನೇರಕ್ಕೆ ಹೋಗಿ ಅಲ್ಲಿ ನಾಚುರಂಗಿನಲ್ಲಿ ಕಾಲಹರಣ ಮಾಡಿದನು.

ಮಹಬತ್ಖಾನನ ಯುದ್ಧಕ್ರಮವು ಸ್ವಾಭಾವಿಕವಾಗಿ ಬಾದಶಹನಿಗೆ ಸೇರಲಿಲ್ಲ. ಆದ್ದರಿಂದ ಅವನು ಮಹಬತ್ತದಾವುದಖಾನರನ್ನು ತನ್ನಬಳಿಗೆ ಕರಿಸಿಕೊಂಡು, ಗುಜರಾಥದ ಸುಬೇದಾರನಾದ ಬಹದ್ದೂರಖಾನನನ್ನು ದಕ್ಷಿಣದ ಮುಖ್ಯ ದಳವಾಯಿಯಾಗಿ ಮಾಡಿ, ಅವನ ಆಶ್ರಯದಲ್ಲಿದ್ದ ದಿಲೀರಖಾನನನ್ನು ಅವನ ಸಾಹಾಯಕನಾಗಿ ನಿಯಮಿಸಿದನು. ಮಳೆ ಗಾಲವು ಮುಗಿದ ಕೂಡಲೆ, ಅವರಿಬ್ಬರು ಗುಜರಾಥದಿಂದ ಹೊರಟು ಬಾಗಲಾಣ ಪ್ರಾಂತವನ್ನು ಹೊಕ್ಕು, ಮರಾಟರ ಕಯ್ಸೇರಿದ ಸಾಲ್ಹೇರಿಯ ಕೋಟೆಯನ್ನು ಮುತ್ತಿ, ಅದು ಕಯ್ವಶವಾಗುವ ವರೆಗೆ ಅಲ್ಲಿ ನಿಲ್ಲದೆ, ಇಕಲಾಸಖಾನಮಿಯಾನ ರಾವಅಮರಸಿಂಗ ಚಂದಾವತ ಎಂಬ ಇಬ್ಬರು ದಳವಾಯಿಗಳಿಗೆ ಆ ಮುತ್ತಿಗೆಯನ್ನು ಒಪ್ಪಿಸಿ, ತಾವು ಅಹಮ್ಮದನಗರಕ್ಕೆ ತಿರುಗಿ ಬಂದು, ಬಹದ್ದೂರಖಾನನು ಸುಪೆಯ ಮೇಲೂ ದಿಲೀರಖಾನನು ಪುಣೆಯ ಮೇಲೂ ದಂಡೆತ್ತಿ ಹೋದರು. ಕ್ರೂರನಾದ ದಿಲೀರಖಾನನು ಪುಣೆಯನ್ನು ಹಿಡಿದುಕೊಂಡು ೯ ವರ್ಷದ ಮೇಲಿನವರಾದ ಅಲ್ಲಿಯ ಎಲ್ಲ ಜನರನ್ನು ಕೊಲ್ಲಿಸಿದನು * (ದಶಂಬರ ೧೬೭೧).

ಈ ಕಾಲಕ್ಕೆ ನಮ್ಮ ಚರಿತ್ರನಾಯಕನು ಮಹಡದಲ್ಲಿದ್ದು ಸುತ್ತಲಿನ ಕೋಟೆಗಳಿಂದ ಹೆಚ್ಚಿನ ದಂಡಾಳುಗಳನ್ನು ತರಿಸಿ, ತನ್ನ ದಂಡನ್ನು

---

* ಪುಣೆಯು ಶಿವಾಜಿಯ ವಶಕ್ಕೆ ಎಂದು ತಿರುಗಿ ಬಂತೆಂಬುದು ಗೊತ್ತಾ ಗುವುದಿಲ್ಲ. ಬಹುಶಃ ಮುಜಮಶಹನು ೧೬೭೪ ರಲ್ಲಿ ಅದನ್ನು ಶಿವಾಜಿಗೆ ತಿರುಗಿ ಕೊಟ್ಟಿರಬಹುದು.

ಬೆಳಿಸುತ್ತಿದ್ದನು. ತನ್ನ ಜನ್ಮಭೂಮಿಯಾದ ಪುಣೆಯನ್ನು ಹಿಡಿಧುಕೊಳ್ಳ ಲಿಕ್ಕೆ ಹೋಗುತ್ತೇನೆಂದು ಬಹಿರಂಗವಾಗಿ ಸುಳ್ಳು ಸುದ್ದಿಯನ್ನು ಬೀರಿ, ಅವನು ಒತ್ತರದಿಂದ ಹೊರಟು ಸಾಲ್ಹೇರಿ ಕೋಟೆಯನ್ನು ಮುತ್ತಿದ ಮೊಗ ಲರ ಮೇಲೆ ಬಿದ್ದನು (ಜನವರಿ ೧೬೭೨). ಮೊಗಲ ಮರಾಟರ ನಡುವೆ ಘೋರವಾದ ಕಾಳಗವಾಯಿತು. ಮರಾಟರ ಸಂಖ್ಯೆಯು ಹೆಚ್ಚಾಗಿದ್ದುದ ರಿಂದ ಮೊಗಲರು ಪೂರ್ಣವಾಗಿ ಸೋತರು. ರಾವಅಮರಸಿಂಗನೂ ಸಾವಿರಾರು ದಂಡಾಳುಗಳೂ ರಣದಲ್ಲಿ ಮಡಿದರು. ಇಕ್ಲಾಸಖಾನನೂ ಅಮರಸಿಂಗನ ಮಗನೂ ೩೦ ಮಂದಿ ದಂಡಿನ ಅಧಿಕಾರಿಗಳೂ ಸೆರೆ ಸಿಕ್ಕರು. ಪಾಳೆಯದ ಎಲ್ಲ ಸಾಮಾನುಗಳು ಮರಾಟರ ಕಯ್ಸೇರಿದವು. ಅದೇ ಕಾವಿನಲ್ಲಿ ಸಿವಾಜಿಯು ಭದ್ರವಾದ ಮುಲ್ಹೇರ ಕೋಟೆಯ ಮೇಲೆ ಸಾಗಿಹೋಗಲು, ಅದು ಸುಲಭವಾಗಿ ಅವನ ವಶವಾಯಿತು. ಈಮೇರೆಗೆ ಬಾಗಲಾಣ ಪ್ರಾಂತವನ್ನೆಲ್ಲ ಗೆದ್ದು, ಸಿವಾಜಿಯು ಬಹದ್ದೂರ ದಿಲೀರ ಖಾನರ ಸಮಾಚಾರ ತೆಕ್ಕೊಳ್ಳಲಿಕ್ಕೆ ಪುಣೆಯ ಕಡೆಗೆ ತಿರುಗಿದನು (ಜುಲೈ).

ದೈವವು ಅನುಕೂಲವಾದರೆ ಗುಡ್ಡವು ಕಡ್ಡಿಯಾಗುವುದೆಂಬ ಮಾತು ಸುಳ್ಳಲ್ಲ. ಈಗ ನಮ್ಮ ಚರಿತ್ರನಾಯಕನಿಗೆ ದೇವತಾಸಹಾಯವಿದ್ದುದ ರಿಂದ ಅನಾಯಾಸದಿಂದ ಮೊಗಲರ ಮುಳವೇ ಕಡಿಯಿತು. ರಾಮಜಿ ಪಾಂಗ್ರೆಯೆಂಬ ಮರಾಟದಳವಾಯಿಯು ಕಾನೇರಿಯೆಂಬಲ್ಲಿ ದಿಲೀರಖಾನ ನನ್ನು ಸೋಲಿಸಿದನು (೬ಎಪ್ರಿಲ೧೬೭೨). ಜಯಶಾಲಿಯಾದ ಸಿವಾಜಿಯು ದೊಡ್ಡ ದಂಡಿನೊಡನೆ ಬರುತ್ತಾನೆಂಬ ಸುದ್ದಿಯನ್ನು ಕೇಳಿದ ಕೂಡಲೆ ಬಹದ್ದೂರದಿಲೀರಖಾನರು ಪುಣೆ ಸುಪೆಗಳನ್ನು ಬಿಟ್ಟು ಅಹಮ್ಮದನಗರಕ್ಕೆ ಓಡಿಹೋದರು. ನಮ್ಮ ಚರಿತ್ರನಾಯಕನ ಸುದೈವದಿಂದ ಬಾದಶಹ ನಿಗೆ ಹೆಚ್ಚಿನ ದಂಡನ್ನು ದಕ್ಷಿಣಕ್ಕೆ ಕಳುಹಲು ಅನುಕೂಲವಿದ್ದಿಲ್ಲ. ಏಕೆಂದರೆ ಇದೇ ಸಮಯದಲ್ಲಿ ಖೈಬರಕಣಿವೆಯಲ್ಲಿ ಅಫಗಾಣರೂ ಪಂಜಾಬಿ ನಲ್ಲಿ **ಸತ್ನಾಮಿ** ಅಥವಾ **ಮುಂಡಿ** ಎಂಬ ಸಂತರೂ ಬಂಡಾಯವನ್ನೆ ಬ್ಬಿಸಿ, ದಂಡಿನವರನ್ನು ಗೋಳಾಡಿಸುತ್ತಿದ್ದರು. ಆದ್ದರಿಂದ ಬಾದಶಹನು ಮುಜಮಶಹನನ್ನು ದರಬಾರಿಗೆ ಕರಿಸಿಕೊಂಡು, ಬಹದ್ದೂರಖಾನನನ್ನು ದಕ್ಷಿಣದ ಸುಬೇದಾರನಾಗಿ ನೇಮಿಸಿದನು (ಜನವರಿ ೧೬೭೩).

ಬಾದಶಹನ ಈ ವರ್ಗಾವರ್ಗಿಗಳು ನಡೆದಾಗ ಮರಾಟರನ್ನು ಎದುರಿಸುವವರೇ ಇದ್ದಿಲ್ಲ. ಆದಕಾರಣ ಸಂಧಿಯನ್ನು ಸಾಧಿಸಿ, ಮೋರೋ ತ್ರಿಯಂಬಕ ಪಿಂಗಳೆಯು ಸುರತದಿಂದ ೧೦೦ ಮೈಲು ಮೇಲಿರುವ ಜವ್ಹಾರ ಸಂಸ್ಥಾನವನ್ನು ಹಿಡಿಕೊಂಡನು (ಜೂನ ೧೬೭೨). ಅಲ್ಲಿ ಅವನಿಗೆ ೧೭ ಲಕ್ಷ ರೂಪಾಯಿಗಳು ದೊರೆತವು. ಬಳಿಕ ಮೋರೋಪಂತನು ಮುಂದಕ್ಕೆ ಸಾಗಿ ಹೋಗಿ, ಸುರತದಿಂದ ೬೦ ಮೈಲು ದೂರಿರುವ ರಾಮನಗರ (ಧರ್ಮಪುರ) ವೆಂಬ ಮತ್ತೊಂದು ಮಿಾನುಗಾರರ ಸಂಸ್ಥಾನವನ್ನು ಕಯ್ವಶಮಾಡಿಕೊಂಡನು (ಜುಲೈ). ಮರಾಟರ ರಾಜ್ಯವು ರಾಮನಗರದ ವರೆಗೆ ಹಬ್ಬಿದ್ದರಿಂದ ಹಿಂದೆ ಹೇಳಿದಂತೆ, ಸುರತದ ವ್ಯಾಪಾರಿಗಳಿಗೆ ಸುದರ್ಶನ ಚಕ್ರವೇ ಬೆನ್ನು ಹತ್ತಿದಂತಾಯಿತು. ಮೋರೋಪಂತನು ಅವರಿಗೆ ೪ ಲಕ್ಷ ರೂಪಾಯಿಗಳನ್ನು ಚೌಥಾಯಿಯಾಗಿ ಕಳಿಸಬೇಕೆಂದು ಮೂರು ಸಾರಿ ಪತ್ರಬರೆದನು. ಮೊದಲನೆಯ ಪತ್ರ ಬಂದ ಕೂಡಲೆ ಸುರತದ ಮೊಗಲ್ಸುಬೇದಾರನು ವ್ಯಾಪಾರಿಗಳನ್ನೆಲ್ಲ ಕರಿಸಿ, ಪಟ್ಟಣವನ್ನು ಕಾಪಾಡುವುದಕ್ಕೋಸ್ಕರ ಹೊಸ ದಂಡನ್ನು ಇಟ್ಟುಕೊಳ್ಳುವುದು ಅವಶ್ಯವೆಂದು ಹೇಳಿ, ಅವರಿಂದ ಹಣಕೂಡಿಸಿ ಬಡಕಲಿಗೆ ಹಾಕಿಕೊಂಡನು !!! ೩ ನೆಯ ಪತ್ರಬಂದ ಬಳಿಕ ಅವನು ಮತ್ತೆ ಹಣವನ್ನು ಕೇಳಲು, ಜನರು ಒಪ್ಪದೆ ಗುಳೆಕಟ್ಟಿಕೊಂಡು ಹೋದರು. ಪಾಪ, ಈ ಸುರತವರ್ತಕರ ಬೊಗಳಿಯನ್ನು ಬಣ್ಣಿಸಲಳವಲ್ಲ!!

ಸುರತದ ವ್ಯಾಪಾರಿಗಳು ಓಡಿಹೋದ ಸುದ್ದಿಯನ್ನು ಕೇಳಿ, ಮೋರೋಪಂತನು ಅಲ್ಲಿಗೆ ಹೋಗುವ ವಿಚಾರವನ್ನು ತೊರೆದು, ನಾಸಿಕ ಪ್ರಾಂತವನ್ನೊಳನುಗ್ಗಿ, ನಾಸಿಕತ್ರಿಯಂಬಕ ಭಾಗದ ಠಾಣೆದಾರನಾದ ಜಾಧವರಾಯನನ್ನೂ ವಣಿದಿಂಡೋರಿ ಭಾಗದ ಠಾಣೆದಾರನಾದ ಸಿದ್ದಿಹಲಾಲನನ್ನೂ ಸೋಲಿಸಿ, ಇಡಿಪ್ರಾಂತವನ್ನು ಸುಲಿದನು. ಈ ಸೋಲನ್ನು ಕೇಳಿ ಬಹದ್ದೂರಖಾನನು ಅವರಿಗೆ ಛೀಹಾಕಲು ಅವರು ಸಿಟ್ಟಿಗೆದ್ದು, ತಮ್ಮ ತಮ್ಮ ದಂಡಿನೊಡನೆ ಹೋಗಿ ಮರಾಟರನ್ನು ಕೂಡಿದರು!! ನಾಸಿಕಭಾಗವು ಶತ್ರುಗಳ ಕಯ್ಸೇರಿದ್ದರಿಂದ ದಿಲೇರಖಾನನಿಗೆ ಗುಜರಾತಪ್ರಾಂತವನ್ನು ಸಂರಕ್ಷಿಸುವುದು ಬಿಗಿಹೋಯಿತು (ಆಗಸ್ಟ, ಸಪ್ಟಂಬರ).

ಮುಂದಿನ ತಿಂಗಳು ಶಿವಾಜಿಯು ದೊಡ್ಡದಂಡನ್ನು ಕಟ್ಟಿಕೊಂಡು ರಾಮನಗರಕ್ಕೆ ಬಂದನು (೨೫ ಅಕ್ಟೋಬರ). ಸುರತದ ಜನರು ಮತ್ತೆ ಭಯಗ್ರಸ್ತರಾದರು. ಅವರ ಸುದೈವದಿಂದ ಅವನು ಅತ್ತಕಡೆಗೆ ಹೋಗದೆ ವರ್‍ಹಾಡಪ್ರಾಂತವನ್ನು ನುಗ್ಗಿದನು. ಈ ಸುದ್ದಿಯನ್ನು ಕೇಳಿ ಬಹದ್ದೂರ ಖಾನನು ಅವನನ್ನು ಬೆನ್ನಟ್ಟಿದನು. ಶಿವಾಜಿಯು ರಾಮಗಿರಿಯನ್ನು ಸುಲಿದು ಹೋದ ೨ ದಿವಸಗಳ ಮೇಲೆ ಅವನು ಅಲ್ಲಿಗೆ ಬಂದನು. ತನ್ನನ್ನು ಬೆನ್ನಟ್ಟಿ ಬರುವುದನ್ನು ಕಂಡು ಶಿವಾಜಿಯು ತನ್ನದಂಡನ್ನು ಇಬ್ಭಾಗಿಸಿ, ಬೇರೆ ಬೇರೆ ದಾರಿಗಳಿಂದ ತನ್ನ ನಾಡಿಗೆ ಹೊರಟನು. ಅದನ್ನು ಕಂಡು ಬಹದ್ದೂರಖಾನನು ದಿಲೀರಖಾನನನ್ನು ಒಂದು ತಂಡವನ್ನು ಬೆನ್ನಟ್ಟಲಿಕೆ ಕಳುಹಿ, ಮತ್ತೊಂದು ತಂಡದಮೇಲೆ ತಾನೇ ಸಾಗಿಹೋದನು. ಅವರಂಗಾಬಾದಿನ ಬಡಗಲಿಗೆ ೩೮ ಮೈಲಿನ ಮೇಲಿರುವ **ಅಂತೂರ** ಕೋಟೆಯ ಬಳಿಯಲ್ಲಿ ಮರಾಟರು ಅವನಿಗೆ ಸಿಕ್ಕರು. ಕೂಡಲೆ ಅವನು ಅವರ ಮೇಲೆ ಬಿದ್ದು ಅವರನ್ನು ಸದೆ ಬಡಿದು ಓಡಿಸಿದ್ದರಿಂದ, ಅವರು ತಂದ ಸುಲಿಗೆಯು ಅವನ ಕಯ್ಸೇರಿತು. ಮರಾಟರು ಸುಲಿದು ತಂದ ಕುದುರೆಗಳನ್ನು ಅವುಗಳ ಒಡೆಯರಿಗೆ ಕೊಟ್ಟು, ಉಳಿದ ಸುಲಿಗೆಯನ್ನು ರಾಜಧಾನಿಗೆ ಕಳುಹಿ, ನೆರೆಯಲ್ಲಿ **ದುರ್ಗಾಪುರ** ಎಂಬ ಊರಲ್ಲಿ ಪಾಳೆಯ ಹಾಕಿದನು. ಮರು ದಿವಸ ಮೊಗಲರು ಅವರಂಗಾಬಾದಿಗೆ ಹೊರಟಾಗ ಹೊಂಚುಹಾಕಿಕೊಂಡಿದ್ದ ೭೫೦ ಮಂದಿ ಮರಾಟ ರಾಹುತರು **ಬಕಾಪುರ**ವೆಂಬಲ್ಲಿ ಮೊಗಲರ ಮೇಲೆ ಕಾಣಿಸಿಕೊಂಡರು. ಸಹಾಯಕ್ಕೆ ಹೆಚ್ಚಿನ ದಂಡು ಬಂದುದರಿಂದ ಮರಾಟರು ಸೋತು ಓಡಿಹೋದರು. ೪೦೦ ಮಂದಿ ಮರಾಟರು ರಣದಲ್ಲಿ ಮಡಿದರು (ನವಂಬರ, ದಶಂಬರ ೧೬೭೨). ಬಹದ್ದೂರ ದಿಲೀರಖಾನರ ಚಟುವಟಿಕೆಯಿಂದ ಈ ವರ್ಷದಲ್ಲಿ ಮರಾಟರು ಮಾಡಿದ ವರ್‍ಹಾಡದ ದವಡು ಪೋಲಾಯಿತು. ಇನ್ನುಮುಂದೆ ಆಗಬಹುದಾದ ಅವರ ಅಭಿಯೋಗವನ್ನು ನಿಲ್ಲಿಸಲಿಕ್ಕೆ ಬಹದ್ದೂರಖಾನನು ಮುಖ್ಯ ಮುಖ್ಯ ದಾರಿಗಳಲ್ಲಿ ದಂಡಿನ ಠಾಣೆಗಳನ್ನಿಟ್ಟನು.

ಮನುಷ್ಯನು ತನ್ನ ಆತ್ಮಸಂಯಮನದಿಂದಲೂ ಇಂದ್ರಿಯ ನಿಗ್ರಹ ದಿಂದಲೂ ತನ್ನ ಇಚ್ಛಾಶಕ್ತಿಯನ್ನು ಬೇಕಾದಷ್ಟು ಬೆಳಿಸಿಕೊಳ್ಳಬಹುದು.

ಈ ಬಲಿತ ಶಕ್ತಿಯನ್ನು ತಡೆಯುವುದು ಬಲು ಕಷ್ಟ. ಒಂದು ದಿಕ್ಕಿನಲ್ಲಿ ಅದನ್ನು ಯಾರಾವರೂ ಘೋರಪ್ರಯತ್ನದಿಂದ ತಡೆದರೆ, ಒಡ್ಡು ಹಾಕಿದ ನೀರಿನಂತೆ ಅದು ಮತ್ತೊಂದು ಕಡೆಯಲ್ಲಿ ಹೊರಬಿದ್ದು ಕಾಣಿಸಿಕೊಳ್ಳುವುದು. ನಮ್ಮ ಚರಿತ್ರನಾಯಕನ ಇಚ್ಛಾಶಕ್ತಿಯು ಕೆಲಮಟ್ಟಿಗೆ ಬಲಿತುದರಿಂದ ಬಹದ್ದೂರಖಾನನು ವರ್ಹಾಡದ ಕಡೆಗೆ ಅದಕ್ಕೆ ತಡೆಹಾಕಲು, ಅದು ಪುಣೆಪ್ರಾಂತದಲ್ಲಿ ತನ್ನ ಹಾವಳಿಯನ್ನೆಬ್ಬಿಸಿತು. ಕೂಡಲೆ ಬಹದ್ದೂರನು ಅಲ್ಲಿಗೆ ದಂಡೆತ್ತಿ ಹೋಗಿ, ಚಾಮರಗುಂಡದ ನೆರೆಯಲ್ಲಿ ಮರಾಟರನ್ನು ನೆರೆ ಸೋಲಿಸಿ, ಅಲ್ಲಿಂದ ೮ ಮೈಲು ದೂರಿರುವ **ಪೆಡಗಾವ**ವೆಂಬಲ್ಲಿ ತನ್ನ ಪಾಳೆಯವನ್ನು ಹಾಕಿ, ಅಲ್ಲಿಯೊಂದು ಕೋಟೆಯನ್ನು ಕಟ್ಟಿಸಿ, ಅದಕ್ಕೆ ಬಾದಶಹನ ಅಪ್ಪಣೆಯಿಂದ **ಬಹದ್ದೂರಗಡ**ವೆಂಬ ಹೆಸರನ್ನು ಕೊಟ್ಟನು (ಅಗಸ್ಟ ೧೬೭೩).

ಸತ್ಯವೇ ಈ ಸೃಷ್ಟಿಯ ಮೂಲಾಧಾರವು. ನಮ್ಮ ಮನೆತನಗಳೂ ಊರುನಾಡುಗಳೂ ಸಮಾಜಸಂಸ್ಥೆಗಳೂ ಸತ್ಯದಲ್ಲೇ ನೆಲೆಗೊಂಡಿರುತ್ತವೆ.* ಸತ್ಯವುಳ್ಳ ನಡತೆಗೆ ಪ್ರಾಮಾಣಿಕತನವೆನ್ನುತ್ತಾರೆ. ಯಾವ ಗೃಹಸ್ಥನ ಹತ್ತಿಹೊಂದಿದವರೂ ನೆರೆಹೊರೆಯವರೂ ಗೆಳೆಯರೂ ಕಯ್ಕೆಳಗಿನವರೂ ಹೆಚ್ಚು ಪ್ರಮಾಣಿಕರಾಗಿರುವರೋ ಅಂತಹನು, ಅವನು ಸಾಮಾನ್ಯ ಪುರುಷನಾಗಲಿ, ಅಧಿಕಾರಿಯಾಗಲಿ, ಅರಸನಾಗಲಿ, ಚಕ್ರವರ್ತಿಯಾಗಲಿ, ಹೆಚ್ಚು ಶ್ರೇಯೋಭ್ಯುದಯುಗಳನ್ನು ತಪ್ಪದೆ ಹೊಂದುತ್ತಾನೆ. ಪ್ರಸ್ತುತ ಕಾಲದಲ್ಲಿದ್ದ ಮೂರುಮಂದಿ ಅರಸರೊಳಗೆ ನಮ್ಮ ಚರಿತ್ರನಾಯಕನಿಗೆ ಸಂಬಂಧಿಸಿದವರೊಳಗೆ ಹೆಚ್ಚುಮಂದಿ ಪ್ರಮಾಣಿಕರಿದ್ದುದರಿಂದ, ಜಯಲಕ್ಷ್ಮಿಯು ಅವನ ಕರವನ್ನು ಪಿಡಿದಳೆಂದು ಧಾರಾಳವಾಗಿ ಹೇಳಬಹುದು. ಸಿವಾಜಿಯ ಹತ್ತಿರಿದ್ದವರೊಳಗೆ ಅಪ್ರಮಾಣಿಕರು ಯಾರೂ ಇದ್ದಿಲ್ಲೆಂದು

---

* ಸತ್ಯದಿಂದಲೇ ಜಗದ ಸಂಸ್ಥಿತಿ ।
ಸತ್ಯದಿಂದಲೇ ಲೋಕಸಂಸ್ಥಿತಿ ।
ಸತ್ಯದಿಂದಲೇ ಧರ್ಮಸಂಸ್ಥಿತಿ ಮೋಕ್ಷಸಂಸ್ಥಾನ ॥
**ಕನ್ನಡ ಮಹಾಭಾರತ.**

ನಮ್ಮ ಅಭಿಪ್ರಾಯವಲ್ಲ. ಅವನ ಸಂಗಡಿಗರೊಳಗೆ ೧೦೦ ಕ್ಕೆ ೧೦ ಮಂದಿ ಅಪ್ರಮಾಣಿಕರಿದ್ದರೆ ಅವರಂಗಜೇಬನ ಕಯ್ಕೆಳಗಿನವರಲ್ಲಿ ೧೦೦ ಕ್ಕೆ ೪೦/೫೦ ಜನರಿದ್ದರೆಂತಲೂ ಅದಿಲ್ಶಾಹಿಯಲ್ಲಿ ೧೦೦ ಕ್ಕೆ ೭೦/೮೦ ಜನರು ಅಪ್ರಮಾಣಿಕರು ಇದ್ದರೆಂತಲೂ ಖಂಡಿತವಾಗಿ ಹೇಳಬಹುದು.

ಈ ಕಾಲಕ್ಕೆ ನಮ್ಮ ಚರಿತ್ರನಾಯಕನ ಮನಸ್ಸಿನಲ್ಲಿ ತನ್ನ ಹುಟ್ಟಿದ ಎಡೆಯಾದ ಜುನ್ನರದ ಬಳಿಯಲ್ಲಿದ್ದ ಸಿವನೇರಿ ಕೋಟೆಯನ್ನು ಹಿಡಿದು ಕೊಳ್ಳಬೇಕೆಂಬ ಲವಲವಿಕೆಯು ಹುಟ್ಟಿತು. ಅಲ್ಲಿಯ ಕಿಲ್ಲೆದಾರನು ಮೊದಲು ಬ್ರಾಹ್ಮಣನಾಗಿದ್ದು ಈಗ ಕುಲಗೆಟ್ಟು ಅಬ್ದುಲಅಜೀಜಖಾನ ನಾಗಿದ್ದನು. ಮೊಗಲರ ಕಿಲ್ಲೇದಾರರು ಲಂಚಗುಳಿಗಳಿರುತ್ತಾರೆಂಬ ತಿಳಿವಳಿಕೆಯಾದ್ದರಿಂದ ಸಿವಾಜಿಯು ಅವನ ಬಳಿಗೆ ಒಬ್ಬ ವಕೀಲನನ್ನು ಕಳುಹಿ, ಕೋಟೆಯನ್ನು ಬಿಟ್ಟುಕೊಟ್ಟರೆ ಗುಡ್ಡದಷ್ಟು ಹಣಕೊಡುವೆನೆಂದು ಸಂಧಾನ ನಡಿಸಿದನು. ಅಬ್ದುಲ ಅಜೀಜಖಾನನು ಜಾತಿಗೆಟ್ಟಿದ್ದರೂ ನೀತಿಗೆಟ್ಟಿದ್ದಿಲ್ಲ. ಆದ್ದರಿಂದ ಆ ಪ್ರಮಾಣಿಕ ಕಿಲ್ಲೆದಾರನು ತನ್ನನ್ನು ನೀತಿಭ್ರಷ್ಟನಾಗಿ ಮಾಡಲೆಳಸುವ ಸಿವಾಜಿಯನ್ನು ಮೋಸಗೊಳಿಸಬೇಕೆಂಬ ಆಲೋಚನೆಯಿಂದ ಕೋಟೆಯನ್ನು ಒಪ್ಪಿಸಲಿಕ್ಕೆ ಒಡಂಬಟ್ಟು, ಕೊಡಬಂದ ಹಣವನ್ನು ತೆಗೆದುಕೊಂಡು, ಗೊತ್ತುಮಾಡಿದ ದಿವಸ ೭೦೦ ರಾಹುತರನ್ನು ಕಳುಹಿ ಕೋಟೆಯನ್ನು ಸ್ವಾಧೀನಕ್ಕೆ ತೆಗೆದು ಕೊಳ್ಳಬೇಕೆಂದು ಹೇಳಿಕಳುಹಿ, ಅತ್ತ ಬಹದ್ದೂರಖಾನನಿಗೆ ಈ ಸಂಚಿನ ಎಲ್ಲ ವಿವರವನ್ನು ತಿಳುಹಿದನು. ನಿಯಮಿಸಿದ ದಿವಸ ಮರಾಟೆ ಸ್ವಾರರು ಬರಲು, ಅವಿತುಕೊಂಡಿದ್ದ ಮೊಗಲರ ಪಡೆಯು ಅವರ ಮೇಲೆ ಬಿದ್ದು ಅರ್ಧಕ್ಕಿಂತ ಹೆಚ್ಚು ಜನರನ್ನು ಕೊಂದು ಉಳಿದವರನ್ನು ಓಡಿಸಿಬಿಟ್ಟಿತು. ಸಿವಾಜಿಯು ಮೋಸಹೋದುದು ಇದೇ ಮೊದಲನೆಯ ಸಾರಿ ಎಂದು ತೋರುತ್ತದೆ (ಸಪ್ಟಂಬರ ೧೬೭೩).

ವರ್ಹಾಡ ಪುಣೆ ಪ್ರಾಂತಗಳ ದಾರಿಗಳು ಬಂದಾದರೂ ಅಹಮ್ಮದನಗರ ಸುಬೆಯನ್ನು ಒಳನುಗ್ಗಲಿಕ್ಕೆ ಅನುಕೂಲವಾದ ಸಿವನೇರಿ ಕೋಟೆಯು ದೊರೆಯದಿದ್ದರೂ ನಮ್ಮ ಚರಿತ್ರನಾಯಕನಿಗೆ ಅದಿಲ್ಶಾಹಿ ರಾಜ್ಯದಲ್ಲಿ ಮನದಣಿ ಲೂಟಿ ದೊರೆಯಿತು. ಸಿವನೇರಿಯಲ್ಲಿ ನಿಷ್ಫಲವಾದ ಲಂಚವು

ಪನ್ಹಾಳಪಲ್ಲಿ ಸಫಲವಾಯಿತು. ಅಲ್ಲಿಯ ಲಂಚಗುಳಿ ಕಿಲ್ಲೆದಾರನು ಹಣ ತೆಗೆದುಕೊಂಡು, ಆ ಕೋಟೆಯನ್ನು ಶಿವಾಜಿಗೆ ಒಪ್ಪಿಸಿದನು (೫ ಮಾರ್ಚ ೧೬೭೩). ಮುಂದೆ ಎರಡು ತಿಂಗಳ ಮೇಲೆ ಕಲ್ಲಿನಿಂದ ಕಟ್ಟಿದ ಸಾತಾರೆಯ ಕೋಟೆಯೂ ಲಂಚದ ಮೂಲಕವಾಗಿಯೇ ಶಿವಾಜಿಯ ಕಯ್ಸೇರಿತು (ಸಪ್ಟಂಬರ). ಇದಕ್ಕೂ ಮೊದಲೇ ಅಂದರೆ ಮೇ ತಿಂಗಳಲ್ಲಿ ಶಿವಾಜಿಯ ಸರನೌಬತ್ತನಾದ ಪ್ರತಾಪರಾವ ಗುರ್ಜರನು ಅತಿಸಂಪತ್ತಿಯುಳ್ಳ ಹುಬ್ಬಳ್ಳಿ ಪಟ್ಟಣವನ್ನು ಸುಲಿದು* ಅಪರಿಮಿತ ಲೂಟಿಯನ್ನು ಒಯ್ದನು. ಶಿವಾಜಿಯು ಕರ್ನಾಟಕದ ದೊಡ್ಡ ದೊಡ್ಡ ಊರುಗಳನ್ನು ಸುಲಿಯುತ್ತ ಗೋವೆಯ ಗಡಿಯಾದ ಕದ್ರೆಯವರೆಗೆ ಹೋದನು (ದಶಂಬರ ೧೬೭೩).

ಆದಿಲ್ಶಾಹಿಯ ಸರದಾರರು ಹೆಚ್ಚು ಸ್ವಾರ್ಥಪರರೂ ರಾಜನಿಷ್ಠೆಯಿಲ್ಲದವರೂ ಆಗಿದ್ದರೆಂದು ಹಿಂದೆ ಹೇಳಿರುತ್ತೇವಷ್ಟೇ. ೨ ನೆಯ ಅಲ್ಲಿ ಆದಿಲ್ಶಹನು ಸಾಯಲು (೨೪ ನವಂಬರ ೧೬೭೨), ಅವನ ೫ ವರುಷದ ಮಗ ಸಿಕಂದರಶಹನು ಪಟ್ಟವೇರಿದನು. ದರಬಾರಿನಲ್ಲಿ ಪಂಗಡಗಳಾಗಿ ರಾಜ್ಯದಲ್ಲೆಲ್ಲ ಅನಾಯಕತ್ವವು ತಲೆದೋರಲಾರಂಭಿಸಿತು. ಪ್ರತಿಯೊಬ್ಬ ಸರದಾರನು ಒಟ್ಟುರಾಜ್ಯದ ಹಿತವನ್ನು ಬದಿಗೊತ್ತಿ, ತನ್ನ ಹಿತವನ್ನು ಸಾಧಿಸಿಕೊಳ್ಳಲು ಹೆಣಗುತ್ತಿದ್ದನು. ಈ ಕರ್ನಾಟಕದ ದೌಡಿನಲ್ಲಿ ಶಿವಾಜಿಯು ತನ್ನ ದಂಡನ್ನು ಇಬ್ಭಾಗಿಸಿದ್ದರಿಂದ ಆದಿಲ್ಶಾಹಿ ದಳವಾಯಿಗಳು ಮರಾಟರನ್ನು ಅಡ್ಡಗಟ್ಟಿ, ಪೂರ್ಣವಾಗಿ ಮುರಿಬಡಿಯ ಬಹುದಾಗಿತ್ತು. ಹಾಗೆ ಮಾಡದೆ ಬಾಹಲೋಲಖಾನನು ಬಂಕಾಪುರದಲ್ಲಿಯೂ ಸರ್ಜಾಖಾನನು ಚಂದಗಡದಲ್ಲಿಯೂ ಅವರನ್ನು ಸೋಲಿಸಿ, ತಮ್ಮ ತಮ್ಮ ಜಹಗೀರುಗಳಿಂದ ಅವರನ್ನು ಅಟ್ಟಿಬಿಟ್ಟರು. ಕಡಿದಷ್ಟು ತುರಿಸಿಕೊಳ್ಳುವುದೇ ಅವರ ಪೇರ್ಗೋರಿಕೆಯಾಗಿತ್ತು.

ಶಿವಾಜಿಯು ದೂರದಲ್ಲಿ ಸಮುದ್ರದ ದಂಡೆಯ ಮೇಲಿದ್ದುದನ್ನು ನೋಡಿ, ಬಾಹಲೋಲಖಾನನು ಪನ್ಹಾಳಕೋಟೆಯನ್ನು ಮುತ್ತಿದನು. ಈ ಸುದ್ದಿಯನ್ನು ಕೇಳಿ ಶಿವಾಜಿಯು ಪ್ರತಾಪರಾಯನನ್ನು ಆ ಮುತ್ತಿಗೆಯ

* ಈ ಪಟ್ಟಣದ ಸುಲಿಗೆಯಲ್ಲಿ ದೊರೆತಷ್ಟು ಹಣವು ಬೇರೆ ಯಾವ ಸುಲಿಗೆಯಲ್ಲಿಯೂ ದೊರೆಯಲಿಲ್ಲೆಂದು ಕೇಳೂಸಕರರು ಬರೆಯುತ್ತಾರೆ ಪುಟ ೩೪೫.

ನ್ನೆಬ್ಬಿಸಲಿಕ್ಕೆ ಕಳುಹಿದನು. ಆವನು ದಾರಿಯಲ್ಲಿ ಊರುಗಳನ್ನು ಸುಲಿಯುತ್ತ ವಿಜಾಪುರದ ಬಾಗಿಲಿನ ವರೆಗೆ ಹೋದನು. ಅಲ್ಲಿಯ ವಜೀರನಾದ ಖವಾಸಖಾನನು ಹೆದರಿ ಬಾಹಲೋಲನನ್ನು ಕರಿಸಿದನು. ಅವನು ಸಣ್ಣ ದಂಡಿನೊಡನೆ ಬರುತ್ತಾನೆಂಬ ಸುದ್ದಿಯನ್ನು ಕೇಳಿ, ಚಾಣಾಕ್ಷನಾದ ಪ್ರತಾಪರಾಯನು ಅವನನ್ನು **ಉಮ್ರಾಣಿ** ಎಂಬಲ್ಲಿ ಅಡ್ಡಗಟ್ಟಿ ಅವನ ದಂಡನ್ನು ಸುತ್ತುಗಟ್ಟಿದನು. ಬೆಳಗಿನಿಂದ ಸಂಜೆಯ ವರೆಗೆ ಕಡುಗಾಳೆಗ ವೆಸಗಿತು. ಮುಸಲ್ಮಾನರು ಬಹಳಮಂದಿ ರಣದಲ್ಲಿ ಮಡಿದರು. ಕತ್ತಲಾದ ಬಳಿಕ ಬಾಹಲೋಲನು ಕಾಳಗವನ್ನು ನಿಲ್ಲಿಸಿ, ತನಗೆ ಸುರಕ್ಷಿತವಾಗಿ ಹೋಗಗೊಡಬೇಕೆಂದು ಬೇಡಿಕೊಂಡುದರಿಂದ, ಪ್ರತಾಪರಾಯನು ಏನು ಕಾರಣದಿಂದಲೊ ಅವನಿಗೆ ಹೋಗಗೊಟ್ಟು, ತಾನು ಗೋವಳಕೊಂಡ ತೈಲಂಗಣ ವರ್‍ಹಾಡಪ್ರಾಂತಗಳನ್ನು ಸುಲಿಯುತ್ತ ನಡೆದನು. ಅತ್ತ ಬಾಹಲೋಲನು ತಿಕೋಟಿಗೆ ಹೋಗಿ, ವಿಜಾಪುರದಿಂದ ಹೊಸದಂಡನ್ನು ತರಿಸಿಕೊಂಡು ಮತ್ತೆ ಪನ್ಹಾಳದ ಕಡೆಗೆ ಹೋಗಿ, ಸಿವಾಜಿಯ ಬರವನ್ನು ಎದುರು ನೋಡುತ್ತ ಕುಳಿತನು (ಫೆಬ್ರವರಿ ೧೬೭೪). ಇದೇ ಸುಮಾರಿಗೆ ಕೊಂಕಣವನ್ನು ಒಳಸುಗ್ಗಬಂದ ದಿಲೀರಖಾನನನ್ನು ಮರಾಟರು ಸೋಲಿಸಿದರೆಂದು ಇಂಗ್ಲಿಷ ವರ್ತಕರು ಬರೆದಿಟ್ಟಿದ್ದಾರೆ.

ಉಮ್ರಾಣಿ ಬವರದ ವಿವರವನ್ನೂ ಬಾಹಲೋಲಖಾನನ ಸೆಣಸಾಟವನ್ನೂ ಕೇಳಿ ಸಿವಾಜಿಯು ಸಿಟ್ಟು ಬೆಂಕಿಯಾದನು. ಆ ಕೋಪದ ಉದ್ರೇಕದಲ್ಲಿ ಅವನು ಪ್ರತಾಪರಾಯನಿಗೆ ಒಂದು ನಿಷ್ಠುರವಾದ ಪತ್ರವನ್ನು ಬರೆದನು. ಅದರಲ್ಲಿ ಪ್ರತಾಪರಾಯನು ಉಮ್ರಾಣಿಯಲ್ಲಿ ಬಾಹಲೋಲಖಾನನನ್ನು ಸದೆಬಡಿಯದೆ ಬಿಟ್ಟುದು ದೊಡ್ಡ ತಪ್ಪಾಯಿತೆಂತಲೂ ಅವನ ದಂಡನ್ನು ಪೂರ್ಣವಾಗಿ ನಾಶಮಾಡುವುದೇ ಅದಕ್ಕೆ ತಕ್ಕ ಪ್ರಾಯಶ್ಚಿತ್ತವೆಂತಲೂ ಆ ಪ್ರಾಯಶ್ಚಿತ್ತವನ್ನು ತೆಗೆದುಕೊಂಡ ಹೊರತು ತನಗೆ ಮೋರೆಯನ್ನು ತೋರಿಸಬಾರದೆಂತಲೂ ಬರೆದಿತ್ತು.

ಪ್ರತಾಪರಾಯ ಗುರ್ಜರನು ಅತಿಮಾನಿಯಾಗಿದ್ದನು. ತನ್ನ ಒಡೆಯನ ಈ ಕಠೋರ ಪತ್ರವನ್ನು ನೋಡಿದಕೂಡಲೆ ಅವನ ಮನಸ್ಸು ಅತಿ

ಶಯವಾಗಿ ನೊಂದಿತು; ಅವನಿಗೆ ಜೀವವೇ ಬೇಸರವಾಯಿತು. ಯಾವಾಗ ಆ ಮೋಸಗಾರನಾದ ಬಾಹಲೋಲಖಾನನನ್ನು ದಂಡಿಸಿ, ತನ್ನ ಒಡೆಯನ ಒಲುಮೆಯನ್ನು ಸಂಪಾದಿಸುವೆನೋ ಎಂಬ ವಿಚಾರವು ಅವನ ಮನಸ್ಸಿನಲ್ಲಿ ಕುದಿಯಲಾರಂಭಿಸಿತು. ಕೂಡಲೆ ಅವನು ತಿರುಗಿ ಬಾಹಲೋಲನಿದ್ದಲ್ಲಿಗೆ ಹೊರಟು ಬಂದನು. ಎರಡೂ ದಂಡುಗಳು **ನೇಸರಿ*** ಯ ಕಣಿವೆಯಲ್ಲಿ ಕೂಡಿದವು. ಪ್ರತಾಪರಾಯನು ಸಿಟ್ಟಿನ ರಭಸದಲ್ಲಿ ತನ್ನ ದಳವಾಯಿತನವನ್ನು ಮರೆತು ದಂಡನ್ನು ಹಿಂದೆಬಿಟ್ಟು, ೬ ಮಂದಿ ಸ್ವಾರರೊಡನೆ ಮುಂದರಿದು ಹಗೆಗಳ ಮೇಲೆ ಹುರುಪಿನಿಂದ ಬಿದ್ದನು. ಸಾವಿರಾರು ಮಂದಿಗೆ ೭ ಜನರು ಈಡೇ? ಅರಕ್ಷಣದಲ್ಲಿ ಶತ್ರುಗಳು ಅವರನ್ನು ತುಂಡರಿಸಿ ಚೆಲ್ಲಿದರು!!! ಮರಾಟರ ದಂಡಿನೊಳಗೆ ಎಷ್ಟೋ ಮಂದಿ ಮಡಿದು ಬಿದ್ದರು. ಆನಂದರಾಯನೆಂಬವನು ಉಳಿದವರನ್ನು ಒಟ್ಟುಗೂಡಿಸಿಕೊಂಡು ಓಡಿಹೋದನು.

ಈ ಅನರ್ಥಕರವಾದ ಪ್ರತಾಪರಾಯನ ಆತ್ಮಘಾತದ ಸುದ್ದಿಯನ್ನು ಕೇಳಿ, ಸಿವಾಜಿಯು ಮರಮರ ಮರಗಿದನು. ತಾನು ಸಿಟ್ಟಿನಿಂದ ಅವನಿಗೆ ಹಾಗೆ ಬರೆದುದು ತಪ್ಪಾಯಿತೆಂದು ಹಳಹಳಿಸಿದನು. ಆದರೆ ಅದರಿಂದ ಪ್ರಯೋಜನವೇನು? ಆದುದು ಆಗಿಹೋಯಿತು. ಪ್ರತಾಪರಾಯನು ಪುನಃ ಜೀವಂತನಾಗಿ ಬರುವ ಸಂಭವವಿದ್ದಿಲ್ಲ. ಆದ್ದರಿಂದ ಸಿವಾಜಿಯು ಅವನ ಹೆಂಡರು ಮಕ್ಕಳಿಗೆ ಇನಾಮನ್ನು ಹಾಕಿಕೊಟ್ಟದಲ್ಲದೆ, ಅವನ ಮಗಳನ್ನು ತನ್ನ ಮಗನಾದ ರಾಜಾರಾಮನಿಗೆ ಮದುವೆ ಮಾಡಿಕೊಂಡನು. ಬಳಿಕ ಸಿವಾಜಿಯು ಪ್ರತಾಪರಾಯನ ಸ್ಥಳದಲ್ಲಿ **ಹಂಸಾಜಿಮೋಹಿತೆ** ಎಂಬವನನ್ನು ಸರನೌಬತ್ತನಾಗಿ ನಿಯಮಿಸಿ, ಅವನಿಗೆ **ಹಂಬೀರರಾವ**ನೆಂಬ ಹೊಸ ಹೆಸರನ್ನು ಕೊಟ್ಟು, ಹಗೆಯಾದ ಬಾಹಲೋಲಖಾನನನ್ನು ಸೋಲಿಸದೆ

---

* ಈ ಊರು ಯಾವುದೆಂಬುದು ಸರಿಯಾಗಿ ಗೊತ್ತಾಗುವದಿಲ್ಲ. ಜಡೆಯ ಶಕಾವಳಿಯಲ್ಲಿ ನಿವತಿ ಎಂದು ಬರೆದಿರುತ್ತದೆ. ಬೆಳಗಾವಿಯಿಂದ ೧೮ ಮೈಲಿನ ಮೇಲಿರುವ ನೇಸರಿಯು ಪನ್ಹಾಳದಿಂದ ಸುಮಾರು ೨೦೦ ಮೈಲು ದೂರಿರುವುದರಿಂದ ಬಾಹಲೋಲಖಾನನು ಅಲ್ಲಿಗೆ ಬರುವ ಸಂಭವವು ತೀರ ಕಡಮೆ.

ತಿರುಗಿ ಬರಬೇಡ ಎಂದು ಕಟ್ಟಪ್ಪಣೆಯನ್ನಿತ್ತು, ಅವನನ್ನು ದಂಡಿನೊಡನೆ ಕಳುಹಿದನು.

ಹೊಸದಾಗಿ ದೊರೆತ ಸರನೌಬತ್ತಗಿರಿಯಿಂದ ಉಬ್ಬಿದ ಹಂಬೀರ ರಾಯನು ಬಾಹಲೋಲಖಾನನ್ನು ಅರಸುತ್ತ ಕೊಲ್ಹಾಪುರದ ಕಡೆಗೆ ನಡೆದನು. ಅಲ್ಲಿ ಹೋಗಿ ನೋಡಲು, ಬಾಹಲೋಲನ ನೆರವಿಗೆ ದಿಲೀರಖಾನನು ತನ್ನ ದಂಡಿನೊಡನೆ ಬಂದಿದ್ದನು. ಇಬ್ಬರೂ ದಳವಾಯಿಗಳು ಹೊಂಚು ಹಾಕಿಕೊಂಡು ಮರಾಟರನ್ನು ಎದುರುನೋಡುತ್ತ ಕುಳಿತ್ತಿದ್ದರು. ಹಂಬೀರ ರಾಯನ ಸುಳವನ್ನು ಕಂಡ ಕೂಡಲೆ ಅವರು ಹಸಿದ ಹಾವಿನಂತೆ ಅವನ ಮೇಲೆ ಏರಿ ಬಂದರು. ಅವನು ಹೆದರಿ ಹವ್ವಾರಿ ಕಾಲಿಗೆ ಬುದ್ಧಿ ಹೇಳಿದನು. ಹಗೆಗಳು ಬೆನ್ನಟ್ಟಿದರು. ಚಪಳರಾದ ಮರಾಟರು ದಿನಕ್ಕೆ ೪೫ ಮೈಲಿನಂತೆ ಓಡಿದ್ದರಿಂದ ಹೆಬಗರಾದ ಮುಸಲರು ಅವರನ್ನು ಹಿಡಿಯುವುದು ಅಸಾಧ್ಯವೆಂದೆಣಿಸಿ ಬೆನ್ನಟ್ಟುವುದನ್ನು ಬಿಟ್ಟು, ತಿರುಗಿ ತಮ್ಮ ತಮ್ಮ ಸ್ಥಳಕ್ಕೆ ಹೋದರು.

ಕೊಲ್ಹಾಪುರದಿಂದ ಆಗ್ನೇಯಕ್ಕೆ ಓಡಿಹೋದ ಹಂಬೀರರಾಯನು ಬಾಹಲೋಲಖಾನನ ಜಹಗೀರಾದ ಬಂಕಾಪುರ ಪ್ರಾಂತವನ್ನು ಹೊಕ್ಕು, ಬಂಕಾಪುರದಿಂದ ೨೪ ಮೈಲಿರುವ **ಪೆಂಚ*** ಎಂಬ ಪಟ್ಟಣವನ್ನು ಸುಲಿದನು. ಈ ಲೂಟಿಯಲ್ಲಿ ಅವನಿಗೆ ಒಂದೂವರೆ ಲಕ್ಷ ಹೊನ್ನುಗಳು ದೊರೆತವು. ಈ ಲೂಟಿಯನ್ನು ೩,೦೦೦ ಎತ್ತುಗಳ ಮೇಲೆ ಹೇರಿಸಿಕೊಂಡು ತಿರುಗಿ ಬರುವಾಗ, ಅಡಬಡಿಸಿ ಬಂದ ಬಾಹಲೋಲಖಾನ ಖಿಜ್ರಖಾನರು ಹಂಬೀರರಾಯನನ್ನು ಬಂಕಾಪುರದ ನೆರೆಯಲ್ಲಿ ಅಡ್ಡಗಟ್ಟಿದರು. ಎರಡೂ ದಂಡುಗಳ ನಡುವೆ ನಿಕರದ ಕಾಳಗವಾಯಿತು. ಖಿಜ್ರಖಾನನ ತಮ್ಮನು ಸತ್ತನು; ಮುಸಲರು ಸೋತು ಓಡಿದರು. ೫೦೦ ಕುದುರೆಗಳೂ ೨ ಆನೆಗಳೂ

---

* ಬಂಕಾಪುರದ ನೆರೆಯಲ್ಲಿ ಪೆಂಚ ಎಂಬ ಊರು ಇಲ್ಲ. ನಾರಾಯಣ ಸೇಣ್ವಿ ಎಂಬವನ ಪತ್ರದಲ್ಲಿ ಈ ಹೆಸರು ಇರುತ್ತದೆ. ಒಬ್ಬ ಡಚ್ಚವರ್ತಕನು ಹೊನ್ನಪೇಟೆಯನ್ನು ಮರಾಟರು ಸುಲಿದರೆಂದು ಬರೆಯುತ್ತಾನೆ. ಇದು ಹೊಸಪೇಟೆಯಾದರೆ ಬಳ್ಳಾರಿಯ ಹತ್ತರಿರುತ್ತದೆ; ಬಂಕಾಪುರದ ಹತ್ತರಲ್ಲ.

ಎಷ್ಟೋ ಯುದ್ಧಸಾಮಗ್ರಿಗಳೂ ಮರಾಟರ ಕಯ್ಸೇರಿದವು (ಮಾರ್ಚ ೧೬೭೪). *

ಬಾಹಲೋಲಖಾನನು ಖಂಗಿನವನಾಗಿದ್ದನು. ಮರಾಟರು ತನ್ನ ಆನೆ ಕುದುರೆಗಳನ್ನು ಹಿಡಿಕೊಂಡುದರಿಂದ ಅವನ ಮನಸ್ಸು ಬಹಳವಾಗಿ ನೊಂದಿತು. ಆದ್ದರಿಂದ ಅವನು ಅಡಾಡಿಯಿಂದ ಹೊಸದಂಡು ತರಿಸಿ, ಒತ್ತರದಿಂದ ಹೋಗಿ ಹಂಬೀರರಾಯನನ್ನು ಮತ್ತೆ ಅಡ್ಡಗಟ್ಟಿದನು. ಹಂಬೀರ ರಾಯನು ತಾನು ತಂದ ಸುಲಿಗೆಯನ್ನು ತನ್ನ ಒಡೆಯನಿಗೆ ಒಪ್ಪಿಸಲಿಕ್ಕೆ ಹಾತೊರೆಯುತ್ತಿದ್ದರಿಂದ ಮುಸಲ್ಮಾನರೊಡನೆ ಕಾಳಗಕ್ಕೆ ನಿಲ್ಲದೆ, ಹೇಗಾದರು ಮಾಡಿ ತಪ್ಪಿಸಿಕೊಂಡು ಹೋಗಲಿಕ್ಕೆ ಅಡಬಡಿಸಿದನು. ಬಾಹಲೋಲನು ಅವನನ್ನು ಬೆನ್ನಟ್ಟಿ ೧,೦೦೦ ಕುದುರೆಗಳನ್ನೂ ಎಷ್ಟೋ ಲೂಟಿಯನ್ನೂ ಹಿಡಿದುಕೊಂಡನೆಂದು ಮುಸಲ್ಮಾನ ಇತಿಹಾಸಕಾರರು ಬರೆಯುತ್ತಾರೆ. ಹಂಬೀರರಾಯನು ಉಳಿದ ಸುಲಿಗೆಯನ್ನು ಸಿವಾಜಿಗೆ ಒಪ್ಪಿಸಿ, ಬಗಲಾಣ (ನಾಸಿಕದ ಉತ್ತರಭಾಗ) ವನ್ನು ಸುಲಿಯಲಿಕ್ಕೆ ಹೊರಟನು (ಎಪ್ರಿಲ ೧೬೭೪).

ಖೈಬರಕಣಿವೆಯಲ್ಲಿ ಅಫಗಾಣರು ದಂಗೆಯನ್ನೆಬ್ಬಿಸಿದ್ದರೆಂದು ಹಿಂದೆ ಹೇಳಿರುತ್ತೇವಷ್ಟೇ. ಅವರು ದಿನದಿನಕ್ಕೆ ಹೆಚ್ಚೆಚ್ಚು ಪ್ರಬಲರಾಗಿ ಬಾದಶಹನ ದಂಡನ್ನು ಹಿಮ್ಮೆಟ್ಟಿಸತೊಡಗಿದ್ದರಿಂದ ಅವರಂಗಜೇಬನಿಗೆ ಸ್ವತಃ ಅಲ್ಲಿಗೆ ಹೊರಡಬೇಕಾಯಿತು (ಎಪ್ರಿಲ). ಮುಂದಿನ ತಿಂಗಳು ದಿಲೇರ ಖಾನನು ಬಾದಶಹನಿದ್ದೆಡೆಗೆ ಹೋದಕಾರಣ ದಕ್ಷಿಣದ ಸುಬೇದಾರನಾದ ಬಹದ್ದೂರಖಾನನು ದಂಡು ದಳವಾಯಿಗಳಿಲ್ಲುದರಿಂದ ಸುಮ್ಮನೆ ಕಯ್ಮು

---

* ಸಭಾಸದನು ಈ ಕಾಳೆಗವು ಬಂಕಾಪುರದಲ್ಲಿ ಆಗದೆ ಸಂಪಗಾವಿಯಲ್ಲಿ ಆಯಿತೆಂತಲೂ, ಹುಸೇನಖಾನಮಿಯಾನನೆಂಬವನು ಹಂಬೀರರಾಯನ ಮೇಲೆ ಕಾಣಿಸಿಕೊಂಡು ಸೋತು ಸೆರೆಸಿಕ್ಕನೆಂತಲೂ, ೪,೦೦೦ ಕುದುರೆಗಳೂ ೧೨ ಆನೆಗಳೂ ಹೇರಳವಾದ ಲೂಟಿಯೂ ಮರಾಟರಿಗೆ ದೊರೆಯಿತೆಂತಲೂ ಬರೆಯುತ್ತಾನೆ. ಜಡೆಯು ಮಾರ್ಚ ತಿಂಗಳ ಕೊನೆಗೆ ಮರಾಟರು ಸಂಪಗಾವಿಯನ್ನು ಸುಲಿದರೆಂತಲೂ ಆನಂದರಾಯನು ಖಿಜ್ರಖಾನನನ್ನು ಸೋಲಿಸಿ ೨ ಆನೆಗಳನ್ನು ಹಿಡಿಕೊಂಡನೆಂತಲೂ ಬರೆಯುತ್ತಾನೆ.

ಚ್ಚಿಕೊಂಡು ಕೂಡ್ರಬೇಕಾಯಿತು (ನೋ ೧೬೭೪). ಅದಿಲ್ಶಾಹಿಯು ತನ್ನ ಸರದಾರರ ಸ್ವಾರ್ಥಪರತೆಯ ಮೂಲಕವಾಗಿ ನಿರ್ಬಲವಾದ್ದರಿಂದ ಆ ಸರಕಾರಕ್ಕೆ ಇದ್ದ ನಾಡನ್ನೇ ಇಟ್ಟುಕೊಳ್ಳುವುದು ದುಸ್ತರವಾಯಿತು.

ಈ ವರ್ಷ ಮಳೆಗಾಲವು ಬಹುಕಾಲವಿದ್ದುದರಿಂದಲೂ ಮಳೆಯು ಅತಿಶಯವಾಗಿ ರೋಗಗಳು ಹಬ್ಬಿದ್ದರಿಂದಲೂ ಸಿವಾಜಿಯು ತನ್ನ ಪಾಗೆಯ ಕುದುರೆಗಳನ್ನು ಬೇರೆ ಬೇರೆ ಸ್ಥಳಗಳಲ್ಲಿರಿಸಿ, ಅವುಗಳ ಆರೋಗ್ಯವನ್ನು ಕಾಯ್ದುಕೊಂಡನು. ಮಳೆಯು ವಿಪರೀತವಾದ್ದರಿಂದಲೂ ಅದಿಲ್ಶಾಹಿಯ ಮತ್ತು ಮೊಗಲರ ಕಾಟವು ಕಡಮೆಯಾದ್ದರಿಂದಲೂ ನಮ್ಮ ಚರಿತ್ರ ನಾಯಕನಿಗೆ ತುಸು ಬಿಡುವು ದೊರೆತು ಅವನ ಲಕ್ಷ್ಯವು ರಾಜ್ಯದ ಸುವ್ಯವಸ್ಥೆಯ ಕಡೆಗೆ ಹೋಯಿತು.

ಹಿಂದೆ ೩ ನೆಯ ಪ್ರಕರಣದ ಕೊನೆಯಲ್ಲಿ ಸಿವಾಜಿಯ ರಾಜ್ಯದ ವಿಸ್ತಾರವನ್ನು ಬರೆದಿರುತ್ತೇವಷ್ಟೇ. ಕಳೆದ ೧೮ ವರ್ಷಗಳಲ್ಲಿ ಅವನು ತನ್ನ ನಾಡನ್ನು ಬಹಳವಾಗಿ ಬೆಳೆಸಿಕೊಂಡು, ಮೊಗಲ್ ಬಾದಶಹನ ಪ್ರತಿಸ್ಪರ್ಧಿಯೂ ಅದಿಲಶಹನ ಸಮಾನಸ್ಕಂಧನೂ ಆಗಿದ್ದನು. ೧೬೫೯/೬೦ ರಲ್ಲಿ ರಾಜಾಪುರ, ವೆಂಗುರ್ಲೆ ಈ ಎರಡು ಬಂದರಗಳ ಹೊರತು ಎಲ್ಲ ರತ್ನಾಗಿರಿ ಜಿಲ್ಲೆಯು ಅವನ ಕಯ್ಸೇರಿತು. ೧೬೬೩ ರಲ್ಲಿ ಈ ಎರಡು ಬಂದರಗಳು ಅವನ ವಶವಾದವು. ಕುಲಾಬಾ ಜಿಲ್ಲೆಯ ಪಶ್ಚಿಮ ಭಾಗವನ್ನು ಈ ಮೊದಲೇ ಸಿದ್ದಿಯರಿಂದ ಅವನು ಗೆದ್ದುಕೊಂಡಿದ್ದನು. ೧೬೬೫ ರಲ್ಲಿ ಪುರಂದರದ ಒಪ್ಪಂದದಿಂದ ಮೊಗಲರಿಗೆ ಬಿಟ್ಟುಕೊಟ್ಟ ಪುಣೆ ಠಾಣೆ ಜಿಲ್ಲೆಗಳನ್ನು ಅವನು ೧೬೭೩ ರಲ್ಲ ತಿರುಗಿ ಕಸಿಕೊಂಡನು. ೧೬೭೧-೭೨ ರಲ್ಲಿ ನಾಶಿಕದ ಬಡಗಣ ಭಾಗವಾದ ಬಲಗಾಣವೂ ಮಿಾನುಗಾರರ ಸಂಸ್ಥಾನಗಳಾದ ಜಹ್ವಾರ ರಾಮನಗರಗಳೂ ಅವನ ರಾಜ್ಯಕ್ಕೆ ಕೂಡಿದವು. ೧೬೭೩ ರಲ್ಲಿ ಪನ್ಹಾಳಕೋಟೆಯೂ ೧೬೭೫ ರಲ್ಲಿ ಕೊಲ್ಹಾಪುರ ಪಟ್ಟಣವೂ ಫೋಂಡಕೋಟೆಯೂ ಅವನ ಹಸ್ತಗತವಾದ್ದರಿಂದ ಪಶ್ಚಿಮ ಕರ್ನಾಟಕದಲ್ಲಿ ಅವನ ಪ್ರವೇಶವಾಯಿತು. ಕರ್ನಾಟಕದಲ್ಲಿಯೂ ಪಶ್ಚಿಮ ದಂಡೆಯುದ್ದಕ್ಕೂ ಅವನು ಕಾಲುಚಾಚಿದುದನ್ನು ಮುಂದೆ ವಿವರಿಸುವೆವು.

ತನ್ನ ರಾಜ್ಯವು ಬೆಳೆದುದರಿಂದ ಶಿವಾಜಿಯು ಅದರ ೩ ಭಾಗಗಳನ್ನು—ಉತ್ತರಭಾಗ, ಕೊಂಕಣದ ಭಾಗ, ದಕ್ಷಿಣಭಾಗ—ಮಾಡಿ ಪ್ರತಿಯೊಂದು ಭಾಗಕ್ಕೆ ಒಬ್ಬ ಸರಕಾರಕೂನನನ್ನು ನೇಮಿಸಿದನು. ಉತ್ತರಭಾಗವು ಕಲ್ಯಾಣಭಿವಂಡಿಯಿಂದ ಸಾಲ್ಹೇರಿಯ ವರೆಗೆ ಹಬ್ಬಿತ್ತು. ಇದರಲ್ಲಿ ಉತ್ತರ ಕೊಂಕಣವೂ ಲೋಹಗಡದ ಪ್ರದೇಶವೂ ಶಹಾಜಿಯ ಹಳೆ ಜಹಗೀರು ಗಳೂ ೧೨ ಮಾವಳಗಳೂ ಸೇರಿದ್ದರಿಂದ ಇದು ಎಲ್ಲಕ್ಕೂ ದೊಡ್ಡಭಾಗ ವಾಗಿತ್ತು. ಇದರ ಆಡಳತವನ್ನು ಶಿವಾಜಿಯು ಪೇಶವೆಯನಿಗೆ ಒಪ್ಪಿಸಿದನು. ಎರಡನೆಯ ಕೊಂಕಣಭಾಗವು ಚೌಲದಿಂದ ದಾಭೋಳರಾಜಾಪುರಗಳ ವರೆಗೆ ಹಬ್ಬಿತ್ತು. ಇದರಲ್ಲಿ ಕುಡಾಳ ದೇಶವೂ ವೆಂಗುರ್ಲೆಯೂ ಸಮಾವೇಶವಾಗಿದ್ದವು. ಸೂರ್ನೀಸನಾಸ ಅಣ್ಣಾಜಿ ದತ್ತೊ ಎಂಬವನು ಇದರ ಸರಕಾರಕೂನನಾಗಿದ್ದನು. ಕೃಷ್ಣಾ ತುಂಗಭದ್ರೆಗಳ ನಡುವಿನ ನಾಡೇ ದಕ್ಷಿಣ ಭಾಗವಾಗಿತ್ತು. ಇದು ವಾಯಿಯಿಂದ ಕೊಪ್ಪಳದ ವರೆಗೆ ಹಬ್ಬಿತ್ತು. ವಾಕ್ನೀಸನಾದ ದತ್ತಾಜಿ ಪಂತನೇ ಇದರ ಸರಕಾರಕೂನನಾಗಿದ್ದನು. ಪನ್ಹಾಳವೇ ಇವನ ಮುಖ್ಯಸ್ಥಳವಾಗಿತ್ತು. ಈ ಸರಕಾರಕೂನರ ವಕೀಲರು ಶಿವಾಜಿಯ ದರಬಾರಿನಲ್ಲಿರುತ್ತಿದ್ದರು, ಮತ್ತು ವರ್ಷಕ್ಕೊಮ್ಮೆ ಇವರು ದರಬಾರಿಗೆ ಬಂದು ತಮ್ಮ ತಮ್ಮ ಭಾಗಗಳ ಲೆಕ್ಕಗಳನ್ನು ಒಪ್ಪಿಸಿ ತಿರುಗಿ ಹೋಗುತ್ತಿದ್ದರು. *

---

## ೮ ನೆಯ ಪ್ರಕರಣ

### ರಾಜ್ಯಾಭಿಷೇಕ.

ಹಿಂದಿನ ಪ್ರಕರಣದಲ್ಲಿ, ನಮ್ಮ ಚರಿತ್ರನಾಯಕನಿಗೆ ಮೊಗಲರಿಂದಲೂ ಆದಿಲ್ಶಾಹಿಯಿಂದಲೂ ಭಯವು ಇಲ್ಲದಂತೆ ಆದ್ದರಿಂದ ಅವನ ಮನಸ್ಸಿಗೆ ಸ್ವಾಸ್ಥ್ಯವುಂಟಾಯಿತೆಂದು ಬರೆದಿರುತ್ತೇವಷ್ಟೆ. ಇದೇ ಸುಸಂಧಿಯಲ್ಲಿ ಅವನ ರಾಜ್ಯಾಭಿಷೇಕದ ಮಹೋತ್ಸವವು ಅತಿ ವಿಜೃಂಭಣೆಯಿಂದ ರಾಯಗಡದಲ್ಲಿ ಯಥಾ ಸಾಂಗವಾಗಿ ನಡೆಯಿತು.

* ಶೇಷಾದ್ರಿ ರಡ್ಡಿ ಪುಟ ೨೧೫.

ಈ ರಾಜ್ಯಾಭಿಷೇಕದ ವಿಚಾರವು ಶಿವಾಜಿಯ ಮನಸ್ಸಿನಲ್ಲಿ ಎಂದು ಹೇಗೆ ಬಂತೆಂಬುದನ್ನು ನಿಶ್ಚಯವಾಗಿ ಹೇಳಲಿಕ್ಕಾಗುವುದಿಲ್ಲ. ಶಹಾಜಿ ರಾಜನ ಔರ್ಧ್ವದೇಹಿಕ ಕಾರ್ಯವನ್ನು ಅವನು ೧೬೬೪ಳ ಫೇಬ್ರುವರಿಯಲ್ಲಿ ಮಾಡಿ, ರಾಜಾ ಎಂಬ ಬಿರುದನ್ನು ಧರಿಸಿ, ತನ್ನ ಹೆಸರಿನ ನಾಣ್ಯಗಳನ್ನು ಮಾಡಿಸತೊಡಗಿದನೆಂದು ಹಿಂದೆ ಬರೆದಿರುತ್ತೇವಷ್ಟೇ. * ಆ ಕಾಲಕ್ಕೆನಾಲ್ಕೂ ಕಡೆಯಿಂದ ಸಾವಿರಾರು ಜನ ಬ್ರಾಹ್ಮಣರೂ, ನೂರಾರು ಮಂದಿ ಆಪ್ತೇಷ್ಟರೂ ಬಂದಿದ್ದರು. ದೊಡ್ಡದೊಡ್ಡ ಭೋಜನಸಮಾರಂಭಗಳಾದವು. ಆ ಸಮಯದಲ್ಲಿ ಕೂಡಿದ ಬ್ರಾಹ್ಮಣರು ರಾಜ್ಯಾಭಿಷೇಕದ ವಿಚಾರವನ್ನು ಎತ್ತಿದ್ದರೂ ಎತ್ತಿರಬಹುದು. ಅಥವಾ ಆಗ ಬಂದ ಆಪ್ತೇಷ್ಟರು ಅವನ ವೈಭವವನ್ನೂ ಸಡಗರವನ್ನೂ ನೋಡಿ ಹೊಟ್ಟೆಕಿಚ್ಚುಪಟ್ಟುದರಿಂದ ಶಿವಾಜಿಯ ಮನಸ್ಸಿನಲ್ಲಿ ರಾಜ್ಯಾಭಿಷೇಕದ ಅವಶ್ಯಕತೆಯು ತನ್ನಷ್ಟಕ್ಕೆ ತಾನೇ ಹುಟ್ಟಿರಬಹುದು. ಅದು ಹೇಗೇ ಇರಲಿ. ಈ ವಿಷಯದಲ್ಲಿ ಚರಿತ್ರಕಾರರು ಕೊಟ್ಟ ಮೂರು ಕಾರಣಗಳನ್ನು ಇಲ್ಲಿ ನಮ್ಮ ವಾಚಕರ ಮುಂದಿರಿಸುವೆವು. ಇವೆಲ್ಲ ಕಾರಣಗಳು ಒಟ್ಟುಗೂಡಿದ್ದರೂ ಕೂಡಿರಬಹುದು.

೧. ನಮ್ಮ ಚರಿತ್ರನಾಯಕನು ಅರಸುಮನೆತನಕ್ಕೆ ಸೇರಿದವನಾಗಿರಲಿಲ್ಲ. ಅವನು ಹೊಲಮಾಡಿಕೊಂಡು ಜೀವಿಸುತ್ತಿದ್ದ ಒಬ್ಬ ಗೌಡನ ಮೊಮ್ಮಗನಾಗಿದ್ದನು. ಅವನು ತನ್ನ ಶೌರ್ಯ, ಧೈರ್ಯ, ಬುದ್ಧಿಸಾಹಸಗಳಿಂದ ರಾಜ್ಯಲಕ್ಷ್ಮಿಯನ್ನು ಒಲಿಸಿಕೊಂಡು, ತನ್ನ ವಶವರ್ತಿಯಾಗಿ ಆಕೆಯನ್ನು ಇಟ್ಟುಕೊಂಡಿದ್ದರೂ ಅವನು ಆಕೆಯ ಮದುವೆಯ ಗಂಡನೆಂತಲೂ ಆಕೆಯು ಅವನ ಸಹಧರ್ಮಿಣಿಯೆಂತಲೂ ಯಾರೂ ಎಣಿಸುತ್ತಿರಲಿಲ್ಲ. ಸಾಮಾನ್ಯ ಜನರೊಳಗೆ ಎರಡನೆಯವನ ಹೆಂಡತಿಯನ್ನು ಓಡಿಸಿಕೊಂಡು ಹೋಗಿ ತನ್ನ ಮನೆಯಲ್ಲಿಟ್ಟುಕೊಂಡು ಆಕೆಯೊಡನೆ ಬಾಳ್ವೆ ಮಾಡುವವನಿಗೆ ಮಾನವಿದ್ದಷ್ಟೇ ಶಿವಾಜಿಗೆ ಆಗಿನ ಕಾಲದ ರಾಜರೊಳಗೆ ಮಾನವಿತ್ತು. ದಿಲ್ಲಿಯ ದರಬಾರಿನಲ್ಲಿ ಸಣ್ಣ ಜಮೀನುದಾರರೊಳಗೆ ಅವನ ಗಣನೆಯಾಗುತ್ತಿತ್ತು. ಕುತುಬ ಆದಿಲಶಹರು ಅವನನ್ನು ಬಂಡುಗಾರ

---

* ೫ ನೆಯ ಪ್ರಕರಣ ೧೨೦ ನೆಯ ಪುಟ.

ರೊಳಗೆ ಎಣಿಸುತ್ತಿದ್ದರು. ಆ ದರಬಾರುಗಳಲ್ಲಿ ಅವನ ವಕೀಲರಿಗೆ ಗೌರವ ವಿದ್ದಿದ್ದಿಲ್ಲ. ಮೊಗಲ ಬಾದಶಹ, ಕುತುಬಶಹ, ಅದಿಲ್ಯಹರೊಡನೆ ಮಾಡಿದ ಕರಾರುಗಳಿಗೆ ಅರಸರ ನಡುವೆ ಆಗುವ ಒಪ್ಪಂದಗಳ ಮಾನ್ಯತೆಯೂ, ಘನತೆಯೂ ಇದ್ದಿದ್ದಿಲ್ಲ. ಆದಿಲ್ಯಾಹಿಕುತುಬಶಾಹಿ ಬಾದಶಾಹಿಗಳ ಅಂಕಿತ ರಾದ ಸರದಾರರು, ಅವರು ಮರಾಟರಾಗಲಿ, ಮುಸಲ್ಮಾನರಾಗಲಿ, ತಾವು ಮನೆತನಸ್ಥರಾದ ಪುರಾತನ ಸರದಾರರೆಂತಲೂ ತಮ್ಮ ದರ್ಜೆಯು ಪುಂಡು ಪಾಳೆಯಗಾರನಾದ ಸಿವಾಜಿಗಿಂತಲೂ ಹೆಚ್ಚಿನದೆಂತಲೂ ನಿಜ ವಾಗಿ ನಂಬಿದ್ದರು. ಅವನು ಆಳುತ್ತಿದ್ದ ನಾಡಿನ ಜನರಲ್ಲಿ ಕೂಡ ಅವನ ವಿಷಯಕ್ಕೆ ರಾಜಭಕ್ತಿವಿಶ್ವಾಸಗಳಿರಲಿಲ್ಲ. ತಾವು ಬಾದಶಾಹಿ ಅಥವಾ ಅದಿಲ್ಯಾಹಿಯ ಪ್ರಜೆಗಳೆಂತಲೂ ತಾತ್ಪೂರ್ತಿಕವಾಗಿ ಸಿವಾಜಿಯ ಜುಲು ಮೆಯ ಅಧಿಕಾರಕ್ಕೆ ಒಳಪಟ್ಟವರೆಂತಲೂ ಅವರು ತಿಳಿಯುತ್ತಿದ್ದರು. ಸಿವಾಜಿಯ ಏರ್ಪಾಡು–ಕಾನೂನುಗಳಿಗೂ ಶಾಸನ ತಾಮ್ರಪಟಗಳಿಗೂ ಇರಬೇಕಾದಷ್ಟು ಗೌರವವೂ, ಪೂಜ್ಯಬುದ್ಧಿಯೂ ಅವರಲ್ಲಿರಲಿಲ್ಲ. ಈ ಎಲ್ಲ ಕುಂದುಕೊರತೆಗಳನ್ನು ಹೋಗಲಾಡಿಸಲಿಕ್ಕೂ ತನ್ನ ಮನೆತನ ದಲ್ಲಿ ಅರಸುತನವನ್ನು ನೆಲೆಗೊಳಿಸಲಿಕ್ಕೂ ಪ್ರಜೆಗಳಲ್ಲಿ ರಾಜನಿಷ್ಠಾಪೂಜ್ಯ ಬುದ್ಧಿಗಳನ್ನು ಬೆಳಿಸಲಿಕ್ಕೂ ನಮ್ಮ ಚರಿತ್ರನಾಯಕನು ಮೂರ್ಧಾಭಿಷಿಕ್ತ ರಾಜನಾಗಲಿಕ್ಕೆ ಹಾತೊರೆದನು.

೨. ಕಾಶಿಯಲ್ಲಿ ಗಾಗಾಭಟ್ಟನೆಂಬ ಒಬ್ಬ ಘನವಿದ್ವಾಂಸನಾದ ದೇಶಸ್ಥ ಬ್ರಾಹ್ಮಣನಿದ್ದನು. ಅವನ ನಿಜವಾದ ಹೆಸರು ವಿಶ್ವೇಶ್ವರಭಟ್ಟ. ಅವನ ತಂದೆಯು ಅಚ್ಚೆಯಿಂದ ಅವನನ್ನು ಗಾಗಾ ಎಂದು ಕರೆಯು ತ್ತಿದ್ದನು. ಆದ್ದರಿಂದ ಅದೇ ಹೆಸರು ವಾಡಿಕೆಯಲ್ಲಿ ಬಂತು. ಇವನು ನಯ್ಯಾಯಿಕನಾಗಿದ್ದು ಶೃತಿಸ್ಮೃತಿಪುರಾಣಗಳಲ್ಲಿ ಪಾರಂಗತನೆಂದು ಹೆಸರುವಾಸಿಯಾಗಿದ್ದನು.* ಇವನ ಮನೆತನವು ಪ್ರತಿಷ್ಠಾನ ಅಥವಾ

---

* ಇವನು ಬರೆದ ಜೈಮಿನಿ ಸೂತ್ರಟೀಕೆಯೂ ಭಟ್ಟಚಿಂತಾಮಣಿಯೆಂಬ ನ್ಯಾಯಗ್ರಂಥವೂ ಕಾಯಸ್ಥ ಧರ್ಮಪ್ರದೀಪ ಎಂಬ ಧರ್ಮಗ್ರಂಥವೂ ಈಗಲೂ ಪ್ರಸಿದ್ಧವಾಗಿವೆ.

ಪೈಠಣದಲ್ಲಿತ್ತು. ಇವನ ಪೂರ್ವಜನಾದ ರಾಮೇಶ್ವರಭಟ್ಟನೆಂಬುವನು ಕಾಶಿಯಲ್ಲಿ ಹೋಗಿ ವಾಸಮಾಡಿದ್ದರಿಂದ ಗಾಗಾಭಟ್ಟನು ಅಲ್ಲೇ ಬೆಳೆದು ದೊಡ್ಡವನಾಗಿದ್ದರೂ ಕೂಡಿದಾಗ ತನ್ನ ಮೂಲಸ್ಥಳವಾದ ಪೈಠಣಕ್ಕೆ ಬರುತ್ತಿದ್ದನು. ಒಮ್ಮೆ ಹೀಗೆ ಪೈಠಣಕ್ಕೆ ಬಂದಾಗ, ಸಿವಾಜಿಯು ಕರಿಸಿದ್ದರಿಂದಲೋ ಬೇರೆ ಏನೋ ಕಾರಣದಿಂದಲೋ ಅವನು ಸಿವಾಜಿಯ ಬೆಟ್ಟಿಗೆ ಬಂದು, ಅವನ ವಿನಯಭಕ್ತಿವಿಶ್ವಾಸಗಳಿಗೆ ಮೆಚ್ಚಿ, ಅವನ ಅಧಿಕಾರ ಸಂಪತ್ತುಗಳನ್ನೂ, ಅವನ ದಂಡುಮಾರ್ಬಲವನ್ನೂ ಅವನ ರಾಜ್ಯದಾಡಳತದ ಸಿಸ್ತನ್ನೂ ರಾಜ್ಯದ ವಿಸ್ತಾರವನ್ನೂ ಅವನ ಧೈರ್ಯ, ಸಾಹಸ, ಪರಾಕ್ರಮಗಳ ವರ್ಣನೆಯನ್ನೂ ನೋಡಿ ಕೇಳಿ ಸಂತೋಷಪಟ್ಟು, ಶಾಸ್ತ್ರವಿಧಿಯಂತೆ ಪಟ್ಟಗಟ್ಟಿಕೊಂಡರೆ ಅವನಿಗೂ, ಅವನ ಮನೆತನಕ್ಕೂ, ದೇಶಕ್ಕೂ ಹಿತವಾಗುವುದೆಂದು ಉಪದೇಶ ಮಾಡಿದ್ದರಿಂದ ದೇವಬ್ರಾಹ್ಮಣರಲ್ಲಿ ಅತಿನಂಬಿಕೆಯುಳ್ಳ ಸಿವಾಜಿಯು ತನ್ನ ಗುರುಗಳಾದ ರಾಮದಾಸಸ್ವಾಮಿಗಳ ಅನುಮತಿಯನ್ನು ಪಡೆದು, ರಾಜ್ಯಾಭಿಷೇಕದ ಪೂರ್ವಸಿದ್ಧತೆಯನ್ನು ಮಾಡತೊಡಗಿದನು.*

೩. ಶಹಾಜಿರಾಜನ ಉತ್ತರಕ್ರಿಯೆಯು ಮುಗಿದ ಬಳಿಕೋ ಅಥವಾ ಬೇರೆ ಮತ್ತೊಂದು ಸಂದರ್ಭದಲ್ಲಿಯೋ ಸಿವಾಜಿಯು ಒಂದು ದೊಡ್ಡ ಊಟದ ಸಮಾರಂಭವನ್ನು ಮಾಡಿಸಿದನು. ಆ ಕಾಲಕ್ಕೆ ಘೋರಪಡೆ ನಿಂಬಾಳಕರ ಮುಂತಾದ ದೊಡ್ಡ ದೊಡ್ಡ ಸರದಾರರು ಬಂದಿದ್ದರು. ಭೋಜನಶಾಲೆಯಲ್ಲಿ ಉಳಿದ ಮರಾಟೆ ಸರದಾರರಿಗೆಲ್ಲ ಮಣೆಗಳನ್ನೂ, ಬೆಳ್ಳಿಯ ತಾಟುಗಳನ್ನೂ ಹಾಕಿ, ಸಿವಾಜಿಯು ಕೂಡ್ರಲಿಕ್ಕೆ ಒಂದು ಎತ್ತರವಾದ ಡೊಳ್ಳಾರಿಗೆಯನ್ನಿಟ್ಟು ಅದರ ಮೇಲೆ ಗಾದಿಯನ್ನು ಹಾಸಿ, ಹಿಂದೆ ಆನಲಿಕ್ಕೆ ತಕ್ಕೆಯನ್ನಿಟ್ಟುದಲ್ಲದೆ, ಅದರ ಮುಂದಿದ್ದ ಮೇಜಿನ ಮೇಲೆ ಬಂಗಾರದ ತಾಟು, ಚಮಚೆ, ಬಟ್ಟಲುಗಳನ್ನು ಇರಿಸಿದ್ದರು. ಈ ಭೇದವನ್ನು ನೋಡಿ ನಿಂಬಾಳಕರ ಮುಂತಾದ ಬುನಾದಿಯ ಸರದಾರರು ಸಿಟ್ಟು ಬೆಂಕಿಯಾಗಿ ಕಣ್ಣು ಕೆಂಪಗೆ ಮಾಡಿಕೊಂಡು, ಸಿವಾಜಿಯು ತಮಗೆ

---

* ಸಭಾಸದ ಮತ್ತು ರಡಿ (ಪು. ೨೧೮—೧೯.

ಬುದ್ಧಿಪೂರ್ವಕವಾಗಿ ಅವಮಾನ ಮಾಡಲೆಣಿಸಿರುವನೆಂದು ಊಹಿಸಿ, ತುಟಿ ಬಿಚ್ಚಿ ಎರಡು ಮಾಡದೆ, ದುಮುದುಮು ಉರಿಯುತ್ತ ದುಮ್ಮನಸ್ಸಿನಿಂದ ಹೊರ ಹೊರಟರು. ಈ ಸುದ್ದಿಯು ಸಿವಾಜಿಗೆ ತಿಳಿಯಲು, ಅವನು ಅವರನ್ನು ಸಮಾಧಾನಮಾಡಲಿಕ್ಕೆ ವಿಶ್ವಪ್ರಯತ್ನಮಾಡಿದರೂ ಅವರ ಸಿಟ್ಟು ಇಳಿಯಲಿಲ್ಲ. ಸಿವಾಜಿಯು ಮೆಯ್ಸೊಕ್ಕಿನಿಂದ ಉಬ್ಬಿ, ತಮಗೆ ಅಪರದಿಷ್ಟಿಮಾಡಿದನೆಂತಲೂ ತಾವು ವಂಶಪರಂಪರೆಯಾಗಿ ಜಹಗೀರದಾರರಾದ್ದರಿಂದ ಸಿವಾಜಿಗಿಂತ ಎಷ್ಟೋ ಪಾಲಿಗೆ ಹೆಚ್ಚಿನವರೆಂತಲೂ ಸಿವಾಜಿಯು ರಾಜದ್ರೋಹದಿಂದಲೂ, ಪುಂಡತನದಿಂದಲೂ ನಾಡನ್ನು ದೊರಕಿಸಿದ್ದರಿಂದ ಅವನ ರಾಜ್ಯವು ಕಳವಿನ ಒಡವೆಯಂತೆ ತ್ಯಾಜ್ಯವೆಂತಲೂ ತಮಗಿರುವ ಛತ್ರಚಾಮರ ಬಿರುದಾವಳಿಗಳು ದಿಲ್ಲಿಯ ಬಾದಶಹನಿಂದಾಗಲಿ ವಿಜಾಪುರದ ಅದಿಲ್ಶಹನಿಂದಾಗಲಿ ಬಂದುದರಿಂದ ಅವು ಪವಿತ್ರವಾದವುಗಳೆಂತಲೂ ಮೋಸಸುಲಿಗೆಗಳಿಂದ ಸಂಪಾದಿಸಿದ ಸಿವಾಜಿಯ ಸಂಪತ್ತು ಸ್ಮಶಾನಘುಟಿಕೆಯಂತೆ ಅಸ್ಪೃಶ್ಯವಾದ್ದೆಂತಲೂ ಬಡಾಯಿಕೊಚ್ಚುತ್ತ ಭಡಭಡನೆ ತಮ್ಮ ತಮ್ಮ ಊರುಗಳಿಗೆ ಹೊರಟು ಹೋದರು.*

೧೬೭೪ ರಲ್ಲಿಯಾಗಲಿ ಮರುವರುಷಾಗಲಿ ನಮ್ಮ ಚರಿತ್ರನಾಯಕನು ರಾಜ್ಯಾಭಿಷೇಕ ಮಾಡಿಕೊಳ್ಳಬೇಕೆಂದು ನಿಶ್ಚಯಿಸಿ, ಅದರ ಪೂರ್ವಸಿದ್ಧತೆಯನ್ನು ಮಾಡತೊಡಗಿದನೆಂದು ತೋರುತ್ತದೆ. ಏಕೆಂದರೆ ಅದೇನು ಸಾಮಾನ್ಯವಾದ ಕೆಲಸವಾಗಿದ್ದಿಲ್ಲ. ವಿಜಯನಗರದ ಹೆಸರುವಾಸಿಯಾದ ಕರ್ನಾಟಕ ಸಿಂಹಾಸನವು ಹಾಳಾದಂದಿನಿಂದ ಒಬ್ಬ ಭಾರತೀಯ ಅರಸನ ರಾಜ್ಯಾಭಿಷೇಕವಾದರೂ ಆಗಿದ್ದಿಲ್ಲ. ಮಹಾರಾಷ್ಟ್ರದಲ್ಲಂತೂ ರಾಜ್ಯಾಭಿಷೇಕವೆಂಬ ಪದವೇ ಮರೆತುಹೋಗುತ್ತ ಬಂದಿತ್ತು. ಸಿವಾಜಿಯ ರಾಜ್ಯಾಭಿಷೇಕವಾದರೋ ಸನ್ಯಾಸಿಯ ಮದುವೆಯಂತೆ ಕಷ್ಟತಮವಾಗಿತ್ತು. ಮೊದಲು ಅವನು ಕ್ಷತ್ರಿಯ ವಂಶದವನೆಂದು ನಿರ್ಧರಿಸಬೇಕಾಗಿತ್ತು.

---

* ಈ ಕಾರಣವನ್ನು ಕೇಳೂಸಕರರು ತಮ್ಮ ಚರಿತ್ರೆಯ ೩೬೦, ೩೬೧ ಪುಟಗಳಲ್ಲಿ ಕೊಟ್ಟರುತ್ತಾರೆ. ಇದಕ್ಕೆ ಪುರಾತನ ಲೇಖಗಳ ಆಧಾರವೇನೂ ಇದ್ದಂತೆ ತೋರುವುದಿಲ್ಲ.

ಅವನ್ನು ಹೇಗಾದರೂ ಕಯ್ಗುಂಟುಹಾಕಿ ಸಿದ್ಧಮಾಡಿದರೂ ಅವನ ಹಿಂದೆ ಆಗಿ ಹೋದ ನಾಲ್ಕೆಂಟು ತಲೆಯ ಪೂರ್ವಜರು ಕ್ಷತ್ರಿಯ ಸಂಸ್ಕಾರಗಳನ್ನು ಹೊಂದದ್ದರಿಂದ ಅವನಲ್ಲಿ ಕ್ಷತ್ರಿಯತ್ವವನ್ನು ಆರೋಪಿಸುವ ಬಗೆ ಹೇಗೆ? ಅವನ ಪೂರ್ವಜರು ಮುಸಲ್ಮಾನರ ಹಾವಳಿಯಿಂದುಂಟಾದ ಆಪದ್ಧರ್ಮದ ಮೂಲಕವಾಗಿ ಸಂಸ್ಕಾರ ಲೋಪಹೊಂದಿದರೆಂದು ಗ್ರಹಿಸಿದರೂ ಶಹಾಜಿ ರಾಜನಾಗಲಿ, ಸಿವಾಜಿಯಾಗಲಿ ದ್ವಿಜರ ಮುಖ್ಯಸಂಸ್ಕಾರವಾದ ವ್ರತ ಬಂಧವನ್ನು ಏಕೆ ಮಾಡಿಕೊಳ್ಳಲಿಲ್ಲ? ಸಿವಾಜಿಗೆ ಈಗ ೪೬ ವರ್ಷಗಳಾಗಿ ದ್ದವು; ಅವನು ೨-೩ ಮದುವೆ ಮಾಡಿಕೊಂಡು ೩-೪ ಮಕ್ಕಳನ್ನು ಹಡೆ ದಿದ್ದನು. ಅತಿಪ್ರಬಲರಾದ ಮುಸಲ್ಮಾನರ ಆಳಿಕೆಯಲ್ಲಿ ಬಂಡಾಯ ವನ್ನೆಬ್ಬಿಸಿ, ಕೊಲೆಸುಲಿಗೆಮೋಸಗಳಿಂದ ತನ್ನ ರಾಜ್ಯವನ್ನು ಸ್ಥಾಪಿಸು ವುದಕ್ಕೆ ಸಿವಾಜಿಯಂತಹ ಅದ್ಭುತಪರಾಕ್ರಮ ಬುದ್ಧಿ ಧೈರ್ಯ ಸಾಹಸ ವುಳ್ಳ ಮಹಾಪುರುಷನು ಬೇಕಾದಂತೆ, ಕ್ಷತ್ರಿಯ ಕುಲದ ಮಸಕುಕುರುಹ ಗಳಾದರೂ ಇಲ್ಲದ ಸಿವಾಜಿಯ ರಾಜ್ಯಾಭಿಷೇಕವನ್ನು ಮಾಡಿಸಲಿಕ್ಕೆ ಘನ ಪಾಂಡಿತ್ಯ ಬುದ್ಧಿ ಧೈರ್ಯ ಸಾಹಸವುಳ್ಳ ಗಾಗಾಭಟ್ಟನಂತಹ ಮಹಾ ವಿದ್ವಾಂಸನು ಅವಶ್ಯವಾಗಿ ಬೇಕಾಗಿದ್ದನೆನ್ನಲಿಕ್ಕೆ ಏನೂ ಸಂದೇಹವಿಲ್ಲ.

ಮೊಟ್ಟಮೊದಲು ಸಿವಾಜಿಯು ಕ್ಷತ್ರಿಯವಂಶದವನೆಂದು ನಿರ್ಣ ಯಿಸಬೇಕಾಗಿತ್ತು. ಈ ಕೆಲಸದಲ್ಲಿ ಕೆಲವು ಕರ್ನಾಟಕಮಹಾರಾಷ್ಟ್ರದ ವೈದಿಕ ಪಂಡಿತರೂ, ಕೆಲವು ವ್ಯವಹಾರಜ್ಞರೂ ತೊಡಗಿದರು (೧೬೭೨). ಅವರು ಸಿವಾಜಿಯ ಅಜ್ಜನು ಹೊಲಮಾಡಿಕೊಂಡಿದ್ದ ವೇರೂಳಕ್ಕೂ ರಾಜ ಸ್ಥಾನದ ಸಂಸ್ಥಾನಗಳಿಗೂ ಹೋಗಿ, ಅವನ ಪೂರ್ವಜರ ವಿಷಯವಾಗಿ ತಮಗೆ ಬೇಕಾದ ಸಂಗತಿಗಳನ್ನು ಸಂಗ್ರಹಿಸಿಕೊಂಡು ಬಂದು, ನಮ್ಮ ಚರಿತ್ರನಾಯಕನು ಸೂರ್ಯವಂಶದ ಸಿಸೋದಿಯ ಕುಲದವನೆಂದು ನಿರ್ಧರಿಸಿ, ಒಂದು ವಂಶಾವಳಿಯನ್ನು ತಯಾರಿಸಿದರು; ಬಳಿಕ ಮೇಣೆ ಪಲ್ಲಕ್ಕಿ ಆನೆ ಕುದುರೆಗಳನ್ನು ಕಳುಹಿ, ಅತಿವೈಭವದಿಂದ ಗಾಗಾಭಟ್ಟನನ್ನು ಪ್ರೈರಣದಿಂದ ಕರೆಯಿಸಿಕೊಂಡರು. ಅವನು ಈ ಮೊದಲೇ ಸಿದ್ಧವಾದ ವಂಶಾವಳಿಯನ್ನು ನೋಡಿ ಸಂತೋಷಪಟ್ಟು, ಸ್ಥಳಿಕಪಂಡಿತರೊಡನೆ

ಧರ್ಮಶಾಸ್ತ್ರದ ಆಧಾರ–ವಿಧಾನಗಳನ್ನು ಶೋಧಿಸತೊಡಗಿದನು. ಆಗ ರತ್ನದ ಜಾಲರವುಳ್ಳ ಚಿನ್ನದ ಸಿಂಹಾಸನವು ಸಿದ್ಧವಾಯಿತು. ಯಜ್ಞದ ಕುಂಡಗಳೂ ವೇದಿಕೆಗಳೂ ಸಿದ್ಧವಾದವು. ಹೋಮದ್ರವ್ಯಗಳೂ ಸಲಕ್ಷಣ ಗಜಾಶ್ವಗಳೂ ಶೋಧಮಾಡಿ ತರಲ್ಪಟ್ಟವು. ಆನಂದನಾಮ ಸಂವತ್ಸರದ ಜ್ಯೇಷ್ಠ ಶುದ್ಧ ೧೩ ರಾಜ್ಯಾಭಿಷೇಕದ ಸುಮುಹೂರ್ತವೆಂದು ಜೋಯಿಸರು ಗೊತ್ತುಮಾಡಿದರು. ಚೈತ್ರಮಾಸದಲ್ಲೇ ೧೦,೦೦೦ ನಿಮಂತ್ರಿತ ಬ್ರಾಹ್ಮಣರು ಕುಟುಂಬಸಹಿತ ಬಂದು ಸೇರಿದ್ದರಿಂದ ೫೦,೦೦೦ ಜನರ ಸಂದಣಿಯಿಂದ ರಾಯಗಡವೂ ಅದರ ಸುತ್ತಲಿನ ಪ್ರದೇಶವೂ ಕಿರಗುಟ್ಟಿದವು. ಸಣ್ಣದೊಡ್ಡ ಸಂಸ್ಥಾನಿಕರೂ, ಜಹಗೀರದಾರರೂ, ಇನಾಮದಾರರೂ, ವತನದಾರರೂ, ಮಿರಾಸದಾರರೂ, ಸಣ್ಣ ದೊಡ್ಡ ಅಧಿಕಾರಿಗಳೂ, ಇಂಗ್ಲಿಷ ಫ್ರೆಂಚ ಡಚ್ಚ ವರ್ತಕರೂ, ಸಾವುಕಾರರೂ ಸೆಟ್ಟರೂ, ಬಾವಾಫಕೀರರೂ, ಜಂಗಮರೂ ಒಬ್ಬರಹಿಂದೊಬ್ಬರು ಬಂದರು. ಜ್ಯೇಷ್ಠಮಾಸದಲ್ಲಿ ಒಂದು ಲಕ್ಷಜನರು ರಾಯಗಡದಲ್ಲಿ ನಮ್ಮ ಚರಿತ್ರನಾಯಕನ ಅತಿಥಿಗಳಾಗಿದ್ದರೆಂದು ಬರೆದರೆ ಅತಿಶಯೋಕ್ತಿಯಾಗಲಾರದು. ರಾಯಗಡದ ಸುತ್ತಲು ೨ ಮೈಲುಗಳ ವರೆಗೆ ಗುಡಾರಗಳೂ ತಂಬುಗಳೂ ಮಂಟಪಗಳೂ ಪ್ರೇಕ್ಷಕರ ಕಣ್ಣುಗಳನ್ನು ಆನಂದಗೊಳಿಸುತ್ತಿದ್ದವು.

ಪರಶುರಾಮದೇವರು ೨೧ ಸಾರಿ ಕ್ಷತ್ರಿಯರನ್ನು ಗೆದ್ದು, ಇಡಿ ಭರತಖಂಡವನ್ನು ಬ್ರಾಹ್ಮಣರಿಗೆ ದಾನಕೊಟ್ಟು, ತಮಗೆ ಇರಲಿಕ್ಕೆ ಸ್ಥಳವಿಲ್ಲದುದರಿಂದ ಸಮುದ್ರವನ್ನು ಹಿಂದಕ್ಕೆ ಸರಿಸಿ, ಉತ್ತರ ಕೊಂಕಣ ಪಟ್ಟಿಯನ್ನು ತಮ್ಮ ವಾಸಸ್ಥಾನವಾಗಿ ಮಾಡಿಕೊಂಡರೆಂಬುದು ಪುರಾಣಪ್ರಸಿದ್ಧವಾದ ಸಂಗತಿಯಾಗಿರುತ್ತದಷ್ಟೇ. ಆದ್ದರಿಂದ ಈ ಕೊಂಕಣಪ್ರದೇಶಕ್ಕೆ ಪರಶುರಾಮಕ್ಷೇತ್ರವೆಂಬ ಹೆಸರು ಬಂದಿದೆ. **ಈ** ಪರಶುರಾಮದೇವರ ದೊಡ್ಡ ಗುಡಿಯು **ಚಿಪಳೂಣ**ದಲ್ಲಿರುವುದರಿಂದ ಅಲ್ಲಿಗೆ ಕುಟುಂಬಯಾತ್ರೆ ಹೋಗುವುದೇ ರಾಜ್ಯಾಭಿಷೇಕದ ಮೊದಲನೆಯ ಕೆಲಸವಾಗಿತ್ತು. ಆದ ಕಾರಣ ಅವನು ೧೬೭೪ ಮೇ ತಿಂಗಳದ ಆರಂಭದಲ್ಲಿ ಸಹಕುಟುಂಬ ಸಹಪರಿವಾರನಾಗಿ ಚಿಪಳೂಣಕ್ಕೆ ಹೋಗಿ, ದೇವತಾದರ್ಶನ ತೀರ್ಥಪ್ರಸಾದ

ಗಳನ್ನು ತೆಗೆದುಕೊಂಡು, ಮರಳಿ ರಾಯಗಡಕ್ಕೆ ಬಂದನು (೧೨ ಮೇ). ಬಳಿಕ ೪ ದಿವಸಗಳಮೇಲೆ ಪ್ರತಾಪಗಡಕ್ಕೆ ಹೋಗಿ, ಶ್ರೀ ಭವಾನಿಗೆ ೧। ಮಣ ಚೊಕ್ಕ ಬಂಗಾರದ ೫೬,೦೦೦ ರೂ. ಬೆಲೆ ಬಾಳುವ ಕೊಡೆಯನ್ನೂ ಬೇರೆ ಹಲವು ಒಡವೆಗಳನ್ನೂ ಕಾಣಿಕೆಯಾಗಿ ಅರ್ಪಿಸಿ, ಒಂದು ದೊಡ್ಡ ಸಮಾರಾಧನೆಯನ್ನು ಮಾಡಿ, ತೀರ್ಥಪ್ರಸಾದ ತೆಗೆದುಕೊಂಡು ತಿರುಗಿ ರಾಯಗಡಕ್ಕೆ ಬಂದನು (೨೧ ಮೇ). ಈ ಎರಡು ಯಾತ್ರೆಗಳಿಂದ ತಕ್ಕಮಟ್ಟಿಗೆ ಸಿವಾಜಿಯ ದೇಹಶುದ್ಧಿಯಾಯಿತು. ಬಳಿಕ ೭ ದಿವಸ ಅವನು ಬಾಳಂಭಟ್ಟ ಪ್ರಭಾಕರಭಟ್ಟ ಎಂಬ ಉಪಾಧ್ಯಾಯನ ಸಾಹಾಯದಿಂದ ತ್ರಿಕಾಲದಲ್ಲಿಯೂ ಮಹಾದೇವಭವಾನಿಯ ಪೂಜೆಯನ್ನು ಭಕ್ತಿಪೂರ್ವಕವಾಗಿ ಮಾಡಿ, ಮನಶ್ಶುದ್ಧಿಯನ್ನು ಹೊಂದಿದ್ದರಿಂದ ವ್ರತಬಂಧಕ್ಕೆ ಯೋಗ್ಯನಾದನು.

ಜ್ಯೇಷ್ಠಶುದ್ಧ ಚತುರ್ಥಿ (೨೮ ಮೇ) ನಮ್ಮ ಚರಿತ್ರನಾಯಕನ ಮುಂಜೆಯು ಅತಿವಿಜೃಂಭಣೆಯಿಂದ ಆಯಿತು. ಬ್ರಾಹ್ಮಣರ ಮಂತ್ರ ಘೋಷದಿಂದಲೂ ಬಟ್ಟಂಗಿಗಳ ಹೊಗಳಿಕೆಯಿಂದಲೂ ನಾನಾತರದ ವಾದ್ಯಗಳ ಸಪ್ಪಳದಿಂದಲೂ ನೃತ್ಯಗಾನಗಳ ಇಂಚರದಿಂದಲೂ ಜಂಗಮ ಫಕೀರರ ಹರಕೆಯಿಂದಲೂ ಹೆಂಗಸರು ಮಕ್ಕಳ ಕೋಲಾಹಲದಿಂದಲೂ ಸಾಮಾನ್ಯ ಜನರ ಜಯಜಯಕಾರದಿಂದಲೂ ಆ ರಾಯಗಡವು ಕಿಕ್ಕರಿಸಿತು. ಸಿವಾಜಿಯ ಹೆಗ್ಗೋರಿಕೆಯು ಈಡೇರಿದ್ದರಿಂದ ಅವನು ಹಿಗ್ಗಿ ಭೂರಿ ಸಂಭಾವನೆ—ದಕ್ಷಿಣೆಗಳನ್ನು ಕೊಟ್ಟನು; ಗಾಗಾಭಟ್ಟನೊಬ್ಬನಿಗೇ ೩,೦೦೦ ಹೊನ್ನುಗಳು (೩೫,೦೦೦ ರೂ.) ಬಂದವು. ಉಳಿದ ಬ್ರಾಹ್ಮಣರೊಳಗೆ ೧೭,೦೦೦ ಹೊನ್ನುಗಳು ಹಂಚಲ್ಪಟ್ಟವು. ಗಾಯತ್ರೀ ಮಂತ್ರದ ಉಪದೇಶವಾಯಿತು. ನಮ್ಮ ಚರಿತ್ರನಾಯಕನು ದ್ವಿಜಕ್ಷತ್ರಿಯನಾದನು.

ಈ ಕಾಲಕ್ಕೆ ಒಂದು ಸೋಜಿಗವಾದ ವಾದವು ಒಮ್ಮಿಂದೊಮ್ಮೆ ಮಿಂಚಿನಂತೆ ಎದ್ದಿತು. ಈಗ ತಾನು ದ್ವಿಜನಾದ್ದರಿಂದ ವೇದಮಂತ್ರವನ್ನು ಕೇಳಲಿಕ್ಕೆ ತನಗೆ ಅಧಿಕಾರ ಬಂತೆಂತಲೂ ಮುಂದಿನ ಎಲ್ಲ ರಾಜ್ಯಾಭಿಷೇಕಕ್ಕೆ ಅಂಗವಾದ ಪುಣ್ಯಾಹವಾಚನ ಹೋಮಹವನಾದಿಗಳನ್ನುವೇದಮಂತ್ರಗಳಿಂದಲೇ ಮಾಡಿಸಬೇಕೆಂತಲೂ ಸಿವಾಜಿಯು ಕೇಳಿದನು. ಈ ಆಕಸ್ಮಿಕ ಪ್ರಶ್ನೆಯನ್ನು

ಕೇಳಿ ಗಾಗಾಭಟ್ಟನು ಗುಂಗಾಗಿ ಸುಮ್ಮನೇ ಕುಳಿತನು. ಕೂಡಿದ ಬ್ರಾಹ್ಮ
ಣರು ಈಕಾಲಕ್ಕೆ ನಿಜವಾದ ಕ್ಷತ್ರಿಯರು ಯಾರೂ ಇಲ್ಲೆಂತಲೂ ಆದಕಾರಣ
ವೇದಮಂತ್ರೋಚ್ಚಾರದಿಂದ ತಮ್ಮ ಬ್ರಾಹ್ಮಣ್ಯಕ್ಕೆ ಲೋಪಬರುವದೆಂತಲೂ
ನಿರ್ದಾಕ್ಷಿಣ್ಯವಾಗಿ ಹೇಳಿಬಿಟ್ಟರು. ಚತುರನೂ ಸಾಹಸಿಯೂ ಯುಕ್ತಿ
ವಂತನೂ ಆದ ಗಾಗಾಭಟ್ಟನ ಧೈರ್ಯವು ಕುಗ್ಗಿತು; ಅವನ ಪಾಂಡಿತ್ಯವು
ಲಟಪಟಿಸಿತು; ಈ ಪ್ರಶ್ನೆಯನ್ನು ಎರಡೂ ಪಕ್ಷದವರು ಒಡಂಬಡು
ವಂತೆ ಹೇಗೆ ಬಿಡಿಸಬೇಕೆಂಬುದು ತಿಳಿಯದಾಯಿತು. ಸಿವಾಜಿಯ
ಪಕ್ಷದವರು ಬ್ರಾಹ್ಮಣವೃಂದದೊಡನೆ ಹಾಕಿಯಾಡತೊಡಗಿದರು. ಬ್ರಾಹ್ಮ
ಣರ ಸ್ಪಷ್ಟೋಕ್ತಿಯನ್ನು ಕೇಳಿ, ವಿಶ್ವಾಮಿತ್ರನ ಸಿಟ್ಟಿನಂತೆ ಸಿವಾಜಿಯ
ಕೋಪವು ಉಕ್ಕೇರಿತು. ತನ್ನ ಕಯ್ಕೆಳಗಿದ್ದ ಎಲ್ಲ ಬ್ರಾಹ್ಮಣ ಅಧಿಕಾರಿ
ಗಳನ್ನು ಕೆಲಸದಿಂದ ದೂರಮಾಡಿ ಅವರ ಸ್ಥಳದಲ್ಲಿ ಬೇರೆಯವರನ್ನು
ನಿಯಮಿಸುವೆನೆಂದು ಅವನು ಗದ್ದರಿಸಿದನು. ಆಕಾಲದ ಬ್ರಾಹ್ಮಣರು ಈಗಿ
ನವರಂತೆ ನಾಮಧಾರಿ ಬ್ರಾಹ್ಮಣರಾಗದ್ದರಿಂದ ತಮ್ಮ ಬ್ರಾಹ್ಮಣ್ಯವನ್ನು
ಮಾರಿಕೊಳ್ಳಲಿಕ್ಕೆ ಒಡಂಬಡಲಿಲ್ಲ. ಅವರು ಮಹರ್ಷಿಗಳಂತೆ ನಿಜವಾದ
ಬ್ರಾಹ್ಮಣರಾಗದಿದ್ದರೂ "ಧಿಗ್ಬಲಮ್ ಕ್ಷತ್ರಿಯ ಬಲಮ್। ಬ್ರಹ್ಮತೇಜೋ
ಬಲಮ್ ಬಲಮ್" ಎಂಬ ವಿಶ್ವಾಮಿತ್ರನ ಉಕ್ತಿಯು ಅವರಿಗೆ ಸಲ್ಲದಿದ್ದರೂ
ಈಗಿನವರಂತೆ ಅವರು ಜನ್ಮಮಾತ್ರ ಬ್ರಾಹ್ಮಣರಾಗಿದ್ದಿಲ್ಲ. ಅವರಲ್ಲಿ
ಬ್ರಾಹ್ಮಣ್ಯದ ಅಭಿಮಾನವೂ ಭಕ್ತಿವಿಶ್ವಾಸಗಳೂ ಸ್ವಾರ್ಥತ್ಯಾಗ ಧೈರ್ಯ
ಗಳೂ ಕೆಲಮಟ್ಟಿಗಾದರೂ ನೆಲೆಗೊಂಡಿದ್ದವು. ಈಗಿನಂತೆ ಅವರ ಬ್ರಾಹ್ಮ
ಣ್ಯವು ಹುಳಿತು ಟೊಕ್ಕರೆಯಾಗಿದ್ದಿಲ್ಲ ಅಥವಾ ಜೊಳ್ಳಸಿ ಬರಿದಾಗಿದ್ದಿಲ್ಲ.
ಆದ್ದರಿಂದ ಅವರು ತಮಗೆ ಸಿವಾಜಿಯು ಸೂಲಕ್ಕೇರಿಸಿದರೂ ಅಥವಾ
ಪರ್ವತಪ್ರಾಯವಾಗಿ ಹಣಕೊಟ್ಟರೂ ತಾವು ವೇದಮಂತ್ರೋಚ್ಚಾರದಿಂದ
ತಮ್ಮ ಬ್ರಾಹ್ಮಣ್ಯವನ್ನು ಕೆಡಿಸಿಕೊಳ್ಳಲಾರೆವೆಂದು ಖಂಡಿತವಾಗಿ ಹೇಳಿ
ಬಿಟ್ಟರು.

ಈ ಅನಾಹುತವಾದ ಹಟದ ಹಾಕಿಯಾಟದಿಂದ ಮುನ್ನಾರುತಿಂಗಳು
ಹಾರೈಸಿಕೊಂಡಿದ್ದ ರಾಜ್ಯಾಭಿಷೇಕವೇ ನಿಂತುಹೋಗುವ ಸಂದರ್ಭವು
ಬಂದೊದಗಿತು. ಇಬ್ಬರು ಮನುಷ್ಯರು ಅಥವಾ ಎರಡು ಮನುಷ್ಯರ

ಗುಂಪುಗಳು ಕ್ರೋಧದ್ವೇಷಾಸೂಯೆಗಳಿಗೊಳಗಾಗಿ ಹಟದಿಂದ ಜಗಳಾಡ ತೊಡಗಿದರೆ ಆ ಜಗಳವನ್ನು ಮುರಿಯುವುದು ಅಸಾಧ್ಯವೇ ಸರಿ. ಸಿವಾಜಿಯ ಪಕ್ಷದವರು ಹಟಹಿಡಿದು ಹೇವಿನಿಂದ ಹೊಡೆದಾಡತೊಡಗಿದರು. ಗಾಗಾಭಟ್ಟ ಮುಂತಾದ ಬ್ರಾಹ್ಮಣ ಪಂಡಿತರು ಶಾಂತಚಿತ್ತದಿಂದ ಶಾಸ್ತ್ರ ರೀತಿಯಾಗಿ ಮಾತಾಡಿದರು. ಇಂದ್ರಿಯಗಳಿಗೂ ಆತ್ಮಶಕ್ತಿಗೂ ವಾಗ್ಯುದ್ಧವು ನಡೆಯಿತು. ಇಂದ್ರಿಯಗಳಿಗೆ ಸ್ವಾಭಾವಿಕವಾಗಿ ಸೋಲು ಬಂತು. ಜೀಜಿಬಾಯಿಯೂ ಪೇಶವೆಯಾದ ಮೋರೊಪಂತನೂ ಸಿವಾಜಿಗೆ ತಿಳಿಹೇಳಿದರು. ಸಿವಾಜಿಗೆ ಬಾಲ್ಯಾರಭ್ಯ ದೇವರು ಬ್ರಾಹ್ಮಣರಲ್ಲಿ ಭಕ್ತಿ ವಿಶ್ವಾಸಗಳಿದ್ದುದರಿಂದ ತನ್ನ ಹಟವನ್ನು ಬಿಟ್ಟನು. ಬ್ರಾಹ್ಮಣರು ಪುರಾಣೋಕ್ತ ಮಂತ್ರಗಳಿಂದ ಮುಂದಿನ ಎಲ್ಲ ಕಾರ್ಯವನ್ನು ಯಥಾವಿಧಿಯಾಗಿ ಸಾಗಿಸಿದರು. †

ಜ್ಯೇಷ್ಠಶುದ್ಧ ಚತುರ್ಥಿಪಂಚಮಿ ಈ ಎರಡು ದಿವಸ ನಮ್ಮ ಚರಿತ್ರನಾಯಕನ ಉಪನಯನವಾಯಿತು. ಷಷ್ಠಿಯ ದಿವಸ ಅವನು ನೂತನವಸ್ತ್ರಗಳನ್ನು ಧರಿಸಿ, ವಿಧಿಪೂರ್ವಕವಾಗಿ ಪುಣ್ಯಾಹವಾಚನವನ್ನು ಮಾಡಿಕೊಂಡು, ರಾಜ್ಯಾಭಿಷೇಕದ ಉಪಾಂಗವಾದ ಕರ್ಮಗಳನ್ನು ಪೂರ್ವ ಸಂಚಿತವಾದ ಪಾಪಗಳ ಪರಿಹಾರಾರ್ಥವಾಗಿ ಮಾಡಲಾರಂಭಿಸಿದನು. ಷಷ್ಠಿಯಿಂದ ದ್ವಾದಶೀವರೆಗೆ ೭ ದಿವಸ ಅವನು ಹಾಲುಹಣ್ಣಿನ ಹೊರತು ಬೇರೆ ಪದಾರ್ಥಗಳನ್ನು ಸೇವಿಸಲಿಲ್ಲ. ವಿನಾಯಕಶಾಂತಿ ನಕ್ಷತ್ರ ಶಾಂತಿ ಗ್ರಹಶಾಂತಿಗಳು ಯಥಾಸಾಂಗವಾಗಿ ಮುಗಿದವು. ಸಪ್ತಧಾತು (ಬೆಳ್ಳಿ, ಬಂಗಾರ, ತಾಮ್ರ, ಸತುವು, ತವರ, ಸೀಸ, ಕಬ್ಬಿಣ)ಗಳೊಡನೆ ಅವನ ತುಲಾಭಾರವಾಯಿತು. ತರುವಾಯ ಅಡಿಕೆ, ಏಲಕ್ಕಿ ಲವಂಗ

---

† ಶಿವಪ್ರಸಾದ ಶಾಸ್ತ್ರಿಯೆಂಬವರು ಆ ಕಾಲದ ಬ್ರಾಹ್ಮಣರು ಈಗಿನವರಂತೆ ಧನೋಪಾಸಕರಾದ್ದರಿಂದ ಲೋಭಕ್ಕೊಳಗಾಗಿ ಸಿವಾಜಿಯ ಮಾತಿಗೆ ಒಡಂಬಟ್ಟರೂ ಒಂದು ಅಕ್ಷರವಾದರೂ ಅವನಿಗೆ ಕೇಳಿಸದಂತೆ ವೇದೋಚ್ಚಾರ ಮಾಡಿರಬಹುದೆಂದು ತರ್ಕಿಸುತ್ತಾರೆ. ಇದು ಅಸಂಭವವೇ ಸರಿ. ಇದಲ್ಲದೆ ಆ ಕಾಲಕ್ಕೆ ಬ್ರಾಹ್ಮಣರ ನೈತಿಕಾವನತಿಯು ಸುರುವಾಗಿದ್ದರೂ ಬ್ರಾಹ್ಮಣ್ಯವನ್ನು ಮಾರಿಕೊಳ್ಳುವಷ್ಟು ಕೆಟ್ಟದ್ದಿಲ್ಲ.

ದಾಲ್ಚಿನ್ನಿ ಮುಂತಾದ ಮಸಾಲೆಯ ಸಾಮಾನುಗಳೊಡನೆ ಅವನನ್ನು ತೂಗಿದರು. ಈ ಎಲ್ಲ ತೂಗಿದ ಪದಾರ್ಥಗಳನ್ನು ಒಂದು ಲಕ್ಷ ಹೊನ್ನು ದಕ್ಷಿಣೆಯೊಡನೆ ಬ್ರಾಹ್ಮಣರಿಗೆ ದಾನವಾಗಿಕೊಟ್ಟರು. ಕೊಳ್ಳೆಸುಲಿಗೆಗಳಲ್ಲಿ ತಿಳಿದೂ ತಿಳಿಯದೆಯೂ ಆದ ಗೋಹತ್ಯ ನರಹತ್ಯ ಬ್ರಹ್ಮಹತ್ಯ ದೋಷಗಳ ಕ್ಷಾಲನಾರ್ಥವಾಗಿ ೮,೦೦೦ ರೂಪಾಯಿಗಳು ಬ್ರಾಹ್ಮಣರಿಗೆ ದಾನವಾಗಿ ದೊರೆತವು. ದ್ವಾದಶಿ (೫ ಜೂನ)ಯ ದಿವಸ ಸಿವಾಜಿಯು ಮಂಗಲ ಸ್ನಾನವನ್ನು ಮಾಡಿದನು.

ಹಾರೈಸಿದ ಸುಮಂಗಲವಾದ ತ್ರಯೋದಶಿ (೬ ಜೂನ)ಯ ದಿವಸ ಬೆಳಿಗ್ಗೆ ಭಗವಾನ ಸೂರ್ಯನಾರಾಯಣನು ಆಕಾಶದಲ್ಲಿ ಉದಯಿಸಿ ಎಲ್ಲರ ಹೃದಯಗಳನ್ನು ಸಂತೋಷಗೊಳಿಸಿದನು. ನಮ್ಮ ಚರಿತ್ರನಾಯಕನ ಉಬ್ಬನ್ನಂತೂ ಬಣ್ಣಿಸಲಳವಲ್ಲ. ಅವನು ಮುಂಜಾವಿನಲ್ಲೆದ್ದು ಪ್ರಾತರ್ವಿಧಿಯನ್ನು ತೀರಿಸಿಕೊಂಡು, ರಾಜ್ಯಾಭಿಷೇಕಕ್ಕೆ ಸಿದ್ಧನಾದನು. ಇಪ್ಪಿಮರದಿಂದ ಮಾಡಿದ ಒಂದು ಎರಡಡಿ ಎತ್ತರವಾದ ಮತ್ತು ಬಂಗಾರದ ತಗಡು ಮಡಾಯಿಸಿದ ಒಂದು ಡೊಳ್ಳಾರಿಗೆಯ ಮೇಲೆ ಅವನೂ ಅವನ ಎಡಕ್ಕೆ ಅವನ ಪ್ರೀತಿಯ ಹೆಂಡತಿಯಾದ ಸೊಯಿರಾಬಾಯಿಯೂ ಅವರಿಬ್ಬರ ಹಿಂದೆ ಅವನ ಮಗನಾದ ಶಂಭೂಜಿಯೂ ಕುಳಿತರು. ಸೊಯಿರಾಬಾಯಿಯ ಸೆರಗಿಗೂ ಸಿವಾಜಿಯ ದೋತರಕ್ಕೂ ಗಂಟು ಹಾಕಿದ್ದರು. ಅವರ ಸುತ್ತಲೂ ಎಂಟು ದಿಕ್ಕುಗಳಲ್ಲಿ ಅಷ್ಟಪ್ರಧಾನರು ಅಭಿಷೇಕದ್ರವ್ಯಗಳಿಂದ ತುಂಬಿದ ಪಾತ್ರೆಗಳನ್ನು ಹಿಡಿಕೊಂಡು ನಿಂತರು. ಪೂರ್ವದಿಕ್ಕಿನಲ್ಲಿ ಮುಖ್ಯಪ್ರಧಾನಿಯಾದ ಮೋರೋಪಂತಪಿಂಗಳೆಯು ತುಪ್ಪದಿಂದ ತುಂಬಿದ ಚಿನ್ನದ ಕೊಡವನ್ನು ಹಿಡಿದುಕೊಂಡು ನಿಂತಿದ್ದನು. ತೆಂಕಣದಿಕ್ಕಿಗೆ ಸೇನಾಪತಿಯಾದ ಹಂಬೀರರಾವ ಮೋಹಿತೆಯು ಹಾಲಿನಿಂದ ತುಂಬಿದ ಬೆಳ್ಳಿಯ ಕೊಡವನ್ನು ಹಿಡಿದಿದ್ದನು. ಪಡುವಲಲ್ಲಿ ಅಮಾತ್ಯನಾದ ರಾಮಚಂದ್ರ ನೀಲಕಂಠ ಪಂಡಿತನು ಮೊಸರಿನಿಂದ ತುಂಬಿದ ಕಲಶವನ್ನು ಹೊತ್ತಿದ್ದನು. ಬಡಗಲಲ್ಲಿ ಛಂದೋಗಾಮಾತ್ಯಪ್ರಧಾನನಾದ ರಘುನಾಥ ಪಂಡಿತರಾಯನು ಜೇನುತುಪ್ಪದಿಂದ ತುಂಬಿದ ಸುವರ್ಣ ಕಲಶವನ್ನು ಧರಿಸಿದ್ದನು. ಇವು ಮುಖ್ಯದಿಕ್ಕುಗಳಾದವು. ಇನ್ನು ಉಪ

ದಿಕ್ಕುಗಳೊಳಗೆ, ಆಗ್ನೇಯಕ್ಕೆ ಸಚಿವನಾದ ಅಣ್ಣಾಜಿದತ್ತೋಪಂಡಿತನು ಸುವರ್ಣಛತ್ರವನ್ನು ಹಿಡಿಕೊಂಡು ನಿಂತಿದ್ದನು; ನೈರುತ್ಯಕ್ಕೆ ಸಾಮಂತ ನಾದ ಜನಾರ್ದನ ಪಂಡಿತ ಹಣಮಂತೆಯು ಬೀಸಣಿಕೆಯನ್ನು ಹಿಡಿ ಕೊಂಡು ನಿಂತಿದ್ದನು; ವಾಯುವ್ಯಕ್ಕೆ ಮಂತ್ರಿಯಾದ ದತ್ತಾಜಿಪಂಡಿತನೂ ಈಶಾನ್ಯಕ್ಕೆ ನ್ಯಾಯಾಧೀಶನಾದ ಬಾಳಾಜಿಪಂಡಿತನೂ ಚಾಮರಗಳನ್ನು ಹಿಡಿದುಕೊಂಡು ನಿಂತಿದ್ದರು. ಆ ತ್ರಿವರ್ಗರ ಎದುರಿನಲ್ಲಿ ಬಲಕ್ಕೆ ಪತ್ರ ಲೇಖಕನಾದ ಬಾಳಾಜಿ ಆವಜಿಯೂ ಎಡಕ್ಕೆ ಲೆಕ್ಕಿಗನಾದ ಚಿಮಣಾಜಿ ಆವಜಿಯೂ ತಮ್ಮ ಬರವಣಗಳನ್ನು ಕಯ್ಯಲ್ಲಿ ಹಿಡಿದುಕೊಂಡು ನಿಂತಿ ದ್ದರು. ಸುತ್ತಲಿನ ಹರವಾದ ಎಡೆಯಲ್ಲಿ ಬ್ರಾಹ್ಮಣರೂ ಕೋಶಾಧ್ಯಕ್ಷರೂ ಗೋಶಾಲಾ ಅಶ್ವಶಾಲಾ ಗಜಶಾಲಾ ಮುಂತಾದ ಶಾಲಾಧಿಕಾರಿಗಳೂ ಆಪ್ತೇಷ್ಟರೂ ಮಾಂಡಲಿಕರೂ ವರ್ತಕರೂ ದಟ್ಟಾಗಿ ನಿಂತಿದ್ದರು.

ಗೊತ್ತುಮಾಡಿದ ಮುಹೂರ್ತಕ್ಕೆ ಅಭಿಷೇಕವು ಆರಂಭವಾಯಿತು. ಮುಖ್ಯಮುಖ್ಯ ಬ್ರಾಹ್ಮಣೋತ್ತಮರು ಅಲ್ಲಲ್ಲಿ ನಿಂತು ಅಷ್ಟದಿಕ್ಕುಗಳಲ್ಲಿ ಹಿಡಿದುಕೊಂಡಿದ್ದ ಅಭಿಷೇಕ ದ್ರವ್ಯದಿಂದಲೂ ಸಪ್ತನದಿಗಳ* ಪುಣ್ಯೋದಕ ದಿಂದಲೂ ಸಮುದ್ರದ ನೀರಿನಿಂದಲೂ ಗಟ್ಟಿಯಾಗಿ ಮಂತ್ರೋಚ್ಚಾರ ಮಾಡಿ ಆ ಮುವ್ವರಿಗೂ ಯಥಾವಿಧಿಯಾಗಿ ರಾಜ್ಯಾಭಿಷೇಕ ಮಾಡಿದರು. ಮಂತ್ರೋಚ್ಚಾರದಿಂದಲೂ ವಾದ್ಯಗಳ ನಿನಾದದಿಂದಲೂ ಸಮುದಾಯದ ಜಯಜಯಕಾರದಿಂಪಲೂ ಅಲ್ಲಿ ಕೂಡಿದ ಜನರ ಕಿವಿಗಳು ಕಿವುಡಾದವು. ಅಭಿಷೇಕವು ಮುಗಿದ ಬಳಿಕ ಆ ಸಸುತದಂಪತಿಗಳು ಮಂಗಳಸ್ನಾನವನ್ನು ಮಾಡಿ, ಹೊಸರಿವೆಗಳನ್ನು ಧರಿಸಿ, ಅಲಂಕಾರ ಭೂಷಿತರಾಗಿ ತುಪ್ಪದಿಂದ ತುಂಬಿದ ಕಂಚಿನಪಾತ್ರೆಯಲ್ಲಿಯೂ ಕನ್ನಡಿಯಲ್ಲಿಯೂ ತಮ್ಮತಮ್ಮ ಮೋ ರೆಯ ನೆರಳನ್ನು ನೋಡಿಕೊಂಡು, ೧೬ ಮಂದಿ ಬ್ರಾಹ್ಮಣ ಮುತ್ತೈದೆಯ ರಿಂಪ ಆರತಿಮಾಡಿಸಿಕೊಂಡು, ಆ ಮುತ್ತೈದೆಯರಿಗೂ ಬ್ರಾಹ್ಮಣರಿಗೂ ಯಥೋಚಿತವಾಗಿ ವಸ್ತ್ರಾಲಂಕಾರ ಭೂರಿದಕ್ಷಿಣೆಗಳನ್ನು ಕೊಟ್ಟು, ವಿಶ್ರಾಂತಿ

---

* ಗಂಗಾ, ಯಮುನಾ, ಸಿಂಧು, ನರ್ಮದಾ, ಗೋದಾವರಿ, ಕೃಷ್ಣಾ, ಕಾವೇರಿ.

ಗೋಸ್ಕರ ಒಳಗೆ ಹೋಗಿ ಸಿಂಹಾಸನಾರೋಹಣದ ಸುಮುಹೂರ್ತವನ್ನು ನಿರೀಕ್ಷಿಸುತ್ತ ಕುಳಿತರು. ಆಗ ಪ್ರಾತಃಕಾಲದ ೭ ಗಂಟೆಯಾಗಿತ್ತು.

ನಮ್ಮ ಚರಿತ್ರನಾಯಕನು ಶಾಸ್ತ್ರೋಕ್ತರೀತಿಯಿಂದ ತನ್ನ ಗದ್ದಿಗೆಯನ್ನು ಅತ್ತಿ, ಆಲ, ಇಪ್ಪಿಯ ಮರಗಳಿಂದ ಮಾಡಿಸಿದ್ದನು. ಅದಕ್ಕೆ ೫ ಮೆಟ್ಟಲುಗಳೂ ಎಂಟು ದಿಕ್ಕಿಗೂ ಎಂಟು ಕಂಬಗಳೂ ಇದ್ದು ಮೇಲೆ ಸುತ್ತಲೂ ತೋರಮುತ್ತಿನ ಜಾಲರವಿತ್ತು. ಇಡಿ ಗದ್ದಿಗೆಗೆ ೩೨ ಮಣ ಚೊಕ್ಕಚಿನ್ನದ ಮಡಾಸವಿತ್ತು. ಅಲ್ಲಲ್ಲಿ ಚಿನ್ನರನ್ನಗಳಿಂದ ಮಾಡಿದ ಹುಲಿ ಕರಡಿ ಚಿರ್ಚ ಮುಂತಾದ ವನ್ಯಪಶುಗಳೂ ಆಕಳು ಎತ್ತು ಕುದುರೆ ಮುಂತಾದ ಗೃಹ ಪಶುಗಳೂ ಪಾರಿವಾಳ ಗಿಳಿ ನವಿಲು ಮುಂತಾದ ಹಕ್ಕಿಗಳೂ ಆವಿ ಏಡಿ ಮೀನ ಮೊಸಳೆ ಮುಂತಾದ ಜಲಚರಗಳೂ ಕುಳಿತಿದ್ದವು. ಎಂಟೂ ಕಂಬಗಳ ತುದಿಗಳ ಮೇಲೆ ಎಂಟು ಬಂಗಾರದ ಸಿಂಹಗಳು ದುಷ್ಟಬುದ್ಧಿಯಿಂದ ಸಿಂಹಾಸನದ ಬಳಿಗೆ ಬರುವವರ ಮೇಲೆ ಹಾರಲಿಕ್ಕೆ ಸಿದ್ಧವಾಗಿ ಕುಳಿತಿರುತ್ತವೆಯೋ ಏನೋ ಎಂಬುವ ಹಾಗೆ ಕೂತಿದ್ದವು. ಮುಗ್ಗಲುಗಳಲ್ಲಿ ಗಿಡ ಬಳ್ಳಿ ಹೂ ಹಣ್ಣುಗಳ ಚಿತ್ರಗಳನ್ನು ಚಿನ್ನದ ತಗಡಿನಲ್ಲಿ ಸಲಕ್ಷಣವಾಗಿ ಕೊರೆದಿದ್ದರು. ಮುಂದಿನ ಭಾಗವನ್ನು ಬಿಟ್ಟು ಉಳಿದ ಮೂರೂ ಮುಗ್ಗಲಿಗೂ ನಾನಾತರದ ಜರದ ಚಿತ್ರಗಳುಳ್ಳ ಪಡದೆಗಳನ್ನು ಇಳಿಬಿಟ್ಟಿದ್ದರು. ಎರಡೂ ಬದಿಗೂ ಇದ್ದ ಬರ್ಚಿಕೋಲುಗಳ ತುದಿಗೆ ದೊಡ್ಡ ಹಲ್ಲಿನ ಮೀನುಗಳನ್ನೂ ಕುದುರೆಕೂದಲುಗಳನ್ನೂ ಹಾಕಿದ್ದರು. ಎಲ್ಲಕ್ಕೂ ಮೇಲಿದ್ದ ಗದ್ದಿಗೆಯ ಮೇಲೆ ಮೊದಲು ಕೃಷ್ಣಾಜಿನವನ್ನು ಹಾಸಿ, ಅದರ ಮೇಲೆ ಕೆಲವು ಸುವರ್ಣದ್ರವ್ಯವನ್ನಿರಿಸಿ, ಅದರ ಮೇಲೆ ವ್ಯಾಘ್ರಚರ್ಮವನ್ನು ಹಾಸಿ, ಅದರ ಮೇಲೆ ಅತಿಮೃದುವಾದ ಬೂರಲ ದರಳೆಯ ಗಾದೆಯನ್ನೂ ಆನಿಕೆಯನ್ನೂ ಇರಿಸಿದ್ದರು. ಅರಮನೆಯ ಬಾಗಿಲು ಮುಂದೆ ಎರಡು ನೀರು ತುಂಬಿದ ಕೊಡಗಳನ್ನೂ ಎರಡೆರಡು ಸಿಂಗರಿಸಿದ ಆನೆಕುದುರೆಗಳನ್ನೂ ನಿಲ್ಲಿಸಿದ್ದರು.

ನಿರ್ಧರಿಸಿದ ಸುಮುಹೂರ್ತವು ಬಂದೊದಗಲು ಸಿವಾಜಿಯು ವಸ್ತ್ರಾಲಂಕಾರ ಭೂಷಿತನಾಗಿ ಶ್ರೀವಿಷ್ಣುವಿನ ಸುವರ್ಣಮಯ ಪ್ರತಿಮೆಯ

ಷೋಡಶೋಪಚಾರ ಪೂಜೆಯನ್ನು ಮಾಡಿ, ಅದನ್ನು ತನ್ನ ಬಲಗಯ್ಯಲ್ಲಿ ಹಿಡಿದುಕೊಂಡು ಬ್ರಾಹ್ಮಣರಿಗೂ ಜೀಜಿಬಾಯಿಗೂ ಹಿರಿಯರಿಗೂ ಪ್ರೊಡ ಮಟ್ಟು, ಸಿಂಹಾಸನದ ಬಳಿಗೆ ಹೋಗಿ ಅದಕ್ಕೆ ನಮಸ್ಕರಿಸಿ, ಅದರ ಮೆಟ್ಟಲಿನ ಮೇಲೆ ಕಾಲಿಡದೆ ಹಿಂಬರಿಕೆಯಿಂದ ಅದನ್ನು ಏರಿ, ಗಾದಿಯನ್ನು ಅಲಂಕ ರಿಸಿದನು. ಕೂಡಲೆ ಸಿಂಹಾಸನದ ಅಷ್ಟಸ್ತಂಭಗಳಿಗೆ ಸರಿಯಾಗಿ ಅಷ್ಟ ಪ್ರಧಾನರು ಬದ್ಧಾಂಜಲಿಯಾಗಿ ನಿಂತರು. ಸಿಂಹಾಸನದ ಬಲಗಡೆಯಲ್ಲಿ ಧರ್ಮಾಧ್ಯಕ್ಷನಾದ ಪಂಡಿತರಾಯನೂ ಸೇನಾಪತಿ (ಸರನೌಬತ್ತ)ಯೂ ಸಾಮಂತ (ಡಬೀರ)ನೂ ಮಂತ್ರಿ (ವಾಕ್ನೀಸ)ಯೂ ನಿಂತಿದ್ದರು. ಎಡಕ್ಕೆ ಮುಖ್ಯಪ್ರಧಾನ (ಪೇಶವೆ)ನೂ ಅಮಾತ್ಯ (ಮುಜುಮದಾರ)ನೂ ಸಚಿವ (ಸುರನೀಸ)ನೂ ನ್ಯಾಯಾಧೀಶನೂ ನಿಂತಿದ್ದರು.* ಮಗ್ಗಲಿನಲ್ಲಿ ಒಂದು ಎತ್ತರವಾದ ಆಸನದ ಮೇಲೆ ಯುವರಾಜನಾದ ಶಂಭೂಜಿಯೂ ಮಹೋ ಪಾಧ್ಯನಾದ ಗಾಗಾಭಟ್ಟನೂ ಕುಳಿತಿದ್ದರು. ಮಾಂಡಲಿಕರೂ ಸರದಾ ರರೂ ವರ್ತಕರೂ ಚಿಟ್ಣೀಸರೂ ಮುತಾಲಿಕರೂ ಉಳಿದ ಅಧಿಕಾರಿಗಳೂ ತಮ್ಮತಮ್ಮ ತಕ್ಕುಮೆಯಂತೆ ಎರಡೂ ಮಗ್ಗಲಿಗೂ ಸಾಲಾಗಿ ನಿಂತಿದ್ದರು.

ನಮ್ಮ ಚರಿತ್ರನಾಯಕನು ಸಿಂಹಾಸನಾರೋಹಣವನ್ನು ಮಾಡಿದ ಕೂಡಲೆ ಎಲ್ಲ ಮಂಗಳವಾದ್ಯಗಳು—ನಗಾರಿ, ನೌಬತ್ತು, ಚವಗಡ, ಬಜೇಂತ್ರಿ, ತಾಸೆಮುಃ—ಭೋರೆಂದು ಬಾರಿಸಲಾರಂಭಿಸಿದವು. ಬ್ರಾಹ್ಮಣರು ಉಚ್ಚಸ್ವರದಿಂದ ಮಂತ್ರೋಚ್ಚಾರಮಾಡಿ ಅವನನ್ನು ಹರಿಸಿದರು. ಎಲ್ಲರೂ ರತ್ನಖಚಿತವಾದ ಚಿನ್ನಬೆಳ್ಳಿಯ ಕಮಲದ ಹೂಗಳ ಮಳೆಯನ್ನು ಅವನ ಮೇಲೆ ಕರೆದರು. ೧೬ ಮಂದಿ ಬ್ರಾಹ್ಮಣ ಮುತ್ತಯ್ದೆಯರು ಅವನಿಗೆ ಆರತಿ ಬೆಳಗಿದರು. ಗಾಗಾಭಟ್ಟನು ಮುತ್ತಿನ ಜಾಲರವುಳ್ಳ ಛತ್ರವನ್ನು ಅವನ ತಲೆಯ ಮೇಲೆ ಹಿಡಿದು "ಶಿವ ಛತ್ರಪತಿಗೆ ಜಯವಾಗಲಿ" ಎಂದು ಮುಕ್ತಕಂಠವಾಗಿ ಆಶೀರ್ವದಿಸಿದನು. ಕೂಡಿದ ಜನರೆಲ್ಲರು ಆಸ್ಥಾನ

---

* ಈ ಕಾಲಕ್ಕೆ ಸಿವಾಜಿಯು ತನ್ನ ಅಧಿಕಾರಿಗಳಿಗೆ ಮೊದಲು ಕೊಟ್ಟ ಪಾರ್ಸಿ ಹೆಸರುಗಳನ್ನು ತೆಗೆದುಹಾಕಿ, ತಕ್ಕ ಸಂಸ್ಕೃತ ಹೆಸರುಗಳನ್ನು ಕೊಟ್ಟನು. ಆದ್ದರಿಂದ ಮೊದಲಿನ ಪಾರ್ಸಿ ಹೆಸರುಗಳನ್ನು ಕಂಸಗಳಲ್ಲಿ ಬರೆದಿರುತ್ತೇವೆ.

ಮಂದಿರದ ಮಾಳಿಗೆಯು ಹಾರಿ ಬೀಳುವಂತೆ ದೊಡ್ಡದನಿಯಿಂದ ಜಯ ಜಯಕಾರವನ್ನು ಮಾಡಿದರು. ಮೊದಲು ಹೇಳಿಟ್ಟಂತೆ ಎಲ್ಲ ಕೋಟೆ ಗಳಿಂದ ತೋಪುಗಳು ಒಂದರ ಹಿಂದೊಂದು ಹಾರಿ ತೋಫಿನ ಮಳೆಯು ಸುರಿಯಿತು. ಬಳಿಕ ಛತ್ರಪತಿಯು ಹೆಸರುವಾಸಿಯಾದ ತನ್ನ ಭವಾನಿ ತಲವಾರವನ್ನೂ ಬಿಲ್ಲು ಬಾಣಗಳನ್ನೂ ಯಥಾವಿಧಿ ಪೂಜಿಸಿ ಧರಿಸಿದನು. ಆ ಕಾಲಕ್ಕೆ ಕೂಡಿದ ಜನರೆಲ್ಲರು ಅವನ ಮೇಲೆ ಪುಷ್ಪವೃಷ್ಟಿಯನ್ನು ಮಾಡಿ ದರು. ತರುವಾಯ ಅಷ್ಟಪ್ರಧಾನರೂ ಮಾಂಡಲಿಕರೂ ಇನಾಮುದಾರ ಸರದಾರರೂ ವರ್ತಕರೂ ಸಿಂಹಾಸನದ ಅಡಿಗೆ ಬಂದು ಮುಜರೆಮಾಡಿ ತಮ್ಮತಮ್ಮ ಕಾಣಿಕೆಗಳನ್ನು ಅರ್ಪಿಸಿದರು. ಛತ್ರಪತಿಯು ಸಂತುಷ್ಟನಾಗಿ ಅವರೆಲ್ಲರಿಗೂ ಉಚಿತವಾದ ವಸ್ತ್ರಾಲಂಕಾರಗಳನ್ನೂ ಇನಾಮು ಜಹಗೀರು ಗಳನ್ನೂ ಕೊಡಿಸಿ ಸಂತೋಷಗೊಳಿಸಿದನು, ಮತ್ತು ಬ್ರಾಹ್ಮಣಭಿಕ್ಷುಕರಿಗೆ ಶಾಸ್ತ್ರೋಕ್ತವಾದ ೧೬ ಮಹಾದಾನಗಳನ್ನು ಕೊಟ್ಟನು. ಗಾಗಾಭಟ್ಟನಿಗೆ ಒಂದು ಲಕ್ಷರೂಪಾಯಿ, ಪುರೋಹಿತನಾದ ಬಾಳಂಭಟ್ಟನಿಗೆ ೨೪,೦೦೦ ರೂ., ಶಿಷ್ಟ ವಿದ್ವಾಂಸರಿಗೆ ೨೦೦ ರಿಂದ ೧,೦೦೦ ರೂ., ಉಳಿದ ಬ್ರಾಹ್ಮಣ ಭಿಕ್ಷುಕರಿಗೆ ೨ ರಿಂದ ೫ ರೂ. ಸಂಭಾವನೆಯಾಗಿ ದೊರೆದವೆಂದು ಕೇಳೂ ಸಕರರು ಬರೆಯುತ್ತಾರೆ.

ಇಷ್ಟು ಹೊತ್ತಿಗೆ ಬೆಳಗಿನ ೮ ಗಂಟೆಯಾಯಿತು. ಬ್ರಾಹ್ಮಣ ಮುತ್ತ ಯ್ದೆಯರ ಸಂದಣಿಯು ಕಡಮೆಯಾದ್ದರಿಂದ ಇಂಗ್ಲಿಷ ವರ್ತಕರ ಮುಖ್ಯ ಸ್ಥನಾದ ಹೇನ್ರಿ ಆಕ್ಸಿಂಡೆನ್ನನು ದೂರದಲ್ಲಿ ಸಿವಾಜಿಯ ಮುಂದೆ ಅಡ್ಡಬಿದ್ದು ಕೈ ಜೋಡಿಸಿಕೊಂಡು ನಿಂತನು, ಮತ್ತು ದುಭಾಷಿಯಾದ ನಾರಾಯಣ ಸೇಣ್ವಿಯು ಕಾಣಿಕೆಯಾಗಿ ಕೊಡತಂದ ಒಂದು ವಜ್ರದ ಉಂಗರವನ್ನು ತೋರಿಸಿದನು. ಸಿವಾಜಿಯು ದೂರಿಂದ ಅವರನ್ನು ನೋಡಿ, ಮುಂದಕ್ಕೆ ಕರೆದು ಆವರಿಬ್ಬರಿಗೂ ಉಡುಗರೆಯನ್ನು ಕೊಡಿಸಿ, ಡಚ್ಚ ಫ್ರೆಂಚ ವರ್ತಕ ರನ್ನೂ ಅದೇ ಮೇರೆಗೆ ಗೌರವಿಸಿದನು.

ಸಿಂಹಾಸನಾರೋಹಣಸಮಾರಂಭವು ಮುಗಿದ ಬಳಿಕ ನಮ್ಮ ಚರಿತ್ರ ನಾಯಕನು ಗದ್ದಿಗೆಯನ್ನಿಳಿದು ಹಿರಿಯರು ಬ್ರಾಹ್ಮಣರನ್ನು ನಮಸ್ಕರಿಸಿ,

ಸಭಾಸ್ಥಾನದ ಬಾಗಿಲಿಗೆ ಹೋಗಿ, ಅಲ್ಲಿ ಸಿಂಗರಿಸಿದ ಕುದುರೆಯನ್ನೇರಿ ಅರಮನೆಯ ಹೆಬ್ಬಾಗಿಲಿಗೆ ಬಂದನು. ಅಲ್ಲಿಯೊಂದು ಅಂಬಾರಿಹಾಕಿದ ಆನೆಯು ಸಿಂಗರಿಸಿ ಸಿದ್ಧವಾಗಿತ್ತು. ಅವನು ಅದರ ಮೇಲೆ ಗಾಗಾಭಟ್ಟ ಮುಖ್ಯ ಮಂತ್ರಿಗಳೊಡನೆ ಏರಿ, ದೇವರ ದರ್ಶನಕ್ಕೆ ಹೊರಟನು. ಈ ಮೆರವಣಿಗೆಯು ರಾಯಗಡದಲ್ಲಿದ್ದ ಜನರ ಕಣ್ಣಿನ ಹಬ್ಬವಾಯಿತು. ಎಲ್ಲಕ್ಕೂ ಮುಂದೆ ಜರಿಪಟಿಕಾ ಭಗವಾಝೋಂಡಾ ಈ ಎರಡು ನಿಶಾನೆಗಳನ್ನು ಹಿಡಿದುಕೊಂಡ ಇಬ್ಬರು ಮಾವುತರು ತಮ್ಮ ಆನೆಗಳನ್ನು ನಡಿಸುತ್ತಿದ್ದರು. ಅವರ ಹಿಂದೆ ಕಾಲಾಳುಗಳ ಪಥಕಗಳು ತಂತಮ್ಮ ನಿಶಾನೆಗಳನ್ನು ಹಿಡಿಕೊಂಡು ಸಾಗಿದ್ದವು. ಅವುಗಳ ಹಿಂದೆ ಒಂಟಿಕುದುರೆಸ್ವಾರರು ತಂತಮ್ಮ ವಾಹನಗಳನ್ನು ಕುಣಿಸುತ್ತಿದ್ದರು. ಅವರ ಹಿಂದೆ ತೋಫಿನ ಬಂಡಿಗಳು ಕಿರಗುಟ್ಟಿದ್ದವು. ಅವುಗಳ ಹಿಂದೆ ನಗಾರಿ ನೌಬತ್ತು ತಾಸೆ ಬಜೆಂತ್ರಿ ಮುಂತಾದ ವಾದ್ಯಗಳು ಮಂಗಲಧ್ವನಿಯನ್ನು ಗೆಯ್ಯುತ್ತಿದ್ದವು. ಅವರ ಹಿಂದೆ ದೊಡ್ಡದೊಡ್ಡ ಸರದಾರರೂ ಮಂತ್ರಿಗಳೂ ಸರಕಾರಕೂನರೂ ರಥಾಶ್ವಗಜಾರೂಢರಾಗಿ ಒಯ್ಯಾರದಿಂದ ಹೋಗುತ್ತಿದ್ದರು. ಅವರ ಹಿಂದೆ ಭಟ್ಟಂಗಿ ಬೆನ್ನುಗಾವಲುಗಾರರನೊಡಗೊಂಡ ಛತ್ರಪತಿಯ ಆನೆಯು ಝೇಂಕರಿಸುತ್ತ ಬರುತ್ತಿತ್ತು. ಅಲ್ಲಲ್ಲಿ ಮುತ್ತಯ್ದೆಯರು ಅವನಿಗೆ ಆರತಿ ಮಾಡಿ, ಅಕ್ಷತೆಹಾಕಿ ಹರಿಸಿದರು. ಉಪ್ಪರಿಗೆಗಳಲ್ಲಿ ನಿಂತು ನೋಡುವ ಜನರು ಅವನ ಮೇಲೆ ಬತ್ತರಳನ್ನೂ ಹೂಗಳನ್ನೂ ಸುರಿದರು. ಅವನು ರಾಯಗಡದಲ್ಲಿದ್ದ ಎಲ್ಲ ದೇವರ ದರ್ಶನತೆಗೆದುಕೊಂಡು ಕಾಣಿಕೆಯನ್ನು ಅರ್ಪಿಸಿ, ತಿರುಗಿ ಅರಮನೆಗೆ ಬಂದು ತಾಯಿಗೆ ನಮಸ್ಕರಿಸಿದನು.

ಮೇಲೆ ವಿವರಿಸಿದಂತೆ ರಾಜ್ಯಾಭಿಷೇಕದ ಅತಿಪ್ರೇಕ್ಷಣೀಯವಾದ ಮಹೋತ್ಸವವು ತ್ರಯೋದಶಿಯ ದಿವಸ ಅತಿವಿಜೃಂಭಣೆಯಿಂದ ಯಥಾಸಾಂಗವಾಗಿ ಕೊನೆಗಂಡಿತು. ಮುಂದೆ ಹನ್ನೆರಡು ದಿವಸ (ಜೂನ ೧೮ ರ ವರೆಗೆ) ನಮ್ಮ ಚರಿತ್ರನಾಯಕನು ಸಮಾರಂಭಕ್ಕೆ ದೂರದೂರಿಂದ ಬಂದ ಜನರಿಗೆ ಅಪ್ಪಣೆಕೊಡುವ ಗದ್ದಲದಲ್ಲಿ ಇದ್ದನು. ಯಥಾಪ್ರಕಾರ ಬ್ರಾಹ್ಮಣಭೋಜನವು ನಡೆದೇ ಇತ್ತು. ರಾಜ್ಯಾಭಿಷೇಕದ ಮಾರನೆಯ ದಿನ ಅಂದರೆ ಹುಣ್ಣಿವೆಯ ದಿವಸ ಅವನು ನಾಲ್ಕನೆಯ ಹೆಂಡತಿಯನ್ನು

ಮದುವೆಮಾಡಿಕೊಂಡನಂತೆ.* ಬಂದ ಜನರಿಗೆ ಅಪ್ಪಣೆಕೊಡುವಾಗ ಸಿವಾಜಿಯು ಘನವಿದ್ವಾಂಸರಿಗೂ ಪಂಡಿತರಿಗೂ ಸನ್ಯಾಸಿ ಸಾಧುಸಂತರಿಗೂ ಅವರವರ ಯೋಗ್ಯತೆಯಂತೆ ಬಹುಮಾನ ಕೊಟ್ಟದಲ್ಲದೆ, ಸಾಮಾನ್ಯ ಬ್ರಾಹ್ಮಣರಿಗೆ ೩ ರಿಂದ ೫ ರೂಪಾಯಿಗಳನ್ನೂ ಹೆಂಗಸರಿಗೂ ಹುಡುಗರಿಗೂ ೧ ರಿಂದ ೨ ರೂಪಾಯಿಗಳ ವರೆಗೆ ಸಂಭಾವನೆಯನ್ನು ಕೊಟ್ಟನೆಂದು ಪಂಡಿತ ಜದುನಾಥ ಸರಕಾರರು ಬರೆಯುತ್ತಾರೆ.

ಅಪ್ಪಣೆಕೊಡುವ ಕಡೆಯ ದಿವಸ ಅಂದರೆ ಜ್ಯೇಷ್ಠ ಬಹುಳ ೧೦ ದಿವಸ (೧೮ ಜೂನ) ನಮ್ಮ ಚರಿತ್ರನಾಯಕನ ಮುಪ್ಪಿನ ತಾಯಿಯಾದ ಜೀಜಿಬಾಯಿಯು ಮಡಿದಳು. ಬಸರಿನಿಂದ ಈ ಹೊತ್ತಿನ ವರೆಗೆ ಜೋಪಾನಮಾಡಿ ವಿದ್ಯಾಬುದ್ಧಿಯನ್ನು ಕಲಿಸಿದ ತನ್ನ ಪ್ರತಾಪಶಾಲಿಯಾದ ಮಗನು ಪ್ರವೃತ್ತಿಮಾರ್ಗದವರಿಗೆ ದೊರೆಯಬಹುದಾದ ಅತ್ಯುಚ್ಚಾವಸ್ಥೆಗೆ ಏರಿದುದನ್ನು ಕಂಡು ಕಣ್ಣುಮುಚ್ಚಿದ್ದರಿಂದ, ಜೀಜಿಬಾಯಿಯಂತಹ ಪುಣ್ಯವಂತರಾದ ವೀರಮಾತೆಯರು ಈ ಜಗತ್ತಿನಲ್ಲಿ ಅಪರೂಪವಾಗಿರುತ್ತಾರೆಂದು ಧಾರಾಳವಾಗಿ ಹೇಳಬಹುದು. ಆಕೆಯು ಮೃತವಾದ್ದರಿಂದ ೧,೨೫,೦೦,೦೦೦ ರೂಪಾಯಿಯ ಆಕೆಯ ಸ್ವಂತ ಆಸ್ತಿಯು ಸಿವಾಜಿಗೆ ಬಂತು. ಅವನು ಆಕೆಯ ಉತ್ತರಕ್ರಿಯೆಗಳನ್ನು ವಿಧಾನಪೂರ್ವಕವಾಗಿ ಮಾಡಿ, ಅನ್ನಸಂತರ್ಪಣೆಯಿಂದಲೂ ಭೂರಿದಾನದಿಂದಲೂ ಆಕೆಯ ಆತ್ಮವನ್ನು ತೃಪ್ತಿಗೊಳಿಸಿದನು (೧ ಜುಲೈ).

ನಮ್ಮ ಚರಿತ್ರನಾಯಕನ ಮಾತೃಭಕ್ತಿಯು ಅತಿವರ್ಣನೀಯವಾಗಿತ್ತು. ಎಲ್ಲ ಗೃಹಕೃತ್ಯದ ಆಡಳಿತವನ್ನು ತನ್ನ ತಾಯಿಗೆ ಒಪ್ಪಿಸಿದ್ದಲ್ಲದೆ ಅವನು ದೊಡ್ಡದೊಡ್ಡ ರಾಜಕಾರ್ಯಗಳಲ್ಲಿಯೂ ಆಕೆಯ ಅನುಮತಿಯನ್ನು ಪಡೆಯುತ್ತಿದ್ದನು; ದಿನಾಲು ಬೆಳಿಗ್ಗೆ ಮುಖಮಾರ್ಜನ ಮಾಡಿ

---

* ಜ್ಯೇಷ್ಠ ಶುದ್ಧ ೪ ದಿವಸ ಮುಂಜಿ ಮಾಡಿಕೊಂಡುದರಿಂದ ಆ ಹೊತ್ತಿನಿಂದ ತಾನು ನಿಜವಾಗಿ ಕ್ಷತ್ರಿಯನಾದೆನೆಂದೆಣಿಸಿ, ಸಿವಾಜಿಯು ೩ ನೆಯ ಹೆಂಡತಿಯನ್ನು ಜ್ಯೇಷ್ಠ ಶುದ್ಧ ೬ ದಿವಸ ಮದುವೆಯಾದನು. ೪ ನೆಯ ಹೆಂಡತಿಯ ಮದುವೆಯಾಗಲಿಕ್ಕೆ ಕಾರಣವೇನೋ ತಿಳಿಯುವುದಿಲ್ಲ.

ಕೊಂಡ ಬಳಿಕ ತನ್ನ ಕುಲದೇವತೆಗೂ ತಾಯಿಗೂ ನಮಸ್ಕರಿಸಿ, ತನ್ನ ಕೆಲಸಕ್ಕೆ ಹೋಗುತ್ತಿದ್ದನು. ಇರಳಿನಲ್ಲಿ ಊಟವಾದ ಬಳಿಕ ತಾಯಿಗೆ ಪೊಡಮಡಿದು ಮಲಗುತ್ತಿದ್ದನು. ಮಹತ್ವದ ರಾಜಕಾರ್ಯಕ್ಕೆ ಹೊರಡುವಾಗ ಅವನು ತಾಯಿಯ ಹರಕೆಯನ್ನು ಹೊಂದದೆ ಎಂದೂ ಹೊರಬೀಳಲಿಲ್ಲ. ತಾಯಿಯ ಬಯಕೆಯನ್ನು ಈಡೇರಿಸುವುದರಲ್ಲಿ ಅವನಷ್ಟು ಬದ್ಧಕಂಕಣರೂ ಸೇವಾತತ್ಪರರೂ ಆದ ಐತಿಹಾಸಿಕ ಪುರುಷರು ದೊರೆಯುವುದು ಅಪರೂಪ. ಜೀಜಿಬಾಯಿಯು ಕೊಂಡಾಣದ ಕೋಟೆಯನ್ನು ತನಗೆ ಕೊಡಬೇಕೆಂದು ಹೇಳಿದ ಕೂಡಲೆ, ಅವನು ಎಷ್ಟು ಲಗುಬಗೆಯಿಂದ ತಾನಾಜಿ ಮಾಲುಸರೆಯನ್ನು ಅವನ ಮಗನ ಮದುವೆಮಾಡುವುದನ್ನು ಬಿಡಿಸಿ ಕರೆಯಿಸಿ, ಆ ಕೋಟೆಯನ್ನು ಗೆದ್ದು ಆಕೆಗೆ ಕೊಟ್ಟುದನ್ನು ಹಿಂದೆ ವಿವರಿಸಿರುತ್ತೇವೆ. ತಾಯಿಯ ಸಾರ್ಥಕವು ಮುಗಿದ ಬಳಿಕ ಅವನು ಪ್ರತಾಪಗಡದ ಶ್ರೀಭವಾನಿ, ರಾಮದಾಸಸ್ವಾಮಿ, ಶಿಖರದ ಮಹಾದೇವ ಜೇಜುರಿಯ ಖಂಡೋಬ ಇವರ ದರ್ಶನವನ್ನು ತೆಗೆದುಕೊಂಡು, ಮರಳಿ ರಾಯಗಡಕ್ಕೆ ಬಂದು ಆಶ್ವಿಜಶುದ್ಧ ೫ ಮಿಯ ಶುಭಮುಹೂರ್ತದಲ್ಲಿ ಮತ್ತೆ ಸಿಂಹಾಸನದ ಮೇಲೆ ಕುಳಿತನು (ಅಕ್ಟೋಬರ ೧೬೭೪).

ಸಿವಾಜಿಯ ರಾಜ್ಯಾಭಿಷೇಕದ ಮಹೋತ್ಸವದ ಒಟ್ಟು ವೆಚ್ಚದ ಅಂದಾಜನ್ನು ಹಲವು ಜನರು ಹಲವು ತರವಾಗಿ ಮಾಡಿದ್ದಾರೆ. ಆ ಭಿನ್ನಾಭಿಪ್ರಾಯಗಳ ದಿಗ್ದರ್ಶನವನ್ನು ಮಾಡಿ, ಈ ಪ್ರಕರಣವನ್ನು ಮುಗಿಸುವೆವು. ಸಭಾಸದನು ತನ್ನ ಬಖೈರಿನಲ್ಲಿ ಒಟ್ಟು ಒಂದು ಕೋಟಿ ನಾಲ್ವತ್ತೆರಡು ಲಕ್ಷ ಹೊನ್ನು ವೆಚ್ಚವಾಯಿತೆಂದು ಬರೆಯುತ್ತಾನೆ. ಈ ಅಜಮಾಸಿನಲ್ಲಿ ಅತಿಶಯೋಕ್ತಿಯಿರಬಹುದೆಂದು ಪಂಡಿತ ಜದುನಾಥ ಸರಕಾರರ ಅಭಿಪ್ರಾಯವು. ರಾಜ್ಯಾಭಿಷೇಕವಾದ ೪ ತಿಂಗಳ ಮೇಲೆ ಡಚ್ಚವರ್ತಕನಾದ ಅಬ್ರಾಹಾಮಲೀ ಫೀಬರೆಂಬವನು ಈ ಸಮಾರಂಭದಲ್ಲಿ ೬,೦೦,೦೦೦ ರೂ. ಖರ್ಚಾದಂತೆ ಜನರು ಮಾತಾಡುತ್ತಾರೆಂದು ಬರೆದಿರುತ್ತಾನೆ. ಗಾಗಾಭಟ್ಟನೊಬ್ಬನಿಗೆ ಒಂದು ಲಕ್ಷಕ್ಕಿಂತ ಹೆಚ್ಚು ರೂಪಾಯಿಗಳು ದೊರೆದುದರಿಂದ ಈ ಮೊಬಲಗು ಬ್ರಾಹ್ಮಣರಿಗೆ ಅಪ್ಪಣೆಕೊಡುವಾಗ ಕೊಟ್ಟ

ಸಂಭಾವನೆಯು ಮಾತ್ರ ಆಗಿರಬಹುದೆಂದು ತೋರುತ್ತದೆ. ಸಿಂಹಾಸನದ ಬೆಲೆ, ಒಡವೆಗಳ ಬೆಲೆ, ಬ್ರಾಹ್ಮಣಭೋಜನದ ಖರ್ಚು, ದಕ್ಷಿಣೆ, ದಾನ, ಸಂಭಾವನೆ, ಉಡುಗರೆ. ಇನಾಮು ಇವೆಲ್ಲ ಕೂಡಿ ಒಟ್ಟು ೫೦ ಲಕ್ಷ ರೂಪಾಯಿ ಖರ್ಚಾಗಿರಬಹುದೆಂದು ಪಂಡಿತ ಜದುನಾಥ ಸರಕಾರರು ಕಾಯಾಸ ಕಟ್ಟುತ್ತಾರೆ. ಈ ಕಾಯಾಸವಾದರೂ ಸರಿಯಾದ್ದೆಂದು ತೋರುವುದಿಲ್ಲ. ಒಂದು ಕೋಟಿ ರೂಪಾಯಿಗಳು ನಮ್ಮ ಛತ್ರಪತಿಯು ಕೈಬಿಟ್ಟವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದೆಂದು ನಂಬಿದ್ದೇವೆ.

---

## ೯ ನೆಯ ಪ್ರಕರಣ

### ಮೊಗಲರೊಡನೆ ತಿಕ್ಕಿಯಾಟವೂ ಅದಿಲ್ಶಾಹಿಯ ಅರಜೀವವೂ.

ಹಿಂದಿನ ಪ್ರಕರಣದಲ್ಲಿ ವಿವರಿಸಿದ ಸಿವಾಜಿಯ ರಾಜ್ಯಾಭಿಷೇಕದ ಅತೋನಾತ (ವಿಪರೀತವಾದ) ಖರ್ಚಿನಿಂದ ಅವನ ಬೊಕ್ಕಸವೆಲ್ಲ ಬರಿದಾಯಿತು. ಪಟ್ಟಾಭಿಷೇಕವು ಮುಗಿದ ಕೂಡಲೆ ಅಕಸ್ಮಾತ್ತಾಗಿ ಜೀಜಿಬಾಯಿಯು ಸತ್ತುದರಿಂದ ಅವನಲ್ಲುಳಿದ ಅಲ್ಪಸ್ವಲ್ಪ ಹಣವು ಕೂಡ ತೀರಿಹೋಯಿತು. ದಂಡಾಳುಗಳ ಸಂಬಳವು ಬಾಕಿಯಾಗಿ ಉಳಿದುದರಿಂದ ಅವನ ದುಡ್ಡಿನ ಅಡಚಣೆಯು ಹೇಳಕೂಡದಷ್ಟಾಯಿತು. ಆದ್ದರಿಂದ ಅವನು ಎಲ್ಲಿ ಸುಲಿಗೆಗೆ ಹೋಗಬೇಕೆಂಬ ಎಣಿಕೆಯಲ್ಲಿ ಮುಳುಗಿದನು.

ಸಿವಾಜಿಯ ಸಿಂಹಾಸನಾರೋಹಣದ ಮರುದಿವಸವೇ ಮಳೆಗಾಲವು ಆರಂಭವಾಯಿತು. ಆದರೆ ಖರ್ಚಿಗೆ ಹಣವಿಲ್ಲದೆ ಮಳೆಗಾಲವನ್ನು ಕಳೆಯುವ ಬಗೆ ಹೇಗೆ? ರಾಜ್ಯಾಭಿಷೇಕಕ್ಕಿಂತ ಮೊದಲೇ ದಿಲೀರಖಾನನನ್ನು ಬಾದಶಹನು ದಿಲ್ಲಿಗೆ ಕರೆಯಿಸಿಕೊಂಡನೆಂಬ ಸುದ್ದಿಯು ರಾಯಗಡಕ್ಕೆ ಬಂದಿತ್ತು. ಮರಾಟರು ದಿಲೀರಖಾನನಿಗೆ ಬಹಳವಾಗಿ ಹೆದರುತ್ತಿದ್ದರಾದ ಕಾರಣ ಅವನು ಹೋದ್ದರಿಂದ ಅವರಿಗಿದ್ದ ಮೊಗಲರ ಅಂಜಿಕೆಯು

ಮುರಿಯಿತು. ಮೊಗಲರ ಸುಬೇದಾರನಾದ ಬಹದ್ದೂರಖಾನನು ದಿಲೇರ ನಷ್ಟು ಚಪಲನೂ ಸಾಹಸಿಯೂ ಎದೆಗಾರನೂ ಆಗಿರಲಿಲ್ಲ. ಆದ್ದರಿಂದ ಈ ಸುಬೇದಾರನ ಪಾಳಯವನ್ನೇ ಸುಲಿದು ಮೊಗಲರನ್ನು ಎದೆಗುಂದಿಸ ಬೇಕೆಂಬ ಅತಿಸಾಹಸದ ವಿಚಾರವು ನಮ್ಮ ಚರಿತ್ರನಾಯಕನ ತಲೆಯಲ್ಲಿ ಬಂತು. ಬಹದ್ದೂರಖಾನನು ತನ್ನ ಪಾಳಯವಾದ ಪೆಡಗಾವಿನಲ್ಲಿರುವ ವರೆಗೆ ಈ ಲೂಟಿಯನ್ನು ಮಾಡುವುದು ಅಸಂಭವವಾಗಿತ್ತು. ಆದಕಾರಣ ಸೀತಾದೇವಿಯನ್ನು ಹರಣಮಾಡುವುದಕ್ಕೋಸ್ಕರ ರಾವಣನು ರಾಮನನ್ನು ದೂರೊಯ್ಯಲಿಕ್ಕೆ ಮಾರೀಚನನ್ನು ಕಳುಹಿದಂತೆ, ಹಂಚಿಕೆಗಾರನಾದ ಸಿವಾಜಿಯು ೨,೦೦೦ ರಾಹುತರನ್ನು ಮೊಗಲರ ನಾಡನ್ನೊಳನುಗ್ಗಲಿಕ್ಕೆ ಕಳುಹಿ, ಅವರು ಬಹದ್ದೂರಖಾನನನ್ನು ಪಾಳಯದಿಂದ ೫೦ ಮೈಲು ದೂರ ಒಯ್ದುಕೂಡಲೆ, ತಾನು ೭,೦೦೦ ರಾಹುತರೊಡನೆ ಬೇರೆದಾರಿಯಿಂದ ಪೆಡಗಾವಿಗೆ ಹೋಗಿ, ಸಾವಕಾಶವಾಗಿ ಸುಬೇದಾರನ ಪಾಳಯವನ್ನು ಸುಲಿದು, ಅಲ್ಲಿದ್ದ ಡೇರೆಗಳನ್ನೆಲ್ಲ ಸುಟ್ಟು ಧ್ವಂಸಮಾಡಿದನು!! ಈ ಲೂಟಿ ಯಲ್ಲಿ ಬಹದ್ದೂರನು ಬಾದಶಹನಿಗೆ ಕಳಿಸಿಕೊಡುವ ಉದ್ದೇಶದಿಂದ ಶ್ರಮಪಟ್ಟು ಕೂಡಿಹಾಕಿದ ೨೦೦ ಉತ್ತಮ ಕುದುರೆಗಳೂ ಒಂದುಕೋಟಿ ರೂಪಾಯಿಗಳೂ ಎಷ್ಟೋ ಉಪಯುಕ್ತವಾದ ಬೇರೆ ಪದಾರ್ಥಗಳೂ ದೊರೆತವು. ವಿಶೇಷ ಶ್ರಮವಿಲ್ಲದೆ ಪಟ್ಟಾಭಿಷೇಕದ ವೆಚ್ಚವು ಮೊಗಲ ರಿಂದ ಬಂದಂತಾಯಿತು (ಜುಲೈ).

ಈ ಸುಲಿಗೆಯಿಂದ ದುಡ್ಡಿನ ಚಿಂತೆ ಕಡಿದು ಸಿವಾಜಿಗೆ ತುಸು ಬಿಡುವು ದೊರೆಯಿತು. ಅವನು ತನ್ನ ದಂಡಿನ ಭಾಗಗಳನ್ನು ಜುನ್ನರ, ಕೊಲ್ಹಾಪುರ, ರಾಮನಗರಪ್ರಾಂತಗಳಿಗೆ ಕಳುಹಿ, ತಾನು ಹಿಂದಿನ ಪ್ರಕರಣ ದಲ್ಲಿ ಹೇಳಿದಂತೆ ಜೇಜುರಿ ಮುಂತಾದ ದೇವಸ್ಥಾನಗಳಿಗೆ ಹೋಗಿಬಂದನು. ರಾಮನಗರದ ನೆರೆಯಲ್ಲಿದ್ದ ಕಾಡಿನ ದಾರಿಗಳನ್ನು ಶೂರರಾದ ೩/೪ ಸಾವಿರ ಭಿಲ್ಲರು ಕಾಯುತ್ತಿದ್ದುದರಿಂದ ಅವರ ಮುಂದೆ ಮರಾಟರ ಆಟವು ನಡೆಯ ಲಿಲ್ಲ. ಮರಾಟರು ೧ ಲಕ್ಷರೂಪಾಯಿ ಲಂಚಕೊಡಹೋದರು. ಆ ಕಲಿ ಗಳು ಅದಕ್ಕೆ ಬತಗೆಡದೆ ಮರಾಟರನ್ನು ಅಡ್ಡಗಟ್ಟಿದರು. ಆದ್ದರಿಂದ ಕೋರಿಕೆಗೆಟ್ಟ ಮರಾಟರು ಸಿರುಪಾಯರಾಗಿ ಅಲ್ಲಿಂದ ಹೊರಟು, ಅವರಂಗಾ

ಬಾದದ ನೆರೆಯಲ್ಲಿದ್ದ ಸಿವಾಜಿಯ ದಂಡನ್ನು ಕೂಡಿದರು. ಸಿವಾಜಿಯು ಬಹದ್ದೂರಖಾನನ ದಂಡನ್ನು ಸುತ್ತಗಟ್ಟಲಿಕ್ಕೆ ಕೆಲಜನರನ್ನು ಕಳುಹಿ, ಸಾವಕಾಶವಾಗಿ ಧರ್ಮಗಾವ ಮುಂತಾದ ಊರುಗಳನ್ನು ಸುಲಿದು, ತನಗೆ ಎದುರಾದ ಮೊಗಲರ ಸಣ್ಣದಂಡನ್ನು ಮುರಿಬಡಿದು, ಜುನ್ನರದ ಬಳಿಯಲ್ಲಿ ಪಾಳೆಯಹಾಕಿದನು. ಅಲ್ಲಿಂದ ೪ ಮೈಲಿನ ಮೇಲಿರುವ ಸಿವನೇರಿಕೋಟೆ ಯಿಂದ ಹಾರಿಸಿದ ಒಂದು ತುಪಾಕಿಯ ಗುಂಡು ಅವನೊಬ್ಬ ಸರದಾರ ನನ್ನು ಕೊಂದುದರಿಂದ ಅಲ್ಲಿ ನಿಲ್ಲುವುದು ಸುರಕ್ಷಿತವಲ್ಲೆಂದೆಣಿಸಿ, ಬೇರೆ ಕಡೆಗೆ ಹೋದನು (೧೫ ದಿಶಂಬರ ೧೬೭೪). ಕೊಲ್ಹಾಪುರದ ಕಡೆಗೆ ಹೋದ ದತ್ತಾಜಿಯು ಹಾದಿಯಲ್ಲಿ ಸಿಕ್ಕ ಊರುಗಳನ್ನು ಸುಲಿದು ಕೊಲ್ಹಾ ಪುರ ಪಟ್ಟಣದಿಂದ ೧,೫೦೦ ಹೊನ್ನುಗಳನ್ನೂ ಶೋಣಗಾವದಿಂದ ೫೦೦ ಹೊನ್ನುಗಳನ್ನೂ ಕಪ್ಪುಗಾಣಿಕೆಯಾಗಿ ಇಸಕೊಂಡು, ತನ್ನ ಒಡೆಯನಿಗೆ ಅಲ್ಲಿಗೆ ದಂಡಿನೊಡನೆ ಬರಲಿಕ್ಕೆ ಸೂಚಿಸಿದನು (ಫೆಬ್ರುವರಿ ೧೬೭೫).

ಜುನ್ನರದ ಬಳಿಯಲ್ಲಿದ್ದ ಸಿವಾಜಿಯು, ತನ್ನೊಬ್ಬ ದಳವಾಯಿಯು ಹಗೆಗಳ ಗುಂಡು ತಾಕಿ ಸಾಯಲು, ಅಲ್ಲಿ ನಿಲ್ಲದೆ ಬೇರೆಕಡೆಗೆ ಹೋದನೆಂದು ಮೇಲೆ ಬರೆದಿರುತ್ತೇವಷ್ಟೇ. ಅವನು ಅಲ್ಲಿಂದ ಹೊರಟು ನೆಟ್ಟಗೆ ಕೊಲ್ಹಾ ಪುರಕ್ಕೆ ಹೋಗಿ, ಆ ಪಟ್ಟಣವನ್ನು ಹಿಡಿಕೊಂಡು (ಮಾರ್ಚ) ರಾಯಬಾಗ ವನ್ನು ತೆಗೆದುಕೊಳ್ಳಲಿಕ್ಕೆ ಯತ್ನಿಸಿ, ಆ ಪ್ರಯತ್ನವು ನಿಷ್ಫಲವಾದ್ದರಿಂದ ತೆಂಕಲಿಗೆ ಹೋಗಿ, ಆದಿಲ್ಶಾಹಿಯ ವಶದಲ್ಲಿದ್ದ ಹೆಸರುವಾಸಿಯಾದ **ಫೋಂಡಾ**ಕೋಟೆಯನ್ನು ಮುತ್ತಿದನು (ಎಪ್ರಿಲ ೧೬೭೫).

ಫೋಂಡಾಕೋಟೆಯ ಮುತ್ತಿಗೆಯನ್ನು ಎಬ್ಬಿಸುವಷ್ಟು ಸಾಮ ರ್ಥ್ಯವು ಆದಿಲ್ಶಾಹಿ ಸರಕಾರಕ್ಕೆ ಆಕಾಲಕ್ಕಿದ್ದಿಲ್ಲ. ಆದ್ದರಿಂದ ಅವರು ಸ್ವಾಭಾವಿಕವಾಗಿ ಮೊಗಲರನ್ನು ಕೂಡಿಕೊಂಡು ಬರಬಹುದೆಂಬ ಹೆದ ರಿಕೆಯು ಅವನಲ್ಲಿ ಹುಟ್ಟಿತು. ಅವರಿಬ್ಬರ ಒಟ್ಟುಗೂಡಿದ ದಂಡನ್ನು ಸೋಲಿಸುವಷ್ಟು ಶಕ್ತಿಯು ಮರಾಟರಿಗೆ ಇಲ್ಲುದರಿಂದ, ಅವರಿಬ್ಬರು ಒಂದಾ ಗದಂತೆ ಬಹದ್ದೂರಖಾನನನ್ನು ಮೋಸಗೊಳಿಸಲಿಕ್ಕೆ ಸಿವಾಜಿಯು ಒಂದು ಹಂಚಿಕೆಯನ್ನು ಹುಡುಕಿತೆಗೆದನು. ಅವನು ಮೊಗಲ ಸುಬೇದಾರನ

ಬಳಿಗೆ ತನ್ನೊಬ್ಬ ವಕೀಲನನ್ನು ಕಳುಹಿ ಒಪ್ಪಂದದ ಮಾತುಕಥೆಗಳನ್ನು ನಡಿಸಿ, ಕಾಲಹರಣ ಮಾಡತೊಡಗಿದನು. ಎಬಡನಾದ ಬಹದ್ದೂರಖಾನನಿಗೆ ಸಿವಾಜಿಯ ಮೋಸವು ಹೊಳೆಯಲಿಲ್ಲ. ಮರಾಟರ ಹಾವಳಿಗೆ ಬೇಸತ್ತ ಬಹದ್ದೂರನು ಹೇಗಾದರೂ ಒಪ್ಪಂದಮಾಡಿಕೊಂಡು, ನಿಶ್ಚಿಂತನಾಗಬೇಕೆಂದು ಹಾತೊರೆದನು. ಎಷ್ಟೋ ದಿವಸ ಅರೆದಾಟನಡೆದು ಕೆಳಗೆ ಕೊಟ್ಟ ಶರ್ತುಗಳು ಗೊತ್ತಾದವು:—

(೧) ಸಿವಾಜಿಯು ತನ್ನ ೧೭ ಕೋಟೆಗಳನ್ನು ಬಾದಶಹನಿಗೆ ಬಿಟ್ಟು ಕೊಡಬೇಕು.

(೨) ಶಂಭುಜಿಯು ೬,೦೦೦ ದ ಮನಸಬ್ದಾರನಾಗಿ ದರಬಾರಿನಲ್ಲಿರಬೇಕು.

(೩) ಭೀಮಾನದಿಯ ಮೂಡಲಿಗಿದ್ದ ಎಲ್ಲ ನಾಡು ಸಿವಾಜಿಯದೆಂದು ಬಾದಶಹನು ಒಪ್ಪಿಕೊಳ್ಳಬೇಕು.

ಗೊತ್ತುಮಾಡಿದ ಈ ಶರ್ತುಗಳಿಗೆ ಬಾದಶಹನು ಒಪ್ಪಿಕೊಂಡು ಒಂದು ಫರ್ಮಾನವನ್ನು ತಯಾರಿಸಿ ಕಳಿಸಿದನು. ಬಹದ್ದೂರಖಾನನು ಅದನ್ನು ಆದರದಿಂದ ಸ್ವೀಕರಿಸಬೇಕೆಂದು ಬರೆದು ಸಿವಾಜಿಗೆ ಕಳುಹಿದನು (ಜುಲೈ ೧೬೭೫).

ಹೊಳೆದಾಟಿದ ಬಳಿಕ ಅಂಬಿಗರ ಮಿಂಡ ಎಂಬ ಗಾದೆಯು ನಮ್ಮ ವಾಚಕರಿಗೆ ಗೊತ್ತಿರಬಹುದು. ಮುತ್ತಿಗೆಯು ನಡೆದಾಗ ಮೊಗಲರು ತನ್ನ ರಾಜ್ಯದ ಬಡಗಣ ಮೇರೆಯಲ್ಲಿ ದಾಳಿಯನ್ನು ಮಾಡಬಾರದೆಂತಲೂ, ಅವರು ಆದಿಲ್ಶಾಹಿಯವರಿಗೆ ನೆರವಾಗಬಾರದೆಂತಲೂ, ಹೊತ್ತುಗಳೆಯಲಿಕ್ಕೆ ಸಿವಾಜಿಯು ಈ ಹೂಟವನ್ನು ಎತ್ತಿದ್ದನೇ ಹೊರತು ಒಪ್ಪಂದಮಾಡಿಕೊಳ್ಳಲಿಕ್ಕಲ್ಲ. ಈಗಂತೂ ಫೋಂಡಕೋಟೆಯು ಅವನ ಕಯ್ಸೇರಿತು. ಆದ್ದರಿಂದ ಬಾದಶಹನ ಫರ್ಮಾನವನ್ನು ತಂದವರಿಗೆ ಅವನು ನಿಷ್ಠುರವಾಗಿ ಹೇಳಿದ್ದೇನೆಂದರೆ:—"ಏನು ಕಾರಣ ನಾನು ನಿಮ್ಮ ಬಾದಶಹನೊಡನೆ ಒಪ್ಪಂದಮಾಡಿಕೊಳ್ಳಬೇಕೆಂಬುದು ನನಗೆ ಗೊತ್ತಾಗಲೊಲ್ಲದು. ನೀವು ಏನು ನನ್ನ ಕೇಡು

ಮಾಡಿರುತ್ತೀರಿ? ಅಥವಾ ನಿಮ್ಮಿಂದ ಯಾವ ನನ್ನ ಹಾನಿ ಆಗುವಂತಿದೆ? ಈ ಒಪ್ಪಂದಕ್ಕೆ ಏನೂ ಕಾರಣ ತೋರುವುದಿಲ್ಲ. ಆದಕಾರಣ ಬಂದ ದಾರಿಯಿಂದ ಸುಮ್ಮನೆ ಹೋಗಿರಿ. ಇಲ್ಲವಾದರೆ, ನಿಮಗೆ ಅಪಮಾನಮಾಡಿ ಕಳಿಸಬೇಕಾಗುವುದು.'' ಈ ಮಾತನ್ನು ಕೇಳಿ ಮೊಗಲ ವಕೀಲರು ನಾಚಿ ಸುಮ್ಮನೆ ಹೊರಟುಹೋದರು.

ಬಾದಶಹನ ಫರ್ಮಾನವು ತಿರುಗಿ ಬಂದುದನ್ನು ನೋಡಿದ ಬಳಿಕ, ಬಹದ್ದೂರಖಾನನಿಗೆ ಸಿವಾಜಿಯು ತನ್ನನ್ನು ಮೋಸಮಾಡಿದ ಬಗೆಯು ಹೊಳೆಯಿತು. ಅವನು ಸಿಟ್ಟು ಬೆಂಕಿಯಾಗಿ ಸಿವಾಜಿಯ ಮೇಲೆ ವಿಷ ಕಾರ ತೊಡಗಿದನು. ಆದರೆ ಮಾಡುವುದೇನು? ಹೊಟ್ಟೆಯಲ್ಲಿದ್ದ ಸಿಟ್ಟು ರಟ್ಟೆಯಲ್ಲಿದ್ದಿಲ್ಲ. ಹೇಗಾದರೂ ಮಾಡಿ ಸಿವಾಜಿಯನ್ನು ಹಣ್ಣಿಗೆ ತರಬೇಕೆಂಬ ಹವಣಿಕೆಯು ಅವನಲ್ಲಿ ಹುಟ್ಟಿತು. ಬಾದಶಹನಿಂದ ದಂಡಿನ ಸಹಾಯವು ದೊರೆಯುವ ಆಶೆ ಇಲ್ಲುದರಿಂದ ಅದಿಲ್ಶಾಹಿಯ ನೆರವನ್ನು ಬಯಸಿ, ವಿಜಾಪುರದ ವಜೀರನೊಡನೆ ಮಾತುಕಥೆಗಳನ್ನು ನಡಿಸಿದನು. ಬಾದಶಹನು ಒಂದು ವರ್ಷದ ಖಂಡಣಿಯನ್ನು ಬಿಡಲಿಕ್ಕೆ ಒಪ್ಪಿದ್ದರಿಂದ ಅದಿಲ್ಶಾಹಿಯ ವಜೀರನಾದ ಖವಾಸಖಾನನು ಮರಾಟರ ನಾಡನ್ನು ಒಳನುಗ್ಗಲಿಕ್ಕೆ ಒಡಂಬಟ್ಟನು (ಅಕ್ಟೋಬರ ೧೬೭೬). ಆದರೆ ಮೊಗಲರ ದುರ್ದೈವದಿಂದ ಬಹಲೋಲಖಾನನೆಂಬ ಮತ್ತೊಬ್ಬ ಅದಿಲ್ಶಾಹಿ ಸರದಾರನು ಒಳಸಂಚು ಮಾಡಿ ಖವಾಸಖಾನನನ್ನು ಕೊಲ್ಲಿಸಿ, ತಾನೇ ಮುಖ್ಯ ವಜೀರನಾದನು (೧೧ ನವಂಬರ ೧೬೭೫). ಆದ್ದರಿಂದ ಬಹದ್ದೂರಖಾನನು ಮಾಡಿದ ಕಾರ್ಯಸ್ಥಾನವೆಲ್ಲ ಹೊಳೆಯಲ್ಲಿ ಹುಣಿಸೆಹಣ್ಣು ತೊಳೆದಂತಾಯಿತು.

ಈ ಎಲ್ಲ ಸಂಗತಿಗಳು ಬಾದಶಹನ ಕಿವಿಗೆ ಮುಟ್ಟಿದ ಕೂಡಲೆ, ಅವನು ಬಹದ್ದೂರಖಾನನ ಮೇಲೆ ಸಿಟ್ಟಿಗೆದ್ದನು; ಅವನ ಮರುಳುತನ, ಹೆಡ್ಡತನ, ಸೋಮಾರಿತನ, ಮೆಯ್ಗಳ್ಳತನಗಳ ಬಗ್ಗೆ ಅವನನ್ನು ಯಥೇಚ್ಛವಾಗಿ ಬಯ್ದನು. ಇನ್ನು ಮುಂದೆ ಬಾದಶಹನು ತನಗೆ ಎದ್ದಲಗಟ್ಟಿ ಕೊಡಬಹುದೆಂದು ಮನವರಿಕೆಯಾದ್ದರಿಂದ ಬಹದ್ದೂರಖಾನನ ಚಟುವಟಿಕೆಯು ಹೆಚ್ಚಿತು. ಅವನು ಅಡಬಡಿಸಿ ಲಗುಬಗೆಯಿಂದ ದಂಡೆತ್ತಿ

ಕಲ್ಯಾಣಕ್ಕೆ ಹೋಗಿ, ಬಡಗಣ ಕೊಂಕಣದಲ್ಲಿದ್ದ ಮರಾಟರ ದಂಡನ್ನು ಚದರಿಸಿದನು (ನವಂಬರ). ಬಹದ್ದೂರನು ರಾಜಧಾನಿಯಿಂದ ದೂರ ಹೋದ ಸಂಧಿಯನ್ನು ಸಾಧಿಸಿ, ಮರಾಟರು ಅವರಂಗಾಬಾದದ ನೆರೆಯಲ್ಲಿ ಕೊಳ್ಳೆಸುಲಿಗೆಯನ್ನು ಮಾಡಲಾರಂಭಿಸಿದರು. ಡೇರೆ ಮುಂತಾದ ಭಾರ ವಾದ ಸಾಮಾನುಗಳನ್ನು ಬಿಟ್ಟು ಬಹದ್ದೂರನು ಅವಸರದಿಂದ ಅಲ್ಲಿಗೆ ಹೋಗಿ, ಅವರಂಗಾಬಾದದಿಂದ ೨೮ ಮೈಲು ಮೇಲಿರುವ **ಲಾಸೂರ** ಎಂಬ ಹಳ್ಳಿಯ ಬಳಿಯಲ್ಲಿ ಮರಾಟರನ್ನು ಮುರಿಬಡಿದು, ಜುನ್ನರದ ಕಡೆಗೆ ಅಟ್ಟಿ ದನು (ಜನವರಿ ೧೬೭೬).

ಈ ಸುಮಾರಿಗೆ ನಮ್ಮ ಚರಿತ್ರನಾಯಕನು ಬೇನೆ ಬಿದ್ದುದರಿಂದ ಬಹದ್ದೂರಖಾನನ ಸಮಾಚಾರವನ್ನು ತೆಗೆದುಕೊಳ್ಳಲಿಕ್ಕೆ ಅವನಿಗೆ ಅವ ಕಾಶ ದೊರೆಯಲಿಲ್ಲ. ೩ ತಿಂಗಳು ಅವನು ಕಾಹಿಲೆಯಲ್ಲಿದ್ದನು. ಆರೋಗ್ಯ ವು ಸರಿಯಾದ ಬಳಿಕ (ಮಾರ್ಚ), ಮರಾಟರು ವಿಜಾಪುರದ ಪಡವಲಿಗೆ ೪೩ ಮೈಲಿನ ಮೇಲಿರುವ ಅಥಣಿಯನ್ನು ಸುಲಿದರು (ಎಪ್ರಿಲ). ವಿಜಾ ಪುರದ ದರಬಾರಿನಲ್ಲಿ ಒಳಜಗಳವು ಪ್ರಬಲವಾದ್ದರಿಂದ, ಮರಾಟರ ಹಾವಳಿಯನ್ನು ತಡೆಯುವವರೇ ಇದ್ದಿಲ್ಲ. ಆದ್ದರಿಂದ ೪,೦೦೦ ಮರಾಟ ರಾಹುತರು ಜನವರಿಯಿಂದ ಮೇ ಯ ವರೆಗೆ೪ ತಿಂಗಳ ಯಥಾವಕಾಶವಾಗಿ ಆದಿಲ್ಶಾಹಿ ನಾಡನ್ನು ಸುಲಿದು ಕೊಳ್ಳೆಹೊಡೆದರು. ಇದೇ ಕಾಲಕ್ಕೆ ಮೋರೋಪಂತ ಪೇಶವೆಯು ರಾಮನಗರದ ರಾಜ್ಯವನ್ನೊಳನುಗ್ಗಿ **ಪಿಂಡೋಲ, ಪೈನೆಕಾ** ಗ್ರಾಮಗಳನ್ನು ಹಿಡಿದುಕೊಂಡು, ರಾಮನಗರದ ಅರಸನನ್ನು ಅಲ್ಲಿಂದ ಓಡಿಸಿ, ಅಲ್ಲಲ್ಲಿ ಅವನು ತಿರುಗಿ ಬರದಂತೆ ಕಾವ ಲಿಟ್ಟು, ರಾಯಗಡಕ್ಕೆ ತಿರುಗಿ ಬಂದನು (ಜೂನ ೧೬೭೬).

ಅಷ್ಟರಲ್ಲಿ ಬಹದ್ದೂರಖಾನನ ದಡ್ಡತನದಿಂದ ಆದಿಲ್ಶಾಹಿಯ ಹೊಸ ವಜೀರನು ನಮ್ಮ ಚರಿತ್ರನಾಯಕನ ನೆರವನ್ನು ಬಯಸಿ, ಅವನ ಬಳಿಗೆ ಒಬ್ಬ ವಕೀಲನನ್ನು ಕಳುಹಿದನು. ಬಹಲೋಲಖಾನನು ಮುಖ್ಯ ವಜೀರ ನಾದ ಖವಾಸಖಾನನನ್ನು ಸೆರೆಹಿಡಿದು ತಾನೇ ಮುಖ್ಯ ವಜೀರನಾದ ನೆಂದು ಮೇಲೆ ಹೇಳಿರುತ್ತೇವಷ್ಟೆ. ಆದಿಲ್ಶಾಹಿಯ ಒಡಕು ಸಿವಾಜಿಯ

ಚರಿತ್ರೆಗೆ ವಿಶೇಷವಾಗಿ ಸಂಬಂಧಿಸಿರುವುದರಿಂದ ಅದನ್ನು ಇಲ್ಲಿ ಸಂಕ್ಷೇಪ ವಾಗಿ ವಿವರಿಸುವೆವು.

೨ ನೆಯ ಅಲ್ಲಿಆದಿಲ್ಯಹನು ಬಲು ಕುಡುಕನಾದ್ದರಿಂದ ಅರ್ಧಾಂಗ ವಾಯುವಿನ ರೋಗದಿಂದ ಮೂಲೆಗುಂಪಾಗಿ ಬಿದ್ದನು (೨೦ ಜೂನ ೧೬೭೨). ಮುಂದೆ ೫ ತಿಂಗಳು ಎಷ್ಟು ಔಷಧೋಪಚಾರ ಮಾಡಿದರೂ ಗುಣಮುಖ ತೋರದ್ದರಿಂದ, ಅವನು ನಿರಾಶನಾಗಿ ತನ್ನ ೪ ವರ್ಷದ ಮಗ ನಾದ ಸಿಕಂದರನಿಗೆ ಪಟ್ಟಗಟ್ಟಿ, ತನ್ನ ನಂಬಿಗೆಯ ವಜೀರನಾದ ಅಬ್ದುಲ ಮಹಮ್ಮದನನ್ನು ಪಾಲಕನಾಗಿ ನೇಮಿಸಬೇಕೆಂದು ಯೋಚಿಸಿ, ಅವನನ್ನು ಕೇಳಿದನು. ಆದಕ್ಕಾರಾಜನಿಷ್ಠನಾದ ವಜೀರನು ಒಡಂಬಡದೆ, ರಾಜ್ಯ ವನ್ನು ನಾಲ್ಕು ಭಾಗವಾಗಿ ವಿಭಾಗಿಸಬೇಕೆಂತಲೂ, ತಾನು ಈಶಾನ್ಯ ಭಾಗದ ಸುಬೇದಾರನಾಗಿ ಮೊಗಲರನ್ನು ಅಡ್ಡಗಟ್ಟುವೆನೆಂತಲೂ, ಬಹ ಲೋಲಖಾನನು ಪಶ್ಚಿಮಭಾಗದ ಸುಬೇದಾರನಾಗಿ ಸಿವಾಜಿಯನ್ನು ತಡೆಯು ಬೇಕೆಂತಲೂ, ಮುಜಾಫರಖಾನನು ತೆಂಕಣ ಸುಬೇದಾರನಾಗಿ ಮೈಸೂ ರನ್ನು ಅಂಕೆಯಲ್ಲಿಟ್ಟುಕೊಳ್ಳಬೇಕೆಂತಲೂ, ಖವಾಸಖಾನನು ಪಾಲಕನಾಗಿ ರಾಜಧಾನಿಯನ್ನೂ, ಅದರ ಸುತ್ತಲಿನ ಪ್ರದೇಶವನ್ನೂ ಕಾಪಾಡಬೇಕೆಂ ತಲೂ ಸೂಚಿಸಿದನು. ಈ ಸೂಚನೆಗೆ ಅಲ್ಲಿ ಅದಿಲ್ಯಹನು ಒಡಂಬಟ್ಟರೂ ಉಳಿದ ಮುವ್ವರು ಒಡಂಬಡದೆ ಹಾಕಿಯಾಡತೊಡಗಿದರು. ಅಲ್ಲಿಯು ಸತ್ತಕೂಡಲೆ (೨೪ ನವಂಬರ ೧೬೭೨) ಹಬಸಿಯವನಾದ ಖವಾಸ ಖಾನನು ರಾಜ್ಯಾಧಿಕಾರವನ್ನು ತನ್ನ ಕಯ್ಯಲ್ಲಿ ತೆಗೆದುಕೊಂಡುದರಿಂದ, ವಜೀರನಾದ ಅಬ್ದುಲಮುಹಮ್ಮದನು ದರಬಾರನ್ನೇ ಬಿಟ್ಟು ಹೊರಟು ಹೋದನು. ರಾಜ್ಯದಲ್ಲೆಲ್ಲಾ ಅಸಂತೋಷವು ಹಬ್ಬಿತು; ಬಂಡಾಯಿ ಗಳೆದ್ದವು; ಇಡಿ ನಾಡಿನಲ್ಲಿ ಅರಾಜಕತೆಯು ಹೆಚ್ಚಿತು. ಗಾಳಿ ಬಿಟ್ಟಕೂಡಲೆ ತೂರಿಕೊಳ್ಳಬೇಕೆಂಬ ಗಾದೆಯಂತೆ ಸಿವಾಜಿಯು ತನ್ನ ಹಾವಳಿಯನ್ನು ಹಬ್ಬಿಸಿದನು. ನಾಲ್ಕು ಲಕ್ಷ ರೂಪಾಯಿಗಳ ಕಾಣಿಕೆ ಯಿಂದ ಅವರಂಗಜೀಬ ಬಾದಶಹನ ಲೋಭವು ಕೆಲಮಟ್ಟಿಗೆ ತಗ್ಗಿದರೂ ಆದಿಲ್ಶಾಹಿಯನ್ನು ನುಂಗಬೇಕೆಂಬ ಅವನ ಬಯಕೆಯು ಬಯಲಾಗಲಿಲ್ಲ (೧೧ ಜನವರಿ ೧೬೭೩). ಅಫಗಾಣ ಸರದಾರರು ಖವಾಸಖಾನನನ್ನು

ವಿರೋಧಿಸಿ, ಬಹಲೋಲಖಾನನೆಂಬವನನ್ನು ತಮ್ಮ ಮುಖ್ಯಸ್ಥನಾಗಿ ಮಾಡಿಕೊಂಡು, ಅವನನ್ನು ಪರಿಪರಿಯಿಂದ ಗೋಳಾಡಿಸತೊಡಗಿದರು. ಸುಖೋಪಭೋಗಕ್ಕೆ ಮೆಚ್ಚಿದ ಖವಾಸಖಾನನು ತನ್ನ ಹೆಂಡತಿಯಾದ ಹಬೀಬಿಸುಲ್ತಾನೆಗೆ ರಾಜ್ಯದಾಡಳಿತವನ್ನೊಪ್ಪಿಸಿ, ವಿಷಯೋಪಭೋಗದಲ್ಲಿ ಕಾಲಕಳೆಯುತಿದ್ದನು. ರಾಜಧಾನಿಯ ಹೊರಗೆ ಸಿವಾಜಿಯ ಹಾವಳಿ; ಒಳಗೆ ಅಫಗಾಣಸರದಾರರ ಕಾಟ. ಈ ವೇರೆಗೆ ಇತ್ತಂಡವಾದ ಅಳಲನ್ನು ಇಂತಹ ಮುಗ್ಗಲಗೇಡಿಯು ತಾಳುವ ಬಗೆ ಹೇಗೆ? ಅವನು ಬೇಸತ್ತು ಮೊಗಲಸುಬೇದಾರನಾದ ಬಹದ್ದೂರಖಾನನನ್ನು ಕಂಡು, ಕೆಳಗೆ ಕೊಟ್ಟ ಶರ್ತುಗಳಂತೆ ಒಪ್ಪಂದ ಮಾಡಿಕೊಂಡನು (೧೯ ಅಕ್ಟೋಬರ ೧೬೭೫):—

(೧) ಚಿಕ್ಕ ಸಿಕಂದರಶಹನ ಅಕ್ಕನನ್ನು ಬಾದಶಹನು ತನ್ನೊಬ್ಬ ಮಗನಿಗೆ ಮದುವೆಮಾಡಿಕೊಳ್ಳಬೇಕು.

(೨) ಅದಿಲ್ಯಾಹಿಯ ಅಫಗಾಣಪಂಗಡದ ಸರದಾರರನ್ನು ಮುರಿಯ ಲಿಕ್ಕೆ ಬಹದ್ದೂರಖಾನನು ನೆರವಾಗಬೇಕು.

(೩) ಮೊಗಲರೂ ಅದಿಲ್ಯಾಹಿಯುವರೂ ಒಟ್ಟುಗೂಡಿ ಸಿವಾಜಿ ಯನ್ನು ಮುರಿಬಡಿಯಬೇಕು.

ಈ ಒಡಂಬಡಿಕೆಗೆ ಅವರಂಗಜೇಬ ಬಾದಶಹನು ಸಂತೋಷದಿಂದ ಒಪ್ಪಿಕೊಂಡನು. ಆದರೆ ಮೊಗಲರ ದುರ್ದೈವದಿಂದ ಖವಾಸಖಾನನು ಬಹಳ ದಿವಸ ವಜೀರನಾಗಿ ಉಳಿಯಲಿಲ್ಲ. ಈ ಒಪ್ಪಂದದ ಸುದ್ದಿಯನ್ನು ಕೇಳಿ, ಬಹಲೋಲಖಾನನು ಒಂದು ದಿನ ಖವಾಸಖಾನನನ್ನು ಊಟಕ್ಕೆ ಕರೆದು, ಅವನಿಗೆ ಯಥೇಚ್ಛವಾಗಿ ಸಾರಾಯಿಯನ್ನು ಕುಡಿಸಿ, ಸೆರೆಹಿಡಿದು ತನ್ನ ಜಹಗೀರಿನ ಊರಾದ ಬಂಕಾಪುರಕ್ಕೆ ಅವನನ್ನು ಕಳುಹಿ (೧೧ ನವಂಬರ), ತಾನೇ ಮುಖ್ಯವಜೀರನಾದನು. ಈ ಬದಲಾವಣೆಯಿಂದ ಆದಿಲ್ಯಾಹಿಗೆ ಕಸುವು ಬರುವುದರ ಬದಲು ಶಕ್ತಿಪಾತವೇ ಆಯಿತು. ಅದಿ ಲ್ಯಾಹಿಯ ದಕ್ಷಿಣದ ಸರದಾರರಲ್ಲಿ ಅಸಂತೋಷವೇ ಹೆಚ್ಚಿತು. ಅಫ ಗಾಣರ ಆಳಿಕೆಯು ಅವರಿಗೆ ಸೇರಲಿಲ್ಲ. ಈ ಪಂಗಡಕ್ಕೆ ಸೇರಿದ ಒಬ್ಬ ಮುಸಲ್ಮಾನನು ಬಹಲೋಲಖಾನನ ಆಲೋಚನೆಗಾರನನ್ನು ಕಠಾರಿ

ಯಿಂದ ಇರಿದು ಕೊಂದನು (೧೨ ಜನವರಿ ೧೬೭೬). ಈ ಕೊಲೆಯಿಂದ ಸಿಟ್ಟಿಗೆದ್ದ ಬಹಲೋಲಖಾನನು ಸೆರೆಯಲ್ಲಿದ್ದ ಖವಾಸಖಾನನನ್ನು ಕೊಲ್ಲಿಸಿದನು (೧೮ ಜನವರಿ). ಸಿದ್ದಿಮಸೌದ ಸರ್ಜಾಖಾನರು ದಕ್ಷಿಣದವರ ಪಕ್ಷದ ಮುಂದಾಳುಗಳಾಗಿ ಮೊಗಲರ ಸಹಾಯುವನ್ನು ದೊರಕಿಸಿ, ಅಫಗಾಣರೊಡನೆ ಹೊಡೆದಾಡಿದರು. ಬಹದ್ದೂರಖಾನನು ಖವಾಸಖಾನನ ಪಕ್ಷದವನಾಗಿದ್ದರೂ ಅವನ ಕಯ್ಕೆಳಗಿದ್ದ ದಿಲೀರಖಾನನು ಅಫಗಾಣನಾದ್ದರಿಂದ ಗುಪ್ತವಾಗಿ ಬಹಲೋಲಖಾನನಿಗೆ ಅನುಕೂಲನಾಗಿದ್ದನು. ಒಮ್ಮೆ ಒಂದು ಪಕ್ಷಕ್ಕೆ ಮತ್ತೊಮ್ಮೆ ಎರಡನೆಯ ಪಕ್ಷಕ್ಕೆ ಸೋಲುಗೆಲವುಗಳು ಬಂದವು. ಕೊನೆಗೆ ಬಹದ್ದೂರಖಾನನು ಸಿವಾಜಿಗೂ ಕುತುಬಶಹನಿಗೂ ಲಂಚಕೊಟ್ಟು ದೊಡ್ಡದಂಡುಕೂಡಿಸಿ, ಬಹಲೋಲಖಾನನನ್ನು ಅಂಜಿಸಿ, ನಳದುರ್ಗ-ಕಲಬುರ್ಗಗಳನ್ನು ಹಿಡಿದುಕೊಂಡನು (ಮೇ ಮತ್ತು ಜುಲೈ ೧೬೭೭). ಅಷ್ಟರಲ್ಲಿ ಆತ್ಮಘಾತಕಿಯಾದ ಅವರಂಗಜೇಬನ ಸಂಶಯುವು ಹೆಚ್ಚಿದ್ದರಿಂದ ಬಹದ್ದೂರಖಾನನ ಸುಬೇದಾರಿಕೆಯು ಮುಗಿಯಿತು. ಅವನು ಆದಿಲ್ಯಹ, ಕುತುಬಶಹ, ಸಿವಾಜಿ ಈ ಮುವ್ವರಲ್ಲಿ ಒಬ್ಬರನ್ನಾದರೂ ಮಣಿಸದ್ದರಿಂದಲೂ ದಿಲೀರ ಬಹಲೋಲಖಾನರು ಅವನು ಈ ಮುವ್ವರಿಗೂ ಅನುಕೂಲನಾಗಿರುತ್ತಾನೆಂದು ಚುಚೂಂದ್ರಿಬಿಟ್ಟುದರಿಂದಲೂ ಆ ಸಂಶಯ–ಪಿಶಾಚಿಯಾದ ಬಾದಶಹನ ಹುಚ್ಚು ತಲೆಗೇರಿ, ಅವನು ತನ್ನ ವಜೀರನಾದ ಅಸದ್ದಖಾನನನ್ನು ದೊಡ್ಡದಂಡಿನೊಡನೆ ಅವರಂಗಾಬಾದಕ್ಕೆಕಳುಹಿ, ಬಹದ್ದೂರಖಾನನನ್ನು ತನ್ನ ದರಬಾರಿಗೆ ಕರೆಯಿಸಿಕೊಂಡನು (ಸಪ್ಟಂಬರ). ಅಸದ್ದಖಾನನು ತುಸು ದಿವಸಗಳಲ್ಲೇ ತಿರುಗಿ ಹೋದ್ದರಿಂದ ದಿಲೀರಖಾನನೇ ದಕ್ಷಿಣದ ಸುಬೇದಾರನಾಗಿ ಅಕ್ಟೋಬರ ೧೬೭೮ ರ ವರೆಗೆ ಉಳಿದನು.

ಬಹದ್ದೂರಖಾನನು ಸುಬೇದಾರನಾಗಿದ್ದಾಗ ಕೂಡ ದಿಲೀರಖಾನನು ಅವನ ಅಪ್ಪಣೆಯನ್ನು ಪಾಲಿಸದೆ, ಒಳಗಿಂದೊಳಗೇ ಬಹಲೋಲನಿಗೆ ಸಾಹಾಯುಮಾಡುತ್ತಿದ್ದನು. ಬಾದಶಹನು ಅವನ ಮೇಲೆ ಮುನಿದು ಅವನ ಸುಬೇದಾರಿಕೆಯನ್ನು ತೆಗೆದು ಹಾಕುತ್ತಾನೆಂಬ ಸುದ್ದಿಯು ಬಂದ

ಕೂಡಲೆ ಅವನು ಪರೆಯುಚ್ಚಿದ ಹಾವಿನಂತಾಗಿ ಬಹಿರಂಗವಾಗಿ ಬಹ ಲೋಲಖಾನನಿಗೆ ನೆರವಾಗತೊಡಗಿದನು. ಸಿವಾಜಿಗೆ ಕುತುಬಶಹನು ಅನುಕೂಲನಾದ್ದರಿಂದ ಈ ಇಬ್ಬರು ಖಾನರು ಒಟ್ಟುಗೂಡಿ ಕುತುಬ ಶಾಹಿಯ ನಾಡನ್ನು ಒಳನುಗ್ಗಬೇಕೆಂದು ನಿಶ್ಚಯಿಸಿ, ಕಲಬುರ್ಗಿಯಿಂದ ಹೊರಟು ೨೦ ಮೈಲು ದೂರಿರುವ **ಮಳಖೇಡ**ಕ್ಕೆ ಬಂದರು. ಆ ಊರಿನ ಬಡಗಲಿಗೆ ೭ ಮೈಲಿನ ಮೇಲಿದ್ದ **ಮಂಗಳಗಿ** ಎಂಬಲ್ಲಿ ಕುತುಬಶಾಹಿಯ ದಂಡು ಸಜ್ಜಾಗಿ ನಿಂತಿತ್ತು. ಮಳಖೇಡದ ನೆರೆಯಲ್ಲಿ ಒಂದು ದೊಡ್ಡ ಕಾಳಗವಾಯಿತು. ಬಹಲೋಲಖಾನನು ಸೋತು ಬೆನ್ನು ತೋರಿಸಿದನು. ಅಷ್ಟರೊಳಗೆ ದಿಲೀರಖಾನನು ಅವನ ನೆರವಿಗೆ ಬಂದುದರಿಂದ ಕುತುಬ ಶಾಹಿಯ ದಂಡು ಹಗೆಗಳನ್ನು ಬೆನ್ನಟ್ಟಲಿಲ್ಲ. ಮರುದಿವಸ ಮಾದಣ್ಣ ಮಂತ್ರಿಯ ಅಣ್ಣನ ಮಗನಾದ ಎಂಗಣ್ಣನು ಹೊಸದಂಡಿನೊಡನೆ ರಾಜ ಧಾನಿಯಿಂದ ಬಂದುದರಿಂದ, ಕುತುಬಶಾಹಿಯ ಮುಖ್ಯದಳವಾಯಿಯಾದ ಮಹಮ್ಮದ ಇಬ್ರಾಹಿಮನು ಹಗೆಗಳನ್ನು ಬೆನ್ನಟ್ಟಿದನು. ಅಷ್ಟರಲ್ಲಿ ಬಹ ಲೋಲಖಾನನು ಬೇನೆಬಿದ್ದು ಈಗ ಸಾಯುತ್ತಾನೋ ಇನ್ನೊಂದು ಗಳಿಗೆ ಹೊತ್ತಿಗೆ ಸಾಯುತ್ತಾನೋ ಎಂಬುವಂತಹ ಅವಸ್ಥೆಯನ್ನು ಹೊಂದಿದನು. ಅನ್ನಸಾಮುಗ್ರಿಗಳ ಅಭಾವದಿಂದಲೂ ಶತ್ರುಗಳ ಎಡೆಬಿಡದ ಹೊಡತ ದಿಂದಲೂ ದಿಲೀರಖಾನನ ದಂಡಿನವರು ತೊಳಲಿ ಬಳಲಿ, ಆಸತ್ತು ಬೇಸತ್ತು ಬಸವಳಿದು, ನಿದ್ದೆನೀರಡಿಕೆ ಹಸಿವೆಗಳನ್ನು ಕಟ್ಟಿ, ಅರ್ಧಕ್ಕಿಂತ ಹೆಚ್ಚು ಜನರನ್ನು ಭೂತಬಲಿಯಾಗಿ ಅರ್ಪಿಸಿ, ಹಾಗೂ ಹೀಗೂ ಬಂದು ಕಲಬುರ್ಗಿಯನ್ನು ಸೇರಿದರು. ಮತ್ತು ದಿಲೀರನು ನಿರುಪಾಯನಾಗಿ ಒಪ್ಪಂದವನ್ನು ಬೇಡಿಕೊಂಡನು.

ಅತ್ತ ವಿಜಾಪುರದಲ್ಲಿದ್ದ ಬಹಲೋಲಖಾನನ ಪ್ರತಿಕಕ್ಷಿಗಳಾದ ಸಿದ್ದಿಮಸೌದ ಮುಂತಾದವರು ಅಫಗಾಣರ ಒತ್ತಾಳಿಕೆಗೆ ಬೇಸತ್ತು, ಅಬ್ದುಲ ಹಸನ ಕುತುಬಶಹನ ಬಳಿಗೆ ಬಂದು, ಆದಿಲ್ಶಹನು ಚಿಕ್ಕಹುಡುಗನಾದ್ದ ರಿಂದ ಹೇಗಾದರೂ ಮಾಡಿ, ಆದಿಲ್ಶಾಹಿಯನ್ನು ಉಳಿಸಬೇಕೆಂದು ಬೇಡಿ ಕೊಂಡರು. ಅವನು ಕನಿಕರಪಟ್ಟು ಬಹಲೋಲಖಾನನು ಅಂತ್ಯಾವಸ್ಥೆ

ಯಲ್ಲಿದ್ದುದರಿಂದ ಅವನ ಪಕ್ಷದವರನ್ನು ಕರೆಯಿಸಿ ಕೆಳಗೆ ಬರೆದ ಶರ್ತು ಗಳಂತೆ ಎರಡೂ ಪಕ್ಷದವರನ್ನು ರಾಜಿಮಾಡಿದನು :—

(೧) ಅಫಗಾಣ ದಂಡಾಳುಗಳ ಹಿಂದಿನ ಸಂಬಳವು ಆರು ಲಕ್ಷ ರೂಪಾಯಿ ಬಾಕಿ ಉಳಿದುದರಿಂದ ಅದನ್ನೆಲ್ಲ ಸಿದ್ದಿ ಮಸೌದನು ಅವರಿಗೆ ಕೊಟ್ಟು ಬೇಬಾಕು ಮಾಡಬೇಕು.

(೨) ಅಫಗಾಣ ದಂಡಾಳುಗಳು ವಿಜಾಪುರವನ್ನು ಬಿಟ್ಟು ತಮ್ಮ ಮನಸ್ಸಿಗೆ ಬಂದಲ್ಲಿಗೆ ಹೋಗಬೇಕು.

(೩) ಬಹಲೋಲಖಾನನು ತನ್ನ ರಾಜಪಾಲಕತ್ವವನ್ನು ಬಿಟ್ಟು ಕೊಟ್ಟು ತನ್ನ ಜಹಗೀರಿಗೆ ಹೋಗಬೇಕು ಮತ್ತು ಸಿದ್ದಿಮಸೌದನು ಚಿಕ್ಕ ಅದಿಲ್ಯಹನ ಪಾಲಕನಾಗಿ ರಾಜ್ಯದಾಡಳಿತವನ್ನು ನಡಿಸಬೇಕು.

(೪) ಅದಿಲ್ಶಾಹಿಯ ನಾಡನ್ನು ವಿಭಾಗಿಸಕೂಡದು.

(೫) ಕುತುಬಶಾಹಿಯ ಒಬ್ಬ ಮುತ್ಸದ್ದಿಯು ರಾಜಪಾಲಕನಿಗೆ ಸಲಹೆ ಗಾರನಾಗಿ ವಿಜಾಪುರದಲ್ಲಿರತಕ್ಕದ್ದು ಮತ್ತು ಮಾದಣ್ಣಮಂತ್ರಿಯ ತಮ್ಮ ನಾದ ಅಕ್ಕಣ್ಣನು ಮೊದಲನೆಯ ಸಲಹೆಗಾರನಾಗಿರಬೇಕು.

ಸಿದ್ದಿಮಸೌದನಲ್ಲಿ ಮುರಕಳಿಗೆ ಬಂದ ಅದಿಲ್ಶಾಹಿಯನ್ನು ತೂಗಿಸಿ ಕೊಂಡು ಹೋಗುವಷ್ಟು ಆತ್ಮೋನ್ನತಿಯೂ ಬುದ್ಧಿಸಾಮರ್ಥ್ಯವೂ ದ್ರವ್ಯ ಬಲವೂ ಜನಾನುಕೂಲತೆಯೂ ಇದ್ದಿಲ್ಲ. ಕುತುಬಶಹನು ಅದಿಲ್ಶಾಹಿ ಯಲ್ಲಿ ಬಡಿದಾಡುತ್ತಿರುವ ಎರಡು ಪಂಗಡದವರೊಳಗೆ ರಾಜಿಮಾಡಿದ ಕೂಡಲೆ, ಮಸೌದನು ಕಲಬುರ್ಗಿಗೆ ಹೋಗಿ ಮೊಗಲ ಸುಬೇದಾರನಾದ ದಿಲೀರಖಾನನೊಡನೆ ಒಪ್ಪಂದಮಾಡಿಕೊಂಡನು. ಈ ಒಪ್ಪಂದದ ಶರ್ತು ಗಳು ಕೆಳಗೆ ಬರೆದಂತೆ:—

(೧) ಸಿದ್ದಿಮಸೌದನು ಅದಿಲ್ಶಾಹಿಯ ವಜೀರನಾಗಬೇಕಲ್ಲದೆ, ಅವ ರಂಗಜೇಬ ಬಾದಶಹನ ಹುಕುಮುಗಳನ್ನು ಮನ್ನಿಸಬೇಕು.

(೨) ಅವನು ಸಿವಾಜಿಯೊಡನೆ ಒಪ್ಪಂದಮಾಡಕೂಡದು ಮತ್ತು ಸಿವಾಜಿಯು ಹೊಸತಾಗಿ ಹಿಡಿದುಕೊಂಡ ಊರುಗಳನ್ನು ತಿರುಗಿ ತೆಗೆದು ಕೊಳ್ಳಲಿಕ್ಕೆ ಮೊಗಲರಿಗೆ ಮನಃಪೂರ್ವಕವಾಗಿ ನೆರವಾಗಬೇಕು.

(೩) ಸಿಕಂದರಶಹನ ಅಕ್ಕನಾದ ಶಹಾರಬಾನುಬೇಗಮ್ಮ (ಪಾತಷಹಾಬೀಬಿ) ಳನ್ನು ಅವರಂಗಜೇಬ ಬಾದಶಹನ ಒಬ್ಬ ಮಗನನ್ನು ಮದುವೆಯಾಗಲಿಕ್ಕೆ ದಿಲ್ಲಿಗೆ ಕಳಿಸಿಕೊಡಬೇಕು.

ಈ ಕರಾರಮದಾರಗಳು ಆಗುವಷ್ಟರಲ್ಲಿ ಬಹಲೋಲಖಾನನು ಸತ್ತನು (೨೩ ದಶಂಬರ ೧೬೭೭). ಆದ್ದರಿಂದ ಮಸೌದನು ದುಗದುಗಿಯಿಲ್ಲದೆ ಗೋವಳಕೊಂಡದ ದಂಡಿನೊಡನೆ ವಿಜಾಪುರಕ್ಕೆ ಹೋಗಿ, ರಾಜಪಾಲಕನಾಗಿ ರಾಜ್ಯಸೂತ್ರಗಳನ್ನು ಕಯ್ಯಲ್ಲಿ ತೆಗೆದುಕೊಂಡನು (ಫೆಬ್ರುವರಿ ೧೬೭೮). ಆದರೆ ಅವನು ಬುದ್ಧಿಗೇಡಿಯಾದ್ದರಿಂದ ಈ ಮೊದಲು ಗೊತ್ತಾದಂತೆ ಅಫಗಾಣ ದಂಡಾಳುಗಳ ಹಿಂದಿನ ಸಂಬಳವನ್ನು ಕೊಟ್ಟು ಅವರ ಪರ್ಲುಹರಕೊಂಡು ರಾಜಧಾನಿಯನ್ನು ಸುರಕ್ಷಿತವಾಗಿ ಮಾಡಿಕೊಳ್ಳುವುದರ ಬದಲು, ಬಂಡಾರದಲ್ಲಿದ್ದ ೧೧ ಲಕ್ಷ ರೂಪಾಯಿಗಳನ್ನೆಲ್ಲ ಮೊಗಲ ಸುಬೇದಾರನಿಗೆ ಕಾಣಿಕೆಯಾಗಿ ಕಳುಹಿ, ಬರಿಗಯ್ಯಾಗಿ ಕುಳಿತನು. ಈ ದಡ್ಡತನದ ಪರಿಣಾಮವನ್ನು ಅವನು ಕೂಡಲೇ ಅನುಭವಿಸಬೇಕಾಯಿತು. ದಂಡಾಳುಗಳು ಹೇಳಿ ಕೇಳಿ ನಿರ್ಘೃಣರೂ ನ್ಯಾಯಾನ್ಯಾಯದ ತಿಳಿವಳಿಕೆಯಿಲ್ಲದವರೂ ಪರಪೀಡಾನಿರತರೂ ಆಗಿರುತ್ತಾರಷ್ಟೇ. ವಿಜಾಪುರದಲ್ಲಿದ್ದ ಅಫಗಾಣ ದಂಡಾಳುಗಳಿಗೆ ಹೊಟ್ಟೆಗಿಲ್ಲುದರಿಂದ ಎಂತಹ ನೀಚಕೃತ್ಯವನ್ನು ಮಾಡಲಿಕ್ಕಾದರೂ ಅವರ ಮನಸ್ಸು ಹೇಸಲಿಲ್ಲ.* ಒಂದು ದಿನ ಅವರು ಬಹಲೋಲಖಾನನ ಮನೆಗೆ ಹೋಗಿ ಅವನ ಹೆಂಡರುಮಕ್ಕಳ ಮೈಮೇಲಿನ ಒಡವೆಗಳನ್ನೂ ಅಡಿಗೆಯ ಪಾತ್ರೆಗಳನ್ನೂ ಸುಲಿದುಕೊಂಡು ಹೋದರು. ಮಸೌದನು ಅವರನ್ನು ಹಿಡಿಯಲಿಕ್ಕೆ ದಂಡನ್ನು ಕಳಿಸಬೇಕಾಯಿತು. ರಾಜಧಾನಿಯು ಹೋಗಿ ರಣಭೂಮಿಯಾಯಿತು. ಅಫಗಾಣರನ್ನು ದಂಡಿಸಲಿಕ್ಕೆ ಹೋದ ದಂಡಿನವರು ಕೂಡ ಕೆಲಮನೆಗಳನ್ನು ಸುಲಿದರು. ಚಿಂತು ಚಿಮಣಾ ಎಂಬ ಒಬ್ಬ ಬ್ರಾಹ್ಮಣ ಕಳ್ಳನು ಧನಿಕರನ್ನು ಬಗೆ ಬಗೆಯಿಂದ ಪೀಡಿಸಿ ಹಣವನ್ನೆತ್ತಿದನು. ರಾಜಧಾನಿಯಲ್ಲೆಲ್ಲ ಕೊಲೆಸುಲಿಗೆಗಳ ಗೋಳಾಟವೇ ಎದ್ದಿತು; ಸುರಕ್ಷತೆಯೂ

---

* ಬುಭುಕ್ಷಿತಃ ಕಿಂನಕರೋತಿಪಾಪಮ್ ।
ಕ್ಷೀಣಾ ನರಾ ನಿಷ್ಕರುಣಾ ಭವಂತಿ ॥ ಪಂಚತಂತ್ರ.

ಶಾಂತಿಯೂ ಇಲ್ಲದಂತಾದವು. ದುಡ್ಡಿದ್ದವರು ಊರು ಬಿಟ್ಟು ಕರ್ನಾಟಕದ ಸುರಕ್ಷಿತವಾದ ಊರುಗಳಿಗೆ ಹೋಗಲಿಕ್ಕೆ ಹೊರಟು ಹಾದಿಯಲ್ಲಿ ಸುಲಿಸಿಕೊಂಡರು. ರಾಜಪಾಲಕನಾದ ಮಸೌದನು ತನ್ನ ಮನೆಯ ಸುತ್ತಲು ಕಾವಲಿರಿಸಿಕೊಂಡು ಹೆಬ್ಬಾಗಿಲನ್ನು ಮುಚ್ಚಿ ತನ್ನ ಜೀವಾಸ್ತಿಗಳನ್ನು ಕಾಪಾಡಿಕೊಂಡನು!!! ಹೆಸರುವಾಸಿಯಾದ ಅದಿಲ್ಶಾಹಿಯ ರಾಜಧಾನಿಗೆ ಈ ಹಾಡು ಬಂತು!!!!!

ಇದು ರಾಜಧಾನಿಯ ಸ್ಥಿತಿಯಾಯಿತು. ಅದಿಲ್ಶಾಹಿ ರಾಜ್ಯದಲ್ಲಿ ರಾಜಪಾಲಕನ ಮಾತನ್ನು ಯಾರೂ ಲೆಕ್ಕಿಸದಾದರು. ಅವನ ಹೆಂಡರು ಮಕ್ಕಳು ಆದವಾನಿಯಿಂದ ವಿಜಾಪುರಕ್ಕೆ ಬರುವಾಗ ದಾರಿಯಲ್ಲಿ ರಾಯಚೂರಿನ ಕಿಲ್ಲೇದಾರನು ಅವನ ಮಗನನ್ನು ಕೊಂದು ಉಳಿದವರನ್ನು ಸೆರೆಯಲ್ಲಿಟ್ಟನು. ಮಸೌದನು ಎಷ್ಟು ಹಾರಿಯಾಡಿದರೂ ತನ್ನ ಕುಟುಂಬದವರನ್ನು ಬಿಡಿಸಿಕೊಳ್ಳುವುದು ಅವನಿಂದಾಗಲಿಲ್ಲ. ಕೊನೆಗೆ ಎಲ್ಲಾ ಜನರಿಗೂ ಬೇಕಾದವಳಾದ ಪಾತಷಾಬೀಬಿಯ ಮಧ್ಯಸ್ಥಿಕೆಯಿಂದ ಮಸೌದನ ಕುಟುಂಬದವರ ಬಿಡುಗಡೆಯಾಯಿತು!!!

"ವಿನಾಶಕಾಲೇ ವಿಪರೀತಬುದ್ಧಿಃ" ಎಂಬ ಸಕ್ಕದ ನಾಣ್ಣುಡಿಯು ನಮ್ಮ ಪ್ರಿಯವಾಚಕರಿಗೆ ಗೊತ್ತಿರಬಹುದು. "ಛಿದ್ರೇಷ್ವನರ್ಥಾಃ ಬಹುಲೀಭವಂತಿ" ಎಂಬ ಅದೇ ನುಡಿಯ ಗಾದೆಯಾದರೂ ತಿಳಿದ ಮಾತೇ ಸರಿ. ವಿಪತ್ತುಗಳು ಒಂದರ ಹಿಂದೊಂದು ಬರತೊಡಗಿದರೆ ಎಂತಹ ಜಾಣನಾದರೂ ಎಬಡನಾಗುತ್ತಾನೆ, ದಡ್ಡನಂತೂ ಹುಚ್ಚನಾಗುತ್ತಾನೆ. ರಾಜಧಾನಿಯಲ್ಲಿ ಕಳವು ಕೊಲೆಸುಲಿಗೆಗಳು, ರಾಜ್ಯದಲ್ಲಿ ಸರದಾರರ ಪುಂಡಾಟ, ಸಿವಾಜಿಯ ಮಿತಿಮೀರಿದ ಹಾವಳಿ ಇವುಗಳಿಂದ ಹೇಡಿಯಾದ ಮಸೌದನ ಬುದ್ಧಿಯು ಮಸಣಿಸಿತು. ಕಲಬುರ್ಗೆಯ ಒಪ್ಪಂದದಿಂದ ಅವನು ಸಿವಾಜಿಯೊಡನೆ ಸ್ನೇಹ ಬೆಳಿಸುವುದಿಲ್ಲೆಂತಲೂ ಅವನೊಡನೆ ಹೊಡಿದ ಯುದ್ಧದಲ್ಲಿ ಮನಃಪೂರ್ವಕವಾಗಿ ಮೊಗಲರಿಗೆ ನೆರವಾಗುವೆನೆಂತಲೂ ಒಪ್ಪಿಕೊಂಡಿದ್ದರೂ ಆ ಮಾತನ್ನು ಬದಿಗೊತ್ತಿ, ಅವನು ದಿಕ್ಕೆಟ್ಟು ಸಿವಾಜಿಯ ಸಾಹಾಯವನ್ನು ಬೇಡಿದನು. ಬಾವಿ ತೆಗೆಯುವಾಗ ವೇತಾಳ

ಹೊರಟಿತೆಂಬ ಗಾದೆಯಂತೆ ಆತ್ಮಸಂರಕ್ಷಣೆಗೋಸ್ಕರ ಮಸೌದನು ಸಿವಾಜಿಯೊಡನೆ ಒಪ್ಪಂದ ಮಾಡಲು, ಅವನ ವಿಶ್ವಾಸಘಾತದ ಬಗ್ಗೆ ಸಿಟ್ಟಿಗೆದ್ದ ದಿಲೇರಖಾನನು ಅವನನ್ನು ದಂಡಿಸುವ ಎತ್ತುಗಡೆ ಮಾಡತೊಡಗಿದನು. ಇದೇ ಸಮಯಕ್ಕೆ ವಿಜಾಪುರವನ್ನು ಮುತ್ತಬೇಕೆಂದು ಅವರಂಗಜೇಬ ಬಾದಶಹನಿಂದ ಬರೆದು ಬಂದುದರಿಂದ, ದಿಲೇರಖಾನನ ಸಂಕಲ್ಪವು ದೃಢವಾಯಿತು (೧೬೭೮). ಆದ್ದರಿಂದ ಅವನು ವಿಜಾಪುರದಲ್ಲಿದ್ದ ಮೊಗಲ ವಕೀಲನ ಮುಖಾಂತರವಾಗಿ ಆದಿಲ್ಶಾಹಿ ಸರದಾರರನ್ನು ಒಡೆಕೊಳ್ಳತೊಡಗಿದನು. ಸರದಾರರಿಗೆ ಮನಸಬ್ದಾರಿ ಜಹಗೀರುಗಳ ಆಶೆಯನ್ನು ಹಚ್ಚಿದ್ದಲ್ಲದೆ, ದಂಡಾಳುಗಳಿಗೆ ದಿನಾಲು ೬ ಆಣೆ ಸಂಬಳವನ್ನು ಕೊಡಲೊಪ್ಪಿದನು. ಗತಿಗೆಟ್ಟ ಬಹಲೋಲಖಾನನ ಆಪ್ತೇಷ್ಟರು ಮೊಗಲರನ್ನು ಕೂಡಿದರು. ೨೦,೦೦೦ ಆದಿಲ್ಶಾಹಿ ಸಿಪಾಯರು ಮೊಗಲರ ದಂಡನ್ನು ಸೇರಿದರು. ಇಷ್ಟೆಲ್ಲ ಪೂರ್ವಸಿದ್ಧತೆಯು ಆದಬಳಿಕ, ದಿಲೇರಖಾನನು ಪೆಡಗಾವನ್ನು ಬಿಟ್ಟು ಅಕ್ಲೂಜಕ್ಕೆ ಬಂದು ಅಲ್ಲಿ ಪಾಳೆಯ ಹಾಕಿಕೊಂಡು ನಿಂತನು (ಅಕ್ಟೋಬರ ೧೬೭೮). ಅಲ್ಲಿ ಸಿವಾಜಿಯ ಮಗನಾದ ಶಂಭುಜಿಯು ಬಂದು ಅವನನ್ನು ಕೂಡಿದನು.

ಅತ್ತ ಸಿವಾಜಿಯು ಒಪ್ಪಂದದ ಶರ್ತಿನಂತೆ ೬,೦೦೦ ಸಿಪಾಯರನ್ನು ವಿಜಾಪುರದ ಸಂರಕ್ಷಣೆಗೋಸ್ಕರ ಕಳಿಸಿಕೊಟ್ಟನು. ಅವರು ಬಂದು ಜೋರಾಪುರದ ಅಗಸೆಯ ಹತ್ತಿರ ಇಳಿದು, ಒಂದು ಅಗಸೆ ಬಾಗಿಲನ್ನು ತಮ್ಮ ಸ್ವಾಧೀನಕ್ಕೆ ಕೊಡಬೇಕೆಂದು ಕೇಳಿದರು. ಅವರ ಬೇಡಿಕೆಯನ್ನು ಕೇಳಿದ ಕೂಡಲೆ ಮಸೌದನಿಗೆ ಗುಂಬ ಬಿತ್ತು. ಹಿಂದೆ ಸಿವಾಜಿಯು ವಿಶ್ವಾಸಘಾತದಿಂದ ಎಷ್ಟೋ ರಾಜಧಾನಿಗಳನ್ನು ಹಿಡಿಕೊಂಡ ಕಥೆಗಳು ಒಮ್ಮಿಂದೊಮ್ಮೆ ಅವನ ನೆನಪಿಗೆ ಬಂದವು. ಹಾಗೇ ಅವನು ಆದಿಲ್ಶಾಹಿಯ ರಾಜಧಾನಿಯನ್ನು ತೆಗೆದುಕೊಳ್ಳಬಹುದೆಂಬ ಸಂಶಯವು ಅವನ ರೋಮರಂಧ್ರಗಳಲ್ಲಿ ಸೇರಿತು. ಆದ್ದರಿಂದ ಅವನು ಮರಾಟರು ಊರೊಳಗೆ ಬರದೆ ೬ ಮೈಲಿನ ಮೇಲೆ ಇಟ್ಟಂಗಿಹಳ್ಳದಲ್ಲಿ ಪಾಳೆಯ ಹಾಕಿಕೊಂಡಿರಬೇಕೆಂದು ಹಟಹಿಡಿದನು. ಮರಾಟರು ಕಾರ್ಯಸಾಧಕರಾದ್ದರಿಂದ

ದುರಾಗ್ರಹವನ್ನು ಹಿಡಿಯದೆ ಅವನು ಹೇಳಿದ ಸ್ಥಳದಲ್ಲಿ ನಿಂತು, ಕಾಳಿನ ಚೀಲಗಳೊಳಗೆ ತಮ್ಮ ಆಯುಧಗಳನ್ನು ಬಚ್ಚಿಟ್ಟು, ಬಂಡಿಹೊಡೆಯುವವರ ಸೋಗುಹಾಕಿಕೊಂಡು ಊರೊಳಗೆ ಬರತೊಡಗಿದರು. ಈ ಮೋಸದಿಂದ ಮುಸೌದನ ಹೆದರಿಕೆಯು ಹೆಚ್ಚಿ ಮರಾಟರಿಗೆ ಕೊಡಲೊಪ್ಪಿದ ಖರ್ಚಿನ



ಶಂಭುಜಿ ಅಥವಾ ಸಂಬಾಜಿ.

ಹಣವನ್ನು ಕೊಡದಾದನು. ಸಿವಾಜಿಯು ಕೋಟೆಯ ಹತ್ತಿರ ಬಂದು ಖವಾಸ (ದೌಲತ್ತ) ಪುರವನ್ನೂ ಖುಸ್ರುಪುರವನ್ನೂ ಜೋರಾಪುರವನ್ನೂ ಲೂಟುಮಾಡಿ, ಹಣವುಳ್ಳವರನ್ನು ಸೆರೆಹಿಡಿದೊಯ್ದನು. ಮರಾಟರನ್ನು

ಎದುರಿಸುವ ಸಾಮರ್ಥ್ಯವಿಲ್ಲದ ಮಸೌದನು ದಿಲೀರಖಾನನಿಗೆ ಮರೆಹೋಗಿ ಮೊಗಲರ ದಂಡನ್ನು ನೆರವಿಗೆ ತರಿಸಿಕೊಂಡನು. ಸಿವಾಜಿಯು ೭/೮ ಸಾವಿರ ಹೊಸದಂಡನ್ನು ಬರಮಾಡಿಕೊಂಡನು. ದಿಲೀರಖಾನನು ಮರಾಟರ ಭೂಪಾಲಗಡವನ್ನು ಹಿಡಿದುಕೊಂಡು, ಸಿವಾಜಿಯು ನೆರವಿಗೆ ಬರುತ್ತಿದ್ದ ೧೬,೦೦೦ ದಂಡನ್ನು ಚದರಿಸಿಬಿಟ್ಟನು. ಅಷ್ಟರಲ್ಲಿ ಅದಿಲ್ಶಾಹಿಯ ಮುಖ್ಯ ದಳವಾಯಿಯಾದ ಸರ್ಜಾಖಾನನಿಗೂ ಮಸೌದನಿಗೂ ಜಗಳ ಬಂತು. ಛಿದ್ರೇಷ್ವನರ್ಥಾಃ ಬಹುಲೀಭವಂತಿ.

ಹೇಡಿಯು ಬೆನ್ನುಕಟ್ಟಬಾರದು ಮತ್ತು ಹೇಸಿಯ ಬಳಿಯಲ್ಲಿ ಕೂಡ್ರ ಬಾರದು ಎಂಬ ಗಾದೆಯು ನಿಜತ್ವದ ಅನುಭವವು ಈಗ ದಿಲೀರಖಾನನಿಗೆ ಬಂತು. ಮಸೌದನು ಹೆಡ್ಡನೂ ಹೇಡಿಯೂ ಆದ್ದರಿಂದ ಅವನ ಮನಸ್ಸು ಸಿವಾಜಿ ದಿಲೀರಖಾನರ ನಡುವೆ ಹೊಯ್ದಾಡ ಹತ್ತಿತು. ಮನಸ್ಸಿನ ಸ್ಥೈರ್ಯವಿಲ್ಲುದರಿಂದ ಅವನು ಒಮ್ಮೆ ಸಿವಾಜಿಯ ವಿರುದ್ಧವಾಗಿಯೂ ಮತ್ತೊಮ್ಮೆ ಮೊಗಲರ ವಿರುದ್ಧವಾಗಿಯೂ ಒಳಸಂಚು ನಡಿಸತೊಡಗಿದನು. ಆದ್ದರಿಂದ ಇಬ್ಬರೂ ಅದಿಲ್ಶಾಹಿಯ ದ್ವೇಷಿಗಳು ಆದರೇ ಹೊರತು ಒಬ್ಬರೂ ಅನುಕೂಲರಾಗಲಿಲ್ಲ. ಕೊನೆಗೆ ಬೇಸತ್ತು ದಿಲೀರಖಾನನು ಅವನಿಗೆ ಬರೆದುದೇನಂದರೆ:—"ನಿನ್ನ ಮಾತುಗಳಲ್ಲಿಯೂ ಕೃತಿಯಲ್ಲಿಯೂ ಮೋಸವು ತುಂಬಿರುತ್ತದೆ. ಸಿವಾಜಿಯೊಡನೆ ಗೆಳೆತನ ಮಾಡಬೇಕೆಂಬುದು ನಿನ್ನ ಮುಖ್ಯಗುರಿಯಾಗಿದ್ದು, ಆಗುರಿಯನ್ನು ಮುಚ್ಚಿಡುವುದಕ್ಕೆ ಮಾತ್ರ ನಮ್ಮೊಡನೆ ಸವಿಮಾತುಗಳನ್ನಾಡುತ್ತಿರುವಿ. ಹಾಗಿಲ್ಲದಿದ್ದರೆ ನೀನು ನಿನ್ನ ಮಾತಿನಂತೆ ಏಕೆ ನಡೆದುಕೊಳ್ಳುವುದಿಲ್ಲ?" ಈ ಪತ್ರವನ್ನು ಬರೆದು ದಿಲೀರನು ಸುಮ್ಮನೇ ಕೂಡ್ರಲಿಲ್ಲ. ತಾನು ಮಾತುಕೊಟ್ಟಂತೆ ನಡೆಯುವುದಕ್ಕೆ ಮಸೌದನಿಗೆ ಒತ್ತಾಯ ಮಾಡುವ ಉದ್ದೇಶದಿಂದ ಅವನು ದಂಡಿನೊಡನೆ ಹೊರಟು ಧುಳಖೇಡದಲ್ಲಿ ಭೀಮಾಹೊಳೆಯನ್ನು ದಾಟಿ, ವಿಜಾಪುರದಿಂದ ೩೫ ಮೈಲು ದೂರಿರುವ **ಹಲಸಂಗಿ**ಯಲ್ಲಿ ಬಂದಿಳಿದನು. ವಜೀರ-ದಳವಾಯಿಗಳ ಕಡಿದಾಟದ ಮೂಲಕವಾಗಿ ಅದಿಲ್ಶಾಹಿಯಲ್ಲಿ ಸ್ವಸಂರಕ್ಷಣದ ಸಾಮರ್ಥ್ಯವು ಎಷ್ಟು ಮಾತ್ರವೂ ಉಳಿದಿದ್ದಿಲ್ಲ. ಮಸೌದ

ಸರ್ಜಾಖಾನರ ದಂಡುಗಳು ಒಬ್ಬರನ್ನೊಬ್ಬರು ಕೊಲ್ಲಲಿಕ್ಕೆ ಹೊಂಚು ಹಾಕಿಕೊಂಡು ಕುಳಿತಿದ್ದವು. ರಾಜಧಾನಿಯಲ್ಲೆಲ್ಲ ಅರಾಜಕತೆಯು ಹಬ್ಬಿತ್ತು. ಮುಸೌದನು ಸರ್ಜಾಖಾನನ ಆಸ್ತಿಯನ್ನು ಬೇಕಾದವರು ಲೂಟು ಮಾಡಬಹುದೆಂದು ಜಾಹಿರನಾಮೆಯನ್ನು ತೆಗೆದಿದ್ದನು. ಕೋಟೆಯ ಗೋಡೆಯ ಮೇಲಿಟ್ಟ ತೋಫುಗಳು ಸರ್ಜಾಖಾನನ ಮನೆಯನ್ನು ಗುರಿ ಮಾಡಿಕೊಂಡಿದ್ದವು. ವಜೀರನ ಹರಕುಮುರಕು ದಂಡು ಸರ್ಜಾಖಾನನ ದಂಡಿನ ಮೇಲೆ ಬೀಳಲಿಕ್ಕೆ ಧೈರ್ಯಸಾಲದೆ ತಟಸ್ಥವಾಗಿ ನಿಂತಿತ್ತು. ಎಲ್ಲಿ ನೋಡಿದಲ್ಲಿ ಕೊಲೆಸುಲಿಗೆಗಳ ಗದ್ದಲವೇ ಕೇಳಿಬರುತ್ತಿತ್ತು. ಈ ಮೇರೆಗೆ ಮರಣೋನ್ಮುಖಸ್ಥಿತಿಯಲ್ಲಿದ್ದ ಅದಿಲ್ಯಾಹಿಗೆ ಮೊಗಲರ ದಾಳಿಯನ್ನು ತಡೆಯಲಿಕ್ಕೆ ತ್ರಾಣವು ಎಲ್ಲಿಂದ ಬರಬೇಕು? ದಿಲೀರಖಾನನು ರಾಜಧಾನಿಯನ್ನು ಮುತ್ತಿದರೆ ಅವನ್ನು ಉಳಿಸಿಕೊಳ್ಳುವರಾರು? ಅದಿಲ್ಯಾಹಿಯು ಉಳಿಯುವ ಬಗೆ ಎಲ್ಲಿ?

ಇಂತಹ ಇಕ್ಕಟ್ಟಿನ ಸಂದರ್ಭದಲ್ಲಿ ಯಾರು ತಮ್ಮ ಹಟಹಗೆತನವನ್ನು ಬದಿಗೊತ್ತಿ ಅದಿಲ್ಯಾಹಿಯನ್ನು ಉಳಿಸಲಿಕ್ಕೆ ಅನುವಾದರೋ ಅವರೇ ವಿವೇಕಿಗಳು, ಅವರೇ ರಾಜನಿಷ್ಠರು ಎಂದು ಧಾರಾಳವಾಗಿ ಹೇಳಬಹುದು. ಸರ್ಜಾಖಾನನು ತಮ್ಮಿಬ್ಬರ ಹೊಡೆದಾಟದಿಂದ ಅದಿಲ್ಯಾಹಿಗೆ ಹಾನಿತಟ್ಟುವುದೆಂದು ಮುಂಗಂಡು, ತನ್ನ ಹೇವನ್ನು ತೊರೆದು, ಆದಿಲ್ಯಾಹಿಯನ್ನು ಮುಳುಗಿಸಲಿಕ್ಕೆ ಯಮದೂತನಂತೆ ಬರುತ್ತಿದ್ದ ದಿಲೀರಖಾನನ ಪಾಳೆಯದಲ್ಲಿ ತನ್ನ ಹೆಂಡರುಮಕ್ಕಳನ್ನು ಓಲಿಟ್ಟು, ತಮ್ಮಿಬ್ಬರ ಜಗಳವನ್ನು ತೀರಿಸಬೇಕೆಂದು ಅವನಿಗೆ ಬೇಡಿಕೊಂಡನು. ಅವನು ಆ ಮಾತಿಗೆ ಒಡಂಬಟ್ಟು, ಅವನ ಹಗೆಯಾದ ಮುಸೌದನನ್ನು ಕೇಳಿದನು. ನಿರುಪಾಯನಾಗಿ ಮುಸೌದನು ಅವನ ಪಂಚಾಯತಿಗೆ ಒಪ್ಪಿಕೊಂಡರೂ ದಿಲೀರನು ಅವನ ಮಾತನ್ನು ನಂಬದೆ, ಮುಸೌದನು ತನ್ನ ಮಗನನ್ನೂ ತನ್ನ ಕೈಕೆಳಗಿದ್ದ ಎಲ್ಲ ದಂಡನ್ನೂ ಓಲಾಗಿ ತನ್ನ ಪಾಳೆಯದಲ್ಲಿರಿಸಬೇಕೆಂದು ಒತ್ತಾಯ ಮಾಡಿದನು. ಗತ್ಯಂತರಕಾಣದೆ ಮುಸೌದನು ತನ್ನ ಮಗನನ್ನೂ ತನ್ನ ಅಂಕೆಯಲ್ಲಿದ್ದ ೫,೦೦೦ ದಂಡಾಳುಗಳನ್ನು ಹಲಸಂಗಿಗೆ ಕಳುಹಿ, ತಾನೂ ಅಲ್ಲಿಗೆ ಹೋದನು. ಅದಿಲ್ಯಾಹಿಯ ಉಳಿದ ಎಲ್ಲ

ಸರದಾರರು ಆದಿಲ್ಶಾಹಿಯ ಮುಂದಿನ ಹಾಡನ್ನು ತಿಳಿದುಕೊಳ್ಳಲಿಕ್ಕೆ ಹಾತೊರೆದು ಹಲಸಂಗಿಗೆ ಹೋದರು.

೧೭ ನೆಯ ಶತಮಾನದ ಅಂತ್ಯಭಾಗದಲ್ಲಿ ಕೂಡ ರಾಜಕಾರ್ಯಾಧಿಕಾರಿಗಳ ನೀತಿಯು ಅತಿ ಶಿಥಿಲವಾದ್ದರಿಂದ ಅವರು ತಮ್ಮ ಪ್ರತಿಸ್ಪರ್ಧಿಗಳನ್ನಾಗಲಿ ಶತ್ರುಗಳನ್ನಾಗಲಿ ಮೋಸದಿಂದ ಕೊಲ್ಲುವುದು ವಾಡಿಕೆಯಾಗಿತ್ತು. ಆದಿಲ್ಶಾಹಿಯ ಎಲ್ಲ ಸರದಾರರು ತನ್ನ ಕಯ್ಯಲ್ಲಿ ಸಿಕ್ಕುದನ್ನು ಕಂಡು ದಿಲೀರಖಾನನ ಮನಸ್ಸಿನಲ್ಲಿ ದುರ್ಬುದ್ಧಿಯು ಹುಟ್ಟಿತು. ಎಲ್ಲ ಸರದಾರರನ್ನು ಮೋಸದಿಂದ ಸೆರೆಹಿಡಿದು, ವಿಜಾಪುರದ ಮೇಲೆ ಸಾಗಿ ಹೋಗಿ, ಆ ರಾಜಧಾನಿಯನ್ನು ಅನಾಯಾಸವಾಗಿ ಹಿಡಿದುಕೊಳ್ಳಬೇಕೆಂಬ ದುರಾಲೋಚನೆಯು ಅವನಲ್ಲಿ ತಲೆದೋರಿತು. ಆದರೆ ಇಂತಹ ಕೆಟ್ಟ ಕೆಲಸಕ್ಕೆ ಅವಶ್ಯವಾಗಿ ಬೇಕಾದ ಮನಸ್ಸಿನ ಧೈರ್ಯ ಸ್ಥೈರ್ಯ ಜಾಗರೂಕತೆಗಳು ಅವನಲ್ಲಿದ್ದಿಲ್ಲ. ಆದ್ದರಿಂದ ಈ ಒಳಸಂಚು ಕೂಡಲೆ ಹೊರಬಿತ್ತು. ಆದಿಲ್ಶಾಹಿ ಸರದಾರರು ಎಚ್ಚರಗೊಂಡರು. ಸರ್ಜಾಖಾನನಂತೂ ಕನಲ್ದುಕೆಂಡಾಗಿ ಯುದ್ಧಸನ್ನದ್ಧನಾಗಿ ದಿಲೀರಖಾನನನ್ನು ಕಾಳಗಕ್ಕೆ ಕರೆದನು. ಖಾನನ ಮೋರೆಯು ಒಣಗಿತು. ಅವನು ನಾಚಿಕೊಂಡು ಸರ್ಜಾಖಾನನ ಕ್ಷಮೆಯನ್ನುಬೇಡಿ, ಅವನಿಗೂ ಮಸೌದನ ಸಲಹೆಗಾರನಾದ ವೆಂಕಟಾದ್ರಿಗೂ ಹೇರಳ ಹಣವನ್ನು ಲಂಚವಾಗಿ ಕೊಟ್ಟು, ಅವರ ಒತ್ತಾಸೆಯಿಂದ ಉಳಿದ ಸರದಾರರನ್ನು ಒಡೆಕೊಂಡನು. ಆದಿಲ್ಶಾಹಿಯ ೧೦,೦೦೦ ದಂಡಾಳುಗಳು ಮೊಗಲರ ಊಳಿಗವನ್ನು ಸೇರಿದರು. ಸರ್ಜಾಖಾನ ಮೊದಲಾದ ಎಷ್ಟೋಮಂದಿ ಸರದಾರರು ದಿಲೀರನನ್ನು ಕೂಡಿದರು. ವಿಜಾಪುರವನ್ನೂ ಆದಿಲ್ಶಾಹಿಯನ್ನೂ ಕಾಪಾಡಲಿಕ್ಕೆ ಹೊಟ್ಟೆಗಿಲ್ಲದಿದ್ದರೂ ರಾಜನಿಷ್ಠರಾದ ಮೂರು ನಾಲ್ಕು ಸಾವಿರ ಮಂದಿ ದಂಡಾಳುಗಳು ಮಾತ್ರ ಉಳಿದರು.

ಸ್ವಾತಂತ್ರ್ಯವೇ ಮನುಷ್ಯನ ಸುಖದ ಮುಖ್ಯಸಾಧನವು.* ಅದ್ವೈತ ಸಿದ್ಧಾಂತದ ಮುಖ್ಯತತ್ವವಾದ "ಅಹಮ್ ಬ್ರಹ್ಮ" ಎಂಬ ಮಹಾವಾಕ್ಯವು

---

* ಸರ್ವಮ್ ಪರವಶಮ್ ದುಃಖಮ್ ।
ಸರ್ವಮ್ ಆತ್ಮವಶಮ್ ಸುಖಮ್ ॥ ಮನುಸ್ಮೃತಿ.

ಇದೇ ಮಾತನ್ನೇ ಒತ್ತಿ ಹೇಳುತ್ತದೆ. ನಿವೃತ್ತಿ ಮಾರ್ಗವನ್ನವಲಂಬಿಸಿ ವೈರಾಗ್ಯ—ಚಕ್ರವರ್ತಿಗಳಾದಂತಹರಿಗೆ ಮಾತ್ರ ಈ ಸ್ವಾತಂತ್ರ್ಯ ಸುಖವು ದೊರೆಯುತ್ತದೆಯೇ ಹೊರತು ಉಳಿದವರಿಗೆ ಅವರು ಚಕ್ರವರ್ತಿಗಳೇ ಆಗಲಿ ಅರಸರೇ ಆಗಲಿ ಮಾಂಡಲಿಕರೇ ಆಗಲಿ ಅವರಿಗೆ ದೊರೆಯು ವುದಿಲ್ಲ. ಅಧಿಕಾರಸಂಪತ್ತುಗಳು ಹೆಚ್ಚೆಚ್ಚಾದಂತೆ ಮನುಷ್ಯರು ತಮ್ಮ ತಮ್ಮ ಇಂದ್ರಿಯ ಪರವಶರಾಗಿ ಆತ್ಮಸ್ವಾತಂತ್ರ್ಯವನ್ನು ಕಳೆಕೊಂಡು, ಹೆಚ್ಚೆಚ್ಚು ತೊಳಲಿ ಬಳಲುತ್ತಾರೆ. ಈ ನೇಮಕ್ಕೆ ಅಪವಾದರಾದವರು ತೀರ ಸ್ವಲ್ಪ. ಪ್ರವೃತ್ತಿಮಾರ್ಗದಲ್ಲಿದ್ದು ವೈರಾಗ್ಯಚಕ್ರವರ್ತಿಗಳಾದ ಜನ ಕಾದಿಯರು ಬಹಳ ಅಪರೂಪ. ಸಾರ್ವಭೌಮರೂ ರಾಜರೂ ದೊಡ್ಡ ದೊಡ್ಡ ರಾಜಾಧಿಕಾರಿಗಳೂ ಸ್ವಾತಂತ್ರ್ಯ ಸುಖವನ್ನು ಅನುಭವಿಸುತ್ತಾ ರೆಂದು ನಮಗೆ ತೋರುತ್ತದಷ್ಟೇ; ಆದರೆ ಅದು ತೀರ ತಪ್ಪು. ಅವರ ಸ್ವಾತಂತ್ರ್ಯವು ಇಂದ್ರಿಯಗಳದೇ ಹೊರತು, ಆತ್ಮಸ್ವಾತಂತ್ರ್ಯವಲ್ಲ. ಆತ್ಮ ಸ್ವಾತಂತ್ರ್ಯವೇ ಸುಖಮಯವಾದ್ದರಿಂದ ಈ ಅರಸರಿಗಿರುವ ಇಂದ್ರಿಯಗಳ ಸ್ವಾತಂತ್ರ್ಯವು ದುಃಖಮಯವಾಗಿರುವುದಲ್ಲದೆ, ಅಧೋಗತಿಗೆ ಕಾರಣ ವಾಗಿರುತ್ತದೆ. ಬಡಬಗ್ಗರು ತಮ್ಮ ಹೊಟ್ಟೆಬಟ್ಟೆಗೋಸ್ಕರ ಶ್ರೀಮಂತ ರನ್ನು ಆಶ್ರಯಿಸಬೇಕಾದ್ದರಿಂದ ಅವರು ಆತ್ಮಸ್ವಾತಂತ್ರ್ಯಕ್ಕೆ ಎರವಾಗಿರು ತ್ತಾರೆ. ಅನ್ನವಸ್ತ್ರಗಳಿದ್ದ ಮಧ್ಯಮವರ್ಗದ ಜನರು ಮಾತ್ರ ತಮ್ಮ ತಮ್ಮ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಂಡ ಪ್ರಮಾಣದಂತೆ ಈ ಅಮೌಲ್ಯವಾದ ಆತ್ಮಸ್ವಾತಂತ್ರ್ಯವನ್ನೂ ಅದರಿಂದ ಲಭ್ಯವಾದ ಶುದ್ಧ ಸುಖವನ್ನೂ ಹೆಚ್ಚುಕಡಮೆ ಪ್ರಮಾಣದಿಂದ ಹೊಂದಬಹುದು. ಆದ್ದ ರಿಂದ ಮಧ್ಯಮವರ್ಗದ ಜನರೇ ಆತ್ಮಸ್ವಾತಂತ್ರ್ಯಕ್ಕೆ ಹೆಚ್ಚು ಅರ್ಹರಾಗಿರು ತ್ತಾರೆಂದು ಧಾರಾಳವಾಗಿ ಹೇಳಬಹುದು. ಪ್ರಜಾಸತ್ತಾತ್ಮಕ ರಾಜ್ಯ ಪದ್ಧತಿಯಲ್ಲಿ ಮಧ್ಯಮವರ್ಗದ ಜನರ ಕಯ್ಯಲ್ಲೇ ರಾಜ್ಯ ಸೂತ್ರಗಳು ಹೆಚ್ಚಾಗಿರುವುದರಿಂದ ಅದೇ ಪದ್ಧತಿಯೇ ಅತ್ಯುತ್ತಮ ರಾಜ್ಯಪದ್ಧತಿ ಎಂದು ಎಲ್ಲ ದೇಶದವರೂ ಹೊಗಳುತ್ತಾರೆ.

ಪಾತಷಹಾಬೀಬಿಯು ೨ ನೆಯ ಅಲ್ಲಿ ಅದಿಲ್ಶಹನ ಹಿರಿಮಗಳೂ ಚಿಕ್ಕ ಸಿಕಂದರಶಹನ ಅಕ್ಕನೂ ಆಗಿದ್ದಳು. ಆಕೆಯು ವಿವೇಕಿಯೂ

ಸದ್ಗುಣಿಯೂ ಆದ್ದರಿಂದ ಎಲ್ಲ ಜನರಿಗೂ ಬೇಕಾಗಿದ್ದಳೆಂದು ಮೇಲೆ ಬರೆದಿರುತ್ತೇವಷ್ಟೇ. ಕಲಬುರ್ಗೆಯ ಒಪ್ಪಂದದಂತೆ ಆಕೆಯನ್ನು ದಿಲ್ಲಿಗೆ ಕಳಿಸಬೇಕೆಂದು ಬಾದಶಹನ ತಗಾದೆಯು ಹೆಚ್ಚಿತು; ದಿಲೀರಖಾನನು ಮಸೌದನಿಗೆ ಒತ್ತಾಯ ಮಾಡತೊಡಗಿದನು; ಮಸೌದನು ಅರಮನೆಯವರನ್ನು ಗೋಳಾಡಿಸಲಾರಂಭಿಸಿದನು. ಪಾತಷಹಾಬೀಬಿಯ ಮನಸ್ಸಿನಲ್ಲಿ ಆವರಂಗಜೇಬನ ಮಗನನ್ನು ಮದುವೆಮಾಡಿಕೊಳ್ಳುವುದಿದ್ದಿಲ್ಲ. ಮೊಗಲರು ಸುನ್ನಿಮತದವರು, ಅದಿಲ್ಶಹರು ಸಿಯಾಮತಕ್ಕೆ ಸೇರಿದವರು. ಇದಲ್ಲದೆ ತನ್ನ ಚಿಕ್ಕತಮ್ಮನನ್ನು ಬಿಟ್ಟಿರಲಿಕ್ಕೆ ಆಕೆಯ ಮನಸ್ಸು ಒಡಂಬಡಲಿಲ್ಲ. ಆಕೆಯು ೧೬ ವರ್ಷದ ಹುಡುಗಿಯಾದರೂ ಮುದಕರಷ್ಟು ಜಾಣಳೂ ವಿಚಾರವಂತಳೂ ಆಗಿದ್ದಳು. ಅರಮನೆಯ ಎಲ್ಲ ಸೇವಕರೂ ಎಲ್ಲ ಅದಿಲ್ಶಾಹಿಯ ಹಳೆ ಸರದಾರರೂ ಆಕೆಯ ಸಲಹೆಗೆ ತಲೆದೂಗುತ್ತಿದ್ದುದಲ್ಲದೆ, ಆಕೆಯ ಹೇಳಿಕೆಯಂತೆ ಸಂತೋಷದಿಂದ ನಡೆದುಕೊಳ್ಳುತ್ತಿದ್ದರು. ಆದ್ದರಿಂದ ಅದಿಲ್ಶಾಹಿಯು ಅಂತ್ಯಾವಸ್ಥೆಯಲ್ಲಿರುವಾಗ ಆಕೆಯು ರಾಜಧಾನಿಯನ್ನು ಬಿಟ್ಟುಹೋದರೆ, ಅದಿಲ್ಶಾಹಿಯು ಮುಳುಗಿಹೋಗಬಹುದೆಂಬ ಹೆದರಿಕೆಯು ಆ ಮನೆತನದ ಎಲ್ಲ ಹಿತೈಷಿಗಳನ್ನು ಬಲವಾಗಿ ಬಾಧಿಸುತ್ತಿತ್ತು.

ಅರಸು ಮನೆತನದವರು ಇಂದ್ರಿಯವಶವರ್ತಿಗಳೂ ಪರಾಧೀನರೂ ಆಗಿರುತ್ತಾರೆಂದು ಮೇಲೆ ಬರೆದಿರುತ್ತೇವಷ್ಟೇ. ವಿಜಾಪುರದ ಹಿಂದಿನ ಅರಸಿನ ಹಿರಿಮಗಳೂ ಈಗ ಪಟ್ಟದ ಮೇಲೆ ಕುಳಿತ ಅರಸನ ಅಕ್ಕನೂ ಎಲ್ಲರಿಗೂ ಬೇಕಾದವಳೂ ಸದ್ಗುಣಿಯೂ ಆದ ಪಾತಷಹಾಬೇಗಮ್ಮಳ ಅಸ್ವಾತಂತ್ರ್ಯತೆಯು ಈಗ ಎಲ್ಲರಿಗೂ ದೃಗ್ಗೋಚರವಾಯಿತು. ವಜೀರನು ಆಕೆಯು ದಿಲ್ಲಿಗೆ ಹೋದ ಹೊರತು ಪರಿಣಾಮವಿಲ್ಲೆಂದು ಹಟಹಿಡಿದನು. ಪಾತಷಹಾಬೀಬಿಯು ತನ್ನ ಚಿಕ್ಕತಮ್ಮನನ್ನು ಬಿಟ್ಟು ಹೋಗಲಾರೆನೆಂತಲೂ ಸುನ್ನಿಮತದ ರಾಜಕುಮಾರನನ್ನು ಮದುವೆಯಾಗಿ ಒಡ್ಡಾಡುವುದು ತನ್ನಿಂದ ಆಗಲಿಕ್ಕಿಲ್ಲೆಂತಲೂ ನೆಲಹಿಡಿದಳು. ಬೇಗನೆ ಆಕೆಯನ್ನು ದಿಲ್ಲಿಗೆ ಕಳಿಸಿಕೊಡದಿದ್ದರೆ, ಆಕೆಯನ್ನೂ ಅದಿಲ್ಶಹನನ್ನೂ ಮಸೌದನನ್ನೂ ಸೆರೆ

ಹಿಡಿದು ದಿಲ್ಲಿಗೆ ಕಳಹುವೆನೆಂದು ದಿಲೀರಖಾನನು ಗದ್ದರಿಸತೊಡಗಿದನು. ಇಂತಹ ಬಿಕ್ಕಟ್ಟಿನ ಸಂದರ್ಭದಲ್ಲಿ ಆ ಬಡಬಾಲಕಿಯ ಸ್ವಾತಂತ್ರ್ಯವು ಉಳಿಯುವ ಬಗೆ ಹೇಗೆ? ದಂಡೋಪಾಯವನ್ನು ಉಪಯೋಗಿಸಲಿಕ್ಕೆ ಮಸೌದನಲ್ಲಿ ಸಾಮರ್ಥ್ಯವಿದ್ದಿಲ್ಲ; ಇದ್ದರೂ ಆಕೆಯ ಮುಂದೆ ಅವನ ಆಟವು ಸಾಗುವಂತಿದ್ದಿಲ್ಲ. ಆದಕಾರಣ ಅವನು ಸಾಮದಾನಭೇದೋಪಾಯಗಳನ್ನು ನಡಿಸಿದನು. ಎಲ್ಲ ಪ್ರಯತ್ನಗಳು ವ್ಯರ್ಥವಾಗಲು, ಆಕೆಗೆ ಮೊಲೆಯುಣಿಸಿದ **ತೌಷಮಾ** ಎಂಬ ದಾಯಿಯನ್ನು ತನ್ನ ಕಡೆಗೆ ಮಾಡಿಕೊಂಡು, ಆಕೆಯನ್ನು ಒಡಂಬಡಿಸಲಿಕ್ಕೆ ಎತ್ತುಗಡೆ ಮಾಡತೊಡಗಿದನು. ಆಕೆಯು ಪರಿಪರಿಯಿಂದ ಪಾತಷಹಾಬೀಬಿಗೆ ಹೇಳಿದಳು. ಸಿಕಂದರಶಹನ ಸುರಕ್ಷಿತೆ ಅದಿಲ್ಯಾಹಿಯ ಸ್ಥಿರತ್ವ ಇವುಗಳಿಗೋಸ್ಕರ ಆಕೆಯು ಸ್ವಾರ್ಥತ್ಯಾಗ ಮಾಡಬೇಕೆಂದು ತೌಷಮಾಯಿಯು ಹಲವು ಪ್ರಕಾರವಾಗಿ ಬೋಧಿಸಿದ್ದರಿಂದ, ಕಟ್ಟಕಡೆಗೆ ಆ ಪರೋಪಕಾರಿಯಾದ ತರುಣೀಮಣಿಯು ದಿಲ್ಲಿಗೆ ಹೋಗಲಿಕ್ಕೆ ಒಡಂಬಟ್ಟಳು. ಆಕೆಯು ಅರಮನೆಯಿಂದ ಹೊರಡುವ ದಿವಸ ಆಕೆಯನ್ನು ನೋಡಲಿಕ್ಕೆ ಊರಜನರೆಲ್ಲರು ಬೀದಿಗುಂಟ ಸಾಲುಗಟ್ಟಿ ನಿಂತಿದ್ದರು. ಆಕೆಯ ಅಗಲುವಿಕೆಯಿಂದ ನೊಂದುಕೊಂಡು ಕಣ್ಣೀರು ಸುರಿಸದಿದ್ದವರು ಆ ರಾಜಧಾನಿಯಲ್ಲಿ ಯಾರೂ ಇದ್ದಿಲ್ಲೆಂದರೆ ಅತಿಶಯೋಕ್ತಿಯಾಗಲಾರದು (೧ ಜುಲೈ ೧೬೭೯). *

ಅವರಂಗಜೀಬಬಾದಶಹನ ಸಂಶಯಕ್ಕೂ ರಾಜ್ಯತೃಷ್ಣೆಗೂ ಮಿತಿಯಿದ್ದಿಲ್ಲ. ಯಾವ ಕೊಟ್ಟಮಾತೂ ಯಾವ ಆಣೆಯೂ ಅವನ ಸ್ವಾರ್ಥ ಸಾಧನಪ್ರಯತ್ನವನ್ನು ತಡೆಯುತ್ತಿದ್ದಿಲ್ಲ. ಅಂತಃಕರಣ ಔದಾರ್ಯ ಭೂತದಯಾದಿಗುಣಗಳು ಅವನ ಬಯಕೆಗೆ ಎಂದೂ ಅಡ್ಡಬರುತ್ತಿದ್ದಿಲ್ಲ. ಆದಿಲ್ಯಾಹಿಯ ತರುಣೀಮಣಿಯು ತನ್ನ ಕಯ್ವಶವಾದರೂ ಮಸೌದನು ಕಲ್ಪಗೆಯ ಒಪ್ಪಂದದ ಶರ್ತುಗಳನ್ನು ಅಕ್ಷರಶಃ ಪಾಲಿಸಿದರೂ ಆ ಆರಸು

* ಈ ತರುಣೀಮಣಿಯು ಅಕ್ಟೋಬರದಲ್ಲಿ ದಿಲ್ಲಿಗೆ ಹೋಗಿ ಮುಂದೆ ೨ ವರ್ಷ ಅರಮನೆಯಲ್ಲಿ ಮತಶಿಕ್ಷಣವನ್ನುಹೊಂದಿ, ಅಜಮ್‌ಶಹನನ್ನು ಮದುವೆಯಾದಳು (೨೬ ಜುಲೈ ೧೬೮೧).

ಮನೆತನದ ವಿಷಯವಾಗಿ ಅವನ ಕಠೋರಹೃದಯದಲ್ಲಿ ದಯೆಯು ಲವ ಲೇಶವಾದರೂ ಹುಟ್ಟಲಿಲ್ಲ. ಅದಿಲ್ಶಾಹಿಯ ದಂಡೆಲ್ಲ ದಿಲೀರಖಾನನ ಪಾಳೆಯಕ್ಕೆ ಬಂದ ಸುದ್ದಿಯು ಹತ್ತಿದ ಕೂಡಲೆ, ಆ ದುಷ್ಟ ಬಾದಶಹನು ಏನಾದರೂ ನೆವ ತೆಗೆದು, ವಿಜಾಪುರವನ್ನು ಹಿಡಿದುಕೊಳ್ಳಬೇಕೆಂದು ದಿಲೀರಖಾನನಿಗೆ ಬರೆದನು. ಈ ಹುಕುಮು ಬಂದಕೂಡಲೆ ಮಂಗನಿಗೆ ಸರಾಯಿಕೂಡಿಸಿದಂತೆ ದಿಲೀರಖಾನನ ಹಾಡಾಯಿತು. ಅವನು ತತ್‌ಕ್ಷಣವೇ ಒಂದು ಪತ್ರಕೊಟ್ಟು ೨೫ ಮಂದಿ ಸ್ವಾರರನ್ನು ವಿಜಾಪುರಕ್ಕೆ ಅಟ್ಟಿದನು. ೧. ಮಸೌದನು ವಜೀರಿಯನ್ನು ಬಿಟ್ಟು ತನ್ನ ಜಹಗೀರಿಗೆ ಹೋಗಬೇಕೆಂತಲೂ; ೨. ಅವರಂಗಜೇಬಬಾದಶಹನು ನಿಯಮಿಸಿದ ಹೊಸ ವಜೀರನು ಆದಿಲ್ಶಹನ ಪಾಲಕನಾಗಿ ರಾಜ್ಯಭಾರಮಾಡುವನೆಂತಲೂ; ೩. ಆದಿಲ್ಶಾಹಿಯ ದಂಡು ಸಿವಾಜಿಯನ್ನು ಎದುರಿಸಲಿಕ್ಕೆ ಹೋಗುವದೆಂತಲೂ ಆ ಪತ್ರದಲ್ಲಿ ಬರೆದಿತ್ತು.

ದಿಲೀರಖಾನನ ಈ ಘಾತಕವಾದ ಪತ್ರವು ಮಸೌದನಿಗೆ ಬಂದು ತಲುಪಿತು. ಅದನ್ನು ನೋಡಿ ಅವನು ದಿಗಿಲುಗೊಂಡನು. ಅವನು ಎಷ್ಟು ದಡ್ಡನಾದರೂ ದಿಲೀರನ ಪತ್ರದಂತೆ ನಡೆಕೊಂಡರೆ ಆದಿಲ್ಶಾಹಿಯು ಮುಳುಗಿ ಹೋಗುವದೆಂದು ತಿಳಿದುಕೊಳ್ಳುವಷ್ಟು ಬುದ್ಧಿಯು ಅವನಿಗಿತ್ತು. ಆದಕಾರಣ ಅವನು ತನ್ನ ಮಗನಿಗೆ ಮೊಗಲರ ಪಾಳೆಯದಿಂದ ಹೇಗಾದರೂ ಮಾಡಿ ತಪ್ಪಿಸಿಕೊಂಡು ದಂಡಿನೊಡನೆ ಮರಳಿ ಬರಬೇಕೆಂದು ಹೇಳಿಕಳುಹಿದ್ದಲ್ಲದೆ, ಸಿವಾಜಿಯ ನೆರವನ್ನು ಅಂಗಲಾಚಿ ಬೇಡಿಕೊಳ್ಳಲಿಕ್ಕೆ ಒಬ್ಬ ವಕೀಲನನ್ನು ಕಳುಹಿ, ತಾನು ವಜೀರಿಯನ್ನು ಬಿಡಲಿಕ್ಕೆ ಬಯಸುವದಿಲ್ಲೆಂದು ದಿಲೀರಖಾನನಿಗೆ ತಿಳಿಸಿದ್ದಲ್ಲದೆ ವಂಚಕನಾದ ವೆಂಕಟಾದ್ರಿಯನ್ನು ಸೆರೆಯಲ್ಲಿಟ್ಟನು.

ಈ ಮೇರೆಗೆ ಮಸೌದನು ತನ್ನ ಮಾತು ಮೀರಿದ್ದರಿಂದ ಕ್ರೂರನಾದ ದಿಲೀರಖಾನನಿಗೆ ಬ್ರಹ್ಮೇತಿ ಸಿಟ್ಟು ಬಂತು. ಆದ್ದರಿಂದ ಅವನು ಸಿಟ್ಟಿನ ಕಯ್ಯಲ್ಲಿ ಬುದ್ಧಿ ಕೊಟ್ಟು ಮುಂಬಗೆಯದೆ, ಆದಿಲ್ಶಾಹಿಯೊಡನೆ ಯುದ್ಧವನ್ನು ಹೂಡಿದನು(೧೮ ಆಗಸ್ಟ ೧೬೭೯). ಧುಳಖೇಡದ ನೆರೆಯಲ್ಲಿ ತನ್ನ ಪಾಳೆಯ

ವನ್ನು ಹಾಕಿ, ಅವನು ತನ್ನ ದಂಡನ್ನು ಒಟ್ಟುಗೂಡಿಸಲಿಕ್ಕೂ ಹೊಸ ದಂಡಾಳುಗಳನ್ನು ಇಟ್ಟುಕೊಳ್ಳಲಿಕ್ಕೂ ಆರಂಭಿಸಿದನು. ಆದರೆ ಅವನ ಹೊಟ್ಟೆಯೊಳಗಿದ್ದ ಸಿಟ್ಟಿನಷ್ಟು ಅವನ ರಟ್ಟೆಯೊಳಗೆ ಶಕ್ತಿಯಿದ್ದಿಲ್ಲ. ಅವನಿಗೂ ಅವನ ಮೇಲಧಿಕಾರಿಯೂ ದಕ್ಷಿಣದ ಸುಬೇದಾರನೂ ಆದ ಶಹಾಲಮ್ಮನಿಗೂ ಇಲಿ ಬೆಕ್ಕುಗಳ ನಡುವಿರುವಷ್ಟು ಪ್ರೀತಿಯಿತ್ತು. ಅವನ ದಂಡಿನ ಹಿಂದಿನ ಸಂಬಳವು ಬಾಕಿಯಾಗಿತ್ತು; ಮುಂದೆ ಖರ್ಚುಮಾಡಲಿಕ್ಕೆ ದುಡ್ಡಿದ್ದಿಲ್ಲ; ವಿಜಾಪುರವನ್ನು ಮುತ್ತಲಿಕ್ಕೆ ಅವಶ್ಯವಾದ ದೊಡ್ಡದೊಡ್ಡ ತೋಫು ಮುಂತಾದ ಯುದ್ಧಸಾಮುಗ್ರಿಗಳಿದ್ದಿಲ್ಲ. ಮುತ್ತಿಗೆಯ ತೋಫುಗಳನ್ನೂ ಹಣವನ್ನೂ ಕಳಿಸಬೇಕೆಂದು ದಿಲೀರಖಾನನು ಅಂಗಲಾಚಿ ಬೇಡಿಕೊಳ್ಳಲು, ಶಹಾಲಮ್ಮನು ದಿಲೀರನ ಹೆಣಗಾಟವು ಪೋಲಾದುದೆಂತಲೂ ದಿಲೀರನ ಪ್ರಯತ್ನವು ಸಫಲವಾಗುವ ವರೆಗೆ ಅವನು ಸಹಾಯಹೊಂದಲಿಕ್ಕೆ ಅನರ್ಹನೆಂತಲೂ ಉತ್ತರ ಬರೆದನು!!! ಇಂತಹ ಪರಿಸ್ಥಿತಿಯಲ್ಲಿ ದಿಲೀರನ ಮರಗು ಕೇಳುವವರೇ ಇದ್ದಿಲ್ಲ; ಅವನ ಗೋಳಾಟಕ್ಕೆ ತುದಿಮೊದಲೇ ಇರಲಿಲ್ಲ.

ಅತ್ತ ಮಸೌದನ ಮಗನು ಮೊಗಲರ ಪಾಳೆಯದಿಂದ ತಪ್ಪಿಸಿಕೊಂಡು ದಂಡಿನೊಡನೆ ಸುರಕ್ಷಿತವಾಗಿ ವಿಜಾಪುರಕ್ಕೆ ಬಂದು ಮುಟ್ಟಿದನು. ವಿಜಾಪುರದ ಪಟ್ಟಣದಲ್ಲೇ ಹರಕಮುರಕ ೫,೦೦೦ ದಂಡಾಳುಗಳಿದ್ದರು. ಸಿವಾಜಿಯು ೧೦,೦೦೦ ರಾಹುತರನ್ನೂ ೨೦೦ ಬಂಡಿ ಕಾಳನ್ನೂ ವಿಜಾಪುರಕ್ಕೆ ಕಳುಹಿ, ಉಳಿದ ದಂಡಿನೊಡನೆ ತಾನೇ ದಿಲೀರಖಾನನಿಗೆ ಎಡ್ಡಲಗಟ್ಟವನ್ನು ಕೊಡತೊಡಗಿದನು. ಅಂತೂ ಇಂತೂ ಅದಿಲ್ಶಾಹಿಯ ಆಯುಷ್ಯವು ಆರು ವರುಷ ಬೆಳೆಯಿತು!!!

ದಿಲೀರಖಾನನು ಸಲೊತ್ತಗಿ, ಕಾಸಿಗಾವ, ಆಲ್ಮೇಲಗಳನ್ನು ಸುಲಿದು, ಮಂಗಳವೇಡೆ ಭೀಮಾಹೊಳೆಯ ನಡುವಿನ ಪ್ರದೇಶವನ್ನು ಹಿಡಿಕೊಂಡು ಅಕ್ಲುಜವನ್ನು ಮುತ್ತಿದನು (ಸಪ್ಟಂಬರ). ಈ ಮುತ್ತಿಗೆಯಲ್ಲಿ ಅವನಿಗೆ ಗೆಲವು ಬರಲಿಲ್ಲ. ಆದ್ದರಿಂದ ಅವನು ಧೂಳಖೇಡದಿಂದ ಹೊರಟು ಹಲಸಂಗಿ ಮಾರ್ಗವಾಗಿ ಬಂದು, ವಿಜಾಪುರದಿಂದ ೬ ಮೈಲು

ದೂರಿರುವ **ಬರಟಗಿ** ಎಂಬ ಹಳ್ಳಿಯಲ್ಲಿ ಪಾಳೆಯ ಹಾಕಿದನು (೬ ಅಕ್ಟೋಬರ). ಅವನು ಇಲ್ಲಿರುವಾಗ ಮಸೌದನ ವಕೀಲರು ಒಡಂಬಡಿಕೆಯ ಮಾತುಗಳನ್ನು ಆಡಲಿಕ್ಕೆ ಬಂದರು. ಆದರೆ ಅಬ್ಬರದಷ್ಟು ಕಸುವು ಮೊಗಲರಲ್ಲಿ ಇಲ್ಲುದರಿಂದ ಈ ಮಾತುಕಥೆಗಳಿಂದ ಏನೂ ಫಲವಾಗಲಿಲ್ಲ.

ದಲೀರಖಾನನ ಅನುವಲ್ಲೆಯೂ (ಗೋಳಾಟವು) ದಿನ ದಿನಕ್ಕೆ ಹೆಚ್ಚಾಗಲಾರಂಭಿಸಿತು. ಅವನ ಮನಸ್ಸಿನಲ್ಲಿ ಆದಿಲ್ಶಾಹಿಯನ್ನು ಸಂಪೂರ್ಣವಾಗಿ ನಾಶಮಾಡಬೇಕೆಂದಿತ್ತು. ಆದ್ದರಿಂದ ಮಸೌದನು ಆದಿಲ್ಶಾಹಿಯ ಅಳಿವೇ ತನ್ನ ಅಳಿವೆಂದು ಬಗೆದು, ದಿಲೀರನಿಗೆ ಒಡಂಬಡಿಕೆಯ ಆಶೆಹಚ್ಚಿ ಕಾಲಹರಣಮಾಡತೊಡಗಿದನು. ಶಹಾಲಮ್ಮನು ವಿಜಾಪುರವನ್ನು ಹಿಡಿದುಕೊಳ್ಳುವುದು ಸುಸಾಧ್ಯವಲ್ಲೆಂತಲೂ ದಿಲೀರಖಾನನು ಬಾದಶಾಹಿಯನ್ನು ನಿಷ್ಕಾರಣವಾಗಿ ಹಾಳುಮಾಡುತ್ತಾನೆಂತಲೂ ಒಂದರ ಹಿಂದೊಂದು ಪತ್ರವನ್ನು ಬಾದಶಹನಿಗೆ ಬರೆದುದಲ್ಲದೆ, ದಿಲೀರಖಾನನ ಕೈಕೆಳಗಿನ ದಳವಾಯಿಗಳನ್ನು ಅವನನ್ನು ವಿರೋಧಿಸುವುದಕ್ಕೆ ಹುರಿಮುಂಬಿಸತೊಡಗಿದನು. ದಿಲೀರಖಾನನೂ ವಿಜಾಪುರದಲ್ಲಿದ್ದ ಮೊಗಲರ ವಕೀಲರೂ ಆದಿಲ್ಶಾಹಿಯನ್ನು ಮುಳುಗಿಸುವುದು ಅತಿಸುಲಭಸಾಧ್ಯವೆಂದು ಬಾದಶಹನಿಗೆ ಅರಿಕೆಮಾಡುತ್ತಿದ್ದರು. ಸಂಶಯಪಿಶಾಚಿಯಾದ ಬಾದಶಹನಿಗೆ ಯಾರಮಾತು ನಂಬಬೇಕೆಂಬುದು ತಿಳಿಯದಹಾಗಾಯಿತು. ಅಷ್ಟರಲ್ಲೇ ತನ್ನ ರಾಜ್ಯದೊಳಗೆ ಸಿವಾಜಿಯ ಹಾವಳಿಯ ಹೆಚ್ಚಳದ ಸುದ್ದಿಯು ಎಡೆಬಿಡದೆ ಬರಲಾರಂಭಿಸಿದ್ದರಿಂದ, ಬಾದಶಹನು ಸಂತಾಪಗೊಂಡು ದಿಲೀರಖಾನನಿಗೆ ಛೀಹಾಕಿ, ಆದಿಲ್ಶಾಹಿಯ ದರಬಾರಿನಲ್ಲಿದ್ದ ತನ್ನ ವಕೀಲರನ್ನು ರಾಜಧಾನಿಗೆ ಕರಿಸಿಕೊಂಡನು. ಅವರು ಹೆದರಿ ಬಾದಶಹನ ಮುಂದೆ ದಿಲೀರಖಾನನು ತಮ್ಮನ್ನು ಮೋಸಗೊಳಿಸಿದನೆಂದು ಅವನನ್ನು ಬಾಯಿಗೆ ಬಂದಂತೆ ದೂರಿದರು!!!

ಅತ್ತ ಸಿವಾಜಿಯು ೨೦,೦೦೦ ದಂಡಿನೊಡನೆ ವಿಜಾಪುರದ ನೆರೆಯಲ್ಲಿ ಬಂದು ಆದಿಲ್ಶಹನ ಬೆಟ್ಟಿಯನ್ನು ಅಪೇಕ್ಷಿಸಿದನು (೩೧ ಅಕ್ಟೋಬರ).

ಸಿವಾಜಿಯು ೫೦೦ ಸಂಗಡಿಗರನ್ನು ಮಾತ್ರ ತೆಗೆದುಕೊಂಡು ಕೋಟೆ ಯೊಳಗೆ ಬರಬಹುದೆಂದು ಮಸೌದನು ಕಟ್ಟುಮಾಡಿದ್ದರಿಂದ, ಸಿವಾಜಿಗೆ ಏನೋ ಸಂಶಯ ಬಂದು, ಆ ವಿಚಾರವನ್ನು ತೊರೆದು, ತನ್ನ ದಳವಾಯಿ ಯಾದ ಆನಂದರಾಯನಿಗೆ ವಾಯುವ್ಯ ದಿಕ್ಕಿನಿಂದ ಮೊಗಲರ ರಾಜ್ಯವನ್ನು ಒಳನುಗ್ಗಲಿಕ್ಕೆ ಹೇಳಿ, ತಾನು ಈಶಾನ್ಯ ದಿಕ್ಕಿನಿಂದ ಒಳನುಗ್ಗಿದನು (೪ ನವಂಬರ). ಭೀಮಾ ನರ್ಮದಾಹೊಳೆಗಳ ನಡುವಿನ ಪ್ರದೇಶವನ್ನೂ ವರ್ಹಾಡ, ಖಾನದೇಶ, ಬಗ್ಲಾಣ ಪ್ರಾಂತಗಳನ್ನೂ ಮರಾಟರು ನಿರಾತಂಕ ವಾಗಿ ಸುಲಿದರು. ಈ ಸುಲಿಗೆಯಲ್ಲಿ ೧೨,೦೦೦ ಕುದುರೆಗಳೂ ಕೋಟ್ಯಾ ವಧಿ ರೂಪಾಯಿಗಳೂ ದೊರೆದವು. ಮೊಗಲರ ಆಶ್ರಯದಲ್ಲಿದ್ದ ಜಹಗೀರ ದಾರರು ತಮ್ಮ ದುರವಸ್ಥೆಯನ್ನು ಬಾದಶಹನಿಗೆ ತಿಳಿಸಿ ಗೋಳಿಟ್ಟರು. ಇದೇ ಸುಮಾರಿನಲ್ಲಿ ದಿಲೀರಖಾನನ ಪಾಳೆಯದಲ್ಲಿದ್ದ ಶಂಭುಜಿಯು ತಪ್ಪಿಸಿಕೊಂಡು ವಿಜಾಪುರಕ್ಕೆ ಹೋಗಿ ಅಲ್ಲಿಂದ ಪನ್ಹಾಳಕ್ಕೆ ತೆರಳಿದನು (೨೨ ನವಂಬರ). ಈ ಮೇರೆಗೆ ಅತೋ ಭ್ರಷ್ಟ ತತೋ ಭ್ರಷ್ಟನಾದ ದಿಲೀರನು ಸ್ವಾಭಾವಿಕವಾಗಿ ಕಂಗೆಟ್ಟನು!!!

ಮೆಣಸು ಹುಳಿತರೆ ಜೋಳಕ್ಕೆ ಸರಿಯಾದೀತೆ? ಎಂಬ ಗಾದೆಯನ್ನು ವಾಚಕರು ಕೇಳಿರಬಹುದು. ಶಂಭುಜಿಯು ಎಷ್ಟು ವ್ಯಸನಿಯೂ ದುಷ್ಟನೂ ಆದರೂ ದಿಲೀರಖಾನನಷ್ಟು ಕ್ರೂರನೂ ನಿರ್ದಯನೂ ಎಂದೂ ಆಗಲಾರನು. ಜೀಜಿಬಾಯಿಯು ತನ್ನ ಮಗನಲ್ಲಿ ಬಿತ್ತಿದ ಬೀಜಗಳು ಅವನ ನೆತ್ತರದಲ್ಲಿ ಮೊಳೆತಿದ್ದವು. ಆದ್ದರಿಂದ ಅವನಿಗೂ ದಿಲೀರಖಾನ ನಿಗೂ ಕೂಡಿನಡೆಯದಂತಾಯಿತು. ಅದು ಹೇಗೆಂದರೆ:—ಮೊಗಲರ ಸಾಮ್ರಾಜ್ಯದಲ್ಲಿ ಸಿವಾಜಿಯ ಹಾವಳಿಯು ಹೆಚ್ಚಾದ್ದರಿಂದ ಬಾದಶಹನು ಸಿಟ್ಟಿಗೆದ್ದು ಒಂದರಹಿಂದೊಂದು ನಿಷ್ಠುರವಾದ ಕಾಗದವನ್ನು ದಿಲೀರಖಾ ನನಿಗೆ ಬರೆಯತೊಡಗಿದನು. ಬಾದಶಹನು ಒಂದೇಸವನೆ ಚಿಟುಕು ಮುಳ್ಳು ಆಡಿಸತೊಡಗಿದ್ದರಿಂದಲೂ ಮುತ್ತಿಗೆ ಹಾಕಿ ವಿಜಾಪುರವನ್ನು ಹಿಡಿದುಕೊಳ್ಳುವುದು ಅಸಾಧ್ಯವೆಂದು ತೋರಿದ್ದರಿಂದಲೂ ದಿಕ್ಕೆಟ್ಟ ಖಾನನು ಸಿವಾಜಿಯನ್ನು ಮೊಗಲ ಸಾಮ್ರಾಜ್ಯದಿಂದ ಹೊರಗೆ ಹಾಕುವ

ಸಂಚಿಕೆಯನ್ನು ಹುಡುಕತೊಡಗಿದನು. ಈ ವಿಷಯವಾಗಿ ಶಂಭುಜಿ ಯನ್ನು ಆಲೋಚಿಸಲು ಅವನು ತನ್ನ ತಂದೆಯ ಕೋಟೆಗಳನ್ನು ಅರೆಕ್ಷ ಣದಲ್ಲಿ ಹಿಡಿದುಕೊಡುವೆನೆಂದು ಬಡಾಯಿಕೊಚ್ಚಿದನು. ದಿಲೀರಖಾನನು ಮಿರಜೆಯ ನಾಯಕನನ್ನು ತನ್ನ ಕಡೆಗೆ ಒಡೆಕೊಂಡು, ಶಂಭುಜಿಯ ಹುರಳಿಲ್ಲದ ಮಾತನ್ನು ನಂಬಿ, ತನ್ನ ದೊಡ್ಡ ತೋಪುಗಳನ್ನು ಬಾಹ್ಮನ ಹಳ್ಳಿಯಲ್ಲಿ ಬಿಟ್ಟು, ಮಿರಜಿ, ಪನ್ಹಾಳ ಪ್ರಾಂತಗಳನ್ನು ಒಳನುಗ್ಗುವುದಕ್ಕೆ ಹೊರಟನು (೧೪ ನವಂಬರ). ಅವನು ಮುಕ್ನಾಪುರ, ಜಾಲಗೇರಿ, ತಿಕೋಟಿಗಳನ್ನು ಅತಿಕ್ರೌರ್ಯದಿಂದ ಸುಲಿದು, ಹೆಂಗಸರ ಮಾನಭಂಗ ಮಾಡಿ, ೩,೦೦೦ ನಿರಪರಾಧಿಜನರನ್ನು ಸೆರೆಹಿಡಿದೊಯ್ದನು. ಮಾನಭಂಗದ ಹೆದರಿಕೆಯಿಂದ ತಿಕೋಟಿಯಲ್ಲಿ ನೂರಾರು ಮಂದಿ ಸಾಧ್ವಿಯರು ಬಾವಿ ಬಿದ್ದು ಪ್ರಾಣಕೊಟ್ಟರು. ಅಲ್ಲಿಂದ ಹೊರಟು ಆ ದುಷ್ಟನು ಹೊನವಾಡ, ತೆಲಸಂಗಿ ಊರುಗಳನ್ನು ಲೂಟಿಮಾಡಿ, ದೊಡ್ಡವ್ಯಾಪಾರದ ಸ್ಥಳವಾದ ಅಥಣಿಗೆ ಬಂದನು (೧೮ ನವಂಬರ). ದಿಲೀರಖಾನನು ಅಲ್ಲಿಯ ಪೇಟಿ ಯನ್ನು ಸುಟ್ಟು, ಜನರನ್ನು ಸೆರೆಹಿಡಿದು ದನಗಳನ್ನು ಮಾರುವಂತೆ ಅವ ರನ್ನು ಮಾರತೊಡಗಿದನು. ಈ ನೀಚತನವು ಶಂಭುಜಿಗೆ ಸೇರಲಿಲ್ಲ. ಅವನು ಜನರನ್ನು ಮಾರಕೂಡದೆಂದು ನಿರ್ದಾಕ್ಷಿಣ್ಯವಾಗಿ ದಿಲೀರಖಾನ ನಿಗೆ ಹೇಳಿದನು. ಆ ನೀಚ ಮ್ಲೇಂಛನು ತನ್ನ ಆಶ್ರಯಕ್ಕಿದ್ದ ಶಂಭುಜಿಯ ಮಾತನ್ನು ಕೇಳುವನೇ? ಎಂದೂ ಇಲ್ಲ. ಖಾನನು ತನ್ನ ಮನಸ್ಸಿಗೆ ಬಂದಂತೆ ಹಿಂದೂಜನರನ್ನು ಮಾರಿ ದುಡ್ಡು ಮಾಡಿದನು. ತನಗೆ ತೋರಿಸಿದ ಅವಮಾನವನ್ನೂ ತನ್ನ ಧರ್ಮದ ಅವಹೇಲನವನ್ನೂ ನೋಡಿ, ಶಂಭುಜಿಯ ಮನಸ್ಸು ಹೇಸಿತು. ಅವನಿಗೆ ಪಶ್ಚಾತ್ತಾಪ ಹುಟ್ಟಿತು. ತಾನು ಓಡಿ ಬಂದು ಮೊಗಲರ ಆಶ್ರಯದಲ್ಲಿ ನಿಂತುದು ದೊಡ್ಡ ತಪ್ಪಾ ಯಿತೆಂಬ ತಿಳಿವಳಿಕೆಯು ಅವನಲ್ಲಿ ಅಂಕುರಿಸಿತು. ಅವನು ತಾನು ಮಾಡಿದ ಪಿತೃದ್ರೋಹಕ್ಕೆ ಬಹಳವಾಗಿ ಹಳಹಳಿಸಿ, ಇನ್ನು ಮುಂದೆ ಅಲ್ಲಿ ಇರುವುದು ಸರಿಯಲ್ಲೆಂದೆಣಿಸಿ, ರಾತ್ರಿಯಲ್ಲಿ ಎಲ್ಲರು ಮಲಗಿದ ಬಳಿಕ ತನ್ನ ಸಂಗಡಿಗರೊಡನೆ ವಿಜಾಪುರಕ್ಕೆ ಓಡಿಹೋದನು (೨೦ ನವಂಬರ). ಮರುದಿವಸ ಖಾನನು ಅಥಣಿಯನ್ನು ಬಿಟ್ಟು ಐನಾಪುರಕ್ಕೆ ಹೊರಟನು.

ಹಾದಿಯಲ್ಲಿ ಶಂಭುಜಿಯು ತಪ್ಪಿಸಿಕೊಂಡ ಹೋದ ಸುದ್ದಿಯು ತಿಳಿದ ಕೂಡಲೆ ಗಾಬರಿಯಾಗಿ, ಮುಂದಿನ ಪ್ರಯಾಣವನ್ನು ನಿಲ್ಲಿಸಿ, ವಿಜಾಪುರದ ದಾರಿಯನ್ನು ಹಿಡಿದನು. ಬಾಹ್ಮನಹಳ್ಳಿಗೆ ಬಂದ ಬಳಿಕ ತನ್ನೊಬ್ಬ ವಕೀಲನನ್ನು ಶಂಭುಜಿಯನ್ನು ಬೇಡಲಿಕ್ಕೆ ಮಸೌದನ ಬಳಿಗೆ ಕಳುಹಿದನು (೨೮ ನವಂಬರ). ಈ ಕಾಲಕ್ಕೆ ದಿಲೀರಖಾನನ ಕಾಟ ತಪ್ಪಿಸಿಕೊಳ್ಳುವುದಕ್ಕೆ ಮಸೌದನಿಗೆ ಒಂದು ಉತ್ತಮ ಸಂಧಿಯು ದೊರೆಯಿತು. ಮಸೌದನು ತನ್ನನ್ನು ದಿಲೀರಖಾನನಿಗೆ ಒಪ್ಪಿಸುವ ವಿಚಾರದಲ್ಲಿದ್ದ ಸುದ್ದಿಯು ತಿಳಿದ ಕೂಡಲೆ, ಶಂಭುಜಿಯು ಅಲ್ಲಿದ್ದ ಮರಾಟರ ಸಹಾಯದಿಂದ ತಪ್ಪಿಸಿಕೊಂಡು ಓಡಿಹೋಗಿ, ಪನ್ಹಾಳದ ಕೋಟೆಯನ್ನು ಸೇರಿದನು (೨ ದಶಂಬರ). ಇಂತು ಬಯಕೆಗೆಟ್ಟ ದಿಲೀರಖಾನನು ಸಾವಳಗಿ, ಕಾಖಣಕಿ, ಮನಗೋಳಿ ಮುಂತಾದ ಊರುಗಳನ್ನು ಸುಲಿದು, ವಿಜಾಪುರದ ಸುತ್ತಲಿದ್ದ ಎಲ್ಲ ತೋಟಗಳನ್ನು ಹಾಳುಗೆಡವಿ, ವಿಜಾಪುರದ ಈಶಾನ್ಯಕ್ಕಿದ್ದ ಅಲ್ಲಿಯಾಬಾದ ಎಂಬಲ್ಲಿ ಪಾಳೆಯ ಹಾಕಿಕೊಂಡು ನಿಂತನು (೪ ದಶಂಬರ).

ಇನ್ನು ಮುಂದೆ ದಿಲೀರಖಾನನು ಏನು ಮಾಡಿದನೆಂಬುದು ನಮ್ಮ ಚರಿತ್ರೆಗೆ ಸಂಬಂಧಿಸಿರುವದಿಲ್ಲವಾದ್ದರಿಂದ ಅದನ್ನು ಇಲ್ಲಿ ಬರೆಯಲಾರೆವು. ಶಹಾಲಮ್ಮನು ದಿಲೀರನಿಗೆ ವಿಜಾಪುರದ ಮುತ್ತಿಗೆಯನ್ನೆಬ್ಬಿಸಿ ದಿಲ್ಲಿಗೆ ಹೋಗಬೇಕೆಂದು ಕಟ್ಟಪ್ಪಣೆಯನ್ನಿತ್ತು, ಒಪ್ಪಂದದ ಮಾತುಕಥೆಗಳನ್ನು ಮಸೌದನೊಡನೆ ನಡಿಸಿದನು. ಬಾದಶಹನಿಗೆ ಮೋರೆ ತೋರಿಸುವುದಕ್ಕೆ ನಾಚಿ ದಿಲೀರನು ದಿಲ್ಲಿಗೆ ಹೋಗದೆ, ಆದವಾನಿ ಪ್ರಾಂತವನ್ನೊಳನುಗ್ಗಿ, ಊರುಗಳನ್ನು ಸುಲಿದು ಸುಟ್ಟು, ಜನರನ್ನು ಮಾರಿ ದುಡ್ಡುಕೂಡಿಸುತ್ತ ಹೋಗಿ ಬೇಡರ ಮುಖ್ಯಸ್ಥಳವಾದ ಸಗರ ಕೋಟೆಯನ್ನು ಮುತ್ತಿದನು. ಆ ಕೋಟೆಯು ಕಯ್ಸೇರಿದ ಬಳಿಕ ಬೇಡರು ಒಟ್ಟುಗೂಡಿ ಅವನ ದಂಡಿನ ಮೇಲೆಬಿದ್ದು, ಅವನನ್ನು ಪೂರ್ಣವಾಗಿ ಸೋಲಿಸಿದರು (೨೧ ಫೆಬ್ರುವರಿ ೧೬೮೦). ತನ್ನ ದಂಡಿನವರೇ ತನ್ನ ಮಾತನ್ನು ಕೇಳದ್ದರಿಂದ ದಿಲೀರನು ನಿರುಪಾಯನಾಗಿ ದಿಲ್ಲಿಗೆ ಹೊರಟನು.

---

## ೧೦ ನೆಯ ಪ್ರಕರಣ

### ಕರ್ನಾಟಕದ ದಾಳಿ (೧೬೭೭, ೧೬೭೮).

ದೈವಗತಿಯು ಅತಿ ವಿಚಿತ್ರವಾದುದು. ನಮ್ಮ ಪೂಜ್ಯತಮ ಜನನಿಯಾದ ಕರ್ನಾಟಕಮಾತೆಯ * ಸದ್ಯದ ಛಿನ್ನವಿಚ್ಛಿನ್ನವಾದ ದುರವಸ್ಥೆಯನ್ನು ನೋಡಿ ಯಾವ ಕಟ್ಟಭಿಮಾನಿಯಾದ ಕನ್ನಡಿಗನು ಕಣ್ಣೀರು ಸುರಿಸಲಿಕ್ಕಿಲ್ಲ? ಕನ್ನಡ ತಾಯಿಯೇ, ದಯವಿಟ್ಟು ಕನಿಕರಪಟ್ಟು ನಮ್ಮನ್ನು ಕ್ಷಮಿಸು. ನಾವು ನಿಜವಾಗಿ ನಿರಪರಾಧಿಗಳು; ನಿನ್ನ ಪಾದಾರವಿಂದದ ಸೇವಕರು; ಮಾತೃಭಕ್ತಿಯು ನಮ್ಮಲ್ಲಿ ತುಂಬಿ ತುಳುಕುತ್ತಿದೆ; ನಿನ್ನ ವಿದ್ರೂಪವನ್ನು ನೋಡಿ, ಮುಂದಿಗೆ ಮೋರೆ ತೋರಿಸುವುದಕ್ಕೆ ನಮಗೆ ನಾಚಿಕೆ ಬರುತ್ತದೆ; ನಿನ್ನ ದೀನಾವಸ್ಥೆಯನ್ನು ನೋಡಿ ನಮ್ಮ ಮನಸ್ಸು ಮರಗುತ್ತದೆ, ಹೊಟ್ಟೆ ಕಲಕಲಿಸುತ್ತದೆ, ಜೀವವು ಚುರಚುರಿಸುತ್ತದೆ, ಒಡಲಲ್ಲಿ ಸಂಕಟ ಏಳುತ್ತದೆ. ಏನು ಮಾಡೋಣ? ನಿನ್ನ ನೋವನ್ನು ನೋಡಿ ಮನಸ್ಸಿನಲ್ಲಿ ವಿಲಿವಿಲಿ ಒದ್ದಿಯಾಡುತ್ತೇವೆ, ಚಡಪಡಿಸುತ್ತೇವೆ. ನಿನ್ನ ವಿಚ್ಛಿನ್ನವಾದ ಅವಯವಗಳನ್ನು ಹೇಗೆ ಸರಿಯಾಗಿ ನಿನ್ನ ದೇಹಕ್ಕೆ ಹೊಂದಿಸಿ ಕಟ್ಟಿ, ಕಾಸಿ, ಗಾಯವನ್ನು ಮಾಯಿಸಬೇಕೆಂಬ ಹವಣಿಕೆಯಲ್ಲಿ ಹಗಲಿರುಳುಗಳನ್ನು ಕಳೆಯುತ್ತೇವೆ. ನಿನ್ನ ದುಃಖವನ್ನು ಹೋಗಲಾಡಿಸುವ ಪ್ರಯತ್ನದಲ್ಲಿ ನಿನ್ನ ವೀರರಾದ ಮಕ್ಕಳು ಊಟ, ನಿದ್ದೆ, ನೀರಡಿಕೆಗಳನ್ನೆಲ್ಲ ಮರೆತಿರುತ್ತಾರೆ. ಆದರೆ ಕಾಲವು ಅನುಕೂಲವಿಲ್ಲ. ರಾಜಸತ್ತೆಯು ಪರಕೀಯರ ಕಯ್ಸೇರಿದ್ದರಿಂದ ಅವರಿಗೆ ನಮ್ಮ ದುಃಖದ ಆಳವು ತಿಳಿಯಲೊಲ್ಲದು. ಇಂದಿಲ್ಲ ನಾಳೆ ಈ ಪರಕೀಯ ಅಧಿಕಾರಿಗಳನ್ನು ಒಡಂಬಡಿಸಿ ನಿನ್ನ ತುಂಡಾದ ಅವಯವಗಳನ್ನು ಸರಿಯಾಗಿ ಒಟ್ಟುಗೂಡಿಸಬಹುದೆಂಬ ಆಶೆಯು ನಮ್ಮಲ್ಲಿನ್ನೂ ನೆಲೆಗೊಂಡಿರುತ್ತದೆ. ತಾಯಿ, ಸ್ವಲ್ಪ ತಾಳು. ನೋವಿನಿಂದುಂಟಾದ ಸಿಟ್ಟಿನ ಕಯ್ಯಲ್ಲಿ ಬುದ್ಧಿಯನ್ನು ಕೊಡಬೇಡ.

---

* ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ ॥

ತಾಯಿ, ಸದ್ಯದ ವಿಪರೀತವಾದ ದುಃಖದಿಂದ ನಿನ್ನ ಬುದ್ಧಿಯು ಭ್ರಮಿಸಿರುತ್ತದೇನು? ನಿನ್ನ ಮಕ್ಕಳಾದ ಕನ್ನಡಿಗರೆಲ್ಲರು ಹೇಡಿಗಳೂ ಕೃತಘ್ನರೂ ಆಗಿರುತ್ತಾರೆಂದು ಭಾವಿಸುವೆಯಾ? ಹಾಗೆ ನಿನ್ನ ತಿಳಿವಳಿಕೆಯಾಗಿದ್ದರೆ ಅದು ತೀರ ತಪ್ಪು. ನೀನು ಎಂದು ಹುಟ್ಟಿದೆಯೋ ನಮಗೆ ಗೊತ್ತಿಲ್ಲ. ೨,೧೦೦ ವರ್ಷಗಳ ಹಿಂದೆ ನೀನು ಯವ್ವನಾವಸ್ಥೆಯಲ್ಲಿ ಇದ್ದಿ ಎಂದು ಕೆಲ ಶೋಧಕರು ಕಂಡುಹಿಡಿದಿದ್ದಾರೆ. ೯ ನೆಯ ಶತಮಾನದಲ್ಲಿ ದೃಢಕಾಯಳಾಗಿ ಗೋದಾವರಿಯಿಂದ ಕಾವೇರಿಯವರೆಗೆ ಹಬ್ಬಿಕೊಂಡಿದ್ದೆಂದು ನೃಪತುಂಗ ಸಾರ್ವಭೌಮನು ತನ್ನ ಕವಿರಾಜಮಾರ್ಗವೆಂಬ ಗ್ರಂಥದಲ್ಲಿ ಬಣ್ಣಿಸಿಲ್ಲವೇ? ಆ ಕಾಲಕ್ಕೆ ಕಿಸುವೊಳಲು, ಕೊಪ್ಪಣನಗರ, ಪುಲಿಗಿರೆ (ಲಕ್ಷ್ಮೇಶ್ವರ) ಒಂಕುಂದಗಳು ನಿನ್ನ ಕಂಠಾಭರಣಗಳಾಗಿದ್ದಿಲ್ಲವೇ?* ಮುಂದೆ ೧೪ ನೆಯ ಶತಮಾನದ ಆರಂಭದಲ್ಲಿ ನಿನ್ನ ವೀರಪುತ್ರರು ನಿನ್ನನ್ನು ಹೊಗಳಿ, ನಿನ್ನ ಕೀರ್ತಿಯನ್ನು ದಿಗ್ದೇಶಗಳಲ್ಲೆಲ್ಲಾ ಹಬ್ಬಿಸಲಿಲ್ಲವೇ? ದೇವಾಂಶಸಂಭೂತನೂ ಮಹಾ ತಪಸ್ವಿಯೂ ಸರ್ವಜ್ಞನೂ ಸಾಧುಸತ್ಪುರುಷನೂ ಆದ ವಿದ್ಯಾರಣ್ಯನೆಂದು ಹೆಸರಾದ ನಿನ್ನ ಮಗನು ನಿನ್ನ (ಕರ್ನಾಟಕದ) ಸಿಂಹಾಸನವನ್ನು ಸ್ಥಾಪಿಸಲಿಲ್ಲವೇ? ೧೪ ನೆಯ ಶತಮಾನದ ಮಧ್ಯಭಾಗದಿಂದ ೧೬ ನೆಯ ಶತಮಾನದ ನಡುಭಾಗದವರೆಗೆ ನಿನ್ನ ಸೇವೆಯನ್ನು ತನುಮನಧನದಿಂದ ಮಾಡಿ ನಿನ್ನ ಯಶಸ್ಸನ್ನು ನವಖಂಡಪೃಥ್ವಿಯಲ್ಲಿ ಹರವಲಿಲ್ಲವೇ? ಆ ಕಾಲದ ನಿನ್ನ ವೀರಸುತರು ತಮ್ಮ ನೆತ್ತರದಿಂದ ನಿನ್ನ ಅಭಿಷೇಕವನ್ನು ಮಾಡಲಿಲ್ಲವೇ! ಇಡಿ ಕರ್ನಾಟಕದಲ್ಲಿ ನಿನ್ನ ಮಕ್ಕಳು ನಿನ್ನ ಸಲುವಾಗಿ ತಮ್ಮ ರಕ್ತವನ್ನು ಸೋರಿಸದ ಒಂದು ಯವಪ್ರಾಯವಾದ ಎಡೆಯಾದರೂ ದೊರೆಯುವ ಸಂಭವವಿಲ್ಲ. ನಿನ್ನ ಸುತರಾದ ಕನ್ನಡಕಬ್ಬಿಗರು ಸಾವಿರಾರು ವರ್ಷಗಳಿಂದ ನಿನ್ನ ಕೀರ್ತಿ

---

* ಕಾವೇರಿಯಿಂದಮಾ ಗೋ। ದಾವರಿವರಮಿರ್ಪ ನಾಡದಾ ಕನ್ನಡದೊಳ್॥
ಭಾವಿಸಿದ ಜನಪದಂ ವಸು। ಧಾವಳಯವಿಲೀನವಿಶದವಿಷಯವಿಶೇಷಂ॥
ಅದರೊಳಗಂ ಕಿಸುವೊಳಲಾ। ವಿದಿತಮಹಾಕೊಪಣನಗರದಾ ಪುಲಿಗೇರಿಯಾ॥
ಸದಭಿಸ್ತುತಮಪ್ಪೊಂಕುಂ। ದದ ನಡುವಣನಾಡೆ ನಾಡೆ ಕನ್ನಡದ ತಿರುಳ್॥
(ಕವಿರಾಜಮಾರ್ಗ).

ಯನ್ನು ಮನಮುಟ್ಟಿ ಹೊಗಳುತ್ತ ಬಂದಿಲ್ಲವೇ? ಇತ್ತಕಡೆಗೆ ಅಂದರೆ ೧೭, ೧೮, ೧೯ ಶತಮಾನಗಳಲ್ಲಿ ಮಾತ್ರ ನಿನ್ನ ಮಕ್ಕಳಾದ ಕನ್ನಡಿಗರು ನಿನ್ನ ಸೇವೆಯನ್ನು ಸರಿಯಾಗಿ ಮಾಡಲಿಲ್ಲೆಂಬ ಮಾತು ನಿಜವಾಗಿರುತ್ತದೆ. ತಾಯಿಯೇ ಕ್ಷಮಿಸು. ಈ ಕಾಲದ ಕನ್ನಡಿಗರು ಬುದ್ಧಿಪೂರ್ವಕವಾಗಿ ನಿನ್ನ ಸೇವೆಯನ್ನು ಬಿಟ್ಟಿಲ್ಲ. ವಿಜಯನಗರ ಸಾಮ್ರಾಜ್ಯವನ್ನು ಹಾಳುಗೆಡವಿದ ಕ್ರೂರಯವನರ ಬಡತದಿಂದ ನೂರು ವರ್ಷ ಅವರು ಮೈಮರೆದು ಎಚ್ಚರದಪ್ಪಿದರು. ೧೯ ನೆಯ ಶತಮಾನದ ಅಂತ್ಯಭಾಗದಲ್ಲಿ ಅವರು ಚೇತರಿಸಿಕೊಂಡು ಎಚ್ಚರಾಗುವಷ್ಟರಲ್ಲಿ, ಮೊಗಲ ಮರಾಟರ ಹಾವಳಿಯು ಮತ್ತೆ ಅವರನ್ನು ಎಚ್ಚರಗೆಡಿಸಿತು. ಈಗತಾನೇ ನಾವು ಎಚ್ಚರುಳ್ಳವರಾಗಿ ನಿನ್ನ ಸೇವೆಯನ್ನು ಮಾಡಲಿಕ್ಕೆ ಟೊಂಕ ಕಟ್ಟಿದ್ದೇವೆ. ಪ್ರಿಯಜನನಿಯೇ ನಮ್ಮನ್ನು ದಯವಿಟ್ಟು ಕ್ಷಮಿಸಿ ಮುಂದಕ್ಕೆ ಕರೆದು ಮುದ್ದಾಡು. ಸರ್ವಥಾ ನಾವು ನಿರಪರಾಧಿಗಳು. ನಮ್ಮ ಮೇಲೆ ಮುನಿಯ ಬೇಡ. ಇಷ್ಟು ದಿವಸ ಎಚ್ಚರ ತಪ್ಪಿದ್ದರಿಂದ ನಾವು ನಿಜವಾಗಿ ನಿನ್ನ ಸೇವೆಯನ್ನು ಮಾಡಲು ಅಸಮರ್ಥರಾಗಿದ್ದೆವು. ನಮ್ಮನ್ನು ಹರಿಸು; ನಮಗೆ ಆಶೀರ್ವಾದಮಾಡು. ಪ್ರಾಣ ಇರುವ ವರೆಗೆ ನಾವು ನಿನ್ನ ಸೇವೆಯನ್ನು ಅತಿಭಕ್ತಿಯಿಂದಲೂ ಪ್ರೀತಿಯಿಂದಲೂ ಉತ್ಸಾಹದಿಂದಲೂ ಮನಮುಟ್ಟಿ ಮಾಡುವೆವು.

ತಾಯೇ! ನನಗೊಂದು ಸಂಶಯವು ಬಂದಿರುತ್ತದೆ. ಅದನ್ನು ನಿನ್ನ ಹೊರತು ಬೇರೆಯವರಾರೂ ಪರಿಹರಿಸುವಂತಿಲ್ಲ. ಆದ್ದರಿಂದ ಅದನ್ನು ನಿನ್ನ ಮುಂದೆ ಇಡುತ್ತೇನೆ. ನಮ್ಮ ಆರೈಕೆಯಿಂದ ನಿನ್ನ ಅಸ್ವಸ್ಥತೆಯು ಹೋದ ಬಳಿಕ, ನೀನು ಅರೋಗದೃಢಕಾಯಳಾದ ತರುವಾಯ ಆ ಸಂಶಯವನ್ನು ದೂರಮಾಡು. ಅದೇನಂದರೆ:—ಮರಾಟಿ ಉರಿಯಾ ಆಂಧ್ರ ತಮಿಳ ಮಲೆಯಾಳ ನಾಡುಗಳಿಗೂ ನಿನಗೂ ಸಂಬಂಧವೇನು? ಕೆಲಪಾಶ್ಚಿಮಾತ್ಯ ಪಂಡಿತರು ಮರಾಟಿಗೂ ನಿನಗೂ ರಕ್ತಸಂಬಂಧವಿಲ್ಲೆಂತಲೂ ಆಂಧ್ರ ಉರಿಯಾ ದ್ರವಿಡ ಮಲೆಯಾಳಗಳು ನಿನ್ನ ಸಹೋದರಿಯರೆಂತಲೂ ಹೇಳುತ್ತಾರೆ. ಈ ಹೇಳಿಕೆಯಿಂದ ನನ್ನ ಮನಸ್ಸಿನ ಸಮಾಧಾನವಾಗಲೊಲ್ಲದು. ಏಕೆಂದರೆ ನೃಪತುಂಗನು ಗೋದಾವರಿಯ ವರೆಗೆ ಕರ್ನಾಟ

ಕವು ಹಬ್ಬಿತ್ತೆಂದು ಹೇಳುತ್ತಿದ್ದು ಗೋದಾವರಿಯ ದಕ್ಷಿಣದಲ್ಲಿದ್ದ ದೊಡ್ಡ ಪ್ರದೇಶವು ಮರಾಟೆ ನಾಡಿನೊಳಗೆ ಹೇಗೆ ಸೇರಿತೆಂಬುದು ನನಗೆ ತಿಳಿಯ ಲೊಲ್ಲದು. ಇದಲ್ಲದೆ ಏನೂ ಸಂಬಂಧವಿಲ್ಲದಿದ್ದರೆ ಮರಾಟೆ ನುಡಿಯಲ್ಲಿ ತೃತಿಯಾಂಶಕ್ಕಿಂತ ಹೆಚ್ಚು ಶಬ್ದಗಳು ಕನ್ನಡದವಾಗಿರಲಿಕ್ಕೆ ಕಾರಣ ವೇನು? ಉರಿಯಾ, ತೆಲಗು, ತಮಿಳ, ಮಲೆಯಾಳ ಪ್ರಾಂತಗಳು ನಿನ್ನ ಅಕ್ಕತಂಗಿಯರಾಗಿದ್ದರೆ, ಯವನರೂ ಮರಾಟರೂ ಫ್ರೆಂಚರೂ ಪೋರ್ತುಗೀಸರೂ ಇಂಗ್ಲೀಷರೂ ಆ ಪ್ರಾಂತಗಳನ್ನು ನಿನ್ನ ಹೆಸರಿನಿಂದ ಏಕೆ ಕರೆದರು? ಈಗ ಕರ್ನಾಟಕವೆಂದು ಕರೆಯಲ್ಪಡುವ ಪ್ರಾಂತವು ಆಂಧ್ರ ಪ್ರದೇಶವಾಗಿರುತ್ತದೆ; ದಕ್ಷಿಣ ಮಹಾರಾಷ್ಟ್ರವೆಂದು ಹೋದ ಶತಮಾನದಲ್ಲಿ ಕರೆಯಲ್ಪಟ್ಟ ನಾಡು ಶುದ್ಧಕರ್ನಾಟವಾಗಿರುತ್ತದೆ. ಈಗ ಲಾದರು ಕರ್ನಾಟಕದಲ್ಲಿ ಹಾಯುವ ಉಗೆಬಂಡಿಗೆ ದಕ್ಷಿಣ ಮಹಾ ರಾಷ್ಟ್ರದ ಉಗೆಬಂಡಿಯೆಂದು ಸುಳ್ಳು ಹೆಸರನ್ನು ಕೊಟ್ಟಿರುತ್ತಾರೆ!!! ಇದೇನೋ ನನಗೆ ಸೋಜಿಗವಾಗಿ ತೋರುತ್ತದೆ. ಈ ಆಗಂತುಕ ಬದ ಲಾವಣೆಗಳ ಅರ್ಥವೇ ನನಗೆ ಪರಿಷ್ಕಾರವಾಗಿ ತಿಳಿಯಲೊಲ್ಲದು. ಪ್ರಿಯ ಮಾತೆಯೇ ನಮ್ಮ ಅಜ್ಞಾನಕೃತಾಪರಾಧಗಳನ್ನು ಕ್ಷಮಿಸಿ, ನಮ್ಮನ್ನು ನಗೆಗೂಡಿ ನೋಡಿ, ನಮ್ಮಾ ಸಂದೇಹವನ್ನು ಆದಷ್ಟು ಬೇಗನೆ ದೂರ ಮಾಡಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ.

ಮೇಲೆ ವಿವರಿಸಿದ ಮೇರೆಗೆ ವಿದ್ರೂಪವನ್ನು ಹೊಂದಿದ ಕರ್ನಾಟ ಕದ ಮೇಲೆ ದಾಳಿಯನ್ನು ಮಾಡಬೇಕೆಂದು ನಮ್ಮ ಚರಿತ್ರನಾಯಕನು ನಿಶ್ಚಯಿಸಿದನು (೧೬೭೬). ಈ ದಾಳಿಯ ಮುಖ್ಯಕಾರಣಗಳು ಎರಡಾ ಗಿದ್ದವು—(೧) ರಾಜ್ಯಾಭಿಷೇಕದಿಂದ ಸಿವಾಜಿಯ ಬೊಕ್ಕಸವು ಬರಿದಾ ಗಿತ್ತೆಂದು ಹಿಂದೆ ಹೇಳಿರುತ್ತೇವಷ್ಟೆ. ಕರ್ನಾಟಕದ ದಂಡಯಾತ್ರೆಯಿಂದ ತನ್ನ ಬಂಡಾರವನ್ನು ತುಂಬಬೇಕೆಂಬ ಹಪಾಪಿಯು (ಅತ್ಯಾಶೆ) ಸಿವಾಜಿ ಯಲ್ಲಿ ಹುಟ್ಟಿತ್ತು. (೨) ಶಹಾಜಿಯು ಸತ್ತಂದಿನಿಂದ (೧೬೬೪) ತನ್ನ ಪಿತ್ರಾರ್ಜಿತ ಆಸ್ತಿಯಾದ ಕರ್ನಾಟಕದ ಜಹಗೀರಿನ ಅರ್ಧಪಾಲನ್ನು ತನ್ನ ಮಲತಮ್ಮನಾದ ವೆಂಕೋಜಿಯಿಂದ ತೆಗೆದುಕೊಳ್ಳಬೇಕೆಂದು ಸಿವಾ

ಜಿಯು ಹವಣಿಸುತ್ತಿದ್ದನು. ಬೇರೆ ತೊಂದರೆಗಳ ಮೂಲಕ ಅವನಿಗೆ ೨ ವರ್ಷ ಬಿಡುವು ದೊರೆತಿದ್ದಿಲ್ಲ. ಈಗ ಎಲ್ಲ ಅನುಕೂಲತೆಗಳುಂಟಾದವು.

ರಾಜ್ಯಾಭಿಷೇಕದಿಂದಲೂ ಆದಿಲ್ಶಾಹಿ ಮೊಗಲಬಾದಶಾಹಿಯೊಡನೆ ಹೂಡಿದ ಯುದ್ಧದಿಂದಲೂ ಫೋಂಡಾದ ಮುತ್ತಿಗೆಯಿಂದಲೂ ಸ್ವಾದಿಯ ಮೇಲೆ ಮಾಡಿದ ದಂಡಯಾತ್ರೆಯಿಂದಲೂ ೧೬೭೬ ರ ಆರಂಭದಲ್ಲಿ ಬಹು ದಿನ ಅನುಭೋಗಿಸಿದ ಅನಾರೋಗ್ಯದಿಂದಲೂ ಸಿವಾಜಿಯ ಬೊಕ್ಕಸವು ಬರಿದಾಗಿತ್ತು. ಆದ್ದರಿಂದ ಅದನ್ನು ಮತ್ತೆ ತುಂಬ ಬೇಕೆಂಬ ಹಪಾಪಿಯು ಅವನಲ್ಲಿ ಹುಟ್ಟಿತು. ಮೊಗಲಾಯಿ ಆದಿಲ್ಶಾಹಿಯ ಪಟ್ಟಣಗಳನ್ನು ಈ ಮೊದಲೇ ಎರಡು ಮೂರು ಸಾರಿ ಮರಾಟರು ಸುಲಿದುದರಿಂದ ಅವು ನಿಸ್ಸಾರ ವಾಗಿದ್ದವು. ವಿಜಾಪುರದ ಸುತ್ತಲಿನ ಪ್ರದೇಶವು ಸಂಪತ್ತಿಯುಳ್ಳದ್ದಾಗಿತ್ತು. ಆದರೆ ಅದರ ಮೇಲೆ ದಂಡೆತ್ತಿಹೋದರೆ ಅವನು ತನ್ನ ಕಾಲಿನ ಮೇಲೆ ತಾನೇ ಕಲ್ಲು ಕೆಡವಿಕೊಂಡಂತಾಗುವ ಭಯವಿತ್ತು. ಏಕೆಂದರೆ ಆ ಕಾಲಕ್ಕೆ ತಮ್ಮತಮ್ಮೊಳಗೆ ಜಗಳಾಡುತ್ತಿದ್ದ ಆದಿಲ್ಶಾಹಿ ಸರದಾರರು ಅವನ ದಾಳಿಯ ಭಯದಿಂದ ಒಟ್ಟುಗೂಡಿ ಆದಿಲ್ಶಾಹಿಗೆ ಹೆಚ್ಚು ಜೀವಕಳೆ ತುಂಬುವ ಸಂಭವವಿತ್ತು. ಆದ್ದರಿಂದ ದೂರದರ್ಶಿಯಾದ ನಮ್ಮ ಚರಿತ್ರನಾಯಕನು ಆದಿಲ್ಶಾಹಿಯ ಗೊಡವೆಗೆ ಹೋಗುವ ವಿಚಾರವನ್ನು ತೊರೆದನು. ಇನ್ನು ಉಳಿದ ಭಾಗವು ಕರ್ನಾಟಕವಾಗಿತ್ತು. ಈ ಪ್ರಾಂತವು ಆದಿಲ್ಶಾಹಿಗೆ ಪರಂಪರೆಯಾಗಿ ಸೇರಿದ್ದರೂ ಆ ದರಬಾರಿನ ಆಡಳಿತಕ್ಕೆ ನೇರಾಗಿ ಒಳಗಾಗಿದ್ದಿಲ್ಲ. ಅದು ಆದಿಲ್ಶಾಹಿಯ ಹಲವು ಸರದಾರರೊಳಗೆ ಜಹಗೀರಾಗಿ ಹರಿದು ಹಂಚಲ್ಪಟ್ಟಿತ್ತು. ಈ ಸರದಾರರೊಳಗೆ ಸಿವಾಜಿಯ ಮಲತಮ್ಮನಾದ ವೆಂಕೋಜಿಯು ಒಬ್ಬನಾಗಿದ್ದನು. ಈ ಸರದಾರರು ಸ್ವಾರ್ಥಪರರೂ ಅದೂರದೃಷ್ಟಿಗಳೂ ಆದ್ದರಿಂದ ಒಟ್ಟುಗೂಡಿ ಮರಾಟರನ್ನು ಎದುರಿಸುವಷ್ಟು ನೈತಿಕಬಲವುಳ್ಳವರಾಗಿದ್ದಿಲ್ಲ. ಇದಲ್ಲದೆ ಮುತ್ಸದ್ದಿಯೂ ಪ್ರತಿಭಾಶಾಲಿಯೂ ರಾಜತಂತ್ರನಿಪುಣನೂ ಆದ ಒಬ್ಬ ಕನ್ನಡಿಗನನ್ನು ನಮ್ಮ ಚರಿತ್ರನಾಯಕನು ತನ್ನ ಕಡೆಗೆ ಒಡೆಕೊಂಡಿದ್ದನು. ಇವನೇ ವೆಂಕೋಜಿರಾಯನ ಮಂತ್ರಿಯು. ಇವನ ಹೆಸರು ರಘುನಾಥ ನಾರಾಯಣ ಹನುಮಂತೆ.

ನಮ್ಮ ತಾಯ್ನಾಡಾದ ಮುದ್ದು ಕರ್ನಾಟಕವು ಇತ್ತಲಾಗಿ ನೂರಾರು ವರ್ಷಗಳಿಂದ ಬಡಪ್ರಾಂತವಾಗತೊಡಗಿದ್ದರೂ ಪೂರ್ವಕಾಲದಿಂದ ಸಂಪತ್ತಿಯು ತವರ್ಮನೆಯಾಗಿ ಮೆರೆಯುತ್ತಿತ್ತೆಂದು ಧಾರಾಳವಾಗಿ ಹೇಳಬಹುದು. ಮೊದಲು ಇಲ್ಲಿ ಬಂಗಾರದ ಹೊಗೆ ಹಾಯುತ್ತಿತ್ತೆಂದು ದಂತಕಥೆಯುಂಟು. ಇಲ್ಲಿಯ ಭೂಮಿಯು ಫಲವತ್ತಾದ್ದರಿಂದಲೂ ಜನರು ಮಿತವ್ಯಯಿಗಳಾದ್ದರಿಂದಲೂ ಹಿಂದಿನ ಕಾಲದಲ್ಲಿ ಪ್ರತಿವರ್ಷ ಹಣವು ಕೂಡಿ ಬೀಳುತ್ತಿತ್ತು. ಬಹುಬುನಾದಿ (ಅನಾದಿ) ಕಾಲದಿಂದ ಆಫ್ರಿಕಾ ಯೂರೋಪಖಂಡದ ವ್ಯಾಪಾರಿಗಳು ಇಲ್ಲಿಂದ ಅರಿವೆಗಳನ್ನೂ ಮೆಣಸು ಏಲಕ್ಕಿ ಮುಂತಾದ ಭೂಮಿಯ ಹುಟ್ಟುವಳಿಗಳನ್ನೂ ಕೊಂಡೊಯ್ಯುತ್ತಿದ್ದುದರಿಂದಲೂ ಇಲ್ಲಿ ಹಲವು ತರದ ಕಣಿಗಳಿದ್ದುದರಿಂದಲೂ ಪ್ರಜಾರಂಜನವೇ ಮುಖ್ಯಧರ್ಮವಾಗಿದ್ದ ಸರಕಾರವು ಇಲ್ಲಿ ನೆಲೆಗೊಂಡುದರಿಂದಲೂ ಕರ್ನಾಟಕದ ಸಂಪತ್ತು ವರ್ಷವರ್ಷಕ್ಕೆ ಬೆಳೆದು ಪುಂಡಪರರಾಜರ ಲೋಭವನ್ನು ಹೆಚ್ಚಿಸುತ್ತಿತ್ತು. ಸಮುದ್ರಗುಪ್ತ, ಅರಬಸ್ಥಾನದವರು, ಮಲಿಕ ಕಾಪುರ, ಮಿರಜುಮ್ಲಾ ಈ ದಾಳಿಗಾರರು ಇಲ್ಲಿಂದ ಹೇರಳ ಹಣವನ್ನು ಒಯ್ದರು. ೧೭ ನೆಯ ಶತಮಾನದ ಅಂತ್ಯದಲ್ಲಿ ಮಹಮ್ಮದ ಆದಿಲ್ಶಹಾ, ಸಿವಾಜಿ, ನಸರತ್ತಜಂಗ ಇವರೆಲ್ಲರು ಈ ದುರ್ದೈವಿಯಾದ ಕರ್ನಾಟಕವನ್ನು ಮನಬಂದಂತೆ ಸುಲಿದರು. ಇಷ್ಟು ಮಂದಿ ದುಷ್ಟರು ಧನಲೋಭದಿಂದ ದಾಳಿ ಮಾಡಿ ಇದ್ದುದನೆಲ್ಲ ದೋಚಿಕೊಂಡು ಹೋದರೂ ದುಷ್ಟನಾದ ಅವರಂಗಜೇಬ ಬಾದಶಹನ ಧನಾಶೆಯನ್ನು ಹೆಚ್ಚಿಸುವಷ್ಟು ದ್ರವ್ಯವು ನಮ್ಮ ತಾಯ್ನಾಡಿನಲ್ಲಿ ಉಳಿದಿತ್ತೆಂದು ತೋರುತ್ತದೆ. ಏಕಂದರೆ ೧೭೦೩ ರಲ್ಲಿ ಅವರಂಗಜೇಬನು ತನ್ನ ದಕ್ಷಿಣದ ದಳವಾಯಿಗೆ ಬರೆದುದೇನಂದರೆ:— ಕರ್ನಾಟಕದಲ್ಲಿ ಬಹಳ ದಿವಸದಿಂದ ಹೂಳಿಟ್ಟ ಹಣವು ಹೇರಳವಾಗಿರುತ್ತದೆಂದು ಕೇಳುತ್ತೇನೆ. ಈಗ ಶಹಾಜಿಯ ಮುಮ್ಮಗನು ತಂಜಾವರದ ಜಮೇದಾರನಾಗಿದ್ದು, ಅವನು **ಬೇಅಸಲ್ಲ** (ಕೀಳ)ನಾಗಿರುತ್ತಾನೆ. ಅವನು ಈಗ ನರಕದಲ್ಲಿ ಬಿದ್ದಿರುವ ಸಿವಾಜಿಯ ಮಲತಮ್ಮನ ಮಗನು. ಅವನ ರಾಜ್ಯವು ಬಲಿಷ್ಠವಾಗಿಲ್ಲ. ಅವನ ವಾರ್ಷಿಕೋತ್ಪನ್ನವು ೭೦ ರಿಂದ ೮೦ ಲಕ್ಷ ಹೊನ್ನು ಇರುತ್ತದೆಂದು ಕೇಳುತ್ತೇನೆ. ಇಷ್ಟು ಹುಟ್ಟುವಳಿ

ಯುಳ್ಳ ಪ್ರಾಂತವನ್ನು ಅವನಿಗೆ ಏಕೆ ಬಿಡಬೇಕು? ಆ ನಾಡಿನ ಸ್ಥಿತಿಗತಿ ಯನ್ನು ವಿಚಾರಿಸು ಮತ್ತು ಅದನ್ನು ಹೇಗೆ ಹಿಡಿದುಕೊಳ್ಳಬಹುದೆಂಬು ದನ್ನು ಸೂಚಿಸು.

ಇಂತಹ ಬಂಗಾರದ ಭೂಮಿಯನ್ನು ಬರಿದುಮಾಡಿ ತನ್ನ ಬರಿ ದಾದ ಬಂಡಾರವನ್ನು ಬಲಿಸಬೇಕೆಂಬ ಬಯಕೆಯು ನಮ್ಮ ಚರಿತ್ರ ನಾಯಕನ ಮನಸ್ಸಿನಲ್ಲಿ ಬಹಳ ದಿವಸದಿಂದ ಕುದಿಯುತ್ತಿತ್ತು. ಆದ್ದ ರಿಂದ ಅವನು ತನ್ನ ಲವಲವಿಕೆಯನ್ನು ಪೂರೈಸಿಕೊಳ್ಳಲಿಕ್ಕೆ ಬೇಕಾದ ತಕ್ಕ ಅನುಕೂಲತೆಯನ್ನು ಎದುರುನೋಡುತ್ತ ಕುಳಿತಿದ್ದನು. ದೈವಯೋಗ ದಿಂದ ಅನಾಯಾಸವಾಗಿ ಅವನು ಬೇಡಿದ ಅನುಕೂಲತೆಯು ಈಗ ಬಂದೊದಗಿತು.

ಶಹಾಜಿರಾಜನು ೧೬೬೪ ರಲ್ಲಿ ಆಕಸ್ಮಾತ್ತಾಗಿ ಸತ್ತನೆಂದು ಹಿಂದೆ ಬರೆದಿರುತ್ತೇವಷ್ಟೆ. ಅವನ ತರುವಾಯ ಅವನ ೨ ನೆಯ ಹೆಂಡತಿಯ ಮಗನಾದ ವೆಂಕೋಜಿಯು ಅವನ ಎಲ್ಲ ಕರ್ನಾಟಕದ ಜಹಗೀರಿಗೆ ಒಡೆಯನಾದನು. ಅವನು ಹೆಸರಿಗೆ ಮಾತ್ರ ಅದಿಲ್ಯಹನ ಹಸ್ತಕನಾಗಿ ದ್ದನು. ನಿಜವಾಗಿಯೂ ನಮ್ಮ ಚರಿತ್ರನಾಯಕನಿಗೆ ಈ ಪಿತ್ರಾರ್ಜಿತ ಆಸ್ತಿಯ ಪಾಲು ಬೇಕಾಗಿದ್ದಿಲ್ಲ. ಆದರೆ ಅವನ ಮನಸ್ಸಿನಲ್ಲಿ ಸುವರ್ಣ ಭೂಮಿಯಾದ ನಮ್ಮ ತಾಯ್ನಾಡನ್ನು ಸುಲಿದು ಸೂರೆಗೊಳ್ಳುವದಿತ್ತು. ಆದ್ದರಿಂದ ತನ್ನ ಪಾಲು ತೆಗೆದುಕೊಳ್ಳುವ ನೆವನಮಾಡಿ ತನ್ನ ಬಯಕೆ ಯನ್ನು ಈಡೇರಿಸಿಕೊಂಡನೆನ್ನಬಹುದು. ಏಕೆಂದರೆ ಸಿವಾಜಿಯ ರಾಜ ಧಾನಿಯು ತಂಜಾವರದಿಂದ ೭೦೦ ಮೈಲು ದೂರಾಗಿತ್ತು ಮತ್ತು ಅದಿ ಲ್ಶಾಹಿ ಕುತುಬಶಾಹಿ ರಾಜ್ಯಗಳು ನಡುವೆ ಅಡ್ಡಗಟ್ಟಿದ್ದವು. ಇದಲ್ಲದೆ ಒಮ್ಮೆ ಸಿವಾಜಿಯು ತನ್ನ ತಮ್ಮನ ವಕೀಲನ ಮುಂದೆ ಹೇಳಿದ್ದೇ ನಂದರೆ:—ನನ್ನ ತಂದೆಯು ನನಗೆ ೪೦,೦೦೦ ಹೊನ್ನು ಉತ್ಪನ್ನವುಳ್ಳ ಜಹಗೀರನ್ನು ಕೊಟ್ಟನು. ಈಗ ಪ್ರತಿವರ್ಷ ನನ್ನ ರಾಜ್ಯದ ಉತ್ಪನ್ನವು ೫೦ ರಿಂದ ೬೦ ಲಕ್ಷ ಹೊನ್ನು ಬರುತ್ತದೆ. ಇದಲ್ಲದೆ ನನಗೆ ೮೦ ಲಕ್ಷ ಹೊನ್ನು ವರ್ಷಾ ಕಪ್ಪಗಾಣಿಕೆಯಾಗಿ ಸಿಕ್ಕುತ್ತದೆ.

ವೆಂಕೋಜಿಯು ಸೋಮಾರಿಯೂ ಮೆಯ್ಗಳ್ಳನೂ ಮುಗ್ಗಲಗೇಡಿಯೂ ವಿಲಾಸಿಯೂ ಆಗಿದ್ದನು. ಶಹಾಜಿಯ ಕಾರಭಾರಿಯಾದ ರಘುನಾಥ ನಾರಾಯಣ ಹನುಮಂತೆಯು ಅವನ ಮುಖ್ಯ ಮಂತ್ರಿಯಾಗಿ ಜಹಗೀರಿನಾಡಳಿತವನ್ನು ಸಲಿಸವಾಗಿ ಸಾಗಿಸುತ್ತಿದ್ದನು. ಅವನು ಹೆಗ್ಗೋರಿಕೆ (ಮಹತ್ವಾಕಾಂಕ್ಷಿ)ಯುವನೂ ಕಾರ್ಯದಕ್ಷನೂ ಕಾರಸ್ಥಾನಿಯೂ (ತಂತ್ರೀ) ಆದ್ದರಿಂದ, ತನ್ನ ಒಡೆಯನು ಸುಮ್ಮನೆ ಹೇಡಿಯಂತೆ ಕಯ್ಮುಚ್ಚಿಕೊಂಡು ಕುಳಿತುಕೊಂಡು ಕಾಲಕಳೆಯುವುದು ಅವನಿಗೆ ಸೇರಲಿಲ್ಲ. ಆದ್ದರಿಂದ ಒಂದು ದಿವಸ ಅವನು ತುಂಬಿದ ದರಬಾರದಲ್ಲಿ ಅವನ ಅಣ್ಣನ ಶೌರ್ಯಧೈರ್ಯ ಸಾಹಸಾದಿ ಗುಣಗಳನ್ನು ಹೊಗಳಿ, ತನ್ನ ಒಡೆಯನ ಜೊನ್ನ (ಹೇಡಿ)ತನವನ್ನು ಪರ್ಯಾಯದಿಂದ ಹಳಿದನು. ಅದನ್ನು ಕೇಳಿ ಮುನಿದ ವೆಂಕೋಜಿಯು, ಸಿವಾಜಿಯು ಉಂಡಮನೆಯಗಳ ಎಣಿಸುವವನೂ ಬಂಡುಗಾರನೂ ಆಗಿರುತ್ತಾನೆಂದು ನಿಂದಿಸಿ, ನಾಲಿಗೆಯನ್ನು ಉದ್ದ ಮಾಡಿದ್ದಕ್ಕೆ ರಘುನಾಥನಿಗೆ ಛೀಹಾಕಿದನು.

ಮಾನಿಗೆ ಮಾತಿನ ಪೆಟ್ಟು, ಮೊಂಡನಿಗೆ ಮಚ್ಚೆಯ (ಎಕ್ಕಡ)ಪೆಟ್ಟು ಎಂಬ ಗಾದೆಯ ಮಾತನ್ನು ಓದುವವರು ಕೇಳಿರಬಹುದು. ಆ ಕಾಲದ ನಮ್ಮ ಪೂರ್ವಜರು ಈಗಿನ ಸರಕಾರದ ಉದ್ಯೋಗಸ್ಥರಂತೆ ದುಡ್ಡೇ ದೊಡ್ಡಪ್ಪನೆಂದು ನೆರೆನಂಬಿ ಸ್ವಾಭಿಮಾನವನ್ನು ತೊರೆದಿದ್ದಿಲ್ಲ. ಈಗಿನವರಂತೆ ಆಗಿನವರು ಆಡಿದ್ದನ್ನು ಆಡಿಸಿಕೊಂಡು ಮಾಡಿದ್ದನ್ನು ಮಾಡಿಸಿಕೊಂಡು ಊಳಿಗವನ್ನು ಮಾಡುತ್ತಿದ್ದಿಲ್ಲ. ಅವರಲ್ಲಿ ಮನುಷ್ಯತ್ವವು ಹೆಚ್ಚುಉಜ್ವಲವಾಗಿತ್ತು. ಅವರಲ್ಲಿ ಸ್ವಾಭಿಮಾನವೂ ಸ್ವಾರ್ಥತ್ಯಾಗವೂ ಸ್ವಾವಲಂಬನವೂ ಯಥೇಚ್ಛವಾಗಿದ್ದವು. ಅವರು ಈಗಿನವರಂತೆ ದುಡ್ಡಿನ ಗುಲಾಮರಾಗಿದ್ದಿಲ್ಲ. "ಏಕಲಜ್ಜಾಮ್ ಪರಿತ್ಯಜ್ಯ ಸರ್ವತ್ರ ವಿಜಯೀ ಭವೇತ್," ಎಂಬ ಆಪದ್ಧರ್ಮಸೂತ್ರವೇ ಈಗಿನವರ ಬೀಜಮಂತ್ರವಾಗಿದೆ. ಪರದೇಶದವರಾಗಲಿ ಶತ್ರುಗಳಾಗಲಿ, ದುಷ್ಟರಾಗಲಿ ಚಾಂಡಾಲರಾಗಲಿ, ದುಡ್ಡು ಕೊಟ್ಟರಾಯಿತು; ನಮ್ಮೊಳಗೆ ಎಷ್ಟೋ ಜನರು ಅವರು ಹೇಳಿದ ಕೆಟ್ಟಕೆಲಸವನ್ನು ಮಾಡಲಿಕ್ಕೆ ಸಿದ್ಧರಾಗುತ್ತಾರೆ. ನಾವು ಹಿಂದೆ ಮಾಡಿದ

ಅಗಾಧವಾದ ಪಾಪದಿಂದ ನಮಗೆ ಇಂತಹ ಕೀಳಸ್ಥಿತಿಯು ಬಂದಿರುತ್ತ ದೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ. ಶುದ್ಧಪಶ್ಚಾತ್ತಾಪ ಸ್ವಾರ್ಥತ್ಯಾಗಗಳಿಂದ ಮಾತ್ರ ನಾವು ಈಗ ಬಂದಿರುವ ನಮ್ಮ ನೀಚಸ್ಥಿತಿಯನ್ನು ಹೋಗಲಾಡಿಸಿ ಕೊಳ್ಳಬೇಕೇ ಹೊರತು ಬೇರೆ ಉಪಾಯವಿಲ್ಲ. ಈಗಿನ ಶಿಕ್ಷಣಪದ್ಧತಿಯಲ್ಲಿ ಈ ಗುಲಾಮಗಿರಿಯ ಬೀಜಗಳಿರುವುದರಿಂದ ಈ ಶಿಕ್ಷಣಕ್ರಮವನ್ನು ತಿದ್ದಿ ನಮ್ಮ ಮಕ್ಕಳಿಗೆ ಸರಿಯಾದ್ದನ್ನು ಕಲಿಸುವುದು ನಮ್ಮ ಆದ್ಯಕರ್ತವ್ಯ ವೆಂದು ಒಡೆದು ಹೇಳುವ ಕಾರಣವಿಲ್ಲ.

ವೆಂಕೋಜಿಯ ಮುಖ್ಯಮಂತ್ರಿಯಾದ ರಘುನಾಥನು ವೇದಶಾಸ್ತ್ರ ಸಂಪನ್ನನೂ ಸ್ವಾವಲಂಬಿಯೂ ಸ್ವಾಭಿಮಾನಿಯೂ ಆದ್ದರಿಂದ ಸ್ವಾರ್ಥ ಕ್ಕೊಳಗಾಗಿ ತನ್ನ ಒಡೆಯನು ಮಾಡಿದ ಅವಮಾನವನ್ನು ತಾಳದೆ, ತನ್ನ ಮಂತ್ರಿತ್ವವನ್ನು ಬಿಟ್ಟು, ಕಾಶಿಗೆ ಹೋಗುವ ನೆವದಿಂದ ಅಪ್ಪಣೆಯನ್ನು ಪಡೆದು, ತನ್ನ ಕುಟುಂಬದವರೊಡನೆ ರಾಜಧಾನಿಯಿಂದ ಹೊರಟನು.

ರಘುನಾಥರಾಯನಿಗೆ ಇನ್ನೂ ವಿರಕ್ತಿಯು ಹುಟ್ಟಿದ್ದಿಲ್ಲ. ಅವನ ಹೆಗ್ಗೀರಿಕೆಯು ಅವನನ್ನು ಹೆಚ್ಚಿನ ಸಾಹಸಕ್ಕೆ ಎಳೆಯುತ್ತಿತ್ತು. ಹೊಸ ಕಾರಸ್ಥಾನವನ್ನು ಮಾಡಿ ಸಿವಾಜಿಯನ್ನು ಒಲಿಸಿಕೊಂಡು, ತಾನೂ ಒಬ್ಬ ಜಹಗೀರದಾರನಾಗಬೇಕೆಂಬ ಉಬ್ಬು ಅವನ ಮನಸ್ಸಿನಲ್ಲಿ ಉಕ್ಕುತ್ತಿತ್ತು. ಆದ್ದರಿಂದ ಅವನು ಕಾಶಿಯ ದಾರಿಯನ್ನು ಹಿಡಿಯದೆ, ತನಗೆ ಅನುಕೂಲ ರಾದ ಕೆಲ ಕರ್ನಾಟಕ ಜಹಗೀರದಾರರನ್ನು ಕಂಡು, ಅವರೊಡನೆ ಮಾತು ಕಥೆಯಾಡಿ, ನೆಟ್ಟಗೆ (ನೇರಾಗಿ) ಗೋವಳಕೊಂಡದ ರಾಜಧಾನಿಯಾದ ಹೈದರಾಬಾದಿಗೆ ಹೋದನು; ಅಲ್ಲಿ ಕೆಲವು ದಿವಸ ನಿಂತು **ಮಾದಣ್ಣ** ಮಂತ್ರಿಯನ್ನು ಕಂಡು ಸಿವಾಜಿಯೊಡನೆ ಒಪ್ಪಂದ ಮಾಡುವುದಕ್ಕೆ ಅವ ನನ್ನು ಒಡಂಬಡಿಸಿ, ಸಿವಾಜಿಯು ಇದ್ದೆಡೆಗೆ ಹೊರಟನು* (೧೬೭೬).

---

* ರಘುನಾಥರಾಯನು ಶಾಸ್ತ್ರಜ್ಞನಾದ್ದರಿಂದ ಭಿಕ್ಷುಕಬ್ರಾಹ್ಮಣ ವೇಷ ದಲ್ಲಿ ಮಾದಣ್ಣ ಮಂತ್ರಿಯನ್ನು ಕಂಡು, ಅವನ ಆಶ್ರಯದಲ್ಲಿದ್ದ ಪಂಡಿತರೊಡನೆ ವಾದಹಾಕಿ ಮೊದಲು ವಿಷ್ಣುಸರ್ವೋತ್ತಮನೆಂತಲೂ ಬಳಿಕ ಶಿವಸರ್ವೋ ತ್ತಮನೆಂತಲೂ ಸಿದ್ಧಮಾಡಿ ತೋರಿಸಿದ್ದರಿಂದ ಮಾದಣ್ಣನು ಅವನ ಘನ

ಈ ಕಾಲಕ್ಕೆ ಸಿವಾಜಿಯು ಆಮಶೌಚ ಉಪದ್ರವದಿಂದ ಸಾತಾರೆ ಯಲ್ಲಿ ನರಳುತ್ತಿದ್ದನು. ರಘುನಾಥರಾಯನು ಬಂದ ಸುದ್ದಿಯನ್ನು ಕೇಳಿ ಅವನಿಗೆ ಬಹಳ ಸಂತೋಷವಾಯಿತು. ಏಕೆಂದರೆ ಅವನ ತಂದೆಯಾದ ನಾರಾಯಣರಾಯನು ಶಹಾಜಿ ರಾಜನ ಕಾರಭಾರಿಯಾದ್ದರಿಂದ ಅವನ ಗುರುತು ಸಿವಾಜಿಗೆ ಚಿಕ್ಕಂದಿನಲ್ಲೇ ಆಗಿತ್ತು. ರಘುನಾಥರಾಯನನ್ನು ಇದುರುಗೊಂಡು ಕರೆಕೊಂಡು ಬರಲಿಕ್ಕೆ ಜನರನ್ನು ಕಳುಹಿ, ಸಿವಾಜಿಯು ಅವನ ಊಟೋಪಚಾರದ ಏರ್ಪಾಡನ್ನು ಚೆನ್ನಾಗಿ ಮಾಡಿಸಿದನು. ತಾನು ಕರ್ನಾಟಕದ ಜಹಗೀರುಗಳಲ್ಲಿಯೂ ಭಾಗಾನಗರ (ಹೈದರಾಬಾದ) ದಲ್ಲಿಯೂ ಮಾಡಿದ ಕಾರಸ್ಥಾನವನ್ನು ವಿವರವಾಗಿ ತಿಳಿಸಿ, ರಘುನಾಥ ರಾಯನು ಸಿವಾಜಿಯನ್ನು ಹುರಿದುಂಬಿಸಿದನು. ರಘುನಾಥರಾಯನ ಪಾಂಡಿತ್ಯಪರಿಚಯಾನುಭವಗಳು ನಮ್ಮ ಚರಿತ್ರನಾಯಕನ ಧೈರ್ಯ ಶೌರ್ಯ ಸಾಹಸಗಳಿಗೆ ಕೂಡಿದ್ದರಿಂದ ಕಬ್ಬಿನ ಮೇಲೆ ಜೇನು ಇಕ್ಕಿ ದಂತಾಯಿತು. ಅವರಿಬ್ಬರು ದಿನಾಲು ಒಟ್ಟುಗೂಡಿ ಮಸಲತ್ತುಮಾಡುತ್ತ ಒತ್ತರದಿಂದ ದಂಡಯಾತ್ರೆಯ ಜೋಡಣಿಯನ್ನು ಜೊತೆಗೊಳಿಸತೊಡ ಗಿದರು. ಸಿವಾಜಿಯ ಗೈರಹಾಜರಿಯಲ್ಲಿ ಅವನ ನಾಡಿನ ಸುರಕ್ಷತೆಯ ದೊಂದು ದೊಡ್ಡ ಪ್ರಶ್ನವಿತ್ತು. ವಿಜಾಪುರದೊಳಗೆ ಒಳಜಗಳ ನಡೆದುದ ರಿಂದ ಆ ಸರಕಾರದಿಂದ ತೊಂದರೆಯಾಗುವ ಹೆದರಿಕೆ ಇದ್ದಿಲ್ಲ. ಅವರಂಗ ಜೇಬ ಬಾದಶಹನು ಪಂಜಾಬದ ಬಂಡಾಯವನ್ನು ಮುರಿದು ದಿಲ್ಲಿಗೆ ತಿರುಗಿ ಬಂದಿದ್ದರೂ (೨೭ ಮಾರ್ಚ ೧೬೭೬), ಅವನ ದಂಡು ಇನ್ನೂ ವಾಯುವ್ಯ ಮೇರೆಯ ಪ್ರಾಂತದಲ್ಲಿ ಕಾಡು ಜನರೊಡನೆ ಕಾದಾಡುತ್ತಿತ್ತು. ದಕ್ಷಿಣದ ಸುಬೇದಾರನಾದರೋ ಸಿವಾಜಿಯೊಡನೆ ೨ ವರ್ಷ ಬಡಿದಾಡಿ ಬೇಸತ್ತಿದ್ದನು. ಅವನ ಮನಸ್ಸಿನಲ್ಲಿ ಮರಾಟರೊಡನೆ ಒಪ್ಪಂದಮಾಡಿ ಕೊಂಡು ನಿಶ್ಚಿಂತನಾಗಬೇಕೆಂಬ ಬಯಕೆಯು ತಲೆದೋರಿತ್ತು. ಈಗ

---

ಪಾಂಡಿತ್ಯಕ್ಕೆ ಮೆಚ್ಚಿ ಕರ್ನಾಟಕದ ದಂಡಯಾತ್ರೆಯಲ್ಲಿ ಸಿವಾಜಿಗೆ ಕುತುಬ ಶಾಹಿಯಿಂದ ಎಲ್ಲಾ ತರದ ನೆರವು ದೊರೆಯುವದೆಂದು ಮಾತುಕೊಟ್ಟನಂತೆ. ಕೇಳೂಸಕರ ಪು. ೪೨೮-೨೯.

ಅವನು ಆದಿಲ್ಶಾಹಿಯ ಪಾಲಕನಾದ ಬಹಲೋಲಖಾನನೊಡನೆ ಯುದ್ಧ ವನ್ನು ಹೂಡಿದ್ದರಿಂದ, ಈ ಒಡಂಬಡಿಕೆಯ ಅವಶ್ಯಕತೆಯು ಹೆಚ್ಚಿತು. ಇಬ್ಬರಿಗೂ ಅಡಗಾಣಿಸಿದ (ಅವಶ್ಯವಾಗಿಬೇಕಾದ) ಒಪ್ಪಂದವು ಮುಗಿಯು ಲಿಕ್ಕೆ ತಡಹತ್ತುವದೇ? ಮುಖ್ಯ ನ್ಯಾಯಾಧೀಶನಾದ ನೀರಾಜಿ ರಾವ ಜಿಯು ಬೆಲೆಯುಳ್ಳ ಕಾಣಿಕೆಯೊಡನೆ ಬಹದ್ದೂರಖಾನನನ್ನು ಕಂಡು, ಕದ್ದಿಲೆ (ಗುಪ್ತವಾಗಿ) ಅವನಿಗೆ ಲಂಚಕೊಟ್ಟು, ದರಬಾರದಲ್ಲಿ ಬಾದಶಹ ನಿಗೆ ಕಾಣಿಕೆಯನ್ನು ಅರ್ಪಿಸಿ, ಒಡಂಬಡಿಕೆಯ ಕಾಗದಕ್ಕೆ ಸಹಿಮೊಹರು ಗಳನ್ನು ಮಾಡಿಸಿಕೊಂಡು ತಿರುಗಿಬಂದನು (ನೋ).

ಈ ಮೇರೆಗೆ ಮೊಗಲಾಯಿ-ಆದಿಲ್ಶಾಹಿಗಳ ಅಂಜಿಕೆಯು ದೂರಾದ್ದ ರಿಂದ ಸಿವಾಜಿಯು ಒಳದೇಶದ ಆಡಳಿತದ ಏರ್ಪಾಡನ್ನು ಮಾಡತೊಡ ಗಿದನು. ಪೇಶ್ವೆಯಾದ ಮೋರೋ ತ್ರಿಯಂಬಕ ಪಿಂಗಳೆಯನ್ನು ರಾಜ್ಯ ಪಾಲಕನಾಗಿಯೂ ಸುರ್ನೀಸನಾದ ಅಣ್ಣಾಜಿ ದತ್ತುವಿನನ್ನು ಕೊಂಕಣ ಭಾಗದ ದಳವಾಯಿಯಾಗಿಯೂ ವಾಕ್ನೀಸನಾದ ದತ್ತಾಜಿ ತ್ರಿಯಂಬಕ ನನ್ನು ದೇಶದ ಭಾಗದ ದಳವಾಯಿಯಾಗಿಯೂ ನಿಯಮಿಸಿದನು. ಸಿವಾಜಿ ಯನ್ನು ಬಿಟ್ಟು ಮೊಗಲರನ್ನು ಕೂಡಿ ಒತ್ತಾಯದಿಂದ ಜಾತಿಗೆಟ್ಟು ಮುಸ ಲ್ಮಾನನಾದ ನೇತಾಜಿಪಾಲ್ಕರನು ಪಶ್ಚಾತ್ತಾಪಪಟ್ಟು ತಿರುಗಿ ಸಿವಾಜಿಗೆ ಈ ಕಾಲಕ್ಕೆ ಶರಣುಬಂದುದರಿಂದ, ನಮ್ಮ ಚರಿತ್ರನಾಯಕನು ಅವನಿಗೆ ಪ್ರಾಯಶ್ಚಿತ್ತಕೊಡಿಸಿ ಜಾತಿಯಲ್ಲಿ ತೆಗೆದುಕೊಂಡು, ತನ್ನ ಸಂಗಡ ಕರ್ನಾ ಟಕಕ್ಕೆ ಕರೆಕೊಂಡು ಹೋದನು.

ಈಪ್ರಕಾರವಾಗಿ ಎಲ್ಲ ಸಿದ್ಧತೆಯು ಮುಗಿಯಿತು. ಆದರೆ "ತಂಡು ಲವ್ ಪ್ರಸ್ತ ಮೂಲವ್" ಎಂಬ ನಾಣ್ಣುಡಿಯಂತೆ, ಕರ್ನಾಟ ಕದ ದಾಳಿಗೆ ಮುಖ್ಯವಾಗಿ ಬೇಕಾದ ಹಣವೂ ತೋಫಖಾನೆಯೂ ಸಿವಾ ಜಿಯ ಬಳಿಯಲ್ಲಿದ್ದಿಲ್ಲ. ಈ ಸಾಧನಗಳ ಬಗ್ಗೆ ಅವನು ರಘುನಾಥರಾಯ ನನ್ನು ನಂಬಿ ಆಕಾಲಕ್ಕೆ ಕುತುಬಶಹನಾದ ಅಬ್ದುಲ್ ಹಸನ್ನನನ್ನು ನಂಬಿಕೊಂಡು ಕುಳಿತಿದ್ದನು. ಎಲ್ಲ ತಯಾರಿಯಾದ ಬಳಿಕ ಸಿವಾಜಿಯು ತನಗೆ ಕುತುಬಶಹನ ದರ್ಶನವು ದೊರೆಯುವಂತೆ ಮಾಡಬೇಕೆಂದು

ಅವನಲ್ಲಿದ್ದ ತನ್ನ ವಕೀಲನಾದ ಪ್ರಹ್ಲಾದ ನೀರಾಜಿಗೆ ಕಾಗದ ಬರಿಸಿದನು. ಸಿವಾಜಿಯಂತಹ ಭಯಂಕರನಾದ ಗೃಹಸ್ಥನಿಗೆ ಕಾಣಿಸಿಕೊಳ್ಳಲಿಕ್ಕೆ ಅಬ್ದುಲ್ ಹಸನ್ನನು ಕೆಲದಿವಸ ಒಡಂಬಡಲಿಲ್ಲ. ಮುಂದೆ ಮಾದಣ್ಣ ಮಂತ್ರಿಯ ಮಧ್ಯಸ್ಥಿಕೆಯಿಂದ ಅವನಿಗೆ ಬರುವುದಕ್ಕೆ ಅಪ್ಪಣೆ ದೊರೆದುದ ರಿಂದ, ಅವನ ಸಂತೋಷವು ಉಕ್ಕೇರಿತು.

ಸಿವಾಜಿಯು ಶುಭಮುಹೂರ್ತದ ದಿವಸ ರಾಯಗಡವನ್ನು ಬಿಟ್ಟು ಮೂಡಣ ದಾರಿಯನ್ನು ಹಿಡಿದನು (ಜನವರಿ ೧೬೭೭). ಹೈದರಾಬಾದ ರಾಜ್ಯವು ಹತ್ತಿದ ಕೂಡಲೆ ಜನರನ್ನು ಯಾವ ಬಗೆಯಿಂದಲೂ ನೋಯಿಸ ಬಾರದೆಂತಲೂ ತಮಗೆ ಬೇಕಾದ ಸಾಮಾನುಗಳನ್ನು ನಗದು ಹಣಕೊಟ್ಟು ತೆಗೆದುಕೊಳ್ಳಬೇಕೆಂತಲೂ ತನ್ನ ಸಂಗಡಿಗರಿಗೆ ಕಟ್ಟಪ್ಪಣೆಯನ್ನಿತ್ತನು. ಈ ಹುಕುಮನ್ನು ಮೀರಿ ನಡೆದ ಕೆಲವರ ಕೈಯನ್ನು ಕಡಿಸಿದ್ದಲ್ಲದೆ, ದೊಡ್ಡ ತಪ್ಪು ಮಾಡಿದವರನ್ನು ಗಲ್ಲಿಗೇರಿಸಿದನು. ಈ ಕ್ರೂರಶಿಕ್ಷೆಗಳಿಂದ ಹೆದರಿದ ದಂಡಾ ಳುಗಳು ಕುತುಬಶಾಹಿಯ ಪ್ರಜೆಗಳಿಗೆ ಏನೂ ತೊಂದರೆ ಕೊಡಲಿಲ್ಲ. ಸಿವಾಜಿಯು ತನ್ನ ಸಂಗಡ ೩೦,೦೦೦ ರಾಹುತರನ್ನೂ ೪೦,೦೦೦ ಕಾಲಾಳು ಗಳನ್ನೂ ತೆಗೆದುಕೊಂಡಿದ್ದನು.

ರಾಯಗಡದಿಂದ ಹೈದರಾಬಾದಿನ ವರೆಗೆ ೩೦೦ ಮೈಲು ಹೋಗಲಿಕ್ಕೆ ಸಿವಾಜಿಗೆ ಒಂದು ತಿಂಗಳು ಹಿಡಿಯಿತು. ಅವನನ್ನು ಇದುರುಗೊಳ್ಳಲಿಕ್ಕೆ ಕುತುಬಶಹನು ಬರುತ್ತಾನೆಂಬ ಸುದ್ದಿಯನ್ನು ಕೇಳಿ, ಸಿವಾಜಿಯು ನಮ್ರ ಭಾವದಿಂದ ಹಿರಿಯಣ್ಣಂದಿರಾದ ತಾವು ಚಿಕ್ಕವನ ಬೆಟ್ಟಿಗೆ ಬರುವ ಕಾರಣ ವಿಲ್ಲೆಂದು ಹೇಳಿಕಳುಹಿದನು. ಮಾದಣ್ಣ ಮಂತ್ರಿಯೂ ಅವನ ತಮ್ಮನಾದ ಅಕ್ಕಣ್ಣನೂ ಉಳಿದ ಸರದಾರರೂ ದೂರದವರೆಗೆ ಬಂದು ಇದುರುಗೊಂಡು ಕರೆಕೊಂಡು ಹೋಗಿ ಊರ ಹೊರಗಿನ ಉದ್ಯಾನದಲ್ಲಿ ಇಳಿಸಿದರು. ಮರು ದಿನ ಸಿವಾಜಿಯು ಕುತುಬಶಹನ ಬೆಟ್ಟಿಗೆ ದಂಡಿನೊಡನೆ ಹೊರಟನು. ರಾಜಬೀದಿಯು ಗುಡಿತೋರಣಗಳಿಂದಲೂ ಕುಂಕುಮಕೇಶರದ ರಂಗವಲ್ಲಿ ಗಳಿಂದಲೂ ಸಿಂಗರಿಸಲ್ಪಟ್ಟಿದ್ದವು. ವಿಚಿತ್ರಪುರುಷನಾದ ಸಿವಾಜಿಯನ್ನೂ ಅವನ ಪ್ರತಿಭಾಶಾಲಿಯಾದ ಮಂತ್ರಿಗಳನ್ನೂ ಶೂರರಾದ ದಳವಾಯಿ

ಗಳನ್ನೂ ನೋಡುವುದಕ್ಕೆ ಕುತೂಹಲವುಳ್ಳವರಾದ ಜನರ ಸಂದಣಿಯು ಕಿಕ್ಕಿರಿಯುತಿತ್ತು. ಉಪ್ಪರಿಗೆಯ ಮೇಲೆ ನಿಂತು ನೋಡುತ್ತಿದ್ದ ಹುಡುಗರೂ ಹೆಂಗಸರೂ ತಮ್ಮ ನೇತ್ರಕಮಲಗಳಿಂದಲೂ ಕಯ್ಯಲ್ಲಿದ್ದ ಚಿನ್ನ ಬೆಳ್ಳಿಗಳ ಹೂಗಳಿಂದಲೂ ಆಗಾಗ ಹೂಮಳೆಗರೆಯುತ್ತಿದ್ದರು. ಮರಾಟ ಸರದಾರ ರಾವರೋ ತಂತಮ್ಮ ರುಮಾಲುಗಳಲ್ಲಿ ಮುತ್ತಿನ ತುರಾಯಿಗಳನ್ನು ಸಿಗಸಿ ಕೊಂಡು, ಭರಜರಿಯ ಪೋಷಾಕನ್ನು ಹಾಕಿಕೊಂಡು, ಕಯ್ಯಲ್ಲಿ ಚಿನ್ನದ ಕಡೆಗಳನ್ನು ಧರಿಸಿ, ಸಿಂಗರಿಸಿದ ಆನೆ ಕುದುರೆಗಳ ಮೇಲೆ ಕುಳಿತು ಒಯ್ಯಾರದಿಂದ ಹೋಗುತ್ತಿದ್ದರು. ಆ ಮೆರವಣಿಗೆಯೆಂಬ ಆಕಾಶ ಗಂಗೆಯಲ್ಲಿ ಚಂದ್ರನಂತೆ ಶೋಭಿಸುತ್ತಿರುವ ನಮ್ಮ ಚರಿತ್ರನಾಯಕನು ತನ್ನ ನಗೆಮೋರೆಯಿಂದಲೂ ಹೊಳೆಯುವ ದೊಡ್ಡ ಕಣ್ಣುಗಳ ಕಿರಣ ಗಳಿಂದಲೂ ಜನರ ಚಿತ್ತಾಕರ್ಷವನ್ನು ಮಾಡುತ್ತಿದ್ದುದಲ್ಲದೆ, ತನ್ನ ಎರಡೂ ಕಯ್ಗಳ ಮುಷ್ಟಿಯಿಂದ ಚಿನ್ನ ಬೆಳ್ಳಿಗಳ ನಾಣ್ಯಗಳನ್ನು ಸೂರೆ ಮಾಡು ತ್ತಿದ್ದನು.

ಈ ಮೇರೆಗೆ ನಯನಾನಂದಕರವಾದ ಮೆರವಣಿಗೆಯು ದಾದ ಮಹಲಿನ ಹೆಬ್ಬಾಗಿಲಿಗೆ ಬಂದು ನಿಂತಿತು. ಸಿವಾಜಿಯು ತನ್ನ ಆನೆ ಯನ್ನು ಇಳಿದು, ೫ ಮಂದಿ ಅಧಿಕಾರಿಗಳೊಡನೆ ಮಹಲನ್ನು ಹೊಕ್ಕು ಉಪ್ಪರಿಗೆಯ ಮೆಟ್ಟಲುಗಳನ್ನು ಏರಿದನು. ಕುತುಬಶಹನು ಎದ್ದು ಬಂದು ಅವನನ್ನು ಅಪ್ಪಿಕೊಂಡು ತನ್ನ ಮಗ್ಗಲಿನಲ್ಲಿ ಕೂಡ್ರಿಸಿಕೊಂಡನು. ಮಾದಣ್ಣಮಂತ್ರಿಯು ಮಾತ್ರ ಅವರಿಬ್ಬರ ಬಳಿಯಲ್ಲಿ ಕುಳಿತನು. ಉಳಿದ ಸರದಾರರೆಲ್ಲ ನಿಂತುಕೊಂಡಿದ್ದರು. ಅರಮನೆಯ ಅಬಲೆಯರೆಲ್ಲ ಆ ಅಫ ಜುಲ್ಲಾನನ ಅರಿಯನ್ನು ಕಿಡಕಿಗಳೊಳಗಿಂದ ಎವೆಯಿಕ್ಕದೆ ನೋಡು ತ್ತಿದ್ದರು.

ಈ ಬೆಟ್ಟಿಯು ೩ ತಾಸುಗಳ ವರೆಗೆ ನಡೆಯಿತು. ಕುಶಲಪ್ರಶ್ನೆಗಳಾದ ಬಳಿಕ ಹೇಡಿಯೂ ವಿಲಾಸಿಯೂ ಆದ ಅಬ್ದುಲ್ ಹಸನ್ನ ಕುತುಬಶಹನು ನಮ್ಮ ಚರಿತ್ರನಾಯಕನು ಮಾಡಿದ ಅದ್ಭುತ ಕೃತ್ಯಗಳನ್ನು ಕೇಳಲೆಳಸಿದ್ದ ರಿಂದ, ಸಿವಾಜಿಯು ಸಂತೋಷದಿಂದ ತಾನು ಅಫಜುಲ್ಲಾನನನ್ನು ಹೇಗೆ

ಕೊಂದನೆಂಬುದನ್ನೂ ಸಾಯಿಸ್ತೆಖಾನನ ಅರಮನೆಯಲ್ಲಿ ಹೊಕ್ಕು ಅವನ ಬೆರಳನ್ನು ಎಂತು ಕತ್ತರಿಸಿದನೆಂಬುದನ್ನೂ ದರಬಾರದಲ್ಲಿ ಅವರಂಗಜೇಬ ಬಾದಶಹನು ಮಾಡಿದ ಅವಮಾನವನ್ನು ಯಾವ ತರದಿಂದ ನಿಷೇಧಿಸಿದ ನೆಂಬುದನ್ನೂ ಮುಂದೆ ತನ್ನನ್ನು ಕಾವಲಿನಲ್ಲಿರಿಸಿದಾಗ ಏನು ಹಂಚಿಕೆ ಮಾಡಿ ಪಾರಾದನೆಂಬುದನ್ನೂ ತಪ್ಪಿಸಿಕೊಂಡು ಬರುತ್ತಿರುವಾಗ ತನಗೆ ಬಂದ ಗಂಡಾಂತರಗಳನ್ನು ಹೇಗೆ ನೀಗಿದನೆಂಬುದನ್ನೂ ಸುರತಪಟ್ಟಣ ವನ್ನು ಹೇಗೆ ಸುಲಿದನೆಂಬುದನ್ನೂ ಯಾವ ಯಾವ ಭದ್ರವಾದ ಕೋಟೆ ಗಳನ್ನು ಏನೇನು ಯುಕ್ತಿಮಾಡಿ ಹಿಡಿಕೊಂಡನೆಂಬುದನ್ನೂ ಸವಿಸ್ತಾರ ವಾಗಿ ಉಪ್ಪುಕಾರ ಹಚ್ಚಿ ಹಾವಭಾವಗಳಿಂದ ಸವಿಮಾಡಿ ಹೇಳಿದನು. ಅದನ್ನು ಕೇಳಿ ಕುತುಬಶಹನು ದಿಗಿಲುಗೊಂಡು, ತೆರಬಾಯಿಯಾಗಿ ಕುಳಿ ತನು; ಅವನ ಸರದಾರರು ಸಿವಾಜಿಯ ಅತ್ಯಾಶ್ಚರ್ಯಕರವಾದ ಕಥೆ ಗಳನ್ನು ಕೇಳಿ ಸಿವಾಜಿಯು ಮನುಷ್ಯನೋ ರಾಕ್ಷಸನೋ ಎಂಬ ಸಂಶಯ ದಲ್ಲಿ ಮುಳುಗಿದರು; ಅರಮನೆಯ ಹೆಂಗಸರು ಅವನ ಅತ್ಯದ್ಭುತ ಕೃತ್ಯ ಗಳನ್ನು ಕೇಳಿ ಸೋಜಿಗಗೊಂಡು ಅವನು ದೇವಪುರುಷನೆಂದು ಭಾವಿಸಿ ಅವನಲ್ಲಿ ಭಕ್ತಿವಿಶ್ವಾಸಗಳನ್ನಿಟ್ಟರು. ಸಿವಾಜಿಯ ಕಥೆಯು ಮುಗಿದ ಬಳಿಕ ಕುತುಬಶಹನು ಅರಕ್ಷಣ ಎಚ್ಚರದಪ್ಪಿದವನಂತೆ ಸುಮ್ಮನೇ ಕುಳಿತು, ತರುವಾಯ ತನ್ನ ಕಯ್ಯಿಂದಲೇ ಸಿವಾಜಿಗೆ ಅತ್ತರವನ್ನು ಹಚ್ಚಿ, ಮುತ್ತು ರತ್ನದ ಕಾಣಿಕೆಯನ್ನಿತ್ತು, ವೀಳೆಯನ್ನು ಕೊಟ್ಟನು. ಸಿವಾಜಿಯು ಉಚಿತ ಪ್ರಕಾರದಿಂದ ಬೀಳ್ಕೊಂಡು ತನ್ನ ಬಿಡಾರಕ್ಕೆ ತೆರಳಿದನು.

ಮರುದಿವಸ ಮಾದಣ್ಣ ಪಂಡಿತನು ಸಿವಾಜಿಯನ್ನೂ ಅವನ ಮುಖ್ಯ ಮುಖ್ಯ ಸರದಾರರನ್ನೂ ತನ್ನ ಮನೆಗೆ ಊಟಕ್ಕೆ ಕರೆದನು. ಸಿವಾಜಿಯ ಅಡಿಗೆಯು ಬೇರೆಯಾಗಿತ್ತು. ಅದನ್ನು ಮಾದಣ್ಣ ಮಂತ್ರಿಯ ಮುದುಕ ತಾಯಿಯು ತಾನೇ ಸ್ವತಃ ಮಾಡಿ ಅವನಿಗೆ ಬಡಿಸಿದಳು. ಊಟ ನಡೆ ದಾಗ ಅಕ್ಕಣ್ಣ ಮಾದಣ್ಣರು ಅವನ ಮುಂದೆ ಭಕ್ತಿವಿಶ್ವಾಸದಿಂದ ಕುಳಿತು ಕೊಂಡು, ಅವನ ಸಮಾಚಾರ ತೆಗೆದುಕೊಳ್ಳುತ್ತಿದ್ದರು. ಭೋಜನಾನಂತರ ಅವನಿಗೆ ಹಾರ ತುರಾಯಿಯನ್ನು ಕೊಟ್ಟು ಅತ್ತರಗುಲಾಬನ್ನು ಹಚ್ಚಿ ಬೆಲೆ

ಯುಳ್ಳ ಕಾಣಿಕೆಯನ್ನು ಮುಂದಿಟ್ಟು ವೀಳೆಯನ್ನಿತ್ತರು. ಸಿವಾಜಿಯು ತಾನು ಇಳಿಕೊಂಡ ಸ್ಥಳಕ್ಕೆ ಹೋದನು.

ನಮ್ಮ ಚರಿತ್ರನಾಯಕನ ಶೌರ್ಯ ಧೈರ್ಯ ಸಾಹಸದ ಕಥೆಗಳನ್ನು ಕೇಳಿ ಮರುಳಾಗಿ ಮನಸೋತ ಕುತುಬಶಹನು ಸಿವಾಜಿಯು ಬೇಡಿದ್ದನ್ನು ಕೊಡಬಹುದೆಂದು ಹೇಳಿದ್ದರಿಂದ ಒಪ್ಪಂದಕ್ಕೆ ತಡವಾಗಲಿಲ್ಲ. ಸಿವಾಜಿ ಮಾದಣ್ಣರ ನಡುವೆ ತುಸು ಮಾತುಕಥೆಗಳಾಗಿ ಕೆಳಗೆ ಬರೆದಂತೆ ಒಡಂಬಡಿಕೆಯ ಶರ್ತುಗಳು ಗೊತ್ತಾದವು:—

(ಅ) ದಾಳಿಯ ವೆಚ್ಚಕ್ಕಾಗಿ ಸುಲ್ತಾನನು ಸಿವಾಜಿಗೆ ದಿನಾಲು ೩,೦೦೦ ಹೊನ್ನುಗಳನ್ನು ಅಂದರೆ ತಿಂಗಳಿಗೆ ನಾಲ್ಕೂವರೆ ಲಕ್ಷ ರೂಪಾಯಿಗಳನ್ನು ಕೊಡಬೇಕು.

(ಆ) ಸುಲ್ತಾನನು ತನ್ನ ಒಬ್ಬ ದಳವಾಯಿ (ಸರ. ಇ. ಲಷ್ಕರ) ಯಾದ ಮಿರ್ಜಾಮಹಮ್ಮದ ಖಾನನೊಡನೆ ತನ್ನ ೫೦೦೦ ದಂಡನ್ನು ಕರ್ನಾಟಕ ದಂಡಯಾತ್ರೆಯಲ್ಲಿ ನೆರವಾಗುವುದಕ್ಕೋಸ್ಕರ ಸಿವಾಜಿಯ ಸಂಗಡ ಕಳುಹ ಬೇಕು.

(ಇ) ಸಾಹಾಯಾರ್ಥವಾಗಿ ಸುಲ್ತಾನನು ತನ್ನ ತೋಫಖಾನೆಯನ್ನು ಸಿವಾಜಿಯೊಡನೆ ಕಳಿಸಬೇಕು.

(ಈ) ತನ್ನ ತಂದೆಯ ಜಹಗೀರನ್ನು ಬಿಟ್ಟು ಗೆದ್ದ ಪ್ರಾಂತದಲ್ಲಿ ಸಿವಾಜಿಯು ಕುತುಬಶಹನಿಗೆ ಅರ್ಧಭಾಗವನ್ನು ಕೊಡತಕ್ಕದ್ದು.

(ಉ) ಹಿಂದಿನ ಒಪ್ಪಂದದಂತೆ, ಮೊಗಲರು ಕುತುಬಶಾಹಿಯ ಮೇಲೆ ದಂಡೆತ್ತಿ ಬಂದಾಗ ಸಿವಾಜಿಯು ಕುತುಬಶಾಹಿಯನ್ನು ಕಾಪಾಡಬೇಕು; ಮತ್ತು ಕುತುಬಶಹನು ಅವನಿಗೆ ಪ್ರತಿವರ್ಷ ಒಂದು ಲಕ್ಷ ಹೊನ್ನನ್ನು ಕಪ್ಪುಗಾಣಿಕೆಯಾಗಿ ತಪ್ಪದೆ ಸಲ್ಲಿಸಬೇಕು.

ಈ ಒಪ್ಪಂದದ ಮಾತುಕಥೆಗಳು ನಡೆದಾಗ ಸಿವಾಜಿಯು ಮತ್ತೊಮ್ಮೆ ಕುತುಬಶಹನನ್ನು ಕಂಡನು. ಆ ಸುಲ್ತಾನನು ಅವನಿಗೆ ಅಪರಿಮಿತ ಮುತ್ತುರತ್ನಗಳನ್ನೂ ನೂರಾರು ಆನೆಕುದುರೆಗಳನ್ನೂ ಕಾಣಿಕೆಯಾಗಿ

ಕೊಟ್ಟನು. ಇಬ್ಬರು ಅರಸರು ಉಪ್ಪರಿಗೆಯ ಮೇಲೆ ಕುಳಿತುಕೊಂಡು ಮರಾಟಸರದಾರರ ಸಲಾಮನ್ನು ತೆಗೆದುಕೊಂಡರು. ಮಾತಿಗೆ ಮಾತು ಹೊರಟಾಗ ಕುತುಬಶಹನು ಸಿವಾಜಿಯ ಬಳಿಯಲ್ಲಿ ಎಷ್ಟು ಆನೆಗಳಿರುತ್ತವೆಂದು ಕೇಳಲು, ಸಿವಾಜಿಯು ದೃಢಕಾಯರಾದ ತನ್ನ ಮಾವಳೆ ಕಾಲಾಳುಗಳನ್ನು ತೋರಿಸಿ "ಇವರೇ ನನ್ನ ಆನೆಗಳು" ಎಂದು ನಸುನಗುತ್ತ ಹೇಳಿದನು. ಹಾಗಾದರೆ ಇವರು ನನ್ನ ಆನೆಗಳೊಡನೆ ಕಾದಬಲ್ಲರೇ ಎಂದು ಪ್ರಶ್ನಮಾಡಲು ಸಿವಾಜಿಯು ಸೆಡವಿನಿಂದ ತಮ್ಮ ಬೇಕಾದಂತಹ ಬಲಿಷ್ಠವಾದ ಆನೆಯನ್ನು ನನ್ನ ಎರಡುಕಾಲಿನ ಆನೆಯೊಡನೆ ಕಾದಬಿಡಬಹುದೆಂದು ಅಟ್ಟಹಾಸದಿಂದ ಹೇಳಿದನು. ಅದನ್ನು ಕೇಳಿ ಸೋಜಿಗಗೊಂಡ ಕುತುಬಶಹನು ತನ್ನ ಪಟ್ಟದ ಆನೆಯನ್ನು ತರಿಸಿದನು. ಸಿವಾಜಿಯು ಸನ್ನೆಮಾಡಲು ಏಸಾಜಿಕಂಕನು ತನ್ನ ಬಿಚ್ಚುಗತ್ತಿಯನ್ನು ಜಳಪಿಸುತ್ತ ಬಂದು ಮುಜರೆಮಾಡಿ ಮುಂದೆ ನಿಂತನು. ಕೂಡಲೆ ಕುತುಬಶಹನು ತನ್ನ ಮಾಹುತನಿಗೆ ಸಂಜ್ಞೆಮಾಡಿದನು. ಆ ಆನೆಯು ಅಬ್ಬರಿಸುತ್ತ ಏಸಾಜಿಯ ಮೇಲೆ ಬಂತು. ಅವನು ಎಳ್ಳಷ್ಟಾದರೂ ಎದೆಗುಂದದೆ ಆನೆಯು ಸನೆಯಕ್ಕೆ (ಹತ್ತಿರ) ಬರುವ ವರೆಗೆ ಅದನ್ನು ದಿಟ್ಟಿಸಿ ನೋಡುತ್ತ ನಿಂತು, ಅದು ಹತ್ತಿರ ಬಂದ ಕೂಡಲೆ ಒಂದೇ ಹೊಡತದಿಂದ ಅದರ ಸೊಂಡೆಯನ್ನು ಕತ್ತರಿಸಿದನು!!! ಆನೆಯು ಕಿರಗುಡುತ್ತ ಹಿಂದಕ್ಕೆ ಓಡಿ ಹೋಯಿತು. ಎಲ್ಲರೂ ಚಕಿತರಾಗಿ ಅವನ ಕಸುವನ್ನೂ ಜಾಣತನವನ್ನೂ ಮುಕ್ತಕಂಠವಾಗಿ ಹೊಗಳಿದರು. ಕುತುಬಶಹನು ಅವನ ಎದೆಗಾರಿಕೆ ಜಾಣ್ಮೆಗಳಿಗೆ ಮೆಚ್ಚಿ, ವಸ್ತ್ರಾಲಂಕಾರಗಳನ್ನು ಅವನಿಗೂ ಉಳಿದ ಹೆಸರುವಾಸಿಯಾದ ದಂಡಾಳುಗಳಿಗೂ ಸಡಿಲುಗಯ್ಯಿಂದ ಕೊಟ್ಟು, ಎಲ್ಲರನ್ನು ಗೌರವಿಸಿದ್ದಲ್ಲದೆ, ಸಿವಾಜಿಯು ಹತ್ತುವ ಕುದುರೆಯ ಕೊರಳಿನಲ್ಲಿ ಒಂದು ರತ್ನದ ಸರವನ್ನು ಹಾಕಿ ಅಪ್ಪಣೆಯನ್ನು ದಯಪಾಲಿಸಿದನು.* ಈ ಹರಳು

---

* ಈ ಶೌರ್ಯದ ಸಂಗತಿಯನ್ನು ಕೇಳೂಸಕರರು ಬರೆಯುತ್ತಾರೆ ಪು. ೪೩೮. ಇದಲ್ಲದೆ ಕುತುಬಶಹನು ಏಸಾಜಿಗೆ ೫,೦೦೦ ರೂ. ಹುಟ್ಟುವಳಿಯಾಗುವ ಗ್ರಾಮುಗಳನ್ನು ಕೊಡಲೆಳಿಸಿದನಂತೆಯೂ ಆ ಸ್ವಾಮಿಭಕ್ತನು ಅದನ್ನು ಸ್ವೀಕರಿಸಿ

ಕಲ್ಲಿನ ಸರವು ಮುಂಬಯಿಯ ವ್ಯಾಪಾರಿಯಾದ ಪುರುಷೋತ್ತಮ ವಿಶ್ರಾಮ ಮವಜಿ ಎಂಬವರ ವಶದಲ್ಲಿ ಇನ್ನೂ ಇರುತ್ತದೆಂತಲೂ ಅದನ್ನು ಅವರು ತನಗೆ ತೋರಿಸಿದರೆಂತಲೂ ಪಂಡಿತ ಜದುನಾಥ ಸರ್ಕಾರರು ಬರೆಯುತ್ತಾರೆ.

ಸಿವಾಜಿಯು ಹೈದರಾಬಾದಿನಲ್ಲಿ ಇರುವ ಕಾಲದಲ್ಲೆಲ್ಲ ಆ ನಗರದಲ್ಲಿ ಉತ್ಸವಸಮಾರಂಭಗಳು ಎಡೆಬಿಡದೆ ನಡೆದಿದ್ದವು. ಊರಿಗೆಲ್ಲ ಹಬ್ಬವೇ ಆಗಿತ್ತು. ಮೆರವಣಿಗೆಗಳೂ ಬೆಟ್ಟಿಗಳೂ ಮೇಜವಾನಿಗಳೂ ನೃತ್ಯಗಾಯನಗಳೂ ಆಟತಮಾಸೆಗಳೂ ಕುಸ್ತಿಕಸರತ್ತುಗಳೂ ವಿನೋದಕೌತುಕಗಳೂ ದಿನಾಲು ನಡೆದಿದ್ದವು. ಒಪ್ಪಂದದ ಮಾತುಕಥೆಗಳೂ ದಂಡಯಾತ್ರೆಯ ಸಿದ್ಧತೆಯೂ ಅಂತರಂಗವಾಗಿ ಒಂದೇ ಸವನೇ ನಡೆದಿದ್ದವು. ಸಿವಾಜಿಯು ಕುತುಬಶಹನಿಗೂ ಅವನ ಪರಿವಾರದವರಿಗೂ ಒಂದು ದೊಡ್ಡ ಮೇಜವಾನಿಯನ್ನುಮಾಡಿ ಸುಲ್ತಾನನಿಗೆ ಅನರ್ಘ್ಯವಾದ ಮುತ್ತುರತ್ನಗಳನ್ನೂ ಅವನ ಪರಿವಾರದವರಿಗೆ ಅಮೌಲ್ಯವಾದ ವಸ್ತ್ರಾಭರಣಗಳನ್ನೂ ಕೊಟ್ಟು ಸನ್ಮಾನಿಸಿದನು. ಕುತುಬಶಹನ ಸರದಾರರು ಸಿವಾಜಿಗೂ ಅವನ ಪರಿವಾರದವರಿಗೂ ಒಂದು ದೊಡ್ಡ ಊಟದ ಸಮಾರಂಭ ಮಾಡಿ ಎಲ್ಲರಿಗೂ ಅವರವರ ದರ್ಜೆಯಂತೆ ಉಡುಗರೆಗಳನ್ನು ಕೊಟ್ಟು ಸಂತೋಷಗೊಳಿಸಿದರು. ಈ ಮೇರೆಗೆ ಉತ್ಸವವಿನೋದಗಳಲ್ಲಿ ನಮ್ಮ ಚರಿತ್ರನಾಯಕನು ಆನಂದದಿಂದ ಕುತುಬಶಹನ ರಾಜಧಾನಿಯಾದ ಹೈದರಾಬಾದಿನಲ್ಲಿ ಒಂದು ತಿಂಗಳು ಕಳೆದನು.

ತನ್ನ ಎಲ್ಲ ಕೋರಿಕೆಗಳನ್ನು ಈಡೇರಿಸಿಕೊಂಡು, ಸಿವಾಜಿಯು ದಂಡಿನೊಡನೆ ಹೈದರಾಬಾದನ್ನು ಬಿಟ್ಟನು (ಮಾರ್ಚ ೧೬೭೭). ಅವನು ದಂಡಿನೊಡನೆ ತೆಂಕಲಿಗೆ ಹೊರಟು ನಿವೃತ್ತಿ (ಕೃಷ್ಣಾಭವನಾಶಿ) ಸಂಗಮದಲ್ಲಿ ಕೃಷ್ಣಾನದಿಯನ್ನು ದಾಟಿ, ಮುಂದೆ ತುಸು ದೂರದಲ್ಲಿದ್ದ ಚಕ್ರತೀರ್ಥದಲ್ಲಿ

---

ದರೆ ಸಿವಾಜಿಯ ಸೇವೆಗೆ ಕೊರತೆ ಬರಬಹುದೆಂದು ಸುಲ್ತಾನನಿಗೆ ನಿದಾರ್ಕ್ಷಿಣ್ಯವಾಗಿ ತಿಳಿಸಿ, ಆ ಕೊಡಬಂದ ಇನಾಮನ್ನು ಸ್ವೀಕರಿಸಲಿಲ್ಲವಂತೆಯೂ ಅವರು ಬರೆದಿರುತ್ತಾರೆ.

ತೀರ್ಥವಿಧಿಯನ್ನು ತೀರಿಸಿಕೊಂಡು, ಅನಂತಪುರದಲ್ಲಿ ತನ್ನನ್ನು ಕಾಯ್ದು ಕೊಂಡಿರಬೇಕೆಂದು ಹೇಳಿ ದಂಡನ್ನು ಅತ್ತಕಳುಹಿ, ತಾನು ಕೆಲವು ಜನ ರೊಡನೆ ಮೂಡಣ ದಾರಿಯನ್ನು ಹಿಡಿದು, ಬುನಾದಿಯಿಂದ ಹೆಸರುವಾಸಿ ಯಾದ ಶ್ರೀಶೈಲಕ್ಷೇತ್ರಕ್ಕೆ ಹೋದನು. ಇಲ್ಲಿ **ಶ್ರೀ ಮಲ್ಲಿಕಾರ್ಜುನನ** ದೇವಸ್ಥಾನವಿರುತ್ತದೆ. ಈ ಗುಡಿಯ ಪ್ರಾಕಾರವು ೬೬೦ ಅಡಿ ಉದ್ದ



ಶ್ರೀಶೈಲ ದೇವಸ್ಥಾನ.

೫೧೦ ಅಡಿ ಅಗಲವಾಗಿದ್ದು, ಅದರ ಸುತ್ತಲು ೨೦ ರಿಂದ ೨೬ ಅಡಿ ಎತ್ತರ ವಾದ ಕಟ್ಟಿದ ಕಲ್ಲಿನ ಗೋಡೆ ಇರುತ್ತದೆ. ಈ ಗೋಡೆಯ ಮೇಲೆ ಕೌಶಲ ದಿಂದ ಕೊರೆದ ನಾನಾತರದ ಪ್ರಾಣಿಗಳ ಮತ್ತು ಪೌರಾಣಿಕ ಕಥೆಗಳ ಅತಿಮನೋಹರವಾದ ಚಿತ್ರಗಳು ಯಾತ್ರಿಕರ ಮನಸ್ಸನ್ನು ಆನಂದಾಶ್ಚ ರ್ಯಗಳಿಂದ ತುಂಬಿ ಬಿಡುತ್ತವೆ. ಈ ಹರವಾದ ಪ್ರಾಕಾರದ ಮಧ್ಯದಲ್ಲಿದ್ದ **ಶ್ರೀ ಮಲ್ಲಿಕಾರ್ಜುನನ** ಚಚ್ಚೌಕಾದ ಗುಡಿಯೂ **ಶ್ರೀ ಪಾರ್ವತಿಯ** ಸಣ್ಣಗುಡಿಯೂ ಹಿಮಾಲಯದಿಂದ ಕನ್ಯಾಕುಮಾರೀ ಭೂಶಿರವರೆಗಿದ್ದ

ಭಾರತೀಯರ ಭಕ್ತಿವಿಶ್ವಾಸಗಳಿಗೆ ಕೇಂದ್ರಸ್ಥಾನವಾಗಿರುತ್ತವೆ. ೧೫೧೩
ರಲ್ಲಿ ವಿಜಯನಗರದ ಸಾರ್ವಭೌಮನಾದ **ಕೃಷ್ಣದೇವ**ರಾಯನು ಶ್ರೀ
ಮಲ್ಲಿಕಾರ್ಜುನ ಗುಡಿಯ ಗೋಡೆಗಳಿಗೂ ಶಿಖರಕ್ಕೂ ಹಿತ್ತಾಳಿಯ ತಗ
ಡನ್ನು ಮಡಿಸಿದ್ದರಿಂದ ದೂರಿಂದಲೇ ಅದರ ಚಕಚಕಾಟವು ಜನರ ಚಿತ್ತ
ವನ್ನು ಆಕರ್ಷಿಸುತ್ತದೆ. ಗುಡ್ಡದಿಂದ ಕೆಳಗೆ ಸುಮಾರು ೧೫೬೩ ಅಡಿಯ
ಕೆಳಗೆ ಕೃಷ್ಣಾನದಿಯು ಹರಿಯುತ್ತದೆ. ಆ ಹೊಳೆಯ ಭಾಗಕ್ಕೆ **ಪಾತಾಳ
ಗಂಗೆ** ಎಂಬ ಹೆಸರು. ಅಲ್ಲೇ ಹೊಳೆಯು ಟಿಸಲು ಒಡೆದುದರಿಂದ ಆ
ಟಿಸಳಿಗೆ **ನೀಲಗಂಗೆ** ಎಂದು ಕರೆಯುತ್ತಾರೆ. ಈ ಪಾತಾಳ ನೀಲಗಂಗೆ
ಗಳು ಪವಿತ್ರ ತೀರ್ಥಗಳೆಂದು ಎಣಿಸಲ್ಪಟ್ಟುದರಿಂದ ಯಾತ್ರಿಕರು ಭಕ್ತಿ
ಯಿಂದ ಇಲ್ಲಿ ಸ್ನಾನಮಾಡಿ. ದರ್ಶನಾರ್ಥವಾಗಿ ಗುಡಿಗಳಿಗೆ ಹೋಗು
ತ್ತಾರೆ. ಈ ತೀರ್ಥಗಳಿಗೆ ಹೋಗುವುದಕ್ಕೆ ಅಡಚಣೆಯಾಗಬಾರದೆಂದು
ವಿಜಯನಗರದ ಒಬ್ಬ ಮಹಾರಾಣಿಯು ಒಂದು ಭವ್ಯವಾದ ಘಾಟನ್ನು
ಕಟ್ಟಿಸಿರುತ್ತಾಳೆ. ಮಾಘಫಾಲ್ಗುಣಮಾಸಗಳಲ್ಲಿ ಹೊತ್ತಾರೆಯಿಂದ ಹೊತ್ತು
ಮುಳುಗುವವರೆಗೆ ಈ ಘಾಟನ್ನು ಏರಿಳಿಯುವ ಗಂಡಸು ಹೆಂಗಸು ಹುಡುಗರ
ನೋಟವು ಅತಿಪ್ರೇಕ್ಷಣೀಯವಾಗಿರುತ್ತದೆ.

ಈ ಪುಣ್ಯಕ್ಷೇತ್ರದಲ್ಲಿ ಸಿವಾಜಿಯು ೧೦ ದಿವಸ ಉಳಿದು, ಶ್ರೀ ಮಲ್ಲಿ
ಕಾರ್ಜುನ ಪಾರ್ವತಿಯಮ್ಮನವರಿಗೆ ಪಂಚಾಮೃತಾಭಿಷೇಕವನ್ನೂ, ಲಕ್ಷ
ಬ್ರಾಹ್ಮಣ ಭೋಜನವನ್ನೂ ಮಾಡಿಸಿದ್ದಲ್ಲದೆ, ಆ ರಮ್ಯವಾದ ಸ್ಥಳದಲ್ಲಿ
ಒಂದು ಘಾಟನ್ನೂ ಮಠವನ್ನೂ ಧರ್ಮಶಾಲೆಯನ್ನೂ ಕಟ್ಟಿಸಿದನು.
ದೇವರ ಪೂಜಾರ್ಥವಾಗಿ ದೇವರಿಗೆ ವರ್ಷಾಶನ ಹಾಕಿಕೊಟ್ಟನೆಂದು ಕೆಲ
ವರು ಬರೆಯುತ್ತಾರೆ. ಇಲ್ಲಿರುವಾಗ ದೇವತಾಸಾನ್ನಿಧ್ಯದಿಂದಲೂ ಅಲ್ಲಿಯ
ಶಾಂತಿಮಯವಾದ ವಾತಾವರಣದಿಂದಲೂ ಅಪ್ರತಿಮವಾದ ಸೃಷ್ಟಿಸೌಂದ
ರ್ಯದಿಂದಲೂ ಅಲ್ಲಿ ನೆರೆದಿದ್ದ ಸಾಧುಸಂತರ ಸಂಸರ್ಗದಿಂದಲೂ ನಮ್ಮ
ಚರಿತ್ರನಾಯಕನಲ್ಲಿ ವೈರಾಗ್ಯಾತಿರೇಕವು ಹುಟ್ಟಿದ್ದರಿಂದ, ಅವನು ತನ್ನ ಶಿರ
ಚ್ಛೇದವನ್ನು ಮಾಡಿ ದೇವರಿಗೆ ಪ್ರಾಣವನ್ನರ್ಪಿಸಬೇಕೆಂದು ಸಿದ್ಧನಾದನು.
ಅದನ್ನು ಕೇಳಿ ಅವನ ಸಂಗಡಿಗರು ಆತ್ಮಹತ್ಯವು ಶಾಸ್ತ್ರನಿಷೇಧವೆಂತಲೂ
ಆವನು ಇನ್ನೂ ಮಾಡತಕ್ಕ ದೇವತಾಕಾರ್ಯಗಳು ವಿಪುಲವಾಗಿರುತ್ತ

ವೆಂತಲೂ ಪರಿಪರಿಯಿಂದ ಬೋಧಿಸಿ, ಅವನನ್ನು ಆ ನಿವೃತ್ತಿಮಾರ್ಗ ದಿಂದ ತಿರುಗಿಸಿದರೆಂದು ಎಲ್ಲ ಚರಿತ್ರಕಾರರು ಬರೆಯುತ್ತಾರೆ.

ಶ್ರೀಶೈಲದಿಂದ ಹೊರಟು ಅನಂತಪುರದಲ್ಲಿದ್ದ ತನ್ನ ದಂಡನ್ನು ಕೂಡಿ, ಸಿವಾಜಿಯು ಮುಂದೆ ಸಾಗಿ ಮದ್ರಾಸದಿಂದ ೭ ಮೈಲು ದೂರಾಗಿದ್ದ **ಪೆದ್ದಪೋಲಮ** ಎಂಬಲ್ಲಿ ಕೆಲವು ದಿವಸ ತಂಗಿದನು (ಮೇ). ಮದ್ರಾಸದಲ್ಲಿದ್ದ ಇಂಗ್ಲಿಷ ವರ್ತಕರ ಜೀವ ಬಿಟ್ಟು ಹಿಡಿಯಲಾರಂಭಿಸಿತು. ಆದರೆ ಸಿವಾಜಿಯು ಅವರಿಗೇನೂ ತೊಂದರೆಕೊಡದೆ, ತನಗೆ ಬೇಕಾದ ಕೆಲವು ಔಷಧೀಯ ಜೀನಸುಗಳನ್ನು ಕಳುಹಿಕೊಡಬೇಕೆಂದು ಕಾಗದ ಬರಿಸಿ, ಒಬ್ಬ ಬ್ರಾಹ್ಮಣನನ್ನು ಅವರ ಬಳಿಗೆ ಕಳುಹಿದನು (೧೪ ಮೇ). ಅವರು ೬೦ ಹೊನ್ನು ಬೆಲೆಬಾಳುವ ಮದ್ದುಗಳನ್ನೂ ಸಕಲಾತಿ ಮುಂತಾದ ಕೆಲವು ಅರಿವೆಗಳನ್ನೂ ಕಾಣಿಕೆಯಾಗಿ ಕಳುಹಿದರು. ಮತ್ತೊಮ್ಮೆ ಅವನು ಅವರಿಗೆ ಬರೆಯಲು ಅವರು ೫೨ ಹೊನ್ನಿನ ಸಾಮಾನುಗಳನ್ನು ಕಳುಹಿದರು. ಮರಾಟರು ಮದ್ರಾಸವನ್ನು ಹೊಗದಿದ್ದರೂ **ತಿಮರಿ** ಎಂಬಲ್ಲಿದ್ದ ಇಂಗ್ಲಿಷರ ವಖಾರನ್ನು ಸುಲಿದು ೨,೦೦೦ ಹೊನ್ನುಗಳನ್ನು ಒಯ್ದರೆಂದು ಇಂಗ್ಲಿಷ ವರ್ತಕರು ಬರೆದಿಟ್ಟಿದ್ದಾರೆ.

ಪೆದ್ದಪೋಲಮವನ್ನು ಬಿಟ್ಟ ಬಳಿಕ ಮರಾಟರ ದಾಳಿಯು ಸುರುವಾಯಿತೆನ್ನಬಹುದು. ಆದರೆ ಹಣುಮಂತೆ ರಘುನಾಥರಾಯನು ಈ ಮೊದಲೇ ಎಷ್ಟೋ ಕಿಲ್ಲೇದಾರ ಜಹಗೀರದಾರರನ್ನು ಒಲಿಸಿಕೊಂಡಿದ್ದನೆಂಬುದನ್ನು ಮರೆಯಕೂಡದು. ಸಿವಾಜಿಯು ಪೆದ್ದಪೋಲಮದಿಂದ ಹೊರಟು, ೧೦,೦೦೦ ರಾಹುತರೊಡನೆ ಭದ್ರತೆಯ ವಿಷಯವಾಗಿ ಹೆಸರುವಾಸಿಯಾದ **ಜಿಂಜಿ**ಕೋಟೆಯ ಮುಂದೆ ಬರಲು, ಅಲ್ಲಿಯ ಆದಿಲ್ಶಾಹಿ ಕಿಲ್ಲೇದಾರನು ಕೈಬೆಚ್ಚಗೆ ಮಾಡಿಸಿಕೊಂಡು (ಲಂಚ ತೆಗೆದುಕೊಂಡು) ಆ ಕೋಟೆಯನ್ನು ಅವನಿಗೆ ಒಪ್ಪಿಸಿ ಬಿಟ್ಟನು (ಮೇ). ಸಿವಾಜಿಯು ಆ ಕೋಟೆಯನ್ನು ಒಬ್ಬ ಮಾವಳೆ ಕಿಲ್ಲೇದಾರನ ವಶದಲ್ಲಿ ಕೊಟ್ಟು, ಅವನಿಗೆ ಅದನ್ನು ದುರಸ್ತುಮಾಡಲಿಕ್ಕೆ ಹೇಳಿ, ಅದರ ಸುತ್ತಲಿನ ಪ್ರಾಂತಕ್ಕೆ ವಿಠ್ಠಲ ಪಿಲ್ಲದೇವ ಗರುಡನೆಂಬವನನ್ನು ಸುಬೇದಾರನನ್ನಾಗಿ ನೇಮಿಸಿ, ಮುಂದೆ ಸಾಗಿ

ತ್ರಿನೊಮಲೆ ಪ್ರಾಂತವನ್ನು ಹೊಕ್ಕನು. ಈ ಪ್ರಾಂತದಲ್ಲಿ **ಅರ್ಣಿ, ತಿರುವಡಿ, ವೇಲೂರು** ಎಂಬ ಮೂರು ಪ್ರಸಿದ್ಧವಾದ ಕೋಟೆಗಳಿದ್ದುವು. ಈ ಕೋಟೆಗಳಲ್ಲಿದ್ದ ಆದಿಲ್ಶಾಹಿ ಕಿಲ್ಲೇದಾರರು ಲಂಚಕ್ಕೆ ವಶವಾಗದ್ದರಿಂದ ಅವರೊಡನೆ ಹೋರಾಡ ಬೇಕಾಯಿತು. ಈ ಕೋಟೆಗಳನ್ನು ಮುತ್ತಲಿಕ್ಕೆ ಬೇರೆ ಬೇರೆ ದಂಡಿನ ಭಾಗಗಳನ್ನು ಕಳುಹಿ* ಸಿವಾಜಿಯು ಮುಂದೆ ಹೊರಟು, ತಂಜಾವರದಿಂದ ೧೦ ಮೈಲು ದೂರಿರುವ ತಿರುಮಲವಾಡಿ ಎಂಬಲ್ಲಿ ಪಾಳೆಯ ಹಾಕಿಕೊಂಡು ನಿಂತನು (ಜುಲೈ). ಅಲ್ಲಿರುವಾಗ ನೆಲ್ಲೂರ ರಾಮಣ್ಣನೆಂಬುವನು ಮದ್ರಾಸದ ಇಂಗ್ಲಿಷವರ್ತಕರು ಕಳುಹಿದ ಜೀನಸುಗಳನ್ನು ತಂದು ಅವನಿಗೆ ಒಪ್ಪಿಸಿದನು.

ಈಕಾಲಕ್ಕೆ **ಚೊಕ್ಕನಾಥ**ನೆಂಬುವನು ಮಧುರಾಪ್ರಾಂತದ ಪಾಳೆಯಗಾರನಾಗಿದ್ದನು. ಅವನಿಗೂ ವೆಂಕೋಜಿಗೂ ಬಲು ಗೆಳೆತನವಿತ್ತು. ಸಿವಾಜಿಯು ತಿರುಮಲವಾಡಿಯಲ್ಲಿರುವಾಗ ಈ ಚೊಕ್ಕನಾಥನು ತನ್ನೊಬ್ಬ ವಕೀಲನನ್ನು ಅವನ ಬಳಿಗೆ ಕಳುಹಿದನು. ಸಿವಾಜಿಯು ಒಂದು ಕೋಟಿ ರೂಪಾಯಿ ಕಪ್ಪಗಾಣಿಕೆಯಾಗಿ ಬೇಡಲು, ಆ ವಕೀಲನು ತನ್ನ ಒಡೆಯನಿಂದ ಮೈಸೂರನಾಯಕನೂ ವೆಂಕೋಜಿಯೂ ಹಿಂದೆ ಕಸಕೊಂಡ ಭಾಗಗಳನ್ನು ತಿರುಗಿ ಕೊಡಿಸಿದರೆ, ಅವನು ೭ ಲಕ್ಷರೂಪಾಯಿ ಕೊಡುವನೆಂದು ಹೇಳಿದನು. ಒಂದೆರಡು ದಿವಸ ಆರೆದಾಟವಾದ ತರುವಾಯ ಸಿವಾಜಿಯು ಆ ವಕೀಲನೊಡನೆ ರಘುನಾಥರಾಯನನ್ನು ಮಧುರೆಗೆ ಕಳುಹಿದನು. ಅವನು ನಾಯಕನನ್ನು ೩೫ ಲಕ್ಷರೂಪಾಯಿ ಕೊಡಲಿಕ್ಕೆ ಒಡಂಬಡಿಸಿ, ಏಳೂವರೆ ಲಕ್ಷ ರೂಪಾಯಿಗಳನ್ನು ಸಂಚುಗಾರವಾಗಿ ತೆಗೆದುಕೊಂಡು ತಿರುಗಿ ಬಂದನು.

ತಿರುಮಲವಾಡಿಗೆ ಬಂದ ಕೂಡಲೆ ಸಿವಾಜಿಯ ಸೂಚನೆಯಂತೆ ವೆಂಕೋಜಿಯು ತನ್ನ ಮಂತ್ರಿಗಳನ್ನು ಸಂಧಾನಕ್ಕೋಸ್ಕರ ಕಳುಹಿದನು. ಅವರೂ ಸಿವಾಜಿಯ ೩ ಜನ ಮಂತ್ರಿಗಳೂ ಕೂಡಿ ಹೋಗಿ, ವೆಂಕೋಜಿ

---

* ತಿರುವಡಿಯು ಜೂನದಲ್ಲಿಯೂ, ಅರ್ಣಿಯು ಅಕ್ಟೋಬರದಲ್ಲಿಯೂ ವೆಲ್ಲೂರು ಮರುವರುಷ ಆಗಸ್ಟು ತಿಂಗಳಲ್ಲಿಯೂ ಮರಾಟರ ಕಯ್ಸೇರಿದವು.

ಯನ್ನು ಕರೆದರು. ಅವನು ೨,೦೦೦ ರಾಹುತರೊಡನೆ ತನ್ನ ಅಣ್ಣನ ಭೆಟ್ಟಿ ಗೋಸ್ಕರ ತಿರುವುಲವಾಡಿಗೆ ಬಂದು ತಂಗಿದನು (೧೪ ಜುಲೈ). ಮುಂದೆಲ ದಿವಸಗಳ ವರೆಗೆ ಅಣ್ಣತಮ್ಮಂದಿರು ಪ್ರೀತಿಭೋಜನಗಳಲ್ಲಿಯೂ ಆಟನೋಟಗಳಲ್ಲಿಯೂ ವಿನೋದೋತ್ಸವಗಳಲ್ಲಿಯೂ ಸುಖದಿಂದ ಕಾಲಕಳೆದರು. ೯ ನೆಯ ದಿವಸ ಸಿವಾಜಿಯು ಪಿತ್ರಾರ್ಜಿತ ಚರಸ್ಥಿರ ಆಸ್ತಿಗಳಲ್ಲಿ ತನಗೆ ಮುಕ್ಕಾಲುವಾಸಿ ಪಾಲನ್ನುಕೊಟ್ಟು, ಉಳಿದ ಕಾಲುವಾಸಿ ಪಾಲನ್ನು ವೆಂಕೋಜಿಯು ಇಟ್ಟುಕೊಳ್ಳಬೇಕೆಂದು ಸೂಚಿಸಿದನು. ಇದಕ್ಕೆ ವೆಂಕೋಜಿಯು ಒಡಂಬಡದ್ದರಿಂದ ಸಿವಾಜಿಯು ಸಿಟ್ಟಿಗೆದ್ದು, ಕೀಳನೆಂತಲೂ ಸೋಮಾರಿಯೆಂತಲೂ ಜೀನನೆಂತಲೂ ಅವನನ್ನು ಹಳಿದನು. ಆ ಕಾಲಕ್ಕೆ ತನ್ನ ಅಣ್ಣನು ಆಡಿದ್ದನ್ನೆಲ್ಲ ಸುಮ್ಮನೇ ತಾಳಿಕೊಂಡು, ಅದೇ ದಿವಸ ಇರಳಿನಲ್ಲಿ ಯಾರಿಗೂ ಹೇಳದೆ ಕೇಳದೆ ೫ ಮಂದಿ ಸ್ವಾರರೊಡನೆ ಅವನು ತಂಜಾವರಕ್ಕೆ ಓಡಿ ಹೋದನು (೨೩ ಜುಲೈ).* ಮರುದಿವಸ ಬೆಳಿಗ್ಗೆ ಈ ಪಲಾಯನದ ಸುದ್ದಿಯು ತಿಳಿದ ಕೂಡಲೆ ಸಿವಾಜಿಯು ಸಿಟ್ಟು ಬೆಂಕಿಯಾಗಿ ವೆಂಕೋಜಿಯನ್ನು ಬಾಯಿಗೆ ಬಂದಂತೆ ಬಯ್ದು, ಅವನ ಕಾರಭಾರಿಯಾದ ಜಗನ್ನಾಥ ವೆಂಕೋಜಿಯನ್ನೂ ಅವನ ಮುಜುಮದಾರರಾದ ಕೊನ್ಹೇರಮಹಾದೇವ—ಸಿವಾಜಿಶಂಕರರನ್ನೂ ನೀಲೋಜಿನಾಯಕನೆಂಬ ಒಬ್ಬ ಸಾಹುಕಾರನನ್ನೂ ಕಾವಲಲ್ಲಿರಿಸಿ, ಹನುಮಂತೆ ರಘುನಾಥರಾಯನನ್ನು ದಂಡಿನೊಡನೆ ಕಳುಹಿ, ತಂಜಾವರವನ್ನು ಹಿಡಿದುಕೊಳ್ಳುವೆನೆಂದು ಗದ್ದರಿಸಿದನು. ಆದರೆ ನಮ್ಮ ಚರಿತ್ರನಾಯಕನು ಸಿಟ್ಟಿನ ಕೈಯಲ್ಲಿ ಬುದ್ಧಿಕೊಟ್ಟು, ಅಲ್ಲದ ಸಲ್ಲದ ಕೆಲಸ ಮಾಡಿ ಬಳಿಕ ಹಳಹಳಿಸುತ್ತ ಕೂಡ್ರುವ ಸ್ವಭಾವದವನಾಗಿದ್ದಿಲ್ಲ. ಆದ್ದರಿಂದ ಮರುದಿವಸವೇ ಸಿಟ್ಟು ಇಳಿದು ಅವನಲ್ಲಿ ವಿವೇಕವು ತಲೆದೋರಿದ್ದು

---

* ಸಿವಾಜಿಯು ಪಿತ್ರಾರ್ಜಿತ ಆಸ್ತಿಯ ಪಾಲನ್ನುಕೇಳದೆ, ತನ್ನ ತಂದೆಯು ದಿನಾಲು ಪೂಜೆಮಾಡುತ್ತಿದ್ದ ೧೨ ಬಿರುದುಗಳನ್ನು ಮಾತ್ರ ತನಗೆ ಕೊಡಬೇಕೆಂದು ಕೇಳಲು, ಅವನ್ನು ಕೊಡುವುದು ಇಷ್ಟವಿಲ್ಲದ್ದರಿಂದ ವೆಂಕೋಜಿಯು ಓಡಿಹೋದನೆಂದು ಶೇ. ವಾ. ರಡ್ಡಿಯವರು ಬರೆಯುತ್ತಾರೆ. ಪು. ೨೪೨_೨೪೩. ಸಿವಾಜಿಯು ಪಿತ್ರಾರ್ಜಿತ ಆಸ್ತಿಯ ಅರ್ಧಪಾಲನ್ನು ಮಾತ್ರ ಬೇಡಿದನೆಂದು ಕೇಳುಸಕರರು ಬರೆಯುತ್ತಾರೆ. ಪು ೪೪೯.

ರಿಂದ ತನ್ನ ತಮ್ಮನ ಸಂಗಡಿಗರನ್ನೆಲ್ಲ ಸೆರೆಯಿಂದ ಬಿಡಿಸಿ, ಅವರಿಗೆಲ್ಲ ವಸ್ತ್ರಾಲಂಕಾರಗಳನ್ನು ಕೊಟ್ಟು, ತಂಜಾವರಕ್ಕೆ ತಿರುಗಿ ಹೋಗುವುದಕ್ಕೆ ಅಪ್ಪಣೆಯನ್ನಿತ್ತನು.

ನಮ್ಮ ಚರಿತ್ರನಾಯಕನು ತನ್ನ ತಮ್ಮನ ರಾಜಧಾನಿಯನ್ನು ಹಿಡಿದುಕೊಂಡು ತನ್ನ ದುರ್ಲೌಕಿಕವನ್ನು ಮಾಡಿಕೊಳ್ಳುವಷ್ಟು ಲೋಭಿಯಾಗಿರಲಿಲ್ಲ. ಆದ್ದರಿಂದ ಅವನು ತಂಜಾವರಕ್ಕೆ ದಂಡುಕಳಿಸುವ ವಿಚಾರವನ್ನು ಬಿಟ್ಟು, ಕೊಲರೂನ ಹೊಳೆಯ ಬಡಗಲಿಗಿದ್ದ ತನ್ನ ತಮ್ಮನ ನಾಡನ್ನೆಲ್ಲ ಕಯ್ವಶಮಾಡಿಕೊಂಡು, ವಾಲಿಗೊಂಡಪುರದಿಂದ ಹೊರಟು, ತಿತ್ತಗುಡಿಗೆ ಹೋಗಿ, ಅಲ್ಲಿಂದ ತನ್ನ ದಂಡನ್ನು ಎಳೆವಣ ಸೂರಿಗೆ ಕಳುಹಿ, ತಾನು ಕೆಲಗೆಳೆಯರೊಡನೆ ವೃದ್ಧಾಚಲದಲ್ಲಿದ್ದ ಪ್ರಸಿದ್ಧ ಶಿವದೇವಾಲಯಕ್ಕೆ ಹೋದನು (ಜುಲೈ ಕೊನೆ). ಅಲ್ಲಿ ಅಭಿಷೇಕಪೂಜಾನೈವೇದ್ಯಗಳನ್ನು ಮಾಡುತ್ತಿರುವಾಗ ಕಡಲೂರಲ್ಲಿದ್ದ ಡಚ್ಚವರ್ತಕರು ರೇಶ್ಮೆವಸ್ತ್ರ, ಚಂದನಕೊರಡು, ಗುಲಾಬನೀರು, ಮಾಲ್ದೀವದ ತೆಂಗು, ಲವಂಗ, ಕತ್ತಿಯ ಅಲಗು ಮುಂತಾದ ಜೀನಸುಗಳನ್ನು ಕಾಣಿಕೆಯಾಗಿ ಕಳುಹಿದರು. ಅಲ್ಲಿಂದ ಹೊರಟು ಸಿವಾಜಿಯು ತನ್ನ ದಂಡನ್ನು ಕೂಡಿಕೊಂಡು, ವೆಲ್ಲೂರಿನ ನೈರುತ್ಯಕ್ಕೆ ೪೦ ಮೈಲು ದೂರಿರುವ ವಾನಿಯಂಬಾಡಿ ಎಂಬ ಊರಿಗೆ ಬಂದನು. ಅಲ್ಲಿರುವಾಗ ಮದ್ರಾಸದಲ್ಲಿದ್ದ ಇಂಗ್ಲಿಷ ವರ್ತಕರಿಗೆ ಒಂದು ಪತ್ರ ಕಳುಹಿದನು. ಅದರಲ್ಲಿ ತೋಫಿನ ಬಂಡಿಗಳನ್ನು ಕಟ್ಟಬಲ್ಲವರೂ ಗಣಿಗಳಲ್ಲಿ ಕೆಲಸ ಮಾಡಬಲ್ಲವರೂ ಆದ ೨೫ ಜನರು ಬೇಕಾಗಿರುತ್ತಾರೆಂತಲೂ ಅವರಿಗೆ ತಕ್ಕ ಸಂಬಳವು ದೊರೆಯುವುದೆಂತಲೂ ಬರೆದಿತ್ತು. ಅದಕ್ಕೆ ಉತ್ತರವಾಗಿ ಅಂತಹ ಜನರು ತಮ್ಮಲ್ಲಿಲ್ಲೆಂದು ಇಂಗ್ಲಿಷರು ಬರೆದರು (ಸೆಪ್ಟಂಬರ).

ವಾನಿಯಂಬಾಡಿಯಿಂದ ಹೊರಟು, ಸಿವಾಜಿಯು ದಾರಿಯಲ್ಲಿ **ಪೋರ್ಟನೋವೊ** ಪಟ್ಟಣವನ್ನು ಸುಲಿದು, ಅರ್ಣಿಕೋಟೆಯನ್ನು ಹಿಡಿದುಕೊಂಡು, ಪೂರ್ವಘಟ್ಟವನ್ನು ದಾಟಿ, ಮೈಸೂರು ಸೀಮೆಯನ್ನು ಹೊಕ್ಕು ಕೋಲಾರ, ಹೊಸಕೋಟೆ, ಬೆಂಗಳೂರು, ಬಾಳಾಪುರ, ಸೀರಾ

ಮುಂತಾದ ಸ್ಥಳಗಳನ್ನು ಕಯ್ವಶ ಮಾಡಿಕೊಂಡನು. ಅಷ್ಟರೊಳಗೆ ಮೊಗಲರು ಪನ್ಹಾಳಕೋಟೆಯನ್ನು ಮುತ್ತುವುದಕ್ಕೆ ಹವಣಿಸುತ್ತಾರೆಂಬ ಸುದ್ದಿಯು ಬಂದುದರಿಂದ, ತಾನು ಗೆದ್ದನಾಡಿಗೆ ರಘುನಾಥರಾಯನನ್ನು ಸುಬೇದಾರನನ್ನಾಗಿ ನಿಯಮಿಸಿ, ಮಾನಾಜಿ ಮೋರೆ ಎಂಬ ದಳವಾಯಿಯನ್ನು ಅವನಿಗೆ ನೆರವಾಗಲಿಕ್ಕಿಟ್ಟು, ಆನಂದರಾಯನೆಂಬ ದಳವಾಯನ್ನು ತನ್ನ ಸಂಗಡ ಕರೆದುಕೊಂಡು, ಅವಸರದಿಂದ ಬಳ್ಳಾರಿ, ಕೊಪ್ಪಳ, ಲಕ್ಷ್ಮೇಶ್ವರ, ಧಾರವಾಡ, ಸಂಪಗಾವಿ ಮಾರ್ಗವಾಗಿ ಬಂದು ಪನ್ಹಾಳಕೋಟೆಯನ್ನು ಸೇರಿದನು (ಮಾರ್ಚ ೧೬೭೮).



ವೆಲ್ಲೂರು ಕೋಟೆ.

ಸಿವಾಜಿಯು ಪನ್ಹಾಳಕ್ಕೆ ತಿರುಗಿ ಹೋಗುವಾಗ ಭದ್ರವಾದ ವೆಲ್ಲೂರುಕೋಟೆಯು ಮರಾಟರ ಕಯ್ವಶವಾಗಿದ್ದಿಲ್ಲ. ಆ ಕೋಟೆಯಲ್ಲಿದ್ದ ಆದಿಲ್ಶಾಹಿಯ ಕಿಲ್ಲೇದಾರನಾದ ಅಬ್ದುಲಖಾನನು ಕೆಚ್ಚೆದೆಯ ಗಂಡುಗಲಿಯಾಗಿದ್ದನು. ಆ ಕೋಟೆಯೊಳಗಿದ್ದ ದಂಡು ದಿನ ದಿನಕ್ಕೆ ಸವೆದು ೧,೮೦೦ ರಿಂದ ೨೦೦ ಆಗಿದ್ದರೂ ಆ ಶೂರ ಸಿಪಾಯಿಯು ಮರಾಟರ ಆಟ

ಸಾಗಗೊಡಲಿಲ್ಲ. ಅವರು ೧೪ ತಿಂಗಳಗಳ ವರೆಗೆ ಅದನ್ನು ಮುತ್ತಿದರೂ ಅದು ಅವರ ಕಯ್ಸೇರುವ ಸಂಭವತೋರಲಿಲ್ಲ. ಆದ್ದರಿಂದ ಮರಾಟರು ಬೇಸತ್ತು, ಅವನಿಗೆ ೫೦,೦೦೦ ಹೊನ್ನು ಲಂಚಕೊಟ್ಟು, ಕೋಟೆಯನ್ನು ಬಿಟ್ಟುಕೊಡಲಿಕ್ಕೆ ಅವನನ್ನು ಒಡಂಬಡಿಸಿದರು (ಅಗಸ್ಟ ೧೬೭೮).

ಈ ಕರ್ನಾಟಕದ ದಾಳಿಯಲ್ಲಿ ನಮ್ಮ ಚರಿತ್ರನಾಯಕನಿಗೆ ವರ್ಷಕ್ಕೆ ೨೦ ಲಕ್ಷ ಹೊನ್ನು ಉತ್ಪನ್ನವಾಗುವಷ್ಟು ರಾಜ್ಯವೂ ೧೦೦ ಕೋಟೆಗಳೂ ದೊರೆದವು. ಈ ವಿಷಯವಾಗಿ ಫಿರಂಗಿ ವರ್ತಕರು ಬರೆದಿಟ್ಟುದೇನೆಂದರೆ:—ಸಿವಾಜಿಗೆ ರಾಜ್ಯಕ್ಕಿಂತ ಲೂಟಿಯು ಹೆಚ್ಚುಪ್ರಿಯಕರವಾಗಿತ್ತು. ಅವನು ಕರ್ನಾಟಕದಲ್ಲಿದ್ದ ಎಲ್ಲ ಹಣವಂತರನ್ನು ಗೊತ್ತುಹಚ್ಚಿ, ಅವರನ್ನು ನುರಿಯಾಗಿ ಹಿಂಡಿದನು. ಅವನ ಲೆಕ್ಕಿಗರು ಅವನು ದೊರಕಿಸಿದ ಸುಲಿಗೆಯ ಲೆಕ್ಕವು ತಮ್ಮಿಂದಾಗದೆಂದೆಣಿಸಿ, ಅದರ ಗೋಜಿಗೇ ಹೋಗಲಿಲ್ಲ.

ಸಿವಾಜಿಯು ಕರ್ನಾಟಕದಲ್ಲಿರುವಾಗ, ಕಪ್ಪೆನುಂಗಿದ ಹಾವಿನಂತಾಗಿದ್ದ ವೆಂಕೋಜಿಯು ಅವನು ಹೋದ ಬಳಿಕ ಪರೆಯುಚ್ಚಿದ ಹಾವಿನಂತೆ ಹರಿದಾಡ ತೊಡಗಿದನು. ಅವನ ಮನಸ್ಸಿನಲ್ಲಿ ಎಲ್ಲರನ್ನು ಒಟ್ಟುಗೂಡಿಸಿ, ಸಿವಾಜಿಯ ಜನರನ್ನು ಕರ್ನಾಟಕದಿಂದ ಅಟ್ಟಬೇಕೆಂಬ ಬಯಲುಬಯಕೆಯು ತಲೆದೋರಿತು. ಅದಕ್ಕೋಸ್ಕರ ಅವನು ತನಗೆ ನೆರವಾಗಲಿಕ್ಕೆ ದಂಡು ಕಳುಹಬೇಕೆಂದು ಅದಿಲ್ಶಾಹಿ ಸರಕಾರವನ್ನು ಬಿನ್ನವಿಸಿ, ಮಧುರಾಮೈಸೂರುಗಳ ನಾಯಕರೊಡನೆಯೂ ನೆರೆಹೊರೆಯಲ್ಲಿದ್ದ ಮುಸಲ್ಮಾನ ಜಹಗೀರದಾರರೊಡನೆಯೂ ಒಳಸಂಚು ನಡಿಸಿದನು. ಇವರೆಲ್ಲರೂ ವೆಂಕೋಜಿಯ ಯೋಗ್ಯತೆಯನ್ನು ಅರಿತವರಾದ್ದರಿಂದ ಒಬ್ಬರೂ ನೆರವಾಗುವುದಕ್ಕೆ ಒಪ್ಪಲಿಲ್ಲ. ಆದರೂ ಎಚ್ಚರಗೇಡಿಯಾದ ವೆಂಕೋಜಿಯು ೪,೦೦೦ ರಾಹುತರನ್ನೂ ೧೦,೦೦೦ ಕಾಲಾಳುಗಳನ್ನೂ ತೆಗೆದುಕೊಂಡು ತಂಜಾವರದಿಂದ ಹೊರಟು, ಕೊಲರೂನ ಹೊಳೆಯನ್ನು ದಾಟಿ, ವಾಲಿಗೊಂಡಪುರದಲ್ಲಿದ್ದ ಸಿವಾಜಿಯ ದಳವಾಯಿಯಾದ ಸಂತಾಜಿಯನ್ನು ಕೆಣಕಿದನು. ಸಂತಾಜಿಯ ಬಳಿಯಲ್ಲಿ ೧೨,೦೦೦ ದಂಡಾಳುಗಳು

ಮಾತ್ರ ಇದ್ದರು. ಸಂತಾಜಿಯು ಕಾಳಗಕ್ಕೆ ಸಿದ್ಧನಾಗಿರದ್ದರಿಂದ ವೆಂಕೋಜಿಗೆ ಸುಲಭವಾಗಿ ಗೆಲುವು ದೊರೆಯಿತು (೨೫ ನವಂಬರು). ಸಂತಾಜಿಯ ದಂಡು ಓಡಿಹೋಗಲು, ತಂಜಾವರದ ರಾಹುತರು ಅದನ್ನು ೨ ಮೈಲುಗಳ ವರೆಗೆ ಬೆನ್ನಟ್ಟಿ ತಮ್ಮ ಪಾಳೆಯಕ್ಕೆ ತಿರುಗಿ ಬಂದರು. ಸಂತಾಜಿಯು ಬಲು ಹೇವಿನವನಾದ್ದರಿಂದ ಈ ಅಕಸ್ಮಾತ್ತಾಗಿ ಬಂದ ಸೋಲನ್ನು ಸಹಿಸುವುದು ಅವನಿಂದಾಗಲಿಲ್ಲ. ಆದ್ದರಿಂದ ಅವನು ತನ್ನ ಕಯ್ಕೆಳಗಿನವರನ್ನು ಹುರಿದುಂಬಿಸಿ, ದಂಡಾಳುಗಳನ್ನು ಹುರಿಗೊಳಿಸಿ, ಅದೇ ದಿವಸ ನಡಿರುಳಿನಲ್ಲಿ ವೆಂಕೋಜಿಯ ಪಾಳೆಯದ ಮೇಲೆ ಬಿದ್ದು, ಅವನ ದಂಡನ್ನು ಚದರಿಸಿ, ೧,೦೦೦ ಕುದುರೆಗಳನ್ನೂ ೩ ಮಂದಿ ದಳವಾಯಿಗಳನ್ನೂ ಸೆರೆ ಹಿಡಿದನು. ವೆಂಕೋಜಿಯು ನಿರುಪಾಯನಾಗಿ ಶರಣುಬಂದು ಒಪ್ಪಂದವನ್ನು ಬೇಡಿಕೊಂಡನು. ಈ ಗೆಲವಿನ ಸುದ್ದಿಯನ್ನೂ ವೆಂಕೋಜಿಯ ಬೇಡಿಕೆಯನ್ನೂ ಸಂತಾಜಿಯು ಜಿಂಜಿಯಲ್ಲಿದ್ದ ರಘುನಾಥರಾಯನ ಮುಖಾಂತರವಾಗಿ ಸಿವಾಜಿಗೆ ತಿಳಿಸಿದನು.

ನಮ್ಮ ಚರಿತ್ರನಾಯಕನ ಕಕ್ಕುಲತೆಯೂ ದೂರದೃಷ್ಟಿಯೂ ಉದಾರತನವೂ ಈ ಸಂದರ್ಭದಲ್ಲಿ ಹೊರಬಿದ್ದವು. ಅವನು ಅವರಂಗಜೇಬನಂತೆ ರಾಜ್ಯಲೋಭಿಯಾಗಿದ್ದರೆ, ವೆಂಕೋಜಿಯನ್ನು ಸೆರೆಯಲ್ಲಿಟ್ಟು ಅವನ ಪ್ರಾಂತವನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಳ್ಳುತ್ತಿದ್ದನು. ಅವನು ಹಾಗೆ ಮಾಡದೆ ತನ್ನ ನೈಸರ್ಗಿಕವಾದ ಮುತ್ಸದ್ದಿತನವನ್ನು ಹೊರಗೆಡವಿದನು. ಅವನು ತಾನು ಗೆದ್ದ ನಾಡಿನ ಒಂದು ಸಣ್ಣಭಾಗವನ್ನು ತನ್ನ ತಮ್ಮನಿಗೆ ಕೊಟ್ಟು ಅವನ ವಿಷಯವಾಗಿ ತನ್ನಲ್ಲಿದ್ದ ಪ್ರೀತಿಯನ್ನು ವ್ಯಕ್ತಗೊಳಿಸಿದನು. ವೆಂಕೋಜಿಯು ಸೋಮಾರಿಯೂ ವಿಲಾಸಿಯೂ ಆದ್ದರಿಂದ ಅವನನ್ನು ತಂಜಾವರದ ಸಂಸ್ಥಾನಿಕನಾಗಿ ನೇಮಿಸಿ ಅವನ ಕಯ್ಕಟ್ಟಿ, ತಾನು ಗೆದ್ದ ಕರ್ನಾಟಕದ ಆಡಳತೆಯನ್ನು ವೆಂಕೋಜಿ ರಘುನಾಥರಾಯ ಇವರಿಬ್ಬರಿಗೂ ಒಪ್ಪಿಸಿ, ತನ್ನ ಮುತ್ಸದ್ದಿತನವನ್ನು ತೋರಿಸಿದನು. ಈ ಸುವ್ಯವಸ್ಥೆಯ ಮೂಲಕವಾಗಿಯೇ ತಂಜಾವರ ಸಂಸ್ಥಾನವು ಡಾಲ್ಹೌಸಿದೊರೆಯು ಸಂತಾನವಿಲ್ಲೆಂಬ ಕುಂಟನೆವನದಿಂದ

ಕಸಕೊಳ್ಳುವ ವರೆಗೆ (೧೮೫೫) ವೆಂಕೋಜಿಯ ವಂಶಜರ ಆಳಿಕೆಗೆ ಒಳಗಾಗಿತ್ತೆಂದು ಧಾರಾಳವಾಗಿ ಹೇಳಬಹುದು.

ಸಿವಾಜಿಯು ೧೯ ಕಲಮಿನ ಒಂದು ಪತ್ರವನ್ನು ಬರಿಸಿ, ರಘುನಾಥ ರಾಯನ ವಿದ್ಯಮಾನವಾಗಿ ವೆಂಕೋಜಿಗೆ ಕಳಿಸಿದನೆಂದು ಶಿವದಿಗ್ವಿಜಯದಲ್ಲಿ ಬರೆದಿರುತ್ತದೆ. ಈ ೧೯ ಕಲಮುಗಳಲ್ಲಿ ನಾಲ್ಕು ಸಾಮಾನ್ಯೋಪದೇಶಪರವಾಗಿಯೂ ಎಂಟು ರಾಜನೀತಿಪರವಾಗಿಯೂ ಇದ್ದುದರಿಂದ ಅವುಗಳನ್ನು ಬಿಟ್ಟು, ಉಳಿದ ಏಳು ಕಲಮುಗಳನ್ನು ಕೆಳಗೆ ಕೊಡುತ್ತೇವೆ :—

(೧) ಆರಣಿಕಿಲ್ಲೆಯನ್ನು ಹಿರಿಯರು ವೇದೋಭಾಸ್ಕರ ಎಂಬವರಿಗೆ ಕೊಟ್ಟಿದ್ದರು. ಅವರಿಗೆ ಎಂಟು ಮಂದಿ ಗಂಡುಮಕ್ಕಳಿರುತ್ತಾರೆ. ಅವರಿಗೆ ಆ ಕಿಲ್ಲೆಯನ್ನು ಕೊಟ್ಟುಬಿಡಬೇಕು. ಅವರಿಗೆ ಇಷ್ಟವಿದ್ದರೆ ನಿಮ್ಮ ಊಳಿಗವನ್ನು ಮಾಡಬಹುದು. ಇಲ್ಲವಾದರೆ ಅವರಿಗೆ ಒತ್ತಾಯ ಮಾಡಕೂಡದು.

(೨) ಹಿರಿಯರು ಅದಿಲ್ಶಾಹಿಕುತುಬಶಾಹಿಗಳಿಂದ ಉಂಬಳಿಯನ್ನು ಗಳಿಸಿರುತ್ತಾರಷ್ಟೇ. ಅದಿಲ್ಶಾಹಿಯ ಸನದಿನಲ್ಲಿ ೫,೦೦೦ ರಾಹುತರೊಡನೆ ಆ ಸರಕಾರದ ಚಾಕರಿಯನ್ನು ಮಾಡಬೇಕೆಂದು ಬರೆದಿದೆ. ಆದರೆ ಇತ್ತಲಾಗಿ ನಾವು ಮಾಡಿಕೊಂಡ ಒಡಂಬಡಿಕೆಯಿಂದ ಸಮಯ ಬಿದ್ದಾಗ ಮಾತ್ರ ದಂಡಿನೊಡನೆ ಹೋಗಿ, ಅವರಿಗೆ ನೆರವಾಗಬೇಕೆಂದು ಗೊತ್ತಾಗಿದೆ. ಆದ್ದರಿಂದ ನೀವು ಆ ಸನದಿನ ಶರ್ತನ್ನು ಪಾಲಿಸುವ ಕಾರಣವಿಲ್ಲ.

(೩) ನಮ್ಮ ಪೂರ್ವಜರು ಗಟ್ಟದ ಮೇಲಿದ್ದ **ಹಿಂಗಣಿ,** ಬೇರಡಿ, ದೇವುಳಗಾವ ಮುಂತಾದ ಊರುಗಳ ಗೌಡಕಿದೇಶಮುಖಿಯನ್ನು ಸಂಪಾದಿಸಿರುತ್ತಾರಷ್ಟೇ. ಅವು ತಮ್ಮ ಸಂಸ್ಥಾನದಿಂದ ಅತಿದೂರವಾಗಿರುವ ಕಾರಣ ಅವುಗಳ ಮೇಲಿನ ಹಕ್ಕುಬಾಧ್ಯತೆಯನ್ನು ತಾವು ಬಿಟ್ಟು ಕೊಡಬೇಕು. ಆ ವತನಗಳನ್ನು ನಾವೇ ಉಪಭೋಗಿಸುವೆವು.

(೪) ನಾವು ಗೆದ್ದ ಬೆಂಗಳೂರು, ಹೊಸಕೋಟೆ, ಸೇಲಕೋಟೆ ಈ ಮೂರು ಪ್ರಾಂತಗಳ ವಾರ್ಷಿಕೋತ್ಪನ್ನವು ಸುಮಾರು ೩ ಲಕ್ಷ ವರಹವಿರುತ್ತದೆ. ಸರಿಯಾಗಿ ಜಮಾಬಂದಿಯನ್ನು ಮಾಡಿದರೆ ಇದು ೫ ಲಕ್ಷ ಆಗಬಹುದು. ಈ ಪ್ರಾಂತಗಳ ಉತ್ಪನ್ನವನ್ನು ನಾವು ನಮ್ಮ ಮಗಳಾದ

ದೀಪಾಬಾಯಿಗೆ ಖಣಬಳಿಗಳ ಬಗ್ಗೆ ಕೊಟ್ಟಿರುತ್ತೇವೆ. ಅವುಗಳ ಮೇಲೆ ನಿಮ್ಮದೂ ನಿಮ್ಮ ವಾರಸದಾರರದೂ ಹಕ್ಕುಬಾಧ್ಯತೆಯು ಯಾವಪ್ರಕಾರದ್ದೂ ಇಲ್ಲ. ನೀವು ಆ ಪ್ರಾಂತಗಳ ಆಡಳತೆಯನ್ನು ಚೆನ್ನಾಗಿ ಮಾಡಿ, ಬಂದ ಉತ್ಪನ್ನವನ್ನು ಪ್ರತಿವರ್ಷ ಆಕೆಗೂ ಆಕೆಯ ವಂಶದವರಿಗೂ ಮುಟ್ಟಿಸುತ್ತ ಹೋಗಬೇಕು.

(೫) ನಾವು ಗೆದ್ದ ಜಿಂಜಿಪ್ರಾಂತದ ಉತ್ಪನ್ನವು ೭ಲಕ್ಷ ಹೊನ್ನು ಇರುತ್ತದೆ. ಅದನ್ನು ನಿಮಗೆ(ವೆಂಕೋಜಿಗೆ) ಹಾಲೂಅನ್ನದ ಸಲುವಾಗಿ ಇನಾಮು ಹಾಕಿ ಕೊಟ್ಟಿರುತ್ತೇವೆ. ಆ ಗ್ರಾಮಗಳ ಪಟ್ಟಿಯನ್ನು ಮಾಡಿ ಕಳುಹಿದರೆ ಸನದನ್ನು ತಯಾರಿಸಿ ಕಳುಹುವೆವು.

(೬) ರಘುನಾರಾಯಣ ಹಣುಮಂತೆಯು ನಂಬಿಗಸ್ಥನೂ ಪ್ರಾಮಾಣಿಕನೂ ಚತುರನೂ ವಂಶಪರಂಪರೆಯಾದ ಕಾರಭಾರಿಯೂ ಆದ್ದರಿಂದ ತಂಜಾವರ ಸಂಸ್ಥಾನದೊಳಗಿಂದ ೧ ಲಕ್ಷ ವರಹ ಉತ್ಪನ್ನವುಳ್ಳ ಗ್ರಾಮಗಳನ್ನು ಅವನಿಗೆ ವಂಶಪರಂಪರವಾಗಿ ಜಹಗೀರು ಹಾಕಿ ಕೊಟ್ಟಿದೆ. ಅವನಿಗೆ ಕೊಟ್ಟ ಊರುಗಳ ಪಟ್ಟಿಯನ್ನು ಮಾಡಿಸಿ ಕಳುಹಿದರೆ ಸನದನ್ನು ಮಾಡಿಸಿ ಕಳಿಸುವೆವು.

(೭) ಹಿರಿಯರ ವೃಂದಾವನದ ಉತ್ಸವಪೂಜಾನೈವೇದ್ಯಗಳ ಖರ್ಚಿನ ವ್ಯವಸ್ಥೆಯನ್ನು ಸರಿಯಾಗಿ ಮಾಡಬೇಕಲ್ಲದೆ, ಅಲ್ಲಿ ಆನೆಕುದುರೆಗಳೂ ನಗಾರಿನೌಬತ್ತುಗಳೂ ಕಾರಕೂನಸಿಪಾಯರೂ ಸದಾ ಇದ್ದು ಎಚ್ಚರಿಕೆಯಿಂದ ಕೆಲಸ ಮಾಡುವಂತೆ ಒಳ್ಳೆಯ ಏರ್ಪಾಡನ್ನು ಮಾಡಲಿಕ್ಕೆ ತಪ್ಪಕೂಡದು. *

ಮೇಲೆ ಬರೆದ ಕಲಮುಗಳಿಂದ ನಮ್ಮ ಚರಿತ್ರನಾಯಕನ ರಾಜ್ಯಭಾರಚಾತುರ್ಯವೂ ಕೃತಜ್ಞತೆಯೂ ಪ್ರಾಮಾಣಿಕರಾದ ಸೇವಕರ ಮೇಲಿನ ಮಮತೆಯೂ ಬಂಧುಪ್ರೀತಿಯೂ ಪಿತೃಭಕ್ತಿಯೂ ಜಾಣ್ಮೆಯೂ ದೂರದರ್ಶಿತ್ವವೂ ಒಡೆದು ಕಾಣಿಸುತ್ತವೆಂದು ಹೇಳಲಿಕ್ಕೆ ಅಡ್ಡಿ ಏನೂ ತೋರುವು

---

* ಕೇಳುಸಕರ ಪುಟ ೪೬೪, ೪೬೫ ೪೬೬.

ದಿಲ್ಲ. ಅವನು ಗೆದ್ದ ನಾಡು ಅವನ ರಾಜ್ಯದಿಂದ ದೂರವಾಗಿದ್ದ ಕಾರಣ ಅದನ್ನು ಬಹು ದಿವಸ ತನ್ನ ವಶದಲ್ಲಿಟ್ಟುಕೊಳ್ಳುವುದು ಅಸಂಭವವೆಂದು ಅವನಿಗೆ ಹೊಳೆದಿತ್ತು. ಅವನು ಆ ನಾಡನ್ನು ತನ್ನ ಕಯ್ಕೆಳಗೆ ಇಟ್ಟು ಕೊಳ್ಳಲಿಕ್ಕೆ ಹವಣಿಸಿದ್ದರೆ, ವೆಂಕೋಜಿಯು ಒಬ್ಬ ಪ್ರಬಲಶತ್ರುವಾಗಿ ಉಳಿದ ಹಗೆಗಳನ್ನು ಹುರಿದುಂಬಿಸಿ, ಆ ನಾಡನ್ನು ಕಿತ್ತುಕೊಳ್ಳುವುದಲ್ಲದೆ ತನ್ನ ರಾಜ್ಯಕ್ಕೆ ಆಗಿಂದಾಗ ತೊಂದರೆ ಕೊಡುವ ಸಂಭವವಿತ್ತು. ಅವನು ಮಾಡಿದ ಏರ್ಪಾಡಿನಿಂದ ವೆಂಕೋಜಿಯು ದ್ವೇಷಿಯಾಗದೆ ಅವನ ಕಯ್ಕೆಳ ಗಿನ ಸುಬೇದಾರನಾದನು. ಅವನಿಗೆ ೭ಲಕ್ಷ ಹೊನ್ನಿನ ಪ್ರಾಂತವನ್ನು ಉಂಬಳಿಯಾಗಿ ಕೊಟ್ಟುದರಿಂದ ಅವನು ಸಿವಾಜಿಯ ಹಂಗಿನಲ್ಲಿ ಸಿಲುಕಿ ದನು. ಇಷ್ಟಾದರೂ ಭ್ರಾತೃಮತ್ಸರದಿಂದ ವೆಂಕೋಜಿಯು ದ್ರೋಹ ಬಗೆಯ ಬಹುದೆಂಬ ಹೆದರಿಕೆಯಿಂದ ಅವನ ಕಯ್ಯುಟ್ಟುವ ಉದ್ದೇಶದಿಂದಲೇ ರಘುನಾಥನಾರಾಯಣನನ್ನು ಅವನ ಕಾಯುಮ್ ಮಂತ್ರಿಯಾಗಿ ನಿಯಮಿ ಸಿದನು. ವೇದೋಭಾಸ್ಕರನ ಮಕ್ಕಳೂ ರಘುನಾಥರಾಯನೂ ತಮತಮಗೆ ದೊರೆತ ಜಹಗೀರುಗಳಿಂದ ಸಿವಾಜಿಗೆ ಕೃತಜ್ಞರಾಗಿ ಅವನ ಹಿತಕ್ಕೆ ಬಾಧೆ ತರುವ ಸಂಗತಿಗಳನ್ನು ದೂರಮಾಡುವುದರಲ್ಲಿ ತತ್ಪರರಾದರು.

ಈ ಎಲ್ಲ ಶರ್ತುಗಳನ್ನು ಶಿರಸಾವಹಿಸಿ ವೆಂಕೋಜಿಯು ಅವುಗಳಂತೆ ನಡೆದುಕೊಳ್ಳಲಿಕ್ಕೆ ಒಪ್ಪಿಕೊಂಡುದರಿಂದ, ಸಿವಾಜಿಯು ತನ್ನ ದಳವಾಯಿ ಯಾದ ಹಂಬೀರರಾಯನಿಗೆ ದಂಡಿನೊಡನೆ ತಿರುಗಿ ಬರಲಿಕ್ಕೆ ಅಪ್ಪಣೆ ಮಾಡಿದನು. ರಘುನಾಥರಾಯನು ಸ್ಥಳಿಕ ದಂಡನ್ನು ಕೂಡಿಸಿ ರಾಜ್ಯದ ಸಂರಕ್ಷಣೆಯನ್ನು ಮಾಡತೊಡಗಿದನು. ವೆಂಕೋಜಿಗೂ ರಘುನಾಥರಾಯ ನಿಗೂ ಆಗಿಂದಾಗ ಜಗಳ ಬರುತ್ತಿತ್ತು; ಒಬ್ಬನು ಮತ್ತೊಬ್ಬನ ವಿರುದ್ಧ ವಾಗಿ ಪತ್ರ ಬರೆಯುತ್ತಿದ್ದನು. ಸಿವಾಜಿಯು ಏನು ಮಾಡಿಯಾನೋ ಎಂಬ ಹೆದರಿಕೆಯು ಇಬ್ಬರಿಗೂ ಇದ್ದುದರಿಂದ, ಅವನು ಬರೆದಂತೆ ಇಬ್ಬರೂ ನಡೆದುಕೊಳ್ಳುತ್ತಿದ್ದರು. ಸಿವಾಜಿಯ ಅಂಜಿಕೆಯಿಂದ ಇವ ರಿಬ್ಬರು ಹಾಗೂ ಹೀಗೂ ಒಟ್ಟುಗೂಡಿ ನಡೆದರು. ರಘುನಾಥರಾಯನ ಕಯ್ಯಲ್ಲಿ ಅಧಿಕಾರವೂ ದಂಡೂ ಇದ್ದುದರಿಂದ ವೆಂಕೋಜಿಗೆ ಮಿಸಿಕಾಡ ಲಿಕ್ಕೆ ಆನುವು ದೊರೆಯಲಿಲ್ಲ.

ಪನ್ಹಾಳಕೋಟೆಯು ಸಿವಾಜಿಯ ಕಯ್ಸೇರಿತ್ತೆಂದು ಹಿಂದೆ ಬರೆದಿರುತ್ತೇವಷ್ಟೆ. ಅದರ ಪೂರ್ವಕ್ಕೂ ದಕ್ಷಿಣಕ್ಕೂ ಹರವಾಗಿ ಹಬ್ಬಿದ ನಾಡೇ ಉತ್ತರಕರ್ನಾಟಕವು. ಅದು ಈ ಕಾಲಕ್ಕೆ ಆದಿಲ್ಶಾಹಿಯ ವಶದಲ್ಲಿತ್ತು. ಅದನ್ನು ನಮ್ಮ ಚರಿತ್ರನಾಯಕನು ಯಾವಾಗ ಗೆದ್ದುಕೊಂಡನೆಂಬುದು ವಾದಗ್ರಸ್ತವಿಷಯವಾಗಿದೆ. ಏಕೆಂದರೆ ಸಭಾಸದನ ಶಿವಛತ್ರಪತಿಯ ಚರಿತ್ರೆಯಲ್ಲಿಯೂ, ತರೀಖಯಿಸಿವಾಜಿ ಎಂಬ ಫಾರ್ಸಿಗ್ರಂಥದಲ್ಲಿಯೂ ಈ ಕರ್ನಾಟಕದ ಭಾಗವನ್ನು ಸಿವಾಜಿಯು ತನ್ನ ಕರ್ನಾಟಕದ ದಾಳಿಗಿಂತ ಮೊದಲೇ ಹಿಡಿದುಕೊಂಡಿದ್ದನೆಂದು ಬರೆದಿರುತ್ತದೆ; ಆದರೆ ಚಿಟ್ಣೀಸನೂ ಶಿವದಿಗ್ವಿಜಯ ಲೇಖಕನೂ ಈ ಪ್ರದೇಶವನ್ನು ಸಿವಾಜಿಯು ಕರ್ನಾಟಕದ ದಂಡಯಾತ್ರೆಯು ಮುಗಿದ ಬಳಿಕ ಗೆದ್ದುಕೊಂಡನೆಂದು ಬರೆಯುತ್ತಾರೆ. ಮೊದಲೇ ಗೆದ್ದನೆಂಬುದು ಅಸಂಗತವೇ ಸರಿ. ಅವಸರದಿಂದ ತಿರುಗಿ ಬರುವಾಗ ಗೆಲ್ಲುವುದಂತೂ ಆಗದಮಾತು. ಇಷ್ಟು ದೊಡ್ಡ ಭಾಗವನ್ನು ಕಯ್ವಶ ಮಾಡಿಕೊಳ್ಳಲಿಕ್ಕೆ ಅವನಿಗೆ ಎಷ್ಟೋ ಶ್ರಮವೂ ಕಾಲವ್ಯಯವೂ ಆಗಿರಲಿಕ್ಕೇ ಬೇಕು. ಮೊದಲೇ ಈ ನಾಡನ್ನು ಸುಲಿದಿರಬಹುದು, ಆದರೆ ಗೆದ್ದಿರಲಾರನು. ಆದ್ದರಿಂದ ಈ ಉತ್ತರಕರ್ನಾಟಕದ ನಾಡನ್ನು ಅವನು ತಿರುಗಿ ಬಂದ ಬಳಿಕೇ ತನ್ನ ಕಯ್ವಶ ಮಾಡಿಕೊಂಡನೆಂದು ಸಕಾರಣವಾಗಿ ಅನುಮಾನ ಮಾಡಬಹುದೆಂದು ತೋರುತ್ತದೆ.

ಸಿವಾಜಿಯು ಸೀರಾದಿಂದ ಹೊರಟು ಕೊಪ್ಪಳ, ಗದಗು, ಲಕ್ಷ್ಮೇಶ್ವರ, ಧಾರವಾಡ, ಸಂಪಗಾವ ಮಾರ್ಗವಾಗಿ ಪನ್ಹಾಳಕ್ಕೆ ಹೋದನೆಂದು ಹಿಂದೆ ಬರೆದಿರುತ್ತೇವಷ್ಟೆ. ಅವನಿಗೆ ದಾರಿಯಲ್ಲಿ ಎಷ್ಟೋ ಮಂದಿ ತೊಂದರೆ ಕೊಟ್ಟರು. ಈ ಉಪದ್ರವದ ಸಿಟ್ಟಿನಿಂದಲೋ, ತನ್ನ ರಾಜ್ಯವನ್ನು ಬೆಂಗಳೂರುಪ್ರಾಂತಕ್ಕೆ ಕೂಡಿಸಬೇಕೆಂಬ ಉದ್ದೇಶದಿಂದಲೋ, ಈ ನಡುನಾಡನ್ನು ಒಳನುಗ್ಗಿ ಕೊಪ್ಪಳದ ಕೋಟೆಗೆ ಬಂದನು. ಈ ಕೋಟೆಯು ವಿಜಾಪುರದಿಂದ ೧೦೫ ಮೈಲು ದೂರವಾಗಿದ್ದು, ದಕ್ಷಿಣಕರ್ನಾಟಕದ ಹೆಬ್ಬಾಗಿಲವೆಂದು ಹೆಸರಾಗಿತ್ತು. ಈ ಕೋಟೆಯನ್ನು ಹಿಡಿದುಕೊಳ್ಳಲಿಕ್ಕೆ ಸಿವಾಜಿಗೆ ತಡವಾಗಲಿಲ್ಲ. ಏಕೆಂದರೆ, ಇಲ್ಲಿಯ ಆದಿಲ್ಶಾಹಿಯ ಕಿಲ್ಲೇದಾರನಾದ ಕಾಸಿಮುಖಾನನು ಮನದಣಿಯಾಗಿ ಕೈಬೆಚ್ಚಗೆ ಮಾಡಿಸಿಕೊಂಡು

ಈ ಕೋಟೆಯನ್ನು ಮೋರೋಪಂತ ಪಿಂಗಳೆಯನಿಗೆ ಒಪ್ಪಿಸಿಬಿಟ್ಟನು. ಈ ಮೇರೆಗೆ ಕೋಟೆಯು ಅನಾಯಾಸವಾಗಿ ದೊರೆತರೂ ಅದರ ಸುತ್ತಲಿನ ಪ್ರದೇಶವು ವಶವಾಗಲಿಲ್ಲ. ಆದ್ದರಿಂದ ಸಿವಾಜಿಯು ಕನಕಗಿರಿ, ಹರಪನ ಹಳ್ಳಿ, ರಾಯದುರ್ಗ, ಚಿತ್ರದುರ್ಗ, ವಿಜಯನಗರಗಳ ಪಾಳೆಯಗಾರರನ್ನು ಸೋಲಿಸಿ, ಆ ಎಲ್ಲಾ ಪ್ರಾಂತವನ್ನು ಒಂದು ಸುಬೆಯಾಗಿಮಾಡಿ ಜನಾರ್ದನ ನಾರಾಯಣ ಹಣುಮಂತೆ ಎಂಬವನನ್ನು ಅದರ ಸುಬೇದಾರನಾಗಿ ಮಾಡಿದನು.

ಕೊಪ್ಪಳದಿಂದ ಹೊರಟು ಸಿವಾಜಿಯು ಮುಳುಗುಂದ, ಗದಗು, ಲಕ್ಷ್ಮೇಶ್ವರಗಳನ್ನು ಹಿಡಿದುಕೊಂಡನು. ಈ ಭಾಗವು ಆಕಾಲಕ್ಕೆ ಖಾನಗೌಡ ದೇಸಾಯಿ ಎಂಬವನ ವಶದಲ್ಲಿತ್ತು. ಸಿವಾಜಿಯು ದಂಡೆತ್ತಿ ಬರುತ್ತಾನೆಂಬ ಸುದ್ದಿಯನ್ನು ಕೇಳಿದಕೂಡಲೆ ಈ ದೇಸಾಯಿಯು * ಓಡಿಹೋದ್ದರಿಂದ, ಇವನ್ನು ಹಿಡಿದುಕೊಳ್ಳಲಿಕ್ಕೆ ಸಿವಾಜಿಗೆ ಏನೂ ಶ್ರಮವಾಗಲಿಲ್ಲ. ಅವನು ಲಕ್ಷ್ಮೇಶ್ವರದಿಂದ ಹೊರಟು ಹಾದಿಯಲ್ಲಿ ಧಾರವಾಡದ ಕೋಟೆಯನ್ನು ಹಿಡಿದುಕೊಂಡು, ಸಂಪಗಾವ ಮಾರ್ಗವಾಗಿ ಪನ್ಹಾಳಕ್ಕೆ ಹೊರಟನು. ಸಂಪಗಾವಿಯಿಂದ ೧೨ ಮೈಲು ದೂರವಾಗಿದ್ದ ಬೆಳ್ವೋಡಿಯ ನೆರೆಯಲ್ಲಿ ಹೋಗುವಾಗ ಅಲ್ಲಿಯ ಕಾಟಕರು ಕಾಳುಹೇರಿದ ಅವನ ಕಂಟಲೆಯೆತ್ತುಗಳನ್ನು ಅಟ್ಟಿಕೊಂಡುಹೋದರು. ಈ ಸುದ್ದಿಯನ್ನು ಕೇಳಿ ಸಿವಾಜಿಯು ಸಿಟ್ಟು ಬೆಂಕಿಯಾಗಿ ಬೆಳ್ವೋಡಿಯ ಮಣ್ಣುಕೋಟೆಯನ್ನು ಮುತ್ತಲಿಕ್ಕೆ ಸಾಕಷ್ಟು ದಂಡನ್ನು ಕಳುಹಿ, ತಾನು ಮುಂದಕ್ಕೆ ಸಾಗಿದನು. ಇಲ್ಲಿಯ ಗೌಡತಿಯಾದ ಸಾವಿತ್ರವ್ವ ಎಂಬ ಶೂರಸ್ತ್ರೀಯು ಹಿಂದಕ್ಕೆ ಹೆಸರುವಾಸಿಯಾದ ಚಾಂದಬೀಬಿಯಂತೆ ಜನರನ್ನು ಹುರಿದುಂಬಿಸಿ, ಕಲಿತನದಿಂದ ಕಾದಿ ೨೭ದಿವಸಗಳ ವರೆಗೆ ಮರಾಟರ ಸರಕುಕಟ್ಟಿದಳು. ಬಳಿಕ

---

* ಖಾನಗೌಡ ದೇಸಾಯಿಯು ಒಂದು ಊರಿನ ಹೆಸರೆಂದು ಭಾವಿಸಿ ಅದು ನಕಾಶದಲ್ಲಿ ಸಿಕ್ಕುವುದಿಲ್ಲೆಂದು ಪಂಡಿತ ಜದುನಾಥ ಸರ್ಕಾರರು ಬರೆಯುತ್ತಾರೆ. ಪು. ೩೫೩. ಗೌಡ ಎಂಬ ಕನ್ನಡಶಬ್ದದ ಅರ್ಥವು ಗೊತ್ತಾಗದ್ದರಿಂದ ಈ ತರದ ತಪ್ಪು ಆಗಿರುತ್ತದೆಂದು ಹೇಳಲಿಕ್ಕೆ ಅಡ್ಡಿಯಿಲ್ಲ.

ಅನ್ನಸಾಮಗ್ರಿಯು ತೀರಿದ್ದರಿಂದ ನಿರುಪಾಯಳಾಗಿ ತನ್ನ ಕಯ್ಯೊಳಗಿನ ಕಾಟಕರೊಡನೆ ಕೋಟೆಯ ಹೊರಬಿದ್ದು, ಇಡಿ ಒಂದು ದಿವಸ ಮರಾಟರ ದೊಡ್ಡ ದಂಡಿನೊಡನೆ ಕಾದು, ಕೊನೆಗೆ ಸೋತು ಸೆರೆ ಸಿಕ್ಕಳು!!! ಈ ಗೌಡತಿಯ ಶೌರ್ಯದ ಕೀರ್ತಿಯು ದೇಶದಲ್ಲೆಲ್ಲ ಹಬ್ಬಿದ್ದರಿಂದ ರಾಜಾ ಪುರದ ಒಬ್ಬ ಇಂಗ್ಲಿಷ ವರ್ತಕನು ಸಿವಾಜಿಯ ದಂಡನ್ನು ಈ ಗೌಡತಿ ಯು ಹಣ್ಣುಮಾಡಿ ಜೇರಿಗೆ ತಂದಷ್ಟು ಆದಿಲ್ಶಾಹಿ ಮೊಗಲರ ದಂಡುಗಳು ಎಂದೂ ಜೇರಿಗೆ ತರಲಿಲ್ಲವೆಂದು ಬರೆದಿರುತ್ತಾನೆ. ಇಂತಹ ವೀರವನಿತೆ ಯನ್ನು ಮರಾಟರು ಮನ್ನಿಸಿ ಗೌರವಿಸದೆ, ಆಕೆಯ ಅವಮಾನ ಮಾಡಿ ಬಿಟ್ಟರು!!! ನಮ್ಮ ಚರಿತ್ರನಾಯಕನು ಗುಣಗ್ರಾಹಿಯಾದ್ದರಿಂದ ಈ ಸುದ್ದಿಯು ತನಗೆ ತಿಳಿದ ಕೂಡಲೆ, ಆ ನಾರೀಮಣಿಯನ್ನು ಅನ್ಯಾಯವಾಗಿ ಅವಮಾನಿಸಿದ ಸಕ್ರೋಜಿ ಗಾಯಕವಾಡನ ಕಣ್ಣು ಕೀಳಿಸಿ, ಅವನನ್ನು ಮುನವಳ್ಳಿ ಎಂಬ ಊರಿನಲ್ಲಿ ಸೆರೆಯಿಟ್ಟನು (೧೬೭೮).

ಸಿವಾಜಿಯು ಕರ್ನಾಟಕದ ದಂಡಯಾತ್ರೆಯಲ್ಲಿ ತೊಡಗಿದಾಗ ಅವನ ರಾಜ್ಯದಲ್ಲಿ ಏನೇನು ನಡೆಯಿತೆಂಬುದನ್ನು ವಿವರಿಸಿ ಈ ಅಧ್ಯಾಯ ವನ್ನು ಮುಗಿಸುವೆವು. ಕರ್ನಾಟಕಕ್ಕೆ ಹೊರಡುವುದಕ್ಕಿಂತ ಮೊದಲೇ ಸಿವಾಜಿಗೂ ಪೋರ್ತುಗೀಸ ಸರಕಾರಕ್ಕೂ ಜಗಳ ಬಂದಿತ್ತು. ಫೊಂಡಾ ಕೋಟೆಯು ಮರಾಟರ ವಶದಲ್ಲಿದ್ದರೂ ಅದರ ಸುತ್ತಲಿನ ೬೦ ಹಳ್ಳಿಗಳು ಪೋರ್ತುಗೀಸರ ವಶದಲ್ಲಿದ್ದವು. ಅವುಗಳನ್ನು ಅವರು ಬಿಟ್ಟುಕೊಡಲಿಕ್ಕೆ ಒಡಂಬಡದ್ದರಿಂದ ಸಿವಾಜಿಯು ತನ್ನ ಮಗನಾದ ಶಂಭುಜಿಯನ್ನು ಗೋವೆ ಪ್ರಾಂತವನ್ನೊಳನುಗ್ಗಲಿಕ್ಕೆ ಕಳುಹಿದನು (ನವಂಬರ ೧೬೭೬). ಎಚ್ಚರಗೇಡಿಯಾದ ಶಂಭುಜಿಯು ದುಡಕಿ ಹಗೆಗಳಮೇಲೆ ಬಿದ್ದುದರಿಂದ ಸೋತು ಹಿಮ್ಮೆಟ್ಟಬೇಕಾಯಿತು. ಬಳಿಕ ಅವನು ದಮಾನದ ಕಡೆಗೆ ಹೋದನು. ಅಲ್ಲಿಯೂ ಅದೇ ಹಾಡಾದ್ದರಿಂದ ಮೋರೆ ತಗ್ಗಿಸಿಕೊಂಡು ತಿರುಗಿ ಬಂದನು.

ಸಿವಾಜಿಯು ಕರ್ನಾಟಕದ ಮೇಲೆ ದಂಡೆತ್ತಿ ಹೊರಡುವಾಗ ಮೋರೋಪಂತನನ್ನು ತನ್ನ ಎಲ್ಲ ರಾಜ್ಯವನ್ನು ಕಾಪಾಡಲಿಕ್ಕೂ ಅಣ್ಣಾಜಿ

ರಾಯನನ್ನು ಕೊಂಕಣಭಾಗವನ್ನು ಕಾಯಲಿಕ್ಕೂ ನಿಯಮಿಸಿದ್ದನೆಂದು ಹಿಂದೆ ಬರೆದಿರುತ್ತೇವಷ್ಟೆ. ಇವರಿಬ್ಬರು ತಂತಮ್ಮ ಕರ್ತವ್ಯವನ್ನು ಮನಃ ಪೂರ್ವಕವಾಗಿ ಅತಿಜಾಗರೂಕತೆಯಿಂದ ಮಾಡಿದರು. ೧೬೭೭ ಸಪ್ಟಂಬರ ದಲ್ಲಿ ಕುತುಬಶಾಹಿಯು ದಂಡು ದಿಲೀರ ಬಹಲೋಲಖಾನರನ್ನು ಸೆರೆ ಸೋಲಿಸಿ ಮುರಿಬಡಿದುದರಿಂದ* ಆ ಸಂಧಿಯನ್ನು ಸಾಧಿಸಿ ಮೋರೋ ಪಂತನು ಮೊಗಲರ ತ್ರಿಯಂಬಕ ನಾಸಿಕಪಟ್ಟಣಗಳನ್ನೂ ಅಣ್ಣಾಜಿಯು ಅದಿಲ್ಶಾಹಿಯ ಹುಬ್ಬಳ್ಳಿ, ಕಾರವಾರ ಪ್ರಾಂತಗಳನ್ನೂ ಸುಲಿದು ಒತ್ತರ ದಿಂದ ತಂತಮ್ಮ ಸ್ಥಳಗಳಿಗೆ ತಿರುಗಿ ಬಂದರು.

೧೬೭೭ ದಶಂಬರದಲ್ಲಿ ಬಹಲೋಲಖಾನನು ಸಾಯಲು, ಅವನ ಹಸ್ತಕನಾದ ಜಾಮುಸಿದ್ದಖಾನನ ಕಯ್ಯಲ್ಲಿ ಅದಿಲ್ಶಾಹಿಯ ಎಲ್ಲ ರಾಜ್ಯ ಸೂತ್ರಗಳು ಸೇರಿದವು. ಈ ನೀಚನಾದ ರಾಜದ್ರೋಹಿಯು ಪ್ರತಿಪಕ್ಷದ ಮುಖ್ಯಸ್ಥನಾದ ಸಿದ್ದಿಮಸೌದನು ತನ್ನ ಕಯ್ಯಲ್ಲಿದ್ದ ರಾಜ್ಯ ಸೂತ್ರಗಳನ್ನು ಬೇಗನೆ ಕಿತ್ತುಕೊಳ್ಳಬಹುದೆಂಬ ಹೆದರಿಕೆಯಿಂದ ತನಗೆ ೬ ಲಕ್ಷ ವರಹ ಕೊಟ್ಟರೆ, ವಿಜಾಪುರವನ್ನೂ ಚಿಕ್ಕ ಅದಿಲ್ಶಾಹನನ್ನೂ ಸಿವಾಜಿಗೆ ಒಪ್ಪಿಸುವೆ ನೆಂದು ಮರಾಟರ ವಕೀಲನಿಗೆ ಅರುಹಿದನು. ಈ ಸುದ್ದಿಯು ತಿಳಿದ ಕೂಡಲೆ ಸಿವಾಜಿಯು ಆರುಲಕ್ಷವರಹ ಕೊಡಲಿಕ್ಕೆ ಒಡಂಬಟ್ಟು, ಅದಿಲ್ಶಾ ಹಿಯ ಪಾಲಕನಾಗುವ ಹವಣಿಕೆಯಿಂದ ಮೇಲೆ ಹೇಳಿದಂತೆ ಸೀರಾದಿಂದ ಹೊರಟು ಪನ್ಹಾಳಕ್ಕೆ ಬಂದನು. ಅಷ್ಟರೊಳಗೆ ಮಸೌದನು ವಿಜಾಪುರ ವನ್ನು ಹಿಡಿಕೊಂಡುದರಿಂದ ಅವನು ತೀರಭಗ್ನಮನೋರಥನಾದನು. ಮಸೌದನು ಒಂದು ಅಪೂರ್ವವಾದ ಹಂಚಿಕೆಯಿಂದ ವಿಜಾಪುರವನ್ನು ಹಿಡಿದುಕೊಂಡುದರಿಂದ ಅದರ ವಿವರವನ್ನು ಕೆಳಗೆ ಕೊಡುತ್ತೇವೆ.

ಜಾಮುಸಿದ್ದಖಾನನು ವಿಜಾಪುರವನ್ನು ಸಿವಾಜಿಗೆ ಒಪ್ಪಿಸುತ್ತಾನೆಂಬ ಸುದ್ದಿಯು ಹೊರಬಿದ್ದ ಕೂಡಲೆ ಸಿದ್ದಿಮಸೌದನು ತಾನು ಅಸ್ವಸ್ಥನಾದೆ ನೆಂತಲೂ ಮರಣೋನ್ಮುಖನಾದೆನೆಂತಲೂ ಸತ್ತೆನೆಂತಲೂ ಸುದ್ದಿಯನ್ನು ಪಟ್ಟಣದಲ್ಲೆಲ್ಲ ಹಬ್ಬಿಸಿದನು. ಬಳಿಕ ಕೆಲವು ದಂಡಾಳುಗಳು ಅವನ

* ಹಿಂದೆ ಪುಟ ೨೦೪, ೨೦೫, ೨೩೦ ನೋಡಿರಿ.

ಸುಳ್ಳ ಹೆಣವನ್ನು ಒಂದು ಡೋಲಿಯಲ್ಲಿ ಹಾಕಿಕೊಂಡು ಅವನ ಉಂಬಳಿಯ ಊರಾದ ಆದವಾನಿಗೆ ತೆಗೆದುಕೊಂಡು ಹೋದರು. ಅವನ ಮರಣದಿಂದ ಜಾಮುಸಿದ್ದಖಾನನು ನಿಶ್ಚಿಂತನಾದನು. ನಿರಾಶ್ರಿತರಾದ ಸಿದ್ದಿಮಸೌದನ ದಂಡಾಳುಗಳು ತಮ್ಮನ್ನು ಊಳಿಗಕ್ಕೆ ಇಟ್ಟುಕೊಳ್ಳಬೇಕೆಂದು ಬೇಡಿಕೊಳ್ಳಲು ಜಾಮುಸಿದ್ದಖಾನನು ಕನಿಕರಪಟ್ಟು, ಅವರನ್ನು ತನ್ನ ದಂಡಿನವರಾಗಿ ಇಟ್ಟುಕೊಂಡನು. ಈ ಮೇರೆಗೆ ಮಸೌದನ ೪,೦೦೦ ದಂಡಾಳುಗಳು ಕೋಟೆಯನ್ನು ಒಳಹೊಕ್ಕರು. ೩ ನೆಯ ದಿವಸ ಅವರು ಜಾಮುಸಿದ್ದಖಾನನ್ನು ಸೆರೆಹಿಡಿದು ಕೋಟೆಯ ಹೆಬ್ಬಾಗಿಲನ್ನು ತೆರೆದು, ಮಸೌದನನ್ನೂ ಅವನ ದಂಡನ್ನೂ ಒಳಗೆ ಕರೆಕೊಂಡರು. ಈ ಮೇರೆಗೆ ಸಿದ್ದಿಮಸೌದನು ಒಂದು ಗುಂಡನ್ನಾದರೂ ಹಾರಿಸದೆ ತನ್ನ ಪ್ರತಿಸ್ಪರ್ಧಿಯನ್ನು ಮುರಿದು ತಾನೇ ರಾಜ್ಯಪಾಲಕನಾದನು (ಫೆಬ್ರುವರಿ ೧೬೭೮).*

---

## ೧೧ ನೆಯ ಪ್ರಕರಣ

### ಕಡೆಗಾಲವು.

ಕರ್ನಾಟಕದ ದಂಡಯಾತ್ರೆಯು ಬಯಕೆ ಮೀರಿ ಜಯಶೀಲವಾದ್ದರಿಂದ ನಮ್ಮ ಚರಿತ್ರನಾಯಕನು ಉಬ್ಬಿ, ತನ್ನ ಹುಟ್ಟುಕೋಟೆಯಾದ ಸಿವನೇರಿಯನ್ನು ಹಿಡಿದು ಕೊಳ್ಳಲಿಕ್ಕೆ ಮತ್ತೊಮ್ಮೆ ಎತ್ತುಗಡೆಯನ್ನು ಮಾಡಿದನು. ಮರಾಟರ ಒಂದು ದಂಡು ಅಲ್ಲಿಗೆ ಹೋಯಿತು. ಒಂದು ದಿನ ರಾತ್ರಿಯಲ್ಲಿ ೩೦೦ ಮಂದಿ ವೀರಮಾವಳೆಯರು ಆ ಕೋಟೆಯ ಗೋಡೆಯನ್ನೇರಿ ಒಳಹೊಕ್ಕರು. ಆ ಕೋಟೆಯ ಶೂರ ಕಿಲ್ಲೇದಾರನಾದ ಅಬ್ದುಲ್ಲ ಅಜೀಜಖಾನನು ಒಳಗೆ ಬಂದ ಮಾವಳೆಯರನ್ನೆಲ್ಲ ತುಂಡರಿಸಿ ತಾನು ಕಿಲ್ಲೆ

---

* ರಾಜಾಪುರದ ಇಂಗ್ಲಿಷ ವರ್ತಕರ ೩ ನೆಯ ಎಪ್ರಿಲ ೧೬೭೮ ನೆಯ ಇಸ್ವಿಯ ಪತ್ರದಲ್ಲಿ ಈ ಸಂಗತಿಯು ಇರುತ್ತದೆಂದು ಪಂಡಿತ ಜದುನಾಥ ಸರ್ಕಾರರು ಬರೆಯುತ್ತಾರೆ. ಪುಟ ೩೫೫.

ದಾರನಾಗಿರುವ ವರೆಗೆ ಆ ಕೋಟೆಯು ಸಿಕ್ಕಲಾರದೆಂದು ಸಿವಾಜಿಗೆ ಹೇಳಿ ಕಳುಹಿದನು (ಮೇ ೧೬೭೮).

ಈ ಸುಮಾರಿನಲ್ಲಿ ಕುತುಬಶಹ--ಸಿವಾಜಿಯರ ನಡುವೆ ವಿತುಷ್ಟತೆಯು ಬಂತು. ಹಿಂದೆ ಬರೆದಂತೆ ತಾನು ಗೆದ್ದ ಕರ್ನಾಟಕದ ಅರ್ಧ ರಾಜ್ಯವನ್ನು ಕುತುಬಶಹನಿಗೆ ಕೊಡುವ ಶರ್ತಿನಿಂದ ಸಿವಾಜಿಯು ಹೇರಳ ಹಣವನ್ನೂ ದಂಡನ್ನೂ ತೋಫಖಾನೆಯನ್ನೂ ಪಡೆದಿದ್ದನಷ್ಟೇ. ಆ ವಚನದಂತೆ ಅವನು ಒಂದು ಕೋಟೆಯನ್ನಾಗಲಿ ಲೆಕ್ಕವಿಲ್ಲದಷ್ಟು ಸಿಕ್ಕ ಸುಲಿಗೆಯ ಭಾಗವನ್ನಾಗಲಿ ಕುತುಬಶಹನಿಗೆ ಕೊಡಲಿಲ್ಲ; ಇಷ್ಟೇ ಅಲ್ಲ; ಕುತುಬಶಹನು ಆ ದಂಡಯಾತ್ರೆಯ ವೆಚ್ಚಕ್ಕಾಗಿ ಕೊಟ್ಟ ಹಣವನ್ನಾದರೂ ತಿರುಗಿ ಕೊಡಲೆಣಿಸಲಿಲ್ಲ. ಆದಕಾರಣ ಕುತುಬಶಹನು ಅವನ ಮೇಲೆ ಸಿಟ್ಟು ಬೆಂಕಿಯಾದನು. ಆದರೆ ಅವನೇನು ಮಾಡಿಯಾನು? ಹೊಟ್ಟೆಯಲ್ಲಿದ್ದ ಸಿಟ್ಟು ರಟ್ಟೆಯಲ್ಲಿದ್ದಿಲ್ಲ. ಆದ್ದರಿಂದ, ಅವನು ತನ್ನ ಮಂತ್ರಿಯಾದ ಮಾದಣ್ಣನ ಮುಖಾಂತರವಾಗಿ ಸಂಧಾನನಡಿಸಿ, ಅದಿಲ್ಶಾಹಿಯ ಪಾಲಕನಿಗೆ ದುಡ್ಡುದಂಡನ್ನು ಕೊಟ್ಟು, ಮರಾಟರ ನಾಡನ್ನು ಒಳನುಗ್ಗಲಿಕ್ಕೆ ಒಡಂಬಡಿಸಿದನು. ಆದರೆ ಅವನ ಪ್ರಯತ್ನವೆಲ್ಲ ಹೊಳೆಯಲ್ಲಿ ಹುಣಸೆಹಣ್ಣನ್ನು ತೊಳೆದಂತಾಯಿತು. ಏಕೆಂದರೆ, ರಾಜ್ಯಲೋಭಿಯಾದ ಅವರಂಗಜೇಬನ ಮನಸ್ಸಿನಲ್ಲಿ ಅದಿಲ್ಶಾಹಿಯನ್ನು ಬುಡಮೇಲುಮಾಡುವ ಲವಲವಿಕೆಯು ನೆಲೆಗೊಂಡುದರಿಂದ, ಅವನ ಉಲಕೋಚಿ ಸುಬೇದಾರನಾದ ದಿಲೇರಖಾನನು ವಿಜಾಪುರದ ಮೇಲೆ ದಂಡೆತ್ತಿಬಂದನು.* ಇಂತಹ ಬಿಕ್ಕಟ್ಟಿನ ಸಂದರ್ಭವು ಬಂದೊದಗಿದ್ದರಿಂದ ಅದಿಲ್ಶಾಹಿಯ ಪಾಲಕನಾದ ಸಿದ್ದಿ ಮಸೌದನು ನಿರುಪಾಯನಾಗಿ ಸಿವಾಜಿಯು ರಾಜ್ಯವನ್ನೊಳನುಗ್ಗುವುದರ ಬದಲು, ಅವನ ನೆರವನ್ನು ಅಂಗಲಾಚಿ ಬೇಡಿಕೊಂಡನು!!!

ಸೇಲಿಮನು ತನ್ನ ತಂದೆಯಾದ ಅಕ್ಬರಬಾದಶಹನನ್ನು ಮುಪ್ಪಿನ ಕಾಲದಲ್ಲಿ ಗೋಳಾಡಿಸಿದಂತೆ, ಶಂಭುಜಿಯು ತನ್ನ ತಂದೆಯಾದ ಸಿವಾಜಿ

---

* ಹಿಂದೆ ಪುಟ ೨೦೬, ೨೦೭, ೨೦೮. ನೋಡಿರಿ.

ಯನ್ನು ಗೋಳಾಡಿಸಿ ಗೋಡೆಹೋಗಿಸಿದನೆನ್ನಲಿಕ್ಕೆ ಅಡ್ಡಿಯಿಲ್ಲ. ಸೇಲಿಮ
ನಂತೆ ಶಂಭುಜಿಯು ಸೆರೆಬಡಕನೂ ಪಾಣ್ಬನೂ ಸ್ವೇಚ್ಛಾಚಾರಿಯೂ ಆಗಿ
ದ್ದನು. ಅವನು ಒಬ್ಬ ಬ್ರಾಹ್ಮಣತರುಣಿಯನ್ನು ಜುಲುಮೆಮಾಡಿ ಕೆಡಿಸಿದ್ದ
ರಿಂದ, ಸಿವಾಜಿಯು ಅವನನ್ನು ಪನ್ಹಾಳಕೋಟೆಯಲ್ಲಿ ಕಾವಲಲ್ಲಿರಿಸಿದ್ದನು.



ಸೇಲಿಮ ಅಥವಾ ಜಹಾಂಗೀರ್.

ಅಲ್ಲಿರುವಾಗ ಅವನು ತನ್ನ ತಂದೆಯ ದ್ವೇಷಿಯಾದ ದಿಲೀರಖಾನನೊಡನೆ
ಒಳಸಂಚುನಡಿಸಿ, ಒಂದು ದಿನ ಕಾವಲುಗಾರರನ್ನು ತಪ್ಪಿಸಿ ತನ್ನ
ಹೆಂಡತಿಯಾದ ಏಸುಬಾಯಿಯೊಡನೆ ಓಡಿಹೋದನು!! ಈ ಸಂಗ
ತಿಯು ತಡವಾಗಿ ಗೊತ್ತಾದ್ದರಿಂದ ಅವನನ್ನು ಹಿಡಿದು ತರಲಿಕ್ಕೆ ಸಿವಾ
ಜಿಯು ಕಳುಹಿದ ದಂಡಿಗೆ ಅವನು ಸಿಕ್ಕಲಿಲ್ಲ. ಏಕೆಂದರೆ, ದಿಲೀರಖಾನನು

ಅವನನ್ನು ಇದಿರುಗೊಂಡು ತರಲಿಕ್ಕೆ ಬಹದ್ದೂರಗಡದಿಂದ ತನ್ನದೊಂದು ದಂಡನ್ನು ಕಳುಹಿದ್ದಲ್ಲದೆ, ತಾನೇ ಬಂದು **ಕರಕಂಬಿ** ಎಂಬಲ್ಲಿ ಅವನಿಗೆ ಸ್ವಾಗತಮಾಡಿದನು. ಆಗ ದಿಲೀರಖಾನನಿಗೆ ಆದ ಸಂತೋಷವನ್ನು ಬಣ್ಣಿಸಲಳವಲ್ಲ. ಎಲ್ಲಾ ದಕ್ಷಿಣ ಹಿಂದುಸ್ಥಾನವನ್ನು ಗೆದ್ದಷ್ಟು ಆನಂದವು ಅವನಿಗಾಯಿತು. ಅವನು ತನ್ನ ಪಾಳೆಯದಲ್ಲಿ ಜಯಭೇರಿಯನ್ನು ಹೊಡಿಸಿ, ಬಾದಶಹನಿಗೆ ಈ ಅತ್ಯಾನಂದದ ಸುದ್ದಿಯನ್ನು ತಿಳಿಸಿದನು. ಸಿವಾಜಿಯ ಮೇಲೆ ಹಲ್ಲುಕಡಿಯುತ್ತಿದ್ದ ಅವರಂಗಜೇಬನು ಶಂಭುಜಿಯನ್ನು ೭ ಸಾವಿರ ಮನಸಬ್ದಾರನನ್ನು ಮಾಡಿದ್ದಲ್ಲದೆ, ಅವನಿಗೆ **ರಾಜಾ** ಎಂಬ ಬಿರುದನ್ನು ದಯಪಾಲಿಸಿದನು (ನವಂಬರ ೧೬೭೮). ಬಳಿಕ ದಿಲೀರಖಾನನು ಬಹದ್ದೂರಗಡವನ್ನು ಬಿಟ್ಟು ಶಂಭುಜಿಯೊಡನೆ ಬಂದು **ಅಕ್ಲುಜ**ದಲ್ಲಿ ಪಾಳೆಯ ಹಾಕಿಕೊಂಡು ನಿಂತನು.

ಸಿದ್ದಿಮಸೌದನ ಬೇಡಿಕೆಯು ತೂಕಡಿಸುವವರಿಗೆ ಹಾಸಿಗೆ ಹಾಸಿಕೊಟ್ಟಂತೆ ಸಿವಾಜಿಗೆ ಅನುಕೂಲವಾಯಿತು. ತನ್ನ ತಂದೆಯಾದ ಶಹಾಜಿರಾಜನು ನಿಜಾಮುಶಹನ ಪಾಲಕನಾದಂತೆ ತಾನು ಅದಿಲ್ಶಹನ ಪಾಲಕನಾಗಬೇಕೆಂಬ ಹೆಗ್ಗೋರಿಕೆಯು ಅವನಲ್ಲಿ ಹುಟ್ಟಿತ್ತು. ಮಸೌದನ ಕಾಗದವು ಬಂದ ಕೂಡಲೆ, ಅವನು ತನ್ನ ೭,೦೦೦ ಶೂರರಾದ ರಾಹುತರನ್ನು ಸಜ್ಜುಮಾಡಿ ವಿಜಾಪುರವನ್ನು ಕಾಯಲಿಕ್ಕೆ ಕಳುಹಿ, ತಾನು ಅವರನ್ನು ಹಿಂಬಾಲಿಸಿದನು. ಮಸೌದನಿಗೆ ಮರಾಟರ ನೆರವು ಬೇಕಾಗಿದ್ದರೂ ಅವರಲ್ಲಿ ನಂಬಿಕೆ ಇರಲಿಲ್ಲ. ಆದ್ದರಿಂದ ಅವನು ಆ ಮರಾಟ ರಾಹುತರಿಗೆ ರಾಜಧಾನಿಯ ವಾಯುವ್ಯಕ್ಕಿದ್ದ **ಇಟ್ಟಂಗಿಹಳ್ಳ**ದ ಮೇಲೆ ಇಳಿಯಲಿಕ್ಕೆ ಹೇಳಿದನು. ಅವರು ಹಾಗೆ ಮಾಡದೆ ಸಮೀಪಕ್ಕೆ ಬಂದು ಪಟ್ಟಣದ ನೆರೆ ಹಳ್ಳಿಗಳಾದ ಖಾನಪುರ–ಖುಶ್ರುಪುರಗಳಲ್ಲಿಳಿದು ಒಂದು ಕೋಟೆಯ ಬಾಗಿಲನ್ನು ತಮ್ಮ ವಶಕ್ಕೆ ಕೊಡಬೇಕೆಂದು ಕೇಳಿದರು. ಮಸೌದನು ಅದಕ್ಕೆ ಒಡಂಬಡಲಿಲ್ಲ. ಮರಾಟರು ಮುಂದಕ್ಕೆ ಸರಿದು, **ಜೋರಾಪುರ**ದಲ್ಲಿ ತಳವೂರಿ ಶಹಪೂರವನ್ನು ಸುಲಿದರಂತೆ. ಈ ದುಂಡುಟಿಗೆಯಿಂದಲೂ ಮರಾಟರು ಎತ್ತು ಹೊಡೆಯುವವರ ಸೋಗು ಹಾಕಿಕೊಂಡು ತಮ್ಮ ತುಬಾಕಿ–ಕತ್ತಿಗಳನ್ನು ಕಂಟಲೆಗಳೊಳಗೆ ಬಚ್ಚಿಟ್ಟು, ರಾಜಧಾನಿಯೊಳಗೆ

ಬರಲಾರಂಭಿಸಿದ್ದರಿಂದಲೂ ಆದಿಲ್ಶಾಹಿಯವರ ಸಂಶಯವು ದಿನದಿನಕ್ಕೆ ಹೆಚ್ಚಲಾರಂಭಿಸಿತು. ಬಳಿಕ ಸಿವಾಜಿಯು ಬಹಿರಂಗವಾಗಿ ಆದಿಲ್ಶಾಹಿಯ ಊರುಗಳನ್ನು ಸುಲಿಯ ತೊಡಗಿದನು; ಮತ್ತು ಅವನ ದಳವಾಯಿಗಳು ದೌಲತ್ತಪುರ, ಖುಶ್ರುಪುರ, ಜೋರಾಪುರಗಳನ್ನು ಲೂಟಿಮಾಡಿ, ಸಾವಕಾರರನ್ನು ಸೆರೆಹಿಡಿದು ಒಯ್ಯಲಾರಂಭಿಸಿದ್ದಲ್ಲದೆ, ಅವರನ್ನು ಬಿಡಿಸಲಿಕ್ಕೆ ಬಂದ ಜನರನ್ನು ಕೊಂದು ಹಾಕಿದರು. ಬಾವಿತೆಗೆಯುವಾಗ ವೇತಾಳ ಹೊರಟಿತೆಂಬ ಗಾದೆಯಂತೆ, ನೆರವಾಗಲಿಕ್ಕೆ ಬಂದ ಮರಾಟರು ಸುಲಿಗೆಗಾರರಾದರು!!! ಮಸೌದನು ಬೇಸತ್ತು ಕೊತ್ತಳದ ಮೇಲಿದ್ದ ತೋಫನ್ನು ಅವರ ಮೇಲೆ ಹಾರಿಸುವುದಕ್ಕೆ ಹುಕುಮುಕೊಟ್ಟನು. ಅದರ ಒಂದು ಗುಂಡು ತಾಕಿ, ಒಬ್ಬ ಮರಾಟ ದಳವಾಯಿಯು ಸತ್ತುದರಿಂದ ಅವರು ಅಂಜಿ ಹಿಂದಕ್ಕೆ ಸರಿದರು. ದಿಕ್ಕೆಟ್ಟ ಮಸೌದನು ದಿಲೀರಖಾನನಿಗೆ ಶರಣು ಹೋದನು.

ಇಬ್ಬರ ನ್ಯಾಯ ಒಬ್ಬರಿಗಾಯ ಎಂಬ ಗಾದೆಯಂತೆ ಮಸೌದ ಸಿವಾಜಿಯರ ನಡುವಿನ ಜಗಳವು ಮೊಗಲರ ಪಥ್ಯಕ್ಕೆ ಬಿತ್ತು. "ಚಂಚುಪ್ರವೇಶೊ ಮುಸಲಪ್ರವೇಶಃ" ಎಂಬ ಗಾದೆಯಂತೆ ಏನಾದರೊಂದು ನೆವನದಿಂದ ಆದಿಲ್ಶಾಹಿಯೊಳಗೆ ಸೇರಿ, ಅದನ್ನು ಹಾಳುಮಾಡಲಿಕ್ಕೆ ದಿಲೀರಖಾನನು ಒಂದು ಕಾಲಿನ ಮೇಲೆ ತಯಾರಾಗಿ ನಿಂತಿದ್ದನು. ಮಸೌದನ ವಕೀಲನು ಹೋದ ಕೂಡಲೆ ದಿಲೀರಖಾನನು ಮೊಗಲರ ಒಂದು ದಂಡನ್ನು ವಿಜಾಪುರಕ್ಕೆ ಕಳುಹಿದನು. ಮೊಗಲರ ದಂಡೂ ಆದಿಲ್ಶಾಹಿಯ ದಂಡೂ ವೆಂಕಟಾದ್ರಿ ಮುರಾರಿ ಮುಂತಾದ ಅಧಿಕಾರಿಗಳೊಡನೆ ಮರಾಟರನ್ನು ಬೆನ್ನಟ್ಟಲಿಕ್ಕೆ ಹೊರಟು ತಿಕೋಟಿಗೆ ಬಂತು. ಆಗ ಸಿವಾಜಿಯು ಪನ್ಹಾಳ ವಿಜಾಪುರಗಳ ನಟ್ಟನಡುವೆ ಹಗೆಗಳ ಹಾದಿನೋಡುತ್ತ ಕುಳಿತಿದ್ದನು. ಅಷ್ಟರೊಳಗೆ "ಛಿದ್ರೇಷ್ವನರ್ಥಾಃ ಬಹುಲೀಭವಂತಿ" ಎಂಬ ಗಾದೆಯಂತೆ ಮಸೌದನಿಗೂ ಆದಿಲ್ಶಾಹಿಯ ದಳವಾಯಿಯಾದ ಸರ್ಜಾಖಾನನಿಗೂ ಜಗಳ ಬಂದುದರಿಂದ ಇಷ್ಟು ದಿವಸ ಮಾಡಿದ್ದೆಲ್ಲ ಓಮ್ ಫಸ್ಸಾಯಿತು.*

---

* ಹಿಂದೆ ಪುಟ ೨೨೭—೨೮ ನೋಡಿರಿ.

ತನ್ನ ರಾಜ್ಯದ ಮೇರೆಯ ಸಂರಕ್ಷಣಾರ್ಥವಾಗಿಯೂ ತನ್ನ ದಂಡಿಗೆ ಬೇಕಾದ ಧಾನ್ಯಸಂಗ್ರಹಕ್ಕಾಗಿಯೂ ಸಿವಾಜಿಯು ಭೂಪಾಲಗಡವೆಂಬ† ಹೊಸಕೋಟೆಯನ್ನು ಕಟ್ಟಿಸಿದ್ದನಷ್ಟೇ. ಆ ಕೋಟೆಯನ್ನು ಹಿಡಿದುಕೊಳ್ಳುವುದಕ್ಕೆ ದಿಲೀರಖಾನನು ತೋಪುಗಳನ್ನು ತೆಗೆದುಕೊಂಡು ಹೊರಟನು. ಆ ಕೋಟೆಯ ಹತ್ತರಿದ್ದ ದಿನ್ನೆಯ ಮೇಲೆ ತೋಪುಗಳನ್ನೇರಿಸಿ ಒಂದೇ ಸವನೇ ಮೂರು ನಾಲ್ಕು ತಾಸು ಅವುಗಳನ್ನು ಹಾರಿಸಲು, ಕೋಟೆಯ ಗೋಡೆಯು ಬಿಚ್ಚಿ ಬಿತ್ತು. ಮೊಗಲ ದಂಡಾಳುಗಳು ಆರ್ಭಟಿಸಿ ಒಳ ಹೊಕ್ಕು ಕಲಿತನದಿಂದ ಕಾದಿ, ಕೋಟೆಯನ್ನು ಹಿಡಿಕೊಂಡರು. ದಿಲೀರ ಖಾನನು ಅತಿಕ್ರೂರತನದಿಂದ ಸೆರೆಸಿಕ್ಕ ೭೦೦ ಮರಾಟೆ ದಂಡಾಳುಗಳ ಕಯ್ಕಡಿಸಿ ಬಿಟ್ಟುದಲ್ಲದೆ, ಉಳಿದ ಜನರನ್ನು ಮಾರಿ ರೊಕ್ಕಮಾಡಿದನು (ಎಪ್ರಿಲ ೧೬೭೯)!!!

ಮೊಗಲರು ಭೂಪಾಲಗಡವನ್ನು ಮುತ್ತುತ್ತಾರೆಂಬ ಸುದ್ದಿಯು ಬಂದ ಕೂಡಲೆ, ಸಿವಾಜಿಯು ಅಲ್ಲಿಯ ಕಿಲ್ಲೆದಾರನಿಗೆ ನೆರವಾಗಲಿಕ್ಕೆ ೧,೬೦೦ ರಾಹುತರನ್ನು ಕಳುಹಿದನು. ಅವರು ಬರುವಷ್ಟರಲ್ಲಿ ಆ ಕೋಟೆಯು ಮೊಗಲರ ಕಯ್ಸೇರಿದ್ದರಿಂದ, ಪರೆಂಡಾದಿಂದ ಅನ್ನಸಾಮುಗ್ರಿಯನ್ನು ತರುತ್ತಿದ್ದ ಮೊಗಲರ ದಂಡಿನ ಮೇಲೆ ಮರಾಟರು ಬಿದ್ದರು. ಆ ದಂಡಿನ ದಳವಾಯಿಯಾದ **ಇರಾಜ**ಖಾನನು ದಿಲೀರಖಾನನಿಂದ ಬಂದ ದಂಡಿನ ಸಹಾಯದಿಂದ ಮರಾಟರನ್ನು ಸೋಲಿಸಿ, ಸಾವಿರಾರು ಜನರನ್ನು ಕೊಂದು ಓಡಿಸಿ ಬಿಟ್ಟನು. ಓಡಿ ಹೋದ ಮರಾಟರು ಒಟ್ಟು ಗೂಡಿ, ಪರೆಂಡಾದಿಂದ ೩೦ ಮೈಲು ದೂರಿರುವ **ಕರಕಂಬಿ**ಯಲ್ಲಿ ಇರಾಜಖಾನನಿಗೆ ಗಂಟುಬಿದ್ದು ಅವನನ್ನು ಸೋಲಿಸಿ, ಅವನ ಸಂಗಡಲಿದ್ದ ಧಾನ್ಯವನ್ನೆಲ್ಲ ಹಿಡಿದುಕೊಂಡರು.

ಅವರಂಗಜೇಬ ಬಾದಶಹನು ಆರ್ಯಧರ್ಮದ ಕಡುಹಗೆಯಾದ್ದರಿಂದ ಪ್ರತಿಯೊಬ್ಬ ಭಾರತೇಯನ ಮೇಲೆ **ಜೀಜಿಯಾ** ಎಂಬ ತಲೆಪಟ್ಟಿ

---

† ಭೂಪಾಲಗಡವು ಜತ್ತದ ವಾಯುವ್ಯಕ್ಕೆ ೨೦ ಮೈಲಿನ ಮೇಲೂ ಪಂಢರಪುರದ ನೈಋತ್ಯಕ್ಕೆ ೪೫ ಮೈಲಿನ ಮೇಲೂ ಇರುತ್ತದೆ.

ಯನ್ನು ಕೂಡ್ರಿಸಿದ್ದನಷ್ಟೇ. ಇದು ತೀರ ಅನ್ಯಾಯದ್ದೆಂದು ಪ್ರತಿಯೊಬ್ಬ ಹಿಂದೂ ಗೃಹಸ್ಥನು ಬಾದಶಹನ ಹೆಸರಲ್ಲಿ ಕಲ್ಲು ಒಡೆಯುತ್ತಿದ್ದನು. ಈ ತಲೆಪಟ್ಟಿಯ ವಿರುದ್ಧವಾಗಿ ನಮ್ಮ ಚರಿತ್ರನಾಯಕನು ಅವರಂಗಜೇಬ ಬಾದಶಹನಿಗೆ ೧೬೭೯ನೆಯ ಇಸ್ವಿಯ ಜೂನ ಜುಲೈ ತಿಂಗಳಲ್ಲಿ ಒಂದು ಸಕಾರಣವೂ ಯುಕ್ತಿಯುಕ್ತವೂ ಆದ ಪತ್ರವನ್ನು ಬರಿಸಿದನು. ಅದನ್ನು ನೀಲಪ್ರಭು ಎಂಬ ಕಾರಕೂನನು ಉಜ್ಜ್ವಲವಾದ ಫಾರ್ಸಿ ಭಾಷೆಯಲ್ಲಿ ಬರೆದನು. ಈ ಪತ್ರವು ಅತಿಮಹತ್ವದ್ದಿರುವುದರಿಂದ ಅದನ್ನು ಇಲ್ಲಿ ಕೊಡುತ್ತೇವೆ:—

ಅಲವಿಗ್ಹಾರ ಬಾದಶಹರವರ ಸನ್ನಿಧಾನಕ್ಕೆ

ತಮ್ಮ ನಿರಂತರ ಮತ್ತು ನಿಶ್ಚಲ ಹಿತೇಚ್ಛುವಾದ ಸಿವಾಜಿಯು ಸೂರ್ಯನಿಗಿಂತ ಹೆಚ್ಚು ಸ್ಪಷ್ಟವಾದ ದೇವರ ಅನುಗ್ರಹವನ್ನೂ ಬಾದಶಹರಾದ ತಮ್ಮ ಅನುಗ್ರಹವನ್ನೂ ಕೊಂಡಾಡಿ. ತಮ್ಮ ದಿವ್ಯಚಿತ್ತಕ್ಕೆ ಅರಿಕೆಮಾಡಿ ಕೊಳ್ಳುವುದೇನಂದರೆ:—ದುರದೃಷ್ಟಮೂಲಕವಾಗಿ ತಮ್ಮ ದಿವ್ಯಸನ್ನಿಧಾನ ದಿಂದ ಅಪ್ಪಣೆಯನ್ನು ತೆಗೆದುಕೊಳ್ಳದೇ ನನಗೆ ಬರಬೇಕಾದರೂ, ಯೋಗ್ಯವಾದ ಮತ್ತು ಶಕ್ಯವಾದ ಸೇವೆಯನ್ನು ಯಾವಾಗಲೂ ಕೃತಜ್ಞತಾಪೂರ್ವಕವಾಗಿ ಮಾಡುವುದಕ್ಕೆ ನಾನು ತತ್ಪರನಾಗಿರುತ್ತೇನೆ.

ನನ್ನೊಡನೆ ಹೂಡಿದ ಯುದ್ಧದಿಂದ ತಮ್ಮ ಹಣವೆಲ್ಲ ವೆಚ್ಚಾಗಿ ತಮ್ಮ ಬಂಡಾರವು ಬರಿದಾದ್ದರಿಂದ ಹಿಂದೂ ಜನರ ಮೇಲೆ ಜೇಜಿಯಾ ಎಂಬ ತಲೆಪಟ್ಟಿಯನ್ನು ಹೇರಿ, ತಮ್ಮ ತಿಜೋರಿಯನ್ನು ತುಂಬಿಸಬೇಕೆಂದು ತಾವು ಎಲ್ಲ ಸುಬೇದಾರರಿಗೆ ಹುಕುಮು ಮಾಡಿರುತ್ತೀರೆಂದು ಈಗ ತಾನೇ ಕೇಳಿರುತ್ತೇನೆ. ಮೊಗಲ ಸಾಮ್ರಾಜ್ಯವನ್ನು ಸ್ಥಾಪಿಸಿದ ಜಲಾಲುದ್ದೀನ ಅಕ್ಬರ ಬಾದಶಹನು ೫೨ ವರುಷ ಸಾರೋದ್ಧಾರವಾಗಿ ಆಳಿದನು. ಅವನು ಎಲ್ಲ ಮತದವರು ದೇವರನ್ನೇ ಆರಾಧಿಸುತ್ತಾರೆಂದೆಣಿಸಿ, ಕಿರಸ್ತಾನರು, ಯಹುದಿಯರು, ಮುಸಲ್ಮಾನರು, ದಾದುವಿನ ಪಂಥದವರು, ಆಕಾಶ ಪೂಜಕರು, ಚಾರ್ವಾಕರು, ಪಾಷಂಡರು, ಬ್ರಾಹ್ಮಣರು, ಜೈನರು ಇವರೆಲ್ಲರನ್ನು ಸರಿಯಾಗಿ ನಡಿಸಿಕೊಂಡನು. ಅವನು ಎಲ್ಲ ಪ್ರಜರನ್ನು ಸಮನಾಗಿ

ನೋಡಿ ಸಂರಕ್ಷಿಸಿದನು. ಆದ್ದರಿಂದ ಅವನು **ಜಗದ್ಗುರು** ಎಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿದನು.



ಅಕ್ಬರ.

ಅವನ ತರುವಾಯ ನುರುದ್ಧೀನ ಜಹಾಂಗೀರಬಾದಶಹನು ೨೨ವರ್ಷ ಜಗತ್ತನ್ನಾಳಿ ಜನರ ವಿಶ್ವಾಸವನ್ನು ಗಳಿಸಿ, ಪ್ರಜೆಗಳ ಹಿತವನ್ನೂ ತನ್ನ ಹಿತವನ್ನೂ ಸಂಪಾದಿಸಿಕೊಂಡನು. ಬಳಿಕ ಶಹಾಜಿಹಾನಬಾದಶಹನು ೩೨ ವರ್ಷ ಪೃಥ್ವಿಯನ್ನಾಳಿ, ಆತ್ಮೋನ್ನತಿಯನ್ನು ಮಾಡಿಕೊಂಡನು. ಅಂದರೆ

ಒಳ್ಳೆಯವನೆಂದು ಹೆಸರುವಾಸಿಯಾದನು. ಒಬ್ಬ ಫಾರ್ಸಿಕವಿಯು ಹೇಳುವುದೇನಂದರೆ:—ಒಳ್ಳೆಯವನೆಂದು ಹೆಸರುವಾಸಿಯಾದವನು ಅಪಾರ ಸಂಪತ್ತನ್ನು ಗಳಿಸುತ್ತಾನೆ. ಏಕೆಂದರೆ, ಅವನು ಸತ್ತ ಬಳಿಕ ಜನರು ಅವನು ಮಾಡಿದ ಒಳ್ಳೆಯ ಕೆಲಸಗಳನ್ನು ಹೇಳಿಕೊಳ್ಳುವುದರಿಂದ ಅವನು ಕೀರ್ತಿಶೇಷನಾಗಿ ಈ ಪ್ರಂಪಚದಲ್ಲಿ ಉಳಿಯುತ್ತಾನೆ. ಅಕ್ಬರಬಾದಶಹನು ಪ್ರೇಮಾದ್ರ್ರಹೃದಯನಾಗಿ ಪ್ರಜೆಗಳ ಕ್ಷೇಮವನ್ನು ಚಿಂತಿಸುತ್ತಿದ್ದುದರಿಂದ ಅವನು ತನ್ನ ಮೋರೆ ತಿರುವಿದತ್ತ ಜಯಲಕ್ಷ್ಮಿಯು ಮಾಲೆಯನ್ನು ಹಿಡಿದುಕೊಂಡು ನಿಲ್ಲುತ್ತಿದ್ದಳು. ಅವನ ಆಳಿಕೆಯಲ್ಲಿ ಎಷ್ಟೋ ನಾಡುಗಳೂ ಕೋಟೆಗಳೂ ಅವನ ಕೈವಶವಾದವು ಹಿಂದಿನ ಬಾದಶಹರು ಹಾಕಿಕೊಟ್ಟ ರಾಜ್ಯಪದ್ಧತಿಯನ್ನು ಸರಿಯಾಗಿ ನಡಿಸಲಿಕ್ಕೆ ಬಾರದ್ದರಿಂದ, ಅಲಮ್ಗಿರ ಬಾದಶಹನು ಕಕ್ಕವಿಕ್ಕಿಯಾಗಿ ಕಣ್ಣು ಬಿಡುತ್ತ ಕುಳಿತಿರುತ್ತಾನೆ. ಅವರಿಗೂ ಜೇಜಿಯಾತೆರಿಗೆಯನ್ನು ಜನರ ಮೇಲೆ ಹೇರುವ ಅಧಿಕಾರವಿತ್ತು. ಆದರೆ ಮತದುರಭಿಮಾನಕ್ಕೆ ಅವರ ಹೃದಯದಲ್ಲಿ ಎಡೆದೊರೆಯಲಿಲ್ಲ. ಸಣ್ಣವರು ದೊಡ್ಡವರು ಎಂದು ಭೇದಮಾಡದೆ, ದೇವರು ಎಲ್ಲ ಜನರನ್ನು ನಿರ್ಮಿಸಿರುತ್ತಾನೆಂತಲೂ ಪ್ರಜೆಗಳು ತಂತಮ್ಮ ಸ್ವಭಾವಕ್ಕನುಗುಣವಾಗಿ ಬೇರೆ ಬೇರೆ ಮತಗಳನ್ನು ಸ್ವೀಕರಿಸಿರುತ್ತಾರೆಂತಲೂ ಅವರು ಗಟ್ಟಿಯಾಗಿ ನಂಬಿದ್ದರು. ಅವರ ಪ್ರಜಾವಾತ್ಸಲ್ಯವೂ ಜನಕಲ್ಯಾಣೇಚ್ಛೆಯೂ ಅವರ ಸ್ಮಾರಕವಾಗಿದ್ದುದರಿಂದ ಎಲ್ಲ ಜನರ ಬಾಯಲ್ಲಿ ಆ ಮಹಾತ್ಮರ ಸ್ತುತಿಯು ಎಡೆಬಿಡದೆ ನೆಲೆಗೊಂಡಿರುತ್ತದೆ. ಉತ್ಕರ್ಷವು ಸದುದ್ದೇಶಗಳ ಫಲವಾಗಿರುತ್ತದೆ. ಅವರು ತಮ್ಮ ಪ್ರಜೆಗಳನ್ನು ಮಕ್ಕಳಂತೆ ಜೋಪಾನಮಾಡಿ ಸಾಕಿ ಸಲುಹಿದ್ದರಿಂದ, ಅವರು ಕೈಕೊಂಡಕೆಲಸಗಳು ಯಶಸ್ವಿಯಾದವು, ಅವರ ಸಂಪತ್ತು ಬೆಳೆಯಿತು, ಅವರ ಸುದೈವವು ಹೆಚ್ಚಿತು.

ತಮ್ಮ ಬಾದಶಾಹಿಯ ಆಳಿಕೆಯಲ್ಲಿ ಇದಕ್ಕೆ ವಿಪರೀತವು ಕಂಡುಬರುತ್ತದೆ. ಈಗ ಎಷ್ಟೋ ನಾಡುಗಳನ್ನೂ ಕೋಟೆಗಳನ್ನೂ ತಾವು ಈ ಮೊದಲೇ ಕಳೆಕೊಂಡಿರುತ್ತೀರಿ. ಉಳಿದವುಗಳಾದರೂ ಬೇಗನೆ ತಮ್ಮ ಕೈ ಬಿಡುವವು. ಏಕೆಂದರೆ, ಅವುಗಳನ್ನು ಹಾಳುಮಾಡುವುದರಲ್ಲಿಯೂ ಕೆಡಿ

ಸುವುದರಲ್ಲಿಯೂ ನಾನು ಎಳ್ಳಷ್ಟಾದರೂ ಹಿಂಜರಿಯಲಾರೆನು. ತಮ್ಮ ರೈತರು ನಿತ್ರಾಣರಾಗಿರುತ್ತಾರೆ. ಪ್ರತಿಯೊಂದು ಹಳ್ಳಿಯ ಬೆಳೆಯು ಕುಗ್ಗಿರುತ್ತದೆ; ಈಗ ತಮ್ಮ ಸುಬೇದಾರರು ಒಂದು ಲಕ್ಷದ ಬದಲು ಸಾವಿರವನ್ನೂ ಸಾವಿರದ ಬದಲು ಹತ್ತು ರೂಪಾಯಿಗಳನ್ನೂ ಅತಿಪ್ರಯಾಸದಿಂದ ತೆರಿಗೆಯಾಗಿ ಎತ್ತುತ್ತಲಿದ್ದಾರೆ. ಬಾದಶಹರ ಮತ್ತು ಅರಸರ ಅರಮನೆಗಳಲ್ಲಿ ಬಡತನವೂ ತಿರುಕಿಯೂ ವಾಸಮಾಡಿಕೊಂಡಿರುವಾಗ, ಉಳಿದ ಸರದಾರರ ಮತ್ತು ಅಧಿಕಾರಿಗಳ ಪಾಡೇನು? ತಮ್ಮ ಆಳಿಕೆಯಲ್ಲಿ ಪಂಡಾಳುಗಳು ಮನಸ್ಸಿನೊಳಗೆ ಕುದಿಯುತ್ತಾರೆ, ವ್ಯಾಪಾರಸ್ಥರು ಗೋಣ ಗುಟ್ಟುತ್ತಾರೆ, ಮುಸಲ್ಮಾನರು ಅಳುತ್ತಾರೆ, ಹಿಂದೂಜನರು ಗೋಳಾಡುತ್ತಾರೆ, ಇರಳು ತಿನ್ನಲಿಕ್ಕೆ ಬಡಜನರಿಗೆ ರೊಟ್ಟಿ ಇಲ್ಲುದರಿಂದ ಅವರು ಹಗಲು ಗಲ್ಲಗಲ್ಲಬಡಕೊಂಡು ತಮ್ಮ ಕೆನ್ನೆಗಳನ್ನು ಬಾಯಿಸಿಕೊಳ್ಳುತ್ತಾರೆ. ಇಂತಹ ದುಃಸ್ಥಿತಿಯಲ್ಲಿ ಜೀಜಿಯಾ ತೆರಿಗೆಯನ್ನೆತ್ತುವುದು ರಾಜನೀತಿಯೇ? ಈ ತಮ್ಮ ಅಪಕೀರ್ತಿಯು ಪಶ್ಚಿಮದಿಂದ ಪೂರ್ವದಿಕ್ಕಿಗೆ ಬೇಗನೇ ಹಬ್ಬುವದು. ಹಿಂದೂಸ್ಥಾನದ ಒಬ್ಬ ಬಾದಶಹನು ತಿರುಕರ ಪರಟಿಗೆ ಆಶಾಮಾಡಿ, ಜೀಜಿಯಾ ಎಂಬ ತಲೆಪಟ್ಟಿಯನ್ನು ಬ್ರಾಹ್ಮಣರಿಂದಲೂ ಶ್ರವಣರಿಂದಲೂ ಯೋಗಿಗಳಿಂದಲೂ ಸನ್ಯಾಸಿಗಳಿಂದಲೂ ಬೈರಾಗಿಗಳಿಂದಲೂ ಬಡವರಿಂದಲೂ ಭಿಕ್ಷುಕರಿಂದಲೂ ಅನಾಥರಿಂದಲೂ ಕೂಳಿಲ್ಲದವರಿಂದಲೂ ತೆಗೆದುಕೊಳ್ಳುತ್ತಾನೆಂತಲೂ ಅವನ ಶೌರ್ಯವು ತಿರುಕರ ಹಸಿವೆಯ ಮೇಲೆ ತೋರಿಸಲ್ಪಡುತ್ತದೆಂತಲೂ ಅವನು ತೈಮೂರಲಿಂಗನ ಮನೆತನದವರ ಕೀರ್ತಿಯನ್ನು ತುಳಿದು ನೆಲದಪಾಲು ಮಾಡುತ್ತಾನೆಂತಲೂ ಇತಿಹಾಸಗಳಲ್ಲಿ ಬರೆಯಲ್ಪಡುವದು.

ಬಾದಶಹರು ತುಸು ಚಿತ್ತಗೊಟ್ಟು ಕೇಳಬೇಕು. ತಾವು **ಕುರಾಣವು** ದೇವರ ವಾಕ್ಯವೆಂದು ನಂಬುತ್ತೀರಷ್ಟೇ. ಅದರಲ್ಲಿ ದೇವರನ್ನು **ರಬ್ಬ-ಉಲ್-ಅಲಮಿನ್** (ಮನುಷ್ಯರ ಒಡೆಯ) ಎಂದು ಸಂಬೋಧಿಸಿರುತ್ತಾರೆ ಹೊರತು, **ರಬ್ಬ-ಉಲ್-ಮುಸಲ್ಮಿನ್** (ಮುಸಲ್ಮಾನರ ಒಡೆಯ) ಎಂದು ಕರೆದಿರುವುದಿಲ್ಲ. ನಿಜವಾಗಿಯೂ ಹಿಂದು ಮುಸಲ್ಮಾನರು ಭಿನ್ನರಾಗಿರುತ್ತಾರೆ. ಅವರು ಬೇರೆ ಬೇರೆ ಬಣ್ಣದವರಾಗಿದ್ದು ಬಣ್ಣಗಾರನಾದ

ದೇವರು ಭಿನ್ನವಾದ ಬಣ್ಣಗಳನ್ನು ಕೂಡಿಸಿ, ಮನುಷ್ಯಜಾತಿಯ ಚಿತ್ರವನ್ನು ರಮಣೀಯವಾಗಿ ಬರೆದಿದ್ದಾನೆ. ಆ ದೇವರ ಉದ್ದಿಶ್ಯವಾಗಿಯೇ ಮಸೀದೆಗಳಲ್ಲಿ ಜನರು ಒದರುತ್ತಾರೆ. ಮತ್ತು ಗುಡಿಗಳಲ್ಲಿ ಗಂಟೆಗಳನ್ನು ಬಾರಿಸುತ್ತಾರೆ. ಯಾವದಾದರೊಂದು ಮತದ ದುರಭಿಮಾನ ಹಿಡಿಯುವುದಾಗಲಿ ಯಾವದಾದರೊಂದು ಅರ್ಚನವಿಧಿಗೆ ಪಕ್ಷಪಾತ ತೋರಿಸುವುದಾಗಲಿ ದೇವರ ವಾಕ್ಯಕ್ಕೆ ವಿರುದ್ಧವಾದ ಕೃತಿಗಳೇ ಸರಿ. ದೇವರು ಬರೆದ ಚಿತ್ರದ ಮೇಲೆ ಬೇರೆ ಗೆರೆಗಳನ್ನು ಎಳೆಯುವುದೆಂದರೆ ದೇವರನ್ನು ದೂಷಿಸಿದಂತಾಗುವುದು.



ರಾಣಾ ಪ್ರತಾಪಸಿಂಹ.

ಸರಿಯಾಗಿ ವಿಚಾರಮಾಡಿ ನೋಡಿದರೆ ಜೀಜಿಯಾ ತಲೆಪಟ್ಟಿಯು ಅನ್ಯಾಯದ್ದಾಗಿರುತ್ತದೆ. ಮೈತುಂಬ ಒಡವೆಗಳನ್ನಿಟ್ಟುಕೊಂಡ ಸುಂದರಿ

ಯಾವ ತರುಣಿಯು ಒಂಟಿಗಳಾಗಿ ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತಕ್ಕೆ ಏನೂ ಭಯವಿಲ್ಲದೆಯೂ ತೊಂದರೆ ಇಲ್ಲದೆಯೂ ಹೋಗ ಬಹುದಾದ ರಾಜ್ಯದಲ್ಲಿ ಮಾತ್ರ ಇಂತಹ ತಲೆಪಟ್ಟಿಯನ್ನು ಕೂಡ್ರಿಸಿದರೂ ಕೂಡ್ರಿಸಬಹುದು. ಆದರೆ ಈ ಕಾಲದಲ್ಲಿ ಪಟ್ಟಣಗಳಲ್ಲೇ ಸುಲಿಗೆಗಳು ನಡೆದಿರುತ್ತವೆ, ಹಳ್ಳಿಗಳ ಪಾಡೇನು? ಇದಲ್ಲದೆ ಈ ಜೇಜಿಯಾ ತೆರಿಗೆಯು ನಮ್ಮ ಭರತಖಂಡದಲ್ಲಿ ಕೇವಲ ನೂತನವಾದುದೂ ಅನುಚಿತವಾದುದೂ ಎಂದು ಎಲ್ಲರೂ ಎಣಿಸುತ್ತಾರೆ.

ಭಾರತೀಯರನ್ನು ಹೆದರಿಸುವುದರಿಂದಲೂ ಪ್ರಜೆಗಳನ್ನು ಗೋಳಾಡಿ ಸುವುದರಿಂದಲೂ ಪುಣ್ಯಬರುತ್ತದೆಂಬ ತಿಳಿವಳಿಕೆಯು ತಮ್ಮಲ್ಲಿದ್ದರೆ, ಮೊದಲು ಹಿಂದುಜನರ ಮುಖ್ಯಸ್ಥನಾದ ರಾಣಾರಾಜಸಿಂಗನಿಂದ ಜೇಜಿಯಾ ಪಟ್ಟಿಯನ್ನು ಎತ್ತಿರಿ; ಬಳಿಕ ತಮ್ಮ ಆಳಾದ ನನ್ನಿಂದ ಅದನ್ನು ಎತ್ತು ವುದು ತಮಗೆ ಘೋರವಾಗಲಿಕ್ಕಿಲ್ಲ. ಆದರೆ ಇರಿವೆಗಳನ್ನೂ ನೊಣ ಗಳನ್ನೂ ನೋಯಿಸುವುದರಿಂದ ತಮ್ಮ ದೊಡ್ಡಸ್ತಿಕೆಗೂ ಎದೆಗಾರಿಕೆಗೂ ಕುಂದುಬರುವುವೇ ಹೊರತು ಶೋಭೆ ಉಂಟಾಗಲಾರದು.

ತಮ್ಮ ಕಯ್ಕೆಳಗಿನ ಅಧಿಕಾರಿಗಳ ಪ್ರಾಮಾಣಿಕತನದ ಬಗ್ಗೆ ನನಗೆ ಬಹಳ ಸಂಶಯ ಬರುತ್ತದೆ. ಏಕೆಂದರೆ ಅವರು ತಮಗೆ ನಿಜವಾದ ಸಂಗತಿ ಯನ್ನು ತಿಳಿಸುವುದರ ಬದಲು ಉರಿಯುವ ಬೆಂಕಿಯ ಮೇಲೆ ಹುಲ್ಲು ಹಾಕುತ್ತಾರೆ. ತಮ್ಮ ಆಡಳಿತದ ಸೂರ್ಯನು ಘನತೆಯ ಕ್ಷಿತಿಜದ ಮೇಲೆ ತನ್ನ ಬೆಳಕನ್ನು ಹರವಲಿ.*

ಅತ್ತ ದಿಲೇರಖಾನನು ಧುಳಖೇಡದಲ್ಲಿ ಭೀಮಾಹೊಳೆಯನ್ನು ದಾಟಿ ವಿಜಾಪುರದ ಮೇಲೆ ಸಾಗಿಬಂದನು (೧೮ ಆಗಸ್ಟ ೧೬೭೯). ಮಸೌದನು ಗಾಬರಿಯಾಗಿ ಎದೆಗುಂದಿ ಸಿವಾಜಿಯ ನೆರವು ಕೇಳುವುದಕ್ಕೆ **ಬಿಂದು ರಾಯ**ನೆಂಬ† ಒಬ್ಬ ವಕೀಲನನ್ನು ಒಂದು ಪತ್ರಕೊಟ್ಟು ಅವನ ಬಳಿಗೆ

---

* ಔವರಂಗಜೇಬನ ಇತಿಹಾಸ ೩ ನೆಯ ಸಂಪುಟ ಪುಟ ೩೨೫—೩೨೯.

† ಪಂಡಿತ ಸರ್ಕಾರರರು ಹಿಂದುರಾಯ ಎಂದುಬರೆಯುತ್ತಾರೆ. ಇಂತಹ ಹೆಸರೇ ನಮ್ಮಲ್ಲಿಲ್ಲ. ಬಿಂದುರಾಯ ಇರಬಹುದು.

ಕಳುಹಿದನು. ಆ ಕಾಗದದಲ್ಲಿ ಬರೆದುದೇನಂದರೆ:—ಅದಿಲ್ಶಾಹಿಯು ಈಗಿನ ಹಾಡು ತಮಗೆ ಅರಿಯದ ಮಾತಲ್ಲ. ದಂಡಿಲ್ಲ, ಹಣವಿಲ್ಲ, ಅನ್ನಸಾಮಗ್ರಿಯಿಲ್ಲ. ಕೋಟೆಯನ್ನು ಕಾಪಾಡಲಿಕ್ಕೆ ಗೆಳೆಯರ ನೆರವಿಲ್ಲ. ಹಗೆಯು ಕಸುವುಳ್ಳವನೂ ಸದಾಜಗಳಗಂಟನೂ ಆಗಿರುತ್ತಾನೆ. ತಾವು ವಂಶಪರಂಪರವಾಗಿ ಸರದಾರರಾಗಿದ್ದು, ಅದಿಲ್ಶಾಹಿಯಿಂದಲೇ ಮುಂದೆ ಬಂದಿರುತ್ತೀರಿ. ಆದ್ದರಿಂದ ತಾವು ಉಳಿದವರಿಗಿಂತ ಹೆಚ್ಚು ಕೃತಜ್ಞತೆಯನ್ನು ತೋರಿಸಬಹುದು. ತಮ್ಮ ಸಾಹಾಯವಿಲ್ಲದೆ ನಾವು ಈ ರಾಜ್ಯವನ್ನಾಗಲಿ ಅದಕ್ಕೆ ಸೇರಿದ ಕೊಟೆಗಳನ್ನಾಗಲಿ ಕಾಪಾಡಲಾರೆವು. ಉಂಡ ಉಪ್ಪಿಗೆ ಸರಿಯಾಗಿ ನಡೆಯಿರಿ; ನಮ್ಮ ಸಹಾಯಕ್ಕೆ ಬೇಗನೆ ಬರ್ರಿ. ತಾವು ಸರಿಕಂಡುದನ್ನು ಹೇಳಿದರೆ ಅದರಂತೆ ನಡೆಯಲಿಕ್ಕೆ ನಾವು ಸಿದ್ಧರಾಗಿರುತ್ತೇವೆ.

ಕಲ್ಲಿಗಿಂತ ಇಟ್ಟಂಗಿಯು ಮಿದುವೆಂಬ ಮರಾಟಿಗಾದೆಯಂತೆ ದಿಲೇರನಿಗಿಂತ ಸಿವಾಜಿಯು ಅದಿಲ್ಶಾಹಿಗೆ ಹೆಚ್ಚು ಬೇಕಾದವನಾಗಿದ್ದನು. ದಿಲೀರಖಾನನ ಮನಸ್ಸಿನಲ್ಲಿ ಅದಿಲ್ಶಾಹಿಯನ್ನು ನಿರ್ನಾಮವಾಗಿ ಮಾಡುವುದಿತ್ತು. ಸಿವಾಜಿಯ ಮನಸ್ಸಿನಲ್ಲಿ ಅದಿಲ್ಶಹನನ್ನು ತನ್ನ ಕಯ್ಯೊಳಗೆ ತೆಗೆದುಕೊಂಡು, ಅವನನ್ನು ಸೂತ್ರಗೊಂಬೆಯಂತೆ ಕುಣಿಸುವುದಿತ್ತು. ಆದ್ದರಿಂದ ಅವನು ಕೂಡಲೆ ೧೦,೦೦೦ ರಾಹುತರನ್ನು ಮಸೌದನಿಗೆ ನೆರವಾಗಲಿಕ್ಕೆ ಕಳುಹಿ, ೨,೦೦೦ ಕಾಳಿನ ಗೋಣಿಗಳನ್ನು ಎತ್ತುಗಳ ಮೇಲೆ ಹೇರಿಸಿ ಕಳುಹಿದ್ದಲ್ಲದೆ, ತನ್ನ ರಾಜ್ಯದ ಎಲ್ಲ ಜನರಿಗೂ ಅನ್ನಸಾಮಗ್ರಿಗಳನ್ನು ಮಾರುವುದಕ್ಕೆ ವಿಜಾಪುರಕ್ಕೆ ಒಯ್ಯಬೇಕೆಂದು ಒಟ್ಟು ಹುಕುಮು ಕೊಟ್ಟನು. ವಿಸಾಜಿ ನೀಲಕಂಠನೆಂಬ ಮರಾಟರ ವಕೀಲನು ಈ ಸಂತೋಷದ ಸುದ್ದಿಯನ್ನು ಮಸೌದನಿಗೆ ತಿಳಿಸಿ, ಹೇಳಿದ್ದೇನಂದರೆ—೫೦೦ ಮಂದಿ ಮರಾಟೆ ರಾಹುತರು ಐನಾಪುರದಲ್ಲಿಯೂ ಮತ್ತೆ ೫೦೦ ಮಂದಿ ಭೂಪಾಲಗಡದಲ್ಲಿಯೂ ಸಿದ್ಧವಾಗಿದ್ದು, ತಮ್ಮ ಅಪ್ಪಣೆಯ ದಾರಿಯನ್ನು ನೋಡುತಲಿದ್ದಾರೆ. ಅವರ ನೆರವಿನಿಂದ ತಾವು ಕೋಟೆಯನ್ನು ಕಾಪಾಡಿರಿ; ನಮ್ಮ ಯಜಮಾನನು ದಂಡೆತ್ತಿಹೋಗಿ ದಿಲೀರಖಾನನನ್ನು ಯೋಗ್ಯರೀತಿಯಿಂದ ದಂಡಿಸುವನು.

ಮೊಗಲರನ್ನು ಕೂಡಿದ ಶಂಭುಜಿಯು ಆದಿಲ್ಶಾಹಿಗೆ ಸೇರಿದ **ಇಂಡಿಯ** ಭಾಗವನ್ನು ಸುಲಿಯಲಾರಂಭಿಸಿದ್ದರಿಂದ ಮಸೌದನು ಸಾಬಾಜಿ ಘಾತಗೆಯೆಂಬವನನ್ನು ತೊರಗಲ್ಲಿನ ದಂಡಿನೊಡನೆ ಅವನನ್ನು ಎದುರಿಸ ಲಿಕ್ಕೆ ಕಳುಹಿದನು. ಇಬ್ಬರಿಗೂ ಕಾದಾಟವಾಗಿ ಸಾಬಾಜಿಯು ಗಾಯ ಹೊಂದಿವರೂ ಶಂಭುಜಿಯು ೫೦ ಕುದುರೆಗಳನ್ನೂ ೫೦ ಎತ್ತುಗಳನ್ನೂ ೪ ಒಂಟೆಗಳನ್ನೂ ಹಿಡಿದುಕೊಂಡನು. ಅತ್ತ ಅಕ್ಲುಜವನ್ನು ಮುತ್ತಿದ ಮೊಗಲರ ಮತ್ತೊಬ್ಬ ದಳವಾಯಿಯನ್ನು ಆದಿಲ್ಶಾಹಿಯ ಮತ್ತೊಬ್ಬ ದಳವಾಯಿಯು ಓಡಿಸಿಬಿಟ್ಟನು (ಸಪ್ಟಂಬರ). “ಪ್ರಸಾದಚಿಹ್ನಾನಿ ಪುರಃ ಫಲಾನಿ” ಎಂಬ ಕಾಳಿದಾಸೋಕ್ತಿಯಂತೆ, ರಾಜಧಾನಿಯ ಸಂರಕ್ಷಣದ ಪ್ರಯತ್ನವು ಸಮಾಧಾನಕರವಾಗಿ ಆರಂಭಿಸಿತು.

ಅತ್ತ ದಿಲೀರಖಾನನು ಧುಳಖೇಡವನ್ನು ಬಿಟ್ಟು, ವಿಜಾಪುರದ ಈಶಾನ್ಯಕ್ಕೆ ೬ ಮೈಲಿನ ಮೇಲಿದ್ದ **ಬರಟಗಿ**ಯಲ್ಲಿ ಪಾಳೆಯವನ್ನು ಹಾಕಿ ಕೊಂಡು ನಿಂತು, ಮಸೌದನ ವಕೀಲರೊಡನೆ ಮಾತುಕಥೆಗಳನ್ನು ನಡಿಸಿ ದನು (೭ ಅಕ್ಟೋಬರ). ಈ ಸುದ್ದಿಯನ್ನು ಕೇಳಿ ಸಿವಾಜಿಯು ಪನ್ಹಾಳ ವನ್ನು ಬಿಟ್ಟು ೧೦,೦೦೦ ರಾಹುತರೊಡನೆ ಬಂದು ಸೆಲ್ಗೂರಿನಲ್ಲಿ ನಿಂತು, ಆದಿಲ್ಶಹನ ಬೆಟ್ಟಿಯನ್ನಪೇಕ್ಷಿಸಿದನು (೩೦ ಅಕ್ಟೋಬರ). ಗತ್ಯಂತರ ಕಾಣದ ಮಸೌದನು ೫೦೦ ರಾಹುತರೊಡನೆ ರಾಜಧಾನಿಯೊಳಗೆ ಬಂದು, ಆದಿಲ್ಶಹನನ್ನು ಕಾಣುವುದಕ್ಕೆ ಅಡ್ಡಿಯಿಲ್ಲೆಂದು ಒಡಂಬಟ್ಟನು. ಆದರೆ ಮೋರೊ ತ್ರಿಯುಂಬಕ ಪೇಶ್ವೆಯು ಈ ಮೇರೆಗೆ ಪಟ್ಟಣದೊಳಗೆ ಹೋಗಿ ಮಸೌದನ ಕಯ್ಯಲ್ಲಿ ಸಿಕ್ಕುವುದು ಸರಿಯಲ್ಲೆಂದು ಸೂಚಿಸಿದ್ದರಿಂದ ಸಿವಾಜಿಯು ಆ ಗೋಜಿಗೆ ಹೋಗದೆ, ತನ್ನ ದಂಡನ್ನು ಇಬ್ಭಾಗಿಸಿ ೯,೦೦೦ ರಾಹುತರೊಡನೆ ತಾನು ಆಲ್ಮೇಲ ಮಾರ್ಗವಾಗಿಯೂ ೧೦,೦೦೦ ಸ್ವಾರ ರೊಡನೆ ಆನಂದರಾಯನು ಜತ್ತಸಾಂಗೋಳಿ ಮಾರ್ಗವಾಗಿಯೂ ಮೊಗ ಲರ ರಾಜ್ಯವನ್ನು ಹೊಕ್ಕರು (೪ ನವಂಬರ). ಈ ದಾಳಿಯ ಸುದ್ದಿಯು ತಿಳಿದರೂ, ಆದಿಲ್ಶಾಹಿಯ ರಾಜಧಾನಿಯು ಬೇಗನೆ ತನ್ನ ಕಯ್ಸೇರುವು ದೆಂಬ ಹುಚ್ಚು ದಿಲೀರಖಾನನ ತಲೆಯೊಳಗೆ ಹೊಕ್ಕುದರಿಂದ, ಅವನು ತನ್ನ ಪಾಳೆಯದಿಂದ ಕದಲಲಿಲ್ಲ.

ಮನುಷ್ಯನು ಬಯಸುವುದೊಂದು ದೇವರು ಮಾಡುವುದು ಮತ್ತೊಂದು ಎಂಬ ಗಾದೆಯಂತೆ ದಿಲೀರಖಾನನ ಬಯಕೆಯು ಈಡೇರಲಿಲ್ಲ. ಅವನು ಅದಿಲ್ಶಾಹಿಯನ್ನು ನಾಶಮಾಡಲೆಳಸುತ್ತಾನೆಂಬ ತಿಳಿವಳಿಕೆಯು ಮಸೌದನಲ್ಲಿ ನೆಲೆಗೊಂಡುದರಿಂದ ಅವನು ಸೂಚಿಸಿದ ಒಪ್ಪಂದದ ಶರ್ತುಗಳಿಗೆ ಏನುಮಾಡಿದರೂ ಮಸೌದನು ಒಡಂಬಡಲಿಲ್ಲ. ಆದ್ದರಿಂದ ದಿಲೀರನು ಮುತ್ತಿಗೆಯನ್ನು ಜೋರುಮಾಡಿದನು. ಅದರಿಂದಾದರೂ ಏನೂ ಪ್ರಯೋಜನವಾಗಲಿಲ್ಲ. ಆದಕಾರಣ ಅವನು ಸಿವಾಜಿಯನ್ನು ಮೊಗಲರ ರಾಜ್ಯದಿಂದ ಹಿಂದಿರುಗಿಸ ಬೇಕೆಂದೆಣಿಸಿ, ಶಂಭುಜಿಯ ಉತ್ತರಕುಮಾರತನವನ್ನು ನಂಬಿ, ಪನ್ಹಾಳಕೋಟೆಯನ್ನು ಹಿಡಿದು ಕೊಳ್ಳಲಿಕ್ಕೆ ಹೊರಟನು. ಮಿರಜಿಯ ನಾಯಕನು ಮೊಗಲರ ಕಡೆಗೆ ಒಡೆದುದರಿಂದ ತನ್ನ ಉದ್ದೇಶವು ನೆರವೇರುವುದೆಂದು ದಿಲೀರನು ಮನಸ್ಸಿನಲ್ಲಿ ಮಂಡಿಗೆಮಾಡಿದನು.

ದಿಲೀರಖಾನನು ಎದೆಗಾರನೂ ಅದಟನೂ ಆಗಿದ್ದರೂ ಹುಂಬನೂ ಕ್ರೂರನೂ ನಿರ್ದಯನೂ ಆಗಿದ್ದನು. ಅವನು ಬರಟಗಿಯನ್ನು ಬಿಟ್ಟು, ಬ್ರಾಹ್ಮಣಹಳ್ಳಿ ಮಕ್ಣಾಪುರ ಜಾಲ್ಗೇರಿಗಳ ದಾರಿಯಿಂದ ವಿಜಾಪುರದಿಂದ ೧೨ ಮೈಲು ಪಡುವಲಿಗಿರುವ **ತಿಕೋಟಿ** ಎಂಬ ಸಂಪತ್ತಿಯುಳ್ಳ ಊರಿಗೆ ಹೋದನು. ಮೊಗಲರು ಮನೆಗಳನ್ನು ಸುಲಿದು ಜನರನ್ನು ಸೆರೆಹಿಡಿಯಲಾರಂಭಿಸಿದ ಕೂಡಲೆ ಸ್ವಾಭಿಮಾನಪೂರಿತರಾದ ನೂರಾರುಮಂದಿ ಹಿಂದು ಮುಸಲ್ಮಾನ ಹೆಂಗಸರು ತಂತಮ್ಮ ಕೂಸುಗಳನ್ನು ಬಗಲೊಳಗಿಟ್ಟುಕೊಂಡು ಬಾವಿಬಿದ್ದು, ತಂತಮ್ಮ ಮಾನವನ್ನು ಕಾಪಾಡಿಕೊಂಡರು!!! ಅಲ್ಲಿಂದ ಹೊರಟು ಹಾದಿಯಲ್ಲಿ ಹೊಸವಾಡ ತೇಲಸಂಗಗಳನ್ನು ಸುಲಿದು, ಸಾವುಕಾರರನ್ನು ಸೆರೆಹಿಡಿದುಕೊಂಡು ದಿಲೀರಖಾನನು ಪಡಮಾಲೆಯ ಸ್ಥಳವಾದ ಅಥಣಿಗೆ ಹೋಗಿ, ಅಲ್ಲಿಯ ಪ್ರಸಿದ್ಧವಾದ ಪೇಟೆಯನ್ನು ಸುಟ್ಟು, ಹಿಂದು ಹಣವಂತರನ್ನು ಹಿಡಿದು ಮಾರತೊಡಗಿದನು. ಈ ಮತದ್ವೇಷವನ್ನೂ ಕ್ರೌರ್ಯವನ್ನೂ ನೋಡಿ ಶಂಭುಜಿಯ ಮನಸ್ಸು ಹೇಸಿತು. ಅವನು ಹಿಂದುಸಾವುಕಾರರನ್ನು ಮಾರಕೂಡದೆಂದು ಖಂಡಿತವಾಗಿ ದಿಲೀರನಿಗೆ ಹೇಳಿದನು. ಆದರೆ ಆ ದುರಭಿಮಾನಿಯಾದ ದಳವಾಯಿಯು ಓಡಿ ಬಂದು ತನ್ನಮರೆಹೊಕ್ಕ ಈ ಮರುಳನ ಮಾತನ್ನು ಕೇಳುವನೇ? ಮದಾಂಧ

ನಾದ ದಿಲೀರನು ಶಂಭುಜಿಯ ಅಭಿಪ್ರಾಯವನ್ನು ಅಲ್ಲಗಳೆದು, ಹಿಂದುಜನರನ್ನು ಮನಬಂದಂತೆ ಗೋಳಾಡಿಸಿ ಮಾರಿಬಿಟ್ಟನು. ಶಂಭುಜಿಗೆ ದೂರದೃಷ್ಟಿಯು ಇಲ್ಲದಿದ್ದರೂ ಕಿಂಚಿತ್ ಸ್ವಾಭಿಮಾನವಿತ್ತು. ಆದ್ದರಿಂದ ಅವನು ಸಿಟ್ಟಿಗೆದ್ದು ತನ್ನ ೨ ವರ್ಷದ ರಾಜಪಿತೃದ್ರೋಹಕ್ಕೆ ಪಶ್ಚಾತ್ತಾಪ ಪಟ್ಟು, ಅದೇ ದಿವಸ ಇರುಳಿನಲ್ಲಿ ಮೊಗಲರ ಪಾಳೆಯವನ್ನು ಬಿಟ್ಟು, ಸದ್ದಿಲ್ಲದೆ ವಿಜಾಪುರಕ್ಕೆ ಓಡಿ ಹೋದನು (೨೦ ನವಂಬರ). ಅವನು ಓಡಿ ಹೋಗುವಾಗ ಗಂಡು ವೇಷಧರಿಸಿದ ಅವನ ಹೆಂಡತಿಯಾದ ಏಸುಬಾಯಿಯೂ ನಂಬಿಗಸ್ತರಾದ ೧೦ ಮಂದಿ ಸ್ವಾರರೂ ಮಾತ್ರ ಅವನ ಸಂಗಡ ಇದ್ದರು. ವಿಜಾಪುರಕ್ಕೆ ಬಂದ ಕೂಡಲೆ ಮಸೌದನು ಅವನನ್ನು ಆನಂದದಿಂದ ಒಳಗೆ ಕರೆಕೊಂಡು ಅವನಿಗೆ ಆಶ್ರಯ ಕೊಟ್ಟನು.

ಅತ್ತ ಅರವುಗೇಡಿಯಾದ ದಿಲೀರಖಾನನು ಅಥಣಿಯನ್ನು ಹಾಳುಗೆಡವಿ, ಮರುದಿವಸ ಅಲ್ಲಿಂದ ಐನಾಪುರಕ್ಕೆ ಹೊರಟನು. ಶಂಭುಜಿಯು ತನ್ನ ಪಾಳೆಯಕ್ಕೆ ಬಂದಂದಿನಿಂದ ಸಿವಾಜಿಯ ಕಡೆಯವರು ಅವನನ್ನು ತಿರುಗಿ ಒಯ್ಯಲಿಕ್ಕೆ ಮಾಡಿದ ನಾನಾತರದ ಪ್ರಯತ್ನಗಳು ವ್ಯರ್ಥವಾಗಿದ್ದವು. ಒಮ್ಮೆ ಏಸುಬಾಯಿಯ ಅಣ್ಣನೂ, ಮೊಗಲರ ದಳವಾಯಿಯೂ ಆದ ನಿಂಬಾಳಕರ ಮಹಾದಾಜಿಯು ಕೂಡ ಮೊಗಲರನ್ನು ಮರೆಹೋಗುವುದು ಸರಿಯಲ್ಲೆಂತಲೂ ಸಿವಾಜಿಯು ಹೇಳಿದಂತೆ ನಡೆಯುವುದು ಹಿತಕರವಾದ್ದೆಂತಲೂ ಅವನಿಗೆ ಪರಿಪರಿಯಿಂದ ಬುದ್ಧಿವಾದವನ್ನು ಹೇಳಿದನು. ವಿಚಾರಮೂಢನಾದ ಶಂಭುಜಿಯು ಅದರಂತೆ ಮಾಡದೆಯೂ ತಾನು ಆಡಿಸಿಕೊಂಡುದನ್ನೆಲ್ಲ ಮುಚ್ಚಿಡದೆಯೂ ಮಹಾದಾಜಿಯು ಹೇಳಿದ್ದನ್ನೆಲ್ಲ ದಿಲೀರಖಾನನಿಗೆ ತಿಳಿಸಿ, ಅವನನ್ನು ಸೆರೆಯಲ್ಲಿರಿಸಿದನು. ಇಷ್ಟುಬಗೆಯಿಂದ ತನ್ನನ್ನು ನಂಬಿಕೊಂಡಿದ್ದ ಶಂಭುಜಿಯು ಒಮ್ಮಿಂದೊಮ್ಮೆ ತನ್ನನ್ನು ಬಿಟ್ಟು ಓಡಿಹೋಗಬಹುದೆಂಬ ಹೆದರಿಕೆಯು ಅವನಿಗೆ ಎಳ್ಳಷ್ಟಾದರೂ ತಟ್ಟಿದ್ದಿಲ್ಲ. ಆದಕಾರಣ ಐನಾಪುರದ ದಾರಿಯಲ್ಲಿ ಶಂಭುಜಿಯು ಓಡಿ ಹೋದನೆಂಬ ಸುದ್ದಿಯನ್ನು ಕೇಳಿದ ಕೂಡಲೆ ಅವನು ಹವ್ಹಾರಿ ಕುಳಿತನು; ತನ್ನ ಕಯ್ಯಲ್ಲಿದ್ದ ವಜ್ರಾಸ್ತ್ರವು ಹೋಯಿತೆಂದು ಬಹಳವಾಗಿ ಹಳಹಳಿಸಿದನು. ಈ ಸಂಗತಿಯನ್ನು ಬಾದಶಹನಿಗೆ ಹೇಗೆ ತಿಳಿಸಬೇಕೆಂಬ ಚಿಂತೆ

ಯಲ್ಲಿ ಮುಳುಗಿದನು; ಮರಾಟರನ್ನು ಮಣಿಸುವ ಮಣಿಯು ಮಾಯ ವಾಯಿತೆಂದು ಮರಮರ ಮರಗಿದನು. ಕೆಲ ಹೊತ್ತಿನ ಮೇಲೆ ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವಿಲ್ಲೆಂಬ ಅರಿವು ಹುಟ್ಟಿದ್ದರಿಂದ, ಎದೆಗಾರ ನಾದ ದಿಲೀರನು ಮಸೌದನು ಹೇಳಿದ ಶರ್ತಿಗೆ ಒಡಂಬಟ್ಟು, ಶಂಭುಜಿ ಯನ್ನು ತಿರುಗಿ ಹಿಡಿತರುವುದಕ್ಕೆ ತನ್ನೊಬ್ಬ ಹುಷಾರನಾದ ವಕೀಲನನ್ನು ವಿಜಾಪುರಕ್ಕೆ ಕಳುಹಿದನು. ಅವನು ಬಂದು ಮಸೌದನೊಡನೆ ಸಂಧಾನ ಹಚ್ಚಿದ ಸುದ್ದಿಯು ತಿಳಿದ ಕೂಡಲೆ ಶಂಭುಜಿಯು ಅಲ್ಲಿದ್ದ ಮರಾಟರ ಸಾಹಾಯದಿಂದ ಕೋಟೆಯಿಂದ ಹೊರಬಿದ್ದು, ತನ್ನ ತಂದೆಯು ಕಳಿಸಿದ ರಾಹುತರನ್ನು ಕೂಡಿಕೊಂಡು, ಸುರಕ್ಷಿತವಾಗಿ ಪನ್ಹಾಳಕೋಟೆಯನ್ನು ಸೇರಿದನು (೨ ದಶಂಬರ).

ದಿಲೀರಖಾನನು ಹಾಕಿದ ವಿಜಾಪುರದ ಮುತ್ತಿಗೆಯನ್ನು ಎಬ್ಬಿಸು ವುದಕ್ಕೋಸ್ಕರ ಸಿವಾಜಿಯು ಮೊಗಲರ ರಾಜ್ಯದೊಳಗೆ ದಂಡೆತ್ತಿ ಹೋದ ನೆಂದು ಮೇಲೆ ಹೇಳಿರುತ್ತೇವಷ್ಟೆ. ಇದೇ ನಮ್ಮ ಚರಿತ್ರನಾಯಕನ ಕಡೆಯ ದಂಡಯಾತ್ರೆಯು (೪ ನವಂಬರ). ಇದಕ್ಕೆ ಸಂಬಂಧಿಸಿದ ಎಲ್ಲ ಸಂಗತಿಗಳನ್ನು ಪಾಂಗ್ತವಾಗಿ ತಿಳಿದುಕೊಳ್ಳಲಿಕ್ಕೆ ವಾಚಕರು ಸ್ವಾಭಾವಿಕ ವಾಗಿ ಕುತೂಹಲವುಳ್ಳವರಾಗಿರಬಹುದು. ಆದರೆ ದುರ್ದೈವದಿಂದ ಯಾವ ಬಖ್ಖೈರಿನಲ್ಲಿಯೂ ಈ ದಂಡಯಾತ್ರೆಯ ವಿವರವು ಸರಿಯಾಗಿ ದೊರೆಯುವುದಿಲ್ಲ. ಮುಂಬಯಿಯಲ್ಲಿದ್ದ ಇಂಗ್ಲಿಷವರ್ತಕರ ಸಭೆಯವರು ಬರೆಯುವುದೇನಂದರೆ :–(೧ ಜನವರಿ-೧೬೮೦) ಈ ದಾಳಿಯಲ್ಲಿ ಸಿವಾಜಿಗೆ ಸೋಲುಗೆಲವುಗಳು ಬಂದವು. ಮೊದಲು ದಿಲೀರಖಾನನು ಸಿವಾಜಿ ಯನ್ನು ವಿಜಾಪುರದ ನೆರೆಯಲ್ಲಿ ಸೋಲಿಸಿ, ೨,೦೦೦ ಕುದುರೆಗಳನ್ನೂ ಹಿಡಿದುಕೊಂಡುದರಿಂದ, ಅವನು ದಿಕ್ಕೆಟ್ಟು ಉಳಿದ೫೦೦ ರಾಹುತರೊಡನೆ ನಾಸಿಕದ ತೆಂಕಲಿಗೆ ೨೦ ಮೈಲಿನ ಮೇಲಿದ್ದ ಪಟ್ಟಗಡಕ್ಕೆ ಓಡಿ ಹೋಗಿ, ಅದಕ್ಕೆ ವಿಶ್ರಾಮಗಡವೆಂಬ ಹೆಸರನ್ನಿಟ್ಟನು. ಪೇಶ್ವೆಯು ಸುರತದ ಬಳಿ ಯಲ್ಲಿ ಸೋತು ೪೦೦ ಕುದುರೆಗಳನ್ನು ಕಳಕೊಂಡು, ಅದೇ ಗಡಕ್ಕೆಬಂದನು. ಅವರಿಬ್ಬರೂ ಅಲ್ಲೇ ಕೆಲದಿವಸ ನಿಂತು, ಮೊಗಲರನ್ನು ಹೇಗೆ ಹಣಿಯ ಬೇಕೆಂಬ ಆಲೋಚನೆಯನ್ನು ಮಾಡಿದರು (ನವಂಬರ). ಅಷ್ಟರಲ್ಲಿ ದಿಲೀರ

ಖಾನನು ಶಂಭುಜಿಯೊಡನೆ ಪನ್ಹಾಳದ ಮೇಲೆ ದಂಡೆತ್ತಿ ಬರುತ್ತಾನೆಂಬ ಸುದ್ದಿಯು ಬಂದುದರಿಂದ ಸಿವಾಜಿಯು ಅವಸರದಿಂದ ಕಾರವಾರ ಅಂಕೋಲೆ ಸೋಮೇಶ್ವರ ಫೊಂಡಾ ಈ ಊರುಗಳಿಂದ ೩೦ ತೋಪುಗಳನ್ನು ತರಿಸಿ ಪನ್ಹಾಳದಲ್ಲಿರಿಸಿ, ಅದರ ಭದ್ರತೆಯನ್ನು ಹೆಚ್ಚಿಸಿದನು.

ಅತ್ತ ಕೊಂಕಣದಲ್ಲಿದ್ದ ಅಣ್ಣಾಜಿ ದತ್ತುವು ರಾಜಾಪುರವನ್ನುಸುಲಿದು ಸುಟ್ಟು, ಸಿವಾಜಿಯ ಅಪ್ಪಣೆಯಂತೆ ೧೨,೦೦೦ ದಂಡಿನೊಡನೆ ಮಲಕಾಪುರಕ್ಕೆ ಬಂದನು. ಅಷ್ಟರೊಳಗೆ ಶಂಭುಜಿಯು ಪನ್ಹಾಳಕ್ಕೆ ತಿರುಗಿ ಬಂದನೆಂಬ ಸುದ್ದಿಯನ್ನು ಕೇಳಿ ಸಂತುಷ್ಟನಾದ ಸಿವಾಜಿಯು ೨೦,೦೦೦ ದಂಡಿನೊಡನೆ ಹೊರಟು ಅಣ್ಣಾಜಿಯ ದಂಡನ್ನು ಕೂಡಿ, ಪಶ್ಚಿಮಖಾನದೇಶವನ್ನು ಹೊಕ್ಕು ಧರ್ಮಗಾವ ಚೋಪ್ರಾ ಮುಂತಾದ ಪಡಮೂಲೆಯ ಸ್ಥಳಗಳನ್ನು ಸುಲಿದು (೬ ದಶಂಬರ), ಬಾಲಘಾಟವನ್ನು ಸೇರಿ, ಸಂಪತ್ತಿನಿಂದ ಮೆರೆಯುತ್ತಿದ್ದ ಅವರಂಗಾಬಾದದ ಪೂರ್ವಕ್ಕೆ ೪೦ ಮೈಲು ಮೇಲಿದ್ದ **ಜಾಲ್ನಾ** ಪಟ್ಟಣಕ್ಕೆ ಹೋದನು.

ಈ ಜಾಲ್ನಾಪಟ್ಟಣದ ನೆರೆಯಲ್ಲಿದ್ದ ಒಂದು ತೋಟದೊಳಗೆ ಸಯ್ಯದ ಜಾನ ಮುಹಮ್ಮದನೆಂಬ ಒಬ್ಬ ಹೆಸರುವಾಸಿಯಾದ ಫಕೀರನ ಮಸೀದೆಯಿತ್ತು. ಸಿವಾಜಿಯು ಸಾಧುಸಂತರನ್ನು ನೋಯಿಸುವುದಿಲ್ಲೆಂಬ ವಾರ್ತೆಯು ದೇಶದಲ್ಲೆಲ್ಲ ಹಬ್ಬಿದ್ದರಿಂದ, ಜಾಲ್ನಾದ ಸಿರಿವಂತರು ತಂತಮ್ಮ ಚರಾಸ್ತಿಯನ್ನು ಕಟ್ಟಿಕೊಂಡು ಬಂದು, ಆ ಫಕೀರನನ್ನು ಆಶ್ರಯಿಸಿದ್ದರು. ಪಟ್ಟಣದಲ್ಲಿ ಏನೂ ಸುಲಿಗೆ ದೊರೆಯದ್ದರಿಂದ ಬಯಕೆಗೆಟ್ಟ ಮರಾಟರು ಶೋಧನಮಾಡುತ್ತ ಆ ಫಕೀರನ ಮಸೀದೆಗೆ ಬಂದರು. ಆ ಸಾಧುವು ಎಷ್ಟು ಹೇಳಿದರೂ ಕೇಳದೆ, ಮರಾಟರು ಅಲ್ಲಿದ್ದ ಎಲ್ಲ ಧನಿಕರನ್ನು ಮನದಣಿ ಸುಲಿದರು. ಸಾಧುವು ಸಿಟ್ಟಾಗಿ ಅವರನ್ನು ಶಪಿಸಿದನಂತೆ. ಈ ಶಾಪದ ಮೂಲಕವಾಗಿ ನಮ್ಮ ಚರಿತ್ರನಾಯಕನು ಕೂಡಲೆ ಬೇನೆಬಿದ್ದು, ೪ ತಿಂಗಳಲ್ಲೇ ಸತ್ತನೆಂದು ಆ ಕಾಲದ ಭಾವಿಕರು ನಂಬಿದರು (ದಶಂಬರ).

ಸಯ್ಯದಜಾನಮುಹಮ್ಮದನ ಶಾಪದಿಂದ ಸಿವಾಜಿಗೆ ಕೇಡು ಬಂದಿರಬಹುದು ಅಥವಾ ಬೇರೆ ಕಾರಣದಿಂದ ಅವನ ಸಾವು ಒದಗಿರಬಹುದು.

ಅದರ ವಿಚಾರವನ್ನು ಭಾವಿಕರಿಗೆ ಬಿಟ್ಟರೂ, ಜಾಲ್ನಾದಲ್ಲಿ ದೊರೆದ ಶಾಪ ಗ್ರಸ್ತವಾದ ಸುಲಿಗೆಯನ್ನು ದಕ್ಕಿಸಿಕೊಳ್ಳುವುದು ಸಿವಾಜಿಗೆ ಬಲು ದುಸ್ತರ ವಾಯಿತೆಂದು ಹೇಳಲಿಕ್ಕೆ ಏನೂ ಅಡ್ಡಿಯಿಲ್ಲ. ನಾಲ್ಕು ದಿವಸ ಹಗಲಿರುಳು ಜಾಲ್ನಾಪಟ್ಟಣವನ್ನೂ ಅದರ ನೆರೆಹೊರೆಯನ್ನೂ ಸುಲಿದು ಲೆಕ್ಕವಿಲ್ಲದಷ್ಟು ಬೆಳ್ಳಿಬಂಗಾರ, ಮುತ್ತುರತ್ನ, ಅರಿವೆಅಂಚಡಿ, ಆನೆಯೊಂಟೆ, ಕುದುರೆ ಗಳನ್ನು ತೆಗೆದುಕೊಂಡು ಮರಾಟರು ತಿರುಗಿ ಹೋಗುವಾಗ, **ಸಂಗಮ ನೀರದ** ಬಳಿಯಲ್ಲಿ ಜಾಲ್ನಾದ ಶೂರ ಕಿಲ್ಲೇದಾರನಾದ ರಣಮಸ್ತಖಾನನು ಅವರ ದಂಡಿನ ಹಿಂಭಾಗದ ಮೇಲೆ ಬಿದ್ದನು. ನಿಂಬಾಳಕರ ಸಿದ್ಧೋಜಿಯು ಎಷ್ಟು ವೀರಾವೇಶದಿಂದ ಕಾದಿದರೂ ಮೊಗಲರ ದಡಕಿಗೆ ಈಡಾಗಲಿಲ್ಲ. ಸಿದ್ಧೋಜಿಯು ಸೋತು ರಣದಲ್ಲಿ ಮಡಿದನು. ಅಷ್ಟರೊಳಗೆ **ಮುರಜಮ್ಮ** ಶಹನು ಅವರಂಗಾಬಾದದಿಂದ ೨೦,೦೦೦ ದಂಡಿನೊಡನೆ ಬಂದು ಮರಾ ಟರ ದಂಡನ್ನು ಸುತ್ತುಗಟ್ಟಿದನು. ಈ ಬಿಕ್ಕಟ್ಟಿನ ಸಮಯದಲ್ಲಿ **ಹಿರಜಿ ನಾಯಕ**ನೆಂಬ* ಒಬ್ಬ ನಂಬಿಗಸ್ಥನು ಸಿವಾಜಿಯನ್ನು ತುಸು ಸುಲಿಗೆ ಯೊಡನೆ ಕಳ್ಳದಾರಿಯಿಂದ ಕರೆದುಕೊಂಡು ಹೋಗಿ, ಅವನನ್ನು ಪಾರು ಮಾಡಿದನು. ಈ ಗಂಡಾಂತರದಿಂದ ತಪ್ಪಿಸಿಕೊಳ್ಳುವುದಕ್ಕೆ ಸಿವಾಜಿಯು ಮೂರು ಹಗಲೂ ಮೂರು ಇರುಳೂ ಒಂದೇಸವನೆ ಪ್ರವಾಸಮಾಡಬೇಕಾ ಯಿತು. ಈ ಕಡಿದಾಟದಲ್ಲಿ ಅವನು ತಂದ ಎಷ್ಟೋ ಸುಲಿಗೆಯು ಮುರ ಜಮ್ಮಶಹನ ಕಯ್ಸೇರಿದ್ದಲ್ಲದೆ, ಅವನ ೪,೦೦೦ ರಾಹುತರು ರಣದಲ್ಲಿ ಮಡಿ ದರು; ಮತ್ತು ಅವನ ಮುಖ್ಯ ದಳವಾಯಿಯಾದ ಹಂಬೀರರಾಯನು ಗಾಯಹೊಂದಿದನು. ಈ ದೊಡ್ಡ ಗೆಲವಿನ ಶ್ರೇಯಸ್ಸು ಹೊಸವಾಗಿ ದಕ್ಷಿಣದ ಸುಬೇದಾರನಾಗಿ ಬಂದ ಮುರಜಮ್ಮಶಹನಿಗೆ ಬಂತು. ಸಿವಾಜಿ ಯು ತೊಳಲಿ ಬಳಲಿ ಪನ್ಹಾಳಕ್ಕೆ ಹೋಗಿ ತನ್ನ ಮಗನನ್ನು ಕಂಡನು (೨೯ ದಶಂಬರ).

ಮುಂದೆ ೩ ತಿಂಗಳು ಸಾಯುವ ವರೆಗೆ ನಮ್ಮ ಚರಿತ್ರನಾಯಕನು ಏನು ಮಾಡಿದನೆಂಬುದು ಸರಿಯಾಗಿ ಗೊತ್ತಾಗುವುದಿಲ್ಲ. ಇಂಗ್ಲಿಷ ವರ್ತ

---

* ಇವನ ಹೆಸರು ಬಹಿರ್ಜಿ ಎಂದು ಪಂಡಿತ ಸರ್ಕಾರರು ಬರೆಯು ತ್ತಾರೆ ಪು. ೩೭೯.

ಕರ ಸಂಘದ ಪತ್ರವ್ಯವಹಾರದಲ್ಲಿ ಈ ಕಾಲದ ವಿಷಯವಾಗಿ ಏನೂ ಉಲ್ಲೇಖವಿಲ್ಲ. ಚಿಟ್ನೀಸನು ಮಾತ್ರ ಈ ಸಮಯದಲ್ಲಿ ಸಿವಾಜಿಯು ದಿಲೀರಖಾನನನ್ನು ವಿಜಾಪುರದ ನೆರೆಯಿಂದ ಓಡಿಸಿ, ಭೂಪಾಲಗಡವನ್ನೂ ಕೊಪ್ಪಳದ ತೆಂಕಲಿಗೆ ೨ ಮೈಲಿಗಿರುವ **ಬಹದ್ದೂರ-ಬಿಂದು** ಎಂಬ ಕೋಟೆಯನ್ನೂ ಹಿಡಿದುಕೊಂಡು, ಮೋರೊಪಂತನನ್ನು ೨೦,೦೦೦ ದಂಡಿನೊಡನೆ ಬಾಗಲಾಣಕ್ಕೆ ಕಳುಹಿದ್ದರಿಂದ, ಅವನು ಅಲ್ಲಿ ಮೊಗಲರ ೨೭ ಕೋಟೆಗಳನ್ನು ಕಯ್ವಶಮಾಡಿಕೊಂಡನೆಂದು ಬರೆಯುತ್ತಾನೆ. ಆದರೆ ಇದು ನಿಜವಾಗಿರಲಿಕ್ಕಿಲ್ಲೆಂದು ಪಂಡಿತ ಸರ್ಕಾರರ ಅಭಿಪ್ರಾಯವಿದ್ದರೂ ಈ ಕಾಲದಲ್ಲಿ ಮರಾಟರು **ಅಹಿವಂತ** ಕೋಟೆಯನ್ನು ಹಿಡಿದುಕೊಂಡಿರಬಹುದೆಂದು ಅವರಾದರೂ ಒಡಂಬಡುತ್ತಾರೆ.

ಜಾಲ್ನಾದ ಫಕೀರನ ಶಾಪದ ಭಯದಿಂದಲೋ ಪ್ರಯಾಣದ ಬಳಲಿಕೆಯಿಂದಲೋ ನಮ್ಮ ಚರಿತ್ರನಾಯಕನು ಪನ್ಹಾಳಕ್ಕೆ ಬಂದಾಗ ಅಸ್ವಸ್ಥನಾಗಿದ್ದನೆಂದು ತೋರುತ್ತದೆ. ಏಕೆಂದರೆ ಅವನು ಅಲ್ಲಿಗೆ ಬಂದ ಕೂಡಲೆ ಮಗನಿಗೆ ಪರಿಪರಿಯಿಂದ ಬುದ್ಧಿವಾದವನ್ನು ಹೇಳಿ, ತನ್ನ ಸಂಪತ್ತನ್ನೂ ರಾಜ್ಯವಿಸ್ತಾರವನ್ನೂ ವಿವರಿಸಿ, ತಾನು ಇನ್ನು ಮುಂದೆ ಬಹಳ ದಿವಸ ಬದುಕುವುದಿಲ್ಲೆಂದು ತಿಳಿಸಿ, ತನ್ನ ದೊಡ್ಡರಾಜ್ಯವನ್ನು ಇಬ್ಭಾಗಿಸಿ, ತುಂಗಭದ್ರೆಯಿಂದ ಕಾವೇರಿಯ ವರೆಗಿರುವ ತನ್ನ ರಾಜ್ಯವನ್ನು ಶಂಭುಜಿಗೆ ಕೊಡುವ ತನ್ನ ಆಲೋಚನೆಯನ್ನು ಅವನ ಮುಂದಿಟ್ಟನು. ಆದರೆ ಆ ಸ್ವೇಚ್ಛಾಚಾರಿಯಾದ ಯುವಕನು ಆ ಆಲೋಚನೆಗೆ ಒಡಂಬಡದೆ, ಹಿರಿಯರಿಗೆ ಯೋಗ್ಯಕಂಡಂತೆ ಮಾಡಬಹುದೆಂದು ಹಾರಿಕೆಯ ಉತ್ತರವನ್ನು ಕೊಟ್ಟನು. ಬಳಿಕ ಅಲ್ಲಿ ಹೆಚ್ಚುಕಾಲವಿರದೆ ಅವನು ರಾಯಗಡಕ್ಕೆ ಹೋಗಿ, ತನ್ನ ಮೊದಲಿನ ಸರಸೌಬತ್ತನ ಮಗಳೊಡನೆ ತನ್ನ ೨ನೆಯ ಮಗನಾದ ರಾಜಾರಾಮನ ಮದುವೆಯನ್ನು ಅಟ್ಟಹಾಸದಿಂದ ಮಾಡಿದನು.

ಉಳಿದ ತನ್ನ ಅಲ್ಪಾಯುಷ್ಯವನ್ನು ನಮ್ಮ ಚರಿತ್ರನಾಯಕನು ಮಾನಸಿಕ ಮತ್ತು ಕಾಯಿಕ ಅಸ್ವಸ್ಥತೆಯಲ್ಲಿ ಕಳೆದನೆಂದು ಬರೆಯುವು

ದಕ್ಕೆ ಅಡ್ಡಿಯೇನೂ ತೋರುವುದಿಲ್ಲ. ಮರಣವು ಅವನ ಕಣ್ಣುಮುಂದೆ ಕುಣಿಯಲಾರಂಭಿಸಿತು. ತನ್ನ ತರುವಾಯ ತಾನು ಎಷ್ಟೋ ಅನ್ಯಾಯ ಗಳನ್ನು ಮಾಡಿ, ತೊಳಲಿ ಬಳಲಿ ದೊರಕಿಸಿದ ವಿಸ್ತಾರವಾದ ರಾಜ್ಯವೂ ಅಗಣಿತವಾದ ಸಂಪತ್ತೂ ಹಾಳಾಗಿ ಹೋಗಬಹುದೆಂಬ ಹೆದರಿಕೆಯು ಅವನ ಮನಸ್ಸಿನಲ್ಲಿ ನಟ್ಟಿತು. ಅರಮನೆಯಲ್ಲಿಯೂ ಆಸ್ಥಾನದಲ್ಲಿಯೂ ರಾಜ ಧಾನಿಯಲ್ಲಿಯೂ ರಾಜ್ಯದಲ್ಲಿಯೂ ಅವನ ತರುವಾಯ ಮರಾಟರಾಜ್ಯದ ಹಾಡು ಏನಾಗಬಹುದೆಂಬ ವಿಚಾರವು ಎಲ್ಲರ ಮನಸ್ಸನ್ನು ತಲ್ಲಣಿಸಿತು. ಸಿವಾಜಿಗಂತೂ ಅಹೋರಾತ್ರ ಅದೇವಿಚಾರವೇ ಕಣ್ಣುಮುಂದೆ ಕಟ್ಟಿತ್ತು. ಶಾಸ್ತ್ರದಂತೆ ಅವನ ಹಿರಿಮಗನಾದ ಶಂಭುಜಿಯು ಪಟ್ಟಕ್ಕೆ ಬಾಧ್ಯಸ್ಥ ನಾಗಿದ್ದನು. ಆದರೆ ಅವನಲ್ಲಿ ಅರಸೊತ್ತಿಗೆಯನ್ನು ಆಳಲಿಕ್ಕೆ ಅವಶ್ಯವಾಗಿ ಬೇಕಾದ ಗುಣಗಳಾವವೂ ಇದ್ದಿದ್ದಿಲ್ಲ. ಅವನು ಅವಿಚಾರಿಯೂ ವಿಷಯಾ ಸಕ್ತನೂ ದುಂದುಗಾರನೂ ಸ್ವೇಚ್ಛಿಯೂ ಕ್ರೂರನೂ ಹುಂಬನೂ ಆಗಿ ದ್ದನು. ಅವನು ಅರಸನಾದರೆ ತಾನು ಮಾಡಿದ್ದೆಲ್ಲ ಹೊಳೆಯಲ್ಲಿ ಹುಣಸೆ ಹಣ್ಣು ತೊಳೆದಂತೆ ಆಗುವುದೆಂಬ ಗಟ್ಟಿ ನಂಬಿಕೆಯು ಶಿವಾಜಿಯಲ್ಲಿ ಬಹು ಕಾಲದಿಂದ ನೆಲೆಗೊಂಡಿತ್ತು. ಅವನ ೨ ನೆಯ ಹೆಂಡತಿಯಾದ ಸೊಯರಾ ಬಾಯಿಯು ತನ್ನ ಮಗನಾದ ರಾಜಾರಾಮನನ್ನು ಪಟ್ಟದ ಮೇಲೆ ಕುಳ್ಳಿರಿಸಬೇಕೆಂದು ಎಡೆಬಿಡದೆ ಅವನ ಕಿವಿಯೂದುತ್ತಿದ್ದುದಲ್ಲದೆ, ಕೆಲವು ಮಂತ್ರಿಗಳನ್ನೂ ಜನರನ್ನೂ ತನ್ನ ಕಡೆಗೆ ಎಳೆದುಕೊಳ್ಳಲಿಕ್ಕೆ ವಿಶ್ವ ಪ್ರಯತ್ನ ಮಾಡುತ್ತಿದ್ದಳು. ಆಕೆಯ ಹೇಳಿಕೆಗೆ ಕಿವಿಜೋತು ಸಿವಾಜಿಯು ಮಾಡಿದ ರಾಜ್ಯವನ್ನು ವಿಭಾಗಿಸುವ ವಿಚಾರಕ್ಕೆ ಶಂಭುಜಿಯು ಒಡಂಬ ಡದ್ದರಿಂದ ಅದು ಅಷ್ಟಕ್ಕೇ ಉಳಿಯಿತು. ರಾಜಾರಾಮನು ಸುದ್ಗುಣಿಯೂ ಶೂರನೂ ಆಗಿದ್ದುದರಿಂದ ಅವನು ಅರಸನಾಗುವುದಕ್ಕೆ ಹೆಚ್ಚು ತಕ್ಕವ ನೆಂದು ಸಿವಾಜಿಯು ಮನಗಂಡಿದ್ದನು. ಆದರೆ, ಅವನು ಅಲ್ಪವಯಸ್ಕನಾದ್ದ ರಿಂದ ಸ್ವತಂತ್ರವಾಗಿ ರಾಜ್ಯವನ್ನಾಳುವ ಯೋಗ್ಯತೆಯು ಅವನಲ್ಲಿದ್ದಿಲ್ಲ. * ಸೊಯರಾಬಾಯಿಯ ಬಯಕೆಯಂತೆ ರಾಜಾರಾಮನಿಗೆ ಪಟ್ಟಗಟ್ಟಿಸಿ,

* ರಾಜಾರಾಮನು ೧೬೬೧ ರಲ್ಲಿ ಹುಟ್ಟಿದನೆಂದು ಕೆಲವರೂ ೧೬೬೮ ರಲ್ಲಿ ಹುಟ್ಟಿದನೆಂದು ಮತ್ತೆ ಕೆಲವರೂ ಬರೆಯುತ್ತಾರೆ.

ಮಂತ್ರಿಗಳದೊಂದು ಪಾಲಕಸಭೆಯನ್ನು ಮಾಡಿ, ಆ ಸಭೆಯ ಮುಖಾಂತರವಾಗಿ ರಾಜ್ಯಪರಿಪಾಲನೆಯನ್ನು ರಾಜಾರಾಮನು ದೊಡ್ಡವನಾಗುವವರೆಗೆ ಮಾಡಿಸಬೇಕೆಂದರೆ, ಮಂತ್ರಿಗಳೊಳಗೆ ಒಮ್ಮನಸ್ಸಿರಲಿಲ್ಲ. ಮುಖ್ಯಪ್ರಧಾನನಾದ ಮೋರೋತ್ರಿಯಂಬಕ ಪಿಂಗಳೆಯನಿಗೂ ಕೊಂಕಣಪ್ರಾಂತದ ಸುಬೇದಾರನಾದ ಅಣ್ಣಾಜಿ ದತ್ತುವಿಗೂ ಅಷ್ಟಮಿಚಂದ್ರವಾಗಿತ್ತು. ಮೇಲೆ ಬರೆದಂತೆ ಅಣ್ಣಾಜಿಯು ಸೋಯಿರಾಬಾಯಿಯ ಪಕ್ಷವನ್ನು ಪೂರ್ಣವಾಗಿ ಸ್ವೀಕರಿಸಿದ್ದನು; ಮೋರೋಪಂತನು ಶಂಭುಜಿಯನ್ನು ಮೇಲ್ಗಟ್ಟದಿದ್ದರೂ ರಾಜಾರಾಮನಿಗೆ ಪಟ್ಟಗಟ್ಟುವುದು ಅಶಾಸ್ತ್ರವೆಂದು ಅಲ್ಲಗಳೆಯುತ್ತಿದ್ದನು. ಆದ್ದರಿಂದ ನಮ್ಮ ಚರಿತ್ರನಾಯಕನಿಗೆ ಒಂದು ಕಡೆಗೆ ಕೆರೆ ಮತ್ತೊಂದು ಕಡೆಗೆ ಬಾವಿಯಾಗಿ, ಏನು ಮಾಡಬೇಕೆಂಬುದು ತಿಳಿಯದ ಹಾಗಾಯಿತು. ಯಾವ ವಿಚಾರವೂ ಬಗೆ ಹರಿಯಲಿಲ್ಲ. ಅವನ ವಿಚಾರವು ಮುಗಿಯಲಿಲ್ಲೆಂದು ಮೃತ್ಯುದೇವತೆಯು ತಡೆಯುವಳೇ? ಅದೆಂದೂ ಆಗಲಾರದು.

"ಚಿಂತೆಯೇ ಮುಪ್ಪು ಸಂತೋಷವೇ ಯವ್ವನ" ಎಂಬ ಗಾದೆಯಂತೆ ಸಿವಾಜಿಯು ತನ್ನ ರಾಜ್ಯದ ಹಾಡು ಮುಂದೆ ಏನಾಗುವುದೋ ಎಂಬ ಚಿಂತೆಯಲ್ಲಿ ಮುಳುಗಿದ್ದರಿಂದ ಅವನು ದಿನ ದಿನಕ್ಕೆ ಹೆಚ್ಚೆಚ್ಚು ಸೊರಗತೊಡಗಿದನು. ಕೊನೆಗೆ ಆಮಶೌಚದ ವಿಕಾರವಾಗಿ ಅವನಿಗೆ ಉರಿ ಬರಲಾರಂಭಿಸಿದವು (೨೪ ಮಾರ್ಚ ೧೬೮೦). ದೇಶ ದೇಶದ 'ನಾ' 'ನೀ' ಎಂಬ ವೈದ್ಯರು ಹೇಳಿದ ಸಹ್ಯಾದ್ರಿಬೆಟ್ಟದಲ್ಲಿದ್ದ ನಾನಾತರದ ವನಸ್ಪತಿಗಳ ಬೇರುಗಳೂ ತೋಟೆಗಳೂ ಹೂಕಾಯಿಗಳೂ ಬಂದು ರಾಶಿರಾಶಿಗಳಾಗಿ ಬಿದ್ದವು. ಗಡಿಗೆಗಳಲ್ಲಿ ಕಷಾಯಗಳು ಯಾವಾಗಲೂ ಕುದಿಯುತ್ತಿದ್ದವು. ನಾಲ್ಕಾರು ಜನರು ಚೂರ್ಣಗಳನ್ನು ಮಾಡುತ್ತಿದ್ದರು, ಹೊತ್ತೊತ್ತಿಗೆ ಯಮರಾಜನ ಸಹೋದರರಾದ ವೈದ್ಯರಾಜರು * ಬಹುಬೆಲೆಯುಳ್ಳ ಮಾತ್ರೆಗಳನ್ನು ಮೂರು ನಾಲ್ಕು ಸುತ್ತು ತೆಯ್ದು ಕೊಡುತ್ತಿದ್ದರು.

* ವೈದ್ಯರಾಜ ನಮಸ್ತುಭ್ಯಮ್ ಯಮರಾಜಸಹೋದರ।
ಯಮಸ್ತು ಪ್ರಾಣಾನ್ ಹರತಿ ವೈದ್ಯೋ ಪ್ರಾಣಾನ್ ಧನಾನಿಚ ॥

ಹೆಂಡಂದಿರೂ ಹೆಣ್ಣುಮಕ್ಕಳೂ ಆಗಿಂದಾಗ ಬಂದು ಹೊರಗಿಂದೊರಗೇ ಸಮಾಚಾರವನ್ನು ತೆಗೆದುಕೊಂಡು ನಿಟ್ಟುಸುರುಬಿಡುತ್ತ ತೆರಳುತ್ತಿದ್ದರು. ಮಂತ್ರಿಗಳೂ ದೊಡ್ಡ ದೊಡ್ಡ ಅಧಿಕಾರಿಗಳೂ ಹೊತ್ತು ನೋಡಿಕೊಂಡು ಬಂದು, ಸಾಮೋಪಚಾರದ ಮಾತುಗಳನ್ನಾಡಿ, ತಾವು ಬಂದ ಕೆಲಸವನ್ನು ತಿಳಿಸಿ, ಅವನ ಅಪ್ಪಣೆಯನ್ನು ಶಿರಸಾವಹಿಸಿ, ಸದ್ದುಮಾಡದೆ ಹೊರಬೀಳುತ್ತಿದ್ದರು. ೮—೧೦ ಮಂದಿ ದಾಸ ದಾಸಿಯರು ಅವನ ಪಾದಸೇವಾ ಮುಂತಾದ ಉಪಚಾರಗಳಲ್ಲಿ ನಿರತರಾಗಿದ್ದರು. ಶಿಷ್ಟರಾದ ಬ್ರಾಹ್ಮಣರು ವಿಶಿಷ್ಟ ದೇವತೆಗಳ ಅಭಿಷೇಕಮಾಡಿ, ಆಗಾಗ ತೀರ್ಥವನ್ನು ಕೊಡುತ್ತಿದ್ದರು. ಜೋಯಿಸರ ಹೇಳಿಕೆಯಂತೆ ದುಷ್ಟಗ್ರಹಗಳ ಪೀಡಾಶಮನಾರ್ಥವಾಗಿ ನವಗ್ರಹಗಳ ಜಪಗಳು ನಡೆದಿದ್ದವು. ಭೂತ ಪಿಶಾಚಗಳ ಬಾಧೆಯನ್ನು ಹೋಗಲಾಡಿಸುವುದಕ್ಕೋಸ್ಕರ ಮಾಂತ್ರಿಕರು ಬೇರೆ ಸ್ಥಳದಲ್ಲಿ ರಂಗಹೊಯ್ದು ಧೂಪಸುಟ್ಟು, ಭೂತಸಂಚಾರವು ತಮ್ಮ ದೇಹದಲ್ಲಿ ಆದಂತೆ ಅಬ್ಬರಿಸುತ್ತಿದ್ದರು. ಗೊತ್ತು ಮಾಡಿದ ಹೊತ್ತಿನಲ್ಲಿ ಪೌರಾಣಿಕರು ತಂಬೂರಿಯ ತಂತಿಗಳನ್ನು ಮಿಾಟುತ್ತ ರಾಗಮಾಡಿ ಉಪ್ಪುಕಾರಹಚ್ಚಿ ರಾಮಾಯಣ ಭಾರತ ದೇವೀಮಹಾತ್ಮೆ ಮುಂತಾದ ಪುರಾಣಗಳನ್ನು ನೆರೆಮನೆಯಲ್ಲಿ ಹೇಳುತ್ತಿದ್ದರು. ಅಂತೂ ಇಂತೂ ಅರಮನೆಯ ತುಂಬೆಲ್ಲ ಗದ್ದಲವೇ ಗದ್ದಲವು. ಆದರೆ ಅಲ್ಲಿ ಕುಳಿತವರು ನಿಂತವರು ಓಡಾಡುವವರು ಮಾತಾಡುವವರು ಸುಮ್ಮನಿದ್ದವರು ಇವರೆಲ್ಲರ ಮೋರೆಯ ಮೇಲೆ ಗೆಲವೇ ಇದ್ದಿಲ್ಲ. ಎಲ್ಲರ ಮೈಮೇಲೂ ಮೃತ್ಯುದೇವತೆಯು ತನ್ನ ಕರಿನೆರಳನ್ನು ಹರವಿದ್ದಳು. ಏನು ಮಾಡಿದರೂ ರೋಗವು ಹಣಿಯಲಿಲ್ಲ. ದಿನಕ್ಕೊಂದು ಚಂದ ಅದು ಹೆಚ್ಚಾಗುತ್ತ ನಡೆಯಿತು.

ನಮ್ಮ ಚರಿತ್ರನಾಯಕನ ಮನಸ್ಸಿನಲ್ಲಿ ತಾನು ಇನ್ನು ಮುಂದೆ ಬಹಳ ದಿವಸ ಬದುಕುವುದಿಲ್ಲೆಂಬ ಭಾವನೆಯು ಹುಟ್ಟಿತು. ಆದ್ದರಿಂದ ಅವನು ಒಂದು ದಿವಸ ತನ್ನ ಎಲ್ಲ ಸರದಾರ–ಮಂತ್ರಿಗಳನ್ನು ಕರಿಸಿ, ತನ್ನ ಮನಸ್ಸಿನಲ್ಲಿ ಇಷ್ಟು ದಿವಸ ಮುಚ್ಚಿಕೊಂಡಿಟ್ಟ ವಿಚಾರಗಳನ್ನೆಲ್ಲ ಅವರ

ಮುಂದೆ ಸ್ಪಷ್ಟವಾಗಿ ಉಸಿರಿದನು. ಅವನು ಹೇಳಿದ್ದೇನಂದರೆ :-" ಕಳೆದ ೩೨ ವರ್ಷ ನೀವೂ ನಿಮ್ಮ ಹಿರಿಯರೂ ಈ ನಮ್ಮ ಸನಾತನಧರ್ಮ-ದ್ವೇಷಿ ಗಳಾದ ಯವನರನ್ನು ಮುರಿಬಡಿಯುವುದರಲ್ಲಿಯೂ ಈ ನನ್ನ ಹಿಂದೂ ರಾಜ್ಯವನ್ನು ಸ್ಥಾಪಿಸುವುದರಲ್ಲಿಯೂ ಏಕೀಭಾವದಿಂದ ಮನಮುಟ್ಟಿ ಜೀವದ ಹಂಗುತೊರೆದು ನನಗೆ ನೆರವಾದಿರಿ. ನಿಮ್ಮೆಲ್ಲರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಈ ನಿಮ್ಮ ಗುಡ್ಡದಂತಹ ಉಪಕಾರ ವನ್ನು ತೀರಿಸುವುದು ನನ್ನಿಂದಾಗದು. ಆದ್ದರಿಂದ ನಾನು ಈಗ ಇಹ ಲೋಕವನ್ನು ಬಿಟ್ಟು ಪರಮೇಶ್ವರನ ಬಳಿಗೆ ಹೋಗಿ, ಮೊದಲು ಆತನ ಅರ್ಧಾಂಗಿಯಾದ ಶ್ರೀ ಭವಾನಿಯನ್ನು ಕಂಡು, ಆ ದೇವಿಯ ಮಧ್ಯಸ್ಥಿಕೆ ಯಿಂದ ಪರಮಾತ್ಮನನ್ನು ಒಲಿಸಿಕೊಂಡು, ನಿಮ್ಮೆಲ್ಲರ ಅಖಂಡಕಲ್ಯಾಣ ವನ್ನು ಮಾಡುವುದಕ್ಕೋಸ್ಕರ ಆ ಭಕ್ತಾಭಿಮಾನಿಯ ಬಳಿಯಲ್ಲಿ ಮೊರೆ ಯಿಡುವೆನು.

ಹಿರಿಯರಿಂದ ನನಗೆ ೪೦,೦೦೦ ದ ಜಹಗೀರು ಮಾತ್ರ ಬಂದಿತ್ತು. ನಿಮ್ಮೆಲ್ಲರ ಸಾಹಾಯದಿಂದ ಅದನ್ನು ನಾನು ೨೫೦ ಪಟ್ಟು ಬೆಳಸಿದೆನು. ಈಗ ನನ್ನ ರಾಜ್ಯದ ವಾರ್ಷಿಕೋತ್ಪನ್ನವು ಒಂದು ಕೋಟಿ ಮಿಕ್ಕಿರು ತ್ತದೆ. ಇಂತಹ ದೊಡ್ಡ ರಾಜ್ಯದ ಅವಸ್ಥೆಯು ನನ್ನ ತರುವಾಯ ಏನಾ ಗುತ್ತದೋ ಎಂಬ ಚಿಂತೆಯಿಂದ ನನ್ನ ದೇಹವು ಯಾವಾಗಲೂ ದಹಿಸು ತ್ತದೆ. ನನ್ನ ಹಿರಿಮಗನಾದ ಶಂಭುಜಿಯು ನನ್ನ ದುರ್ದೈವದಿಂದ ರಾಜ್ಯವನ್ನಾಳಲಿಕ್ಕೆ ಅಯೋಗ್ಯನಾಗಿರುತ್ತಾನೆ. ಅವನು ತಿಳಿಗೇಡಿಯೂ ಸೆರೆಬಡಕನೂ ಪಾಣ್ಬನೂ ಆದ್ದರಿಂದ ಕೀಳಮಂದಿಯ ಮಾತುಕೇಳಿ, ರಾಜ್ಯದ ಹಿತಚಿಂತಕರನ್ನೂ ಮುತ್ಸದ್ದಿಗಳನ್ನೂ ಶೂರದಳವಾಯಿಗಳನ್ನೂ ಪ್ರಾಮಾಣಿಕರಾದ ಆಡಳತೆಗಾರರನ್ನೂ ನಂಬಿಗಸ್ಥರಾದ ಮಂತ್ರಿಗಳನ್ನೂ ಕಳೆಕೊಂಡು, ರಾಜ್ಯಭ್ರಷ್ಟನಾಗುವುದು ನಿಶ್ಚಯವೆಂದು ತೋರುತ್ತದೆ. ರಾಜಾರಾಮನಾದರೋ ರಾಜಯೋಗ್ಯಗುಣಗಳುಳ್ಳವನಾದರೂ ವಯಸ್ಸಿ ನಿಂದ ಚಿಕ್ಕವನಾಗಿರುತ್ತಾನೆ. ಅವನನ್ನು ಗಾದೆಯ ಮೇಲೆ ಕುಳ್ಳಿರಿಸಿ ನೀವೆಲ್ಲರು ಒಕ್ಕಟ್ಟಿನಿಂದ ರಾಜ್ಯಭಾರವನ್ನು ನಡಿಸಿದರೆ ಮಾತ್ರ, ರಾಜ್ಯವು ಉಳಿಯುವ ಸಂಭವವಿರುತ್ತದೆ. ಇದರ ಹೊರತು ಬೇರೆ ಯಾವ ತಾರ

ಣೋಪಾಯವು ನನಗೆ ಹೊಳೆಯಲೊಲ್ಲದು. ರಾಜ್ಯವನ್ನು ಇಬ್ಭಾಗಿಸುವ ಆಲೋಚನೆಯನ್ನು ಮಾಡಿದೆನು. ಆದರೆ ಅದಕ್ಕೆ ಶಂಭುಜಿಯು ಒಡಂಬಡಲಿಲ್ಲ. ಇಷ್ಟೇ ಅಲ್ಲ; ನಿಮ್ಮೊಳಗೆ ಎಷ್ಟೋ ಮಂದಿಗೆ ಅದು ಸರಿಯಾಗಿ ತೋರಲಿಲ್ಲ. ಆದ್ದರಿಂದ ಈ ರಾಜ್ಯದ ಸಂರಕ್ಷಣಭಾರವು ಸರ್ವಸ್ವವಾಗಿ ನಿಮ್ಮನ್ನೇ ಕೂಡಿದೆ. ನೀವೆಲ್ಲರೂ ನಿಮ್ಮ ನಿಮ್ಮ ಮನಸ್ತಾಪರಾಗದ್ವೇಷಗಳನ್ನು ಬದಿಗೊತ್ತಿ, ರಾಜ್ಯಹಿತೈಕದೃಷ್ಟಿಯಿಂದ ಒಕ್ಕಟ್ಟಾಗಿ ನಡೆದು, ನನ್ನ ಆತ್ಮವನ್ನು ತೃಪ್ತಿಗೊಳಿಸಬೇಕೆಂದು ಬೇಡಿಕೊಳ್ಳುತ್ತೇನೆ."

ಈ ಕಡೆಯ ವಾಕ್ಯವನ್ನು ಉಚ್ಚರಿಸುವಾಗ ಅವನ ಕಣ್ಣಿನಲ್ಲಿ ನೀರು ಬಂದವು; ಮತ್ತು ಅವನ ಕುತ್ತಿಗೆಯ ಸಿರಗಳು ಉಬ್ಬಿದವು. ಅವನ ಅಂತ್ಯಾವಸ್ಥೆಯನ್ನೂ ದೀನವಾಣಿಯನ್ನೂ ನೋಡಿ, ಎಲ್ಲರೂ ಕಂಬನಿಗಳನ್ನು ಸುರಿಸಿ, ದಯಾರ್ದ್ರಹೃದಯರಾಗಿ ಅವನು ಹೇಳಿದಂತೆ ಅಕ್ಷರಶಃ ಮಾಡುವೆವೆಂದು ಏಕಕಂಠದಿಂದ ಎದೆತಟ್ಟಿ ಹೇಳಿದರು. ಆಗ ಸಿವಾಜಿಗೆ ಹೆಚ್ಚಾಗಿ ಮಾತಾಡುವುದಕ್ಕೆ ಶಕ್ತಿಯಿದ್ದಿಲ್ಲ. ಆದ್ದರಿಂದ ಅವನು ಎಲ್ಲರಿಗೂ ಕಯ್ಮುಗಿದು ಹೊರಗೆ ಹೋಗಲಿಕ್ಕೆ ಸನ್ನೆಮಾಡಿದನು. ಎಲ್ಲರೂ ಬುದಿಬುದಿ ಎದ್ದು ಹೊರಗೆ ಹೋದರು. ಬಳಿಕ ಸನ್ನೆಯಿಂದ ಪುರೋಹಿತನನ್ನು ಕರೆದು, ತನಗೆ ಸರ್ವಪ್ರಾಯಶ್ಚಿತ್ತವನ್ನು ಕೊಡಿಸಬೇಕೆಂದು ಹೇಳಿದನು. ತತ್‌ಕ್ಷಣವೇ ಆವನು ರಾಜಧಾನಿಯಲ್ಲಿದ್ದ ಎಲ್ಲ ಬ್ರಾಹ್ಮಣರನ್ನು ಕರಿಸಿ, ಯಜಮಾನನಿಗೆ ಸ್ನಾನಮಾಡಿಸಿ, ಭೂದಾನ, ಗೃಹದಾನ, ಗೋದಾನ, ಧಾನ್ಯದಾನ, ವಸ್ತ್ರದಾನ, ಅಲಂಕಾರದಾನ ಮುಂತಾದ ರಾಜಯೋಗ್ಯವಾದ ಎಲ್ಲ ದಾನಗಳನ್ನು ಅವನ ಕಯ್ಯಿಂದ ಕೊಡಿಸಿ, ಅವನ ಮನಸ್ಸನ್ನು ತೃಪ್ತಿಗೊಳಿಸಿದನು. ಬಳಿಕ ನಮ್ಮ ಚರಿತ್ರನಾಯಕನು ಕೆಲ ಹೊತ್ತು ತನ್ನ ಕುಲದೇವತೆಯಾದ ಶ್ರೀ ಭವಾನಿಯ ನಾಮೋಚ್ಚಾರ ಮಾಡುತ್ತ ಮಲಗಿ, ಶಕೆ ೧೬೦೨ ರೌದ್ರಿ ಸಂವತ್ಸರ ಚೈತ್ರ ಶುದ್ಧ ರವಿವಾರ ದಿವಸ ಮಧ್ಯಾಹ್ನ ಸಮಯದಲ್ಲಿ ಪ್ರಾಣಬಿಟ್ಟನು (೫ ಎಪ್ರಿಲ ೧೬೮೦). *

---

* ಸಿವಾಜಿಯ ಸಾವಿನ ಬಗ್ಗೆ ಬೇರೆ ಬೇರೆ ಜನರು ಭಿನ್ನ ಭಿನ್ನ ಕಾರಣಗಳನ್ನು ಕೊಡುತ್ತಾರೆ. ಜಾಲ್ನಾದ ಫಕೀರನ ಶಾಪದಿಂದ ಸತ್ತನೆಂದು ಮುಸಲ್ಮಾನರು ಬರೆಯುತ್ತಾರೆ. ಶಂಭುಜಿಯು ವಿಷಪ್ರಯೋಗದ ಆರೋಪವನು

ನಮ್ಮ ಚರಿತ್ರನಾಯಕನ ಹೆಂಡಂದಿರ ಸಂಖ್ಯೆಯು ಸರಿಯಾಗಿ ಗೊತ್ತಾಗುವುದಿಲ್ಲ. ಕೆಲವರು ೬ ಮಂದಿ ಇದ್ದರೆಂತಲೂ ಕೆಲವರು ೭ ಅಥವಾ ೮ ಮಂದಿ ಎಂತಲೂ ಮತ್ತೆ ಕೆಲವರು ೨ ಉಪಸ್ತ್ರೀಯರಿದ್ದ ರೆಂತಲೂ ಬರೆಯುತ್ತಾರೆ. ಕೇಳುಸಕರರು ಕೊಟ್ಟ ೭ ಮಂದಿ ಹೆಂಡಂದಿರ ಹೆಸರುಗಳನ್ನೂ ಅವರಿಂದ ಹುಟ್ಟಿದ ಮಕ್ಕಳುಗಳ ಹೆಸರುಗಳನ್ನೂ ಇಲ್ಲಿ ಕೊಡುವೆವು.

**೧. ಸಯಿಬಾಯಿ.** ಈಕೆಯನ್ನು ಸಿವಾಜಿಯು ಚಿಕ್ಕಂದಿನಲ್ಲೇ ಮದುವೆಯಾಗಿದ್ದನೆಂಬ ಬಗ್ಗೆ ಸಂದೇಹವಿಲ್ಲ. ಈಕೆಯ ಹೊಟ್ಟೆಯಿಂದ ಶಂಭುಜಿಯೆಂಬ ಒಬ್ಬ ಗಂಡುಮಗನೂ ಸಖು, ಅಂಬಿಕಾ ಎಂಬ ಇಬ್ಬರು ಹೆಣ್ಣುಮಕ್ಕಳೂ ಹುಟ್ಟಿದರು. ಫಲ್ಟಣದ ನಿಂಬಾಳಕರನಾದ ಬಾಜಾಜಿಯು ಜಾತಿಗೆಟ್ಟು ಮುಸಲ್ಮಾನನಾಗಲು, ಸಿವಾಜಿಯ ತಾಯಿಯಾದ ಜೀಜಿ ಬಾಯಿಯು ಅವನಿಗೆ ಪ್ರಾಯಶ್ಚಿತ್ತಕೊಡಿಸಿ, ಶುದ್ಧಮಾಡಿಸಿ, ಜನರಿಗೆ ಸಂಶಯಬಾರದಂತೆ ತನ್ನ ಮೊಮ್ಮಗಳಾದ ಸಖುಬಾಯಿಯನ್ನು ಅವನ ಮಗನಾದ ಮಹಾದಾಜಿಗೆ ಕೊಟ್ಟು ಮದುವೆಮಾಡಿಸಿದಳು. ಇವನೇ ಶಂಭುಜಿಗೆ ಬುದ್ಧಿವಾದವನ್ನು ಹೇಳಿ ದಿಲೀರಖಾನನ ಸಿಟ್ಟಿಗೆ ಗುರಿ ಯಾದನು. ೨ನೆಯ ಮಗಳಾದ ಅಂಬಾಬಾಯಿಯನ್ನು ತಾರಳೆಯ ಇನಾಮದಾರನಾದ ಮಹಡಿಕ ಹರಜಿರಾಜನೆಂಬವನಿಗೆ ಕೊಟ್ಟಿತ್ತು. ಈ ಸಯಿಬಾಯಿಯು ೧೬೫೯ ರಲ್ಲಿ ಸತ್ತಳು. ಈಕೆಯು ನಿಂಬಾಳಕರ ಮನೆ ತನದವಳಾಗಿದ್ದಳು.

**೨. ಸೊಯಿರಾಬಾಯಿ.** ಈಕೆಯು ಸಿವಾಜಿಯ ಪ್ರೀತಿಯ ಹೆಂಡತಿ ಯಾಗಿದ್ದಳೆಂದು ಪ್ರಸಿದ್ಧಿಯಿದೆ. ಈಕೆಯು ಸಿರ್ಕೆಮನೆತನಕ್ಕೆ ಹೊಂದಿ ದವಳು. ಈಕೆಯು ರಾಜಾರಾಮನೆಂಬ ಒಬ್ಬ ಮಗನನ್ನೂ ದೀಪಾ (ಬಾಳಿ) ಬಾಯಿಯೆಂಬ ಒಬ್ಬ ಮಗಳನ್ನೂ ಹಡೆದಳು. ಈ ಬಾಳಿಬಾಯಿ ಯನ್ನು ವಿಸಾಜಿರಾಯನೆಂಬ ಒಬ್ಬ ಸರದಾರನಿಗೆ ಕೊಟ್ಟಿತ್ತು.

---

ಹೊರಿಸಿ, ಸೊಯಿರಾಬಾಯಿಯನ್ನು ಕೊಲ್ಲಿಸಿದನೆಂದು ಚಿಟ್ನೀಸರು ಬರೆಯು ತ್ತಾರೆ. ಗ್ರಾಂಟ್ ಡಫರು ಕಾಲಿಗೆ ಮಂಡೆಯಾಗಿ ಸತ್ತನೆಂದು ಬರೆಯುತ್ತಾರೆ. ಇವೆಲ್ಲ ಸ್ವಕಪೋಲಕಲ್ಪಿತಕಾರಣಗಳೆಂದು ತೋರುತ್ತದೆ.

**೩. ಪುತಳಾಬಾಯಿ.** ಈಕೆಯು ಬಂಜೆಯಾದ್ದರಿಂದ ಗಂಡ ನೊಡನೆ ಸಹಗಮನ ಹೋದಳು. ಈಕೆಯು ಜಾಧವ ಇಂಗಳೆ ಅಥವಾ ಪಾಲಕರ ಮನೆತನಕ್ಕೆ ಸೇರಿರಬಹುದು.

**೪. ಸಕವಾರಬಾಯಿ.** ಈಕೆಯನ್ನು ಸಿವಾಜಿಯು ೧೬೫೭ ರಲ್ಲಿ ಮದುವೆಯಾದನೆಂದು ಜೇಧೆಯ ಶಕಾವಳಿಯಲ್ಲಿ ಬರೆದಿರುತ್ತದೆ. ಈಕೆಯು ಗಾಯಕವಾಡ ಮನೆತನದವಳು. ಈಕೆಗೆ ಕಮಲಾಬಾಯಿಯೆಂಬ ಒಬ್ಬ ಮಗಳಿದ್ದಳು, ಆಕೆಯನ್ನು ಪಾಲಕರ ಜಿನೋಜಿಯೆಂಬವನಿಗೆ ಕೊಟ್ಟಿತ್ತು.

**೫. ಸಗುಣಾಬಾಯಿ.** ಈಕೆಯು ಸಿರ್ಕೆಮನೆತನಕ್ಕೆ ಹೊಂದಿ ದವಳು. ಈಕೆಗೆ ರಾಜಕುವಾರಬಾಯಿ ಅಥವಾ ನಾನಿಬಾಯಿ ಎಂಬೊಬ್ಬ ಮಗಳಿದ್ದಳು. ಆಕೆಯನ್ನು ಮಾಲೇಕರ ಸಿರ್ಕೆ ಗುಣೋಜಿರಾಜನೆಂಬ ವನಿಗೆ ಕೊಟ್ಟಿತ್ತು.

**೬. ಕಾಶಿ (ಲಕ್ಷ್ಮೀ) ಬಾಯಿ.**
**೭. ಗುಣವಂತಿಬಾಯಿ.** } ಇವರಿಬ್ಬರಿಗೂ ಮಕ್ಕಳಾಗಲಿಲ್ಲ.

ಇವರ ಮನೆತನವು ನಿಶ್ಚಯವಾಗಿ ಗೊತ್ತಾಗುವುದಿಲ್ಲ. ರಾಜವಾಡೆಯವರು ಸೂಚಿಸಿದ **ಫರ್ಜಂಡ, ವಿಚಾರೆ** ಈ ಮನೆತನಗಳಿಗೆ ಇವರು ಸೇರಿದ್ದರೂ ಸೇರಿರಬಹುದು.

---

## ೧೨ ನೆಯ ಪ್ರಕರಣ

### ಕೊಂಕಣಪಟ್ಟಿಯೂ ಕಡಲೊಡೆತನವೂ.

ನಮ್ಮ ಚರಿತ್ರನಾಯಕನು ಪ್ರಬುದ್ಧನಾಗಿ ತನ್ನ ಪಿತ್ರಾರ್ಜಿತ ಜಹಗೀರನ್ನು ಬೆಳಿಸಲೆಳಿಸಿದಾಗ ಕೊಂಕಣಪಟ್ಟಿಯು ಆದಿಲ್ಶಹ ಪೋರ್ತುಗೀಸರ ವಶದಲ್ಲಿತ್ತು. ಗೋವೆಪ್ರಾಂತವೂ ವಸಯಿಪ್ರಾಂತವೂ ದಮಾನ ದೀವ ಮುಂಬಯಿ ನಡುಗಡ್ಡೆಗಳೂ ಪೋರ್ತುಗೀಸರ ಕಯ್ಸೇರಿದ್ದವು. ಸಿದ್ದಿಯರು ಆದಿಲ್ಶಹನ ಮಾಂಡಲಿಕರಾಗಿ ಉಳಿದ ಪಶ್ಚಿಮಸಮುದ್ರದ

ದಂಡೆಯನ್ನು ಆಳುತ್ತಿದ್ದರು. ಮುಂದೆ ಪೋರ್ತುಗಲ್ಲದ ಅರಸನು ೨ ನೆಯ ಚಾರ್ಲಸರಾಜನಿಗೆ ಮುಂಬಯಿಯನ್ನು ವರದಕ್ಷಿಣೆಯಾಗಿ ಕೊಟ್ಟನು (೧೬೬೧), ಮತ್ತು ಮುಂದೆ ಅವನ್ನು ಪೂರ್ವ ಹಿಂದುಸ್ತಾನ ಸಂಘಕ್ಕೆ ಪ್ರತಿವರ್ಷ ೧೦ ಪೌಂಡು ಕೊಡುವ ಕರಾರಿನಿಂದ ಚಾರ್ಲಸ ರಾಜನು ಮಾರಿಬಿಟ್ಟನು (೧೬೬೮). ಆ ಕಾಲಕ್ಕೆ ೧೦ ಪೌಂಡಿನ ಯೋಗ್ಯತೆಯುಳ್ಳ ಮುಂಬಯಿಯು, ತಿಪ್ಪೆ ಹೋಗಿ ಉಪ್ಪರಿಗೆಯಾಗಬಹುದೆಂಬ ಗಾದೆಯಂತೆ, ಈಗ ದಿನಾಲು ೧೦ ಪೌಂಡಿಗಿಂತ ಹೆಚ್ಚು ಪ್ರತಿಫಲವನ್ನು ಕೊಡುವುದನ್ನು ನೋಡಿದರೆ, ಕಾಲಮಹಿಮೆಯು ಎಷ್ಟು ಅಗಾಧವಾದುದೆಂಬುದು ಗೊತ್ತಾಗುವುದು. ಸುರತದಲ್ಲಿದ್ದ ಇಂಗ್ಲಿಷ ವಖಾರದ ಮುಖ್ಯಸ್ಥನಾದ ಆಕ್ಸಿನ್ಡನ್ನನು ಮುಂಬಯಿಯು ದೊರೆತ ಕೂಡಲೆ ಅದರಲ್ಲಿ ಒಂದು ಶಾಖೆಯನ್ನಿರಿಸಿದನು. ಮುಂದೆ ೧೮ ವರುಷಗಳ ಮೇಲೆ ಮುಂಬಯಿಯು ಇಂಗ್ಲಿಷರ ಮುಖ್ಯ ವ್ಯಾಪಾರದ ಸ್ಥಳವಾಯಿತು (೧೬೮೭). ಇದಕ್ಕೂ ಮೊದಲು ರಾಜಾಪುರದಲ್ಲಿ ಇಂಗ್ಲಿಷರ ಒಂದು ಸಣ್ಣ ವಖಾರಮಾತ್ರ ಇತ್ತು.

೧೬೬೮ ರಲ್ಲಿ ಮುಂಬಯಿಯ ಸ್ಥಿತಿಯು ಹೇಗಿತ್ತೆಂಬುದನ್ನು ತುಸು ವರಲ್ಲಿ ವಿವರಿಸುವುದು ವಿಷಯಾಂತರವಾಗಲಾರದೆಂದು ತೋರುತ್ತದೆ. ೧೬೬೧ ರಲ್ಲಿ ಅದರ ಜನಸಂಖ್ಯೆಯು ೧೦,೦೦೦ ವಾಗಿತ್ತು; ವಾರ್ಷಿಕೋತ್ಪನ್ನವು ೬,೫೦೦ ಪೌಂಡು ಬರುತ್ತಿತ್ತು. ತಮ್ಮ ವಶದಲ್ಲಿ ಬಂದ ಕೂಡಲೆ ಇಂಗ್ಲಿಷ ವರ್ತಕರು ಅದರ ಕೋಟೆಯನ್ನು ದುರಸ್ತಮಾಡಿ, ಅಲ್ಲಿಯೊಂದು ತಮ್ಮ ವಖಾರವನ್ನಿಟ್ಟು, ಯುರೋಪಿಯರಿಗೆ ಅಲ್ಲಿ ವಾಸಮಾಡಲಿಕ್ಕೆ ಉತ್ತೇಜನಕೊಡಲಾರಂಭಿಸಿದರು. ಮುಂದೆ ೫ ವರುಷಗಳ ಮೇಲೆ ಡಾಕ್ಟರ ಫ್ರಾಯರ ಎಂಬ ಪ್ರವಾಸಿಯು ಅದರ ವಿಷಯವಾಗಿ ಬರೆಯುವುದೇನೆಂದರೆ:—ಮುಂಬಯಿಯ ಕೋಟೆಯ ಮೇಲೆ ೧೨೦ ತೋಫುಗಳಿರುತ್ತವೆ. ಕೋಟೆಯ ಹೊರಗೆ ಊರು ೧ ಮೈಲು ಉದ್ದವಾಗಿರುತ್ತದೆ. ಜನಸಂಖ್ಯೆ ೬೦,೦೦೦; ಜನರು ಬಹುಶಃ ತುಂಟರೂ ತಗಲರೂ ಆಗಿರುತ್ತಾರೆ. ಮೀನುಹಿಡಿಯುವುದೇ ಮಾಜಗಾವದ ಜನರ ಮುಖ್ಯವಾದ ಉದ್ಯೋಗವು. ಇಲ್ಲಿ ಕೆಲವು ಪೋರ್ತುಗೀಸರ ದೇವಾಲಯಗಳಿರುತ್ತವೆ. ಇಲ್ಲಿಯ

ಹವೆಯು ಬಹಳೇ ಅನಾರೋಗ್ಯಕರವಾಗಿರುತ್ತದೆ. ಮನುಷ್ಯನ ಆಯುಷ್ಯ ಮರ್ಯಾದೆಯು ಸಾಮಾನ್ಯವಾಗಿ ಎರಡು ಮಳೆಗಾಲಗಳಿಗಿಂತ ಹೆಚ್ಚಾಗಿರುವುದಿಲ್ಲ. ಇಲ್ಲಿ ವಾಸಮಾಡಲಿಕ್ಕೆ ಬಂದ ೫೦೦ ಯುರೋಪಿಯರಲ್ಲಿ ೧೦೦ ಮಂದಿ ಮಾತ್ರ ಜೀವದಿಂದ ತಿರುಗಿ ಹೋದರು. ಮಾರಿಬೇನೆಯೇ ಸಾವಿನ ಮುಖ್ಯಕಾರಣವು. ಸಾಷ್ಟಿಯಲ್ಲಿಯ ಪೋರ್ತುಗೀಸರು ಅನ್ನ ಸಾಮುಗ್ರಿಗಳನ್ನು ಇಲ್ಲಿಗೆ ತರಗೊಡುವುದಿಲ್ಲ. ಮೊಗಲರ ಹಡಗುಪಡೆಯ ಮುಖ್ಯಸ್ಥರಾದ ಸಿದ್ದಿಯರು ೧೬೭೮ ರಲ್ಲಿ ಮುಂಬಯಿ ಕೋಟೆಯನ್ನು ಮುತ್ತಿದರು. ಇಂಗ್ಲಿಷರು ಪ್ರಯತ್ನಮಾಡಿ ಬಾದಶಹನ ಹುಕುಮನ್ನು ತಂದುದರಿಂದ ಆ ಮುತ್ತಿಗೆಯು ಎದ್ದಿತು. ಇಲ್ಲಿದ್ದ ಇಂಗ್ಲಿಷರು ತಮ್ಮ ತಮ್ಮೊಳಗೆ ಕಡಿದಾಡುತ್ತಾರೆ. ಅವರೊಳಗೆ ಒಕ್ಕಟ್ಟಿಲ್ಲ. *

ಈ ಕಾಲದಲ್ಲಿ ಕೊಂಕಣವೆಂಬ ಕುಸ್ತಿಯ ಕಣದಲ್ಲಿ ಮೊಗಲ ಬಾದಶಹನೆಂಬ ಮಲ್ಲನೂ ಆದಿಲಶಹನೆಂಬ ಜಟ್ಟಿಯೂ ರುಸ್ತಮ-ಇ-ಜಮಾನನೆಂಬ ಸಿದ್ದಿ ಜಾತಿಯ ಆದಿಲ್ಶಾಹಿಯ ಕೊಂಕಣದ ಸುಬೇದಾರನೂ ಜಂಜೀರಾದ ಹಬಸಿಯರ ಮುಖ್ಯಸ್ಥನೂ ಸಿವಾಜಿಯೂ ಸಡ್ಡು ಹೊಡೆದು ನಿಂತಿದ್ದರು. ರುಸ್ತಮ-ಇ-ಜಮಾನನೂ ಸಿವಾಜಿಯೂ ಕಿರಿ ಹುದ್ರಿಗಳಾದ್ದರಿಂದ ಅವರ ಕುಸ್ತಿಯು ಆರಂಭದಲ್ಲಿ ಆಗುವುದು ಸ್ವಾಭಾವಿಕವಾದ ಮಾತೇ ಸರಿ. ಆದರೆ ಸಿವಾಜಿಯು ರುಸ್ತಮನನ್ನು ತನ್ನಕಡೆಗೆ ಒಡೆದುಕೊಂಡುದರಿಂದ ಅವನೊಡನೆ ಆದ ಕುಸ್ತಿಯು ತೋರಕೆಯದಾಗಿ ಪರಿಣಮಿಸಿತು; ಮತ್ತು ಅವನ ಜಹಗೀರಿಗೆ ಸೇರದ ಕೊಂಕಣಪ್ರದೇಶವನ್ನು ಹಿಡಿದುಕೊಳ್ಳಲಿಕ್ಕೆ ಸಿವಾಜಿಗೆ ಅವನಿಂದ ಎಷ್ಟೋ ಗುಪ್ತಸಾಹಾಯವು ದೊರೆಯಿತು.

ಸಿವಾಜಿಯು ಅಫಜುಲ್ಖಾನನನ್ನು ಕೊಂದು ಅವನ ದಂಡನ್ನು ದಿಕ್ಕುಪಾಲಾಗಿ ಓಡಿಸಿದ ಬಳಿಕ ಪನ್ಹಾಳಕೋಟೆಯನ್ನು ಹಿಡಿದುಕೊಂಡು, ರತ್ನಗಿರಿ ಪ್ರಾಂತವನ್ನು ಒಳನುಗ್ಗಲಿಕ್ಕೆ ಒಬ್ಬ ದಳವಾಯಿಯನ್ನು ಕಳುಹಿದನು. ಈ ದಳವಾಯಿಯು ದಾಭೋಳವನ್ನು ಮುತ್ತಲು, ಅಲ್ಲಿಯ ಸರಕಾರಕೂ

* ಇಂಪಿರಿಯಲ ಗ್ಯಾಜಿಟಿಯರ ಸಂಪುಟ ೩ ಪು. ೭೪, ೭೫.

ನನು ಬಂದರದಲ್ಲಿದ್ದ ೩ ಅಫಜುಲ್ಖಾನನ ಹಡಗುಗಳನ್ನು ತೆಗೆದುಕೊಂಡು ರಾಜಾಪುರಕ್ಕೆ ಓಡಿಹೋದನು. ಮರಾಟರು ರಾಜಾಪುರಕ್ಕೆ ಹೋಗಲು, ಅಲ್ಲಿಯ ಸುಬೇದಾರನು ಅಂಜಿ ಹಡಗಿನಲ್ಲಿ ಹೋಗಿ ಕುಳಿತನು. ಆ ಹಡಗುಗಳನ್ನು ತಮ್ಮ ಸ್ವಾಧೀನಮಾಡಬೇಕೆಂದು ಮರಾಟರು ಕೇಳಲು, ಇಂಗ್ಲಿಷ ವರ್ತಕರು ಅವು ತಮ್ಮವೆಂದು ಸುಳ್ಳು ಹೇಳಿ, ಅವನ್ನು ಕೊಡಲಿಕ್ಕೆ ಒಡಂಬಡಲಿಲ್ಲ. ಆದ್ದರಿಂದ ಸಿವಾಜಿಯ ದಳವಾಯಿಯು ಇಂಗ್ಲಿಷರ ದಲಾಲರಾದ ವಾಘಜಿ, ಬಾಳಾಜಿ ಎಂಬಿಬ್ಬರನ್ನು ಹಿಡಿದುಕೊಂಡು ಹೋಗಿ, ಅವರನ್ನು ಬಿಡಬೇಕೆಂದು ಕೇಳಲಿಕ್ಕೆ ಬಂದ ಫಿಲಿಪ್ಪ ಗಿಫರ್ಡನೆಂಬವನನ್ನು ಸೆರೆಯಲ್ಲಿಟ್ಟನು. ಈ ಸುದ್ದಿಯನ್ನು ಕೇಳಿ ಇಂಗ್ಲಿಷವರ್ತಕರ ಮುಖ್ಯಸ್ಥನಾದ ಹೆನ್ರಿ ರಿವಿಂಗ್ಟನ್ನನು ೩೦ ಮಂದಿ ಸಶಸ್ತ್ರ ಸಿಪಾಯರನ್ನು ಕಳುಹಿ, ಗಿಫರ್ಡನನ್ನು ಬಂಧ ಮುಕ್ತಮಾಡಿಸಿದನು. ಮುಂದೆ ರುಸ್ತುಮನ ಮಧ್ಯಸ್ಥಿಕೆಯಿಂದ ಸಿವಾಜಿಯು ಈ ಮೂವ್ವರನ್ನು ಬಿಡಬೇಕೆಂದು ಬರೆದುದರಿಂದ ಈ ಜಗಳವು ಇಷ್ಟಕ್ಕೇ ಮುಗಿಯಬಹುದಾಗಿತ್ತು. ಆದರೆ ಅದಿಲ್ಶಾಹಿಯವರು ಪನ್ಹಾಳ ಕೋಟೆಯನ್ನು ಮುತ್ತಲು, ಇಂಗ್ಲಿಷ ವರ್ತಕರು ಅವರಿಗೆ ಮದ್ದುಗುಂಡುಗಳನ್ನು ಪೂರೈಸಿದ್ದಲ್ಲದೆ, ಆ ಮುತ್ತಿಗೆಯಲ್ಲಿ ಅವರಿಗೆ ನೆರವಾಗಲಿಕ್ಕೆ ಕೆಲವು ಇಂಗ್ಲಿಷ ಸಿಪಾಯರನ್ನು ಕಳುಹಿದರು. ಈ ಸಿಟ್ಟಿನಿಂದ ಸಿವಾಜಿಯು, ಪನ್ಹಾಳ ಮುತ್ತಿಗೆಯು ಎದ್ದ ಬಳಿಕ, ದಂಡೆತ್ತಿ ಬಂದು ರಾಜಾಪುರದಲ್ಲಿದ್ದ ಇಂಗ್ಲಿಷರ ವಖಾರವನ್ನು ಸುಲಿದು, ಹೆನ್ರಿರಿವಿಂಗ್ಟನ್, ರಿಚರ್ಡ ಟೇಲರ, ರ್‍ಯಾಂಡೋಲ್ಫಟೇಲರ, ಫಿಲಿಪ್ಪಗಿಫರ್ಡ ಈ ನಾಲ್ಕು ಜನರನ್ನು ಸೆರೆಯಾಳಾಗಿ ರಾಯಗಡಕ್ಕೆ ಒಯ್ದನು (ದಶಂಬರ ೧೬೬೦). ಇಂಗ್ಲಿಷ ವರ್ತಕರು ಇವರ ಬಂಧಮುಕ್ತತೆಗೋಸ್ಕರ ಹಣವನ್ನು ಕೊಡುವುದಕ್ಕೆ ಒಡಂಬಡದ್ದರಿಂದ ಸಿವಾಜಿಯು ಅವರನ್ನು ೩ ವರ್ಷ ಸೆರೆಯಲ್ಲಿಟ್ಟು ತರುವಾಯ ಅವರನ್ನು ಬಿಡುಗಡೆಮಾಡಿದನು (೫ ಫೇಬ್ರುವರಿ ೧೬೬೩). ಈ ಬಂಧಮೋಚನವು ಆಗುವ ವರೆಗೆ ರಾಜಾಪುರದ ವರ್ತಕರು ಸುರತದಲ್ಲಿದ್ದ ತಮ್ಮ ಸಂಘದ ಮುಖ್ಯಸ್ಥನಿಗೂ ಅವನು ಸಿವಾಜಿಗೂ ಬಾರಿಬಾರಿಗೆ ಬರೆಯುತ್ತಿದ್ದರು.

ವ್ಯವಹಾರದಲ್ಲಿಯಾಗಲಿ ರಾಜಕಾರ್ಯದಲ್ಲಿಯಾಗಲಿ ಮೂಗುಹಿಡಿದ ಹೊರತು ಬಾಯಿ ತೆರೆಯುವುದಿಲ್ಲೆಂಬ ಅನುಭವದ ಮಾತನ್ನು ಮರೆಯು ಕೂಡದು. ಕೇವಲ ಧಾರ್ಮಿಕ ವಿಚಾರವು ಮಹಾತ್ಮರಲ್ಲಿ ಮಾತ್ರ ಕಂಡು ಬರುತ್ತದೆ. ಪ್ರವೃತ್ತಿಮಾರ್ಗದಲ್ಲಿ ತೊಡಗಿದ ಎಲ್ಲ ಜನರ ಕೃತಿಗಳು ಅವರ ವರ ಮೇಲೆ ಆಯಾಕಾಲಕ್ಕೆ ಹೆಚ್ಚುಕಡಮೆ ಪ್ರಮಾಣದಿಂದ ಅಧಿಕಾರ ನಡಿಸುತ್ತಿದ್ದ ಧಾರ್ಮಿಕ ಮತ್ತು ವ್ಯವಹಾರಿಕ ಶಕ್ತಿಗಳ ಫಲಗಳಾಗಿರುತ್ತ ವೆನ್ನುವುದಕ್ಕೆ ಏನೂ ಅಡ್ಡಿಯಿಲ್ಲ. ಈ ತರದ ಅನೇಕ ಶಕ್ತಿಗಳು ಆಯಾ ಕಾಲಕ್ಕೆ ಸಿವಾಜಿಯ ಮೇಲೂ ಇಂಗ್ಲಿಷರಮೇಲೂ ತಮ್ಮ ತಮ್ಮ ಅಮ ಲನ್ನು ನಡೆಸಿದಂತೆ ಅವರವರ ಬೇಡಿಕೆಗಳು ಹೆಚ್ಚು ಕಡಮೆ ಪ್ರಮಾಣ ದಿಂದ ಆಗಾಗ ಜೋರಾಗುತ್ತಿದ್ದವು. ನೆಲದ ಮೇಲೆ ಸಿವಾಜಿಯ ಸಾಮ ರ್ಥ್ಯವು ಅಪ್ರತಿಹತವಾಗಿತ್ತು; ಕಡಲಿನಲ್ಲಿ ಇಂಗ್ಲಿಷರು ಹೆಚ್ಚು ಬಲಿಷ್ಠ ರಾಗಿದ್ದರು. ಸಿವಾಜಿಗೆ ಮದ್ದುಗುಂಡುತೋಫುಗಳೂ ಉಪ್ಪೂ ಇಂಗ್ಲಿಷ ರಿಂದ ಬೇಕಾಗಿತ್ತು: ಇಂಗ್ಲಿಷರಿಗೆ ಸಿವಾಜಿಯ ರಾಜ್ಯದಿಂದ ಅನ್ನಸಾಮಗ್ರಿ ಗಳೂ ಉರವಲವೂ ಅತ್ಯವಶ್ಯವಾಗಿ ಬೇಕಾಗಿದ್ದವು. ಇಂಗ್ಲಿಷರ ವ್ಯಾಪಾರ ದಿಂದ ತನ್ನ ರಾಜ್ಯಕ್ಕೆ ಹಿತವುಂಟೆಂಬ ತಿಳಿವಳಿಕೆಯು ಸಿವಾಜಿಯಲ್ಲಿ ನೆಲೆ ಗೊಂಡಿತ್ತು; ಸಿವಾಜಿಯ ಸ್ನೇಹವನ್ನು ಕಳೆಕೊಂಡರೆ ತಮ್ಮ ವ್ಯಾಪಾರವು ಕಟ್ಟಾಗುವುದೆಂಬ ಹೆದರಿಕೆಯು ಇಂಗ್ಲಿಷರನ್ನು ತಲ್ಲಣಿಸುತ್ತಿತ್ತು. ಸಿವಾಜಿ ಯ ಸ್ನೇಹವು ಇಂಗ್ಲಿಷವರ್ತಕರಿಗೆ ಬಿಸಿತುಪ್ಪದಂತೆ ಆಗಿತ್ತು. ಅದನ್ನು ಕುಡಿಯ ಬೇಕೆಂದರೆ ಬಾಯಿ ಸುಡುತ್ತಿತ್ತು. ಚಲ್ಲಿದರೆ ಲುಕ್ಸಾನೆಯಾಗು ತ್ತಿತ್ತು. ತಮ್ಮ ಹಟವನ್ನು ಬಿಡಲಿಕ್ಕೆ ಅವರ ಜಾತಿಯ ಹಟದ ಸ್ವಭಾವವು ಅಡ್ಡಬರುತ್ತಿತ್ತು; ಸಿವಾಜಿಯೊಡನೆ ಜಗಳಾಡುವುದಕ್ಕೆ ಅವರ ವ್ಯಾಪಾರದ ಸುರಕ್ಷತೆಯು ತಡೆ ಹಾಕುತ್ತಿತ್ತು. ಆದ್ದರಿಂದ ಅವರು ಸುಂಬಳದೊಳಗೆ ಬಿದ್ದ ನೊಣದಂತೆ ತೊಳಲಿಯಾಡುತ್ತಿದ್ದರು.

ಸಿವಾಜಿಯು ರಾಜಾಪುರದಲ್ಲಿ ಅವರ ವಖಾರವನ್ನು ಸುಲಿದನೆಂದು ಮೇಲೆ ಬರೆದಿರುತ್ತೇವಷ್ಟೆ. ಮುಂದೆ ೧೬೬೫ ರಲ್ಲಿ ಕಾರವಾರದ ವಖಾರ ವನ್ನೂ ೧೬೭೩ ರಲ್ಲಿ ಹುಬ್ಬಳ್ಳಿಯ ವಖಾರವನ್ನೂ ಮರಾಟರು ಸುಲಿದರು. ಈ ಸುಲಿಗೆಯ ಲುಕ್ಸಾನವನ್ನು ತಮಗೆ ಕೊಡಬೇಕೆಂದು ಅವರು ಬಾರಿ

ಬಾರಿಗೆ ಪತ್ರ ಬರೆದು ಬೇಸತ್ತು ಬೇಜಾರಾಗಿ, ಕೊನೆಗೆ ಲೆಫ್ಟಿನೆಂಟ ಉಸ್ಟಿಕ್ಕ ನೆಂಬವನನ್ನು ೧೬೭೨ ರಲ್ಲಿಯೂ ಥಾಮಸ ನಿಕೊಲ್ಸನೆಂಬವನನ್ನು ೧೬೭೩ ರಲ್ಲಿಯೂ ತಮ್ಮ ವಕೀಲರಾಗಿ ಸಿವಾಜಿಯ ಬಳಿಗೆ ಕಳುಹಿದರು. ಲೆಕ್ಕವು ಸರಿಯಿಲ್ಲೆಂದಾಗಲಿ ಸಿವಾಜಿಗೆ ಬಿಡವಿಲ್ಲೆಂದಾಗಲಿ ಬೊಕ್ಕಸದಲ್ಲಿ ಹಣವಿಲ್ಲೆಂದಾಗಲಿ ಏನಾದರೊಂದು ನೆವನವನ್ನು ಹೇಳಿ, ಸಿವಾಜಿಯ ಮಂತ್ರಿಗಳು ಅವರನ್ನು ತಿರುಗಿ ಕಳುಹಿದರು. ಬಳಿಕ ಹಿಂದೆ ಹೇಳಿದಂತೆ ಸಂಘದ ಮುಖ್ಯಸ್ಥನಾದ ಹೆನ್ರಿ ಆಕ್ಸಿಂಡನ್ನನೇ ರಾಜ್ಯಾಭಿಷೇಕದ ಕಾಲ ಕ್ಕೆ ಹೋಗಿ ರಾಯಗಡದಲ್ಲಿ ನಿಂತನು (೧೩ ಮೇ–೧೬ ಜೂನ ೧೬೭೪).

ಈ ಶಿಷ್ಟಾಯಿಯಲ್ಲಿ ಇಂಗ್ಲಿಷರು ೨೦ ಕಲಮಿನ ತಮ್ಮ ಯಾದಿ ಯನ್ನು ಸಿವಾಜಿಯ ಮಂತ್ರಿಗಳ ಮುಂದಿರಿಸಿದರು. ಅವುಗಳೊಳಗೆ ಮುಖ್ಯ ವಾದವು ಕೆಳಗೆ ಬರದಂತೆ:—

೧. ರಾಜಾಪುರದ ಸುಲಿಗೆಯ ಲುಕ್ಸಾನದ ಬಗ್ಗೆ ಸಿವಾಜಿಯು ಇಂಗ್ಲಿಷರಿಗೆ ೧೦,೦೦೦ ಹೊನ್ನು ಕೊಡಬೇಕು.

೨. ರಾಜಾಪುರ, ದಾಭೋಳ, ಚವಲ, ಕಲ್ಯಾಣ ಈ ಸ್ಥಳಗಳಲ್ಲಿ ವಖಾರಗಳನ್ನಿಡಲಿಕ್ಕೆ ಇಂಗ್ಲಿಷರಿಗೆ ಸಿವಾಜಿಯು ಅಪ್ಪಣೆಯನ್ನು ದಯ ಪಾಲಿಸಬೇಕು.

೩. ಸಿವಾಜಿಯ ಎಲ್ಲ ರಾಜ್ಯದಲ್ಲಿ ಇಂಗ್ಲಿಷರು ಏನೂ ಅಡ್ಡಿಯಿಲ್ಲದೆ ವ್ಯಾಪಾರಮಾಡಬೇಕು.

೪. ಇಂಗ್ಲಿಷರು ತಮ್ಮ ಸರಕುಗಳನ್ನು ತಮಗೆ ಯೋಗ್ಯಕಂಡ ಬೆಲೆಗೆ ಮಾರಬಹುದು. ಅದರಲ್ಲಿ ಸಿವಾಜಿಯು ಕಯ್ಹಾಕ ಕೂಡದು.

೫. ಇಂಗ್ಲಿಷರು ಮಾರಾಟಕ್ಕೆ ತಂದ ಸರಕುಗಳ ಬೆಲೆಯ ಮೇಲೆ ನೂರಕ್ಕೆ ೨॥ ರೂಪಾಯಿಯಂತೆ ಸಿವಾಜಿಗೆ ಅವರು ಜಕಾತಿಯನ್ನು ಕೊಡ ತಕ್ಕದ್ದು.

೬. ಇಂಗ್ರೇಜರ ನಾಣ್ಯಗಳು ಸಿವಾಜಿಯ ರಾಜ್ಯದಲ್ಲಿ ನಡೆಯುವು ದಕ್ಕೆ ಅವನ ಸರಕಾರದಿಂದ ಏನೂ ಅಡ್ಡಿಯಾಗಕೂಡದು.

೭. ಬಿರುಗಾಳಿಯಿಂದಾಗಲಿ ಬೇರೆ ಕಾರಣದಿಂದಾಗಲಿ ಇಂಗ್ಲಿಷರ ಹಡಗುಗಳು ಒಡೆದು ಸಿವಾಜಿಯ ಬಂದರಕ್ಕೆ ಬಂದರೆ, ಅವುಗಳನ್ನು ಸರಕು ಸಹಿತ ಸಿವಾಜಿಯು ಇಂಗ್ಲಿಷರಿಗೆ ಬಿಟ್ಟುಕೊಡಬೇಕು.

ಕಡೆಯ ಎರಡು ಶರ್ತುಗಳನ್ನು ಬಿಟ್ಟು ಉಳಿದವುಗಳಿಗೆ ಸಿವಾಜಿಯು ಒಪ್ಪಿಕೊಂಡನು. ಇಂಗ್ಲಿಷನಾಣ್ಯಗಳನ್ನು ತೆಗೆದುಕೊಳ್ಳುವುದಾಗಲಿ ಬಿಡುವುದಾಗಲಿ ಪ್ರಜೆಗಳ ಸ್ವಾತಂತ್ರ್ಯದ ಕೆಲಸವಾದ್ದರಿಂದ ಅದರಲ್ಲಿ ತಾನು ಕಯ್ಹಾಕಲಾರೆನೆಂತಲೂ ಒಡೆದು ಬಂದ ಹಡಗುಗಳೂ ಅವುಗಳೊಳಗಿದ್ದ ಸರಕುಗಳೂ ಬುನಾದಿಕಾಲದಿಂದ ಅರಸನಿಗೆ ಸೇರಿದವುಗಳಾದ್ದರಿಂದ ಅವುಗಳನ್ನು ತಿರುಗಿಕೊಡಲಿಕ್ಕೆ ಬರುವುದಿಲ್ಲೆಂತಲೂ ಸಿವಾಜಿಯು ಸ್ಪಷ್ಟವಾಗಿ ಹೇಳಿದ್ದಲ್ಲದೆ, ಕೆಳಗೆ ಕೊಟ್ಟ ಶರ್ತುಗಳಂತೆ ಲುಕ್ಸಾನೆಯ ೧೦,೦೦೦ ಹೊನ್ನನ್ನು ಕೊಡಲಿಕ್ಕೆ ಒಡಂಬಟ್ಟನು :—

(೧) ಮೂರು ವರ್ಷಗಳ ವರೆಗೆ ಪ್ರತಿವರ್ಷ ೫,೦೦೦ ಹೊನ್ನು ಬೆಲೆ ಬಾಳುವ ಸರಕುಗಳನ್ನು ಇಂಗ್ಲಿಷರು ಸಿವಾಜಿಯಿಂದ ಕೊಂಡು, ಅರ್ಧ ಬೆಲೆಯನ್ನು ಮಾತ್ರಕೊಟ್ಟು, ಉಳಿದ ಅರ್ಧಬೆಲೆಯಲ್ಲಿ ಏಳೂವರೆಸಾವಿರ ಹೊನ್ನುಗಳನ್ನು ಮುಟ್ಟಿಸಿಕೊಳ್ಳಬೇಕು.

(೨) ಇಂಗ್ಲಿಷರು ತಾವು ಕೊಡಬೇಕಾದ ೨॥% ಸುಂಕವನ್ನು ಎರಡುವರೆ ಸಾವಿರ ಹೊನ್ನು ಆಗುವ ವರೆಗೆ ಸಿವಾಜಿಗೆ ಕೊಡದೆ, ತಮ್ಮ ಲುಕ್ಸಾನೆಯನ್ನು ತುಂಬಿಕೊಳ್ಳಬೇಕು. *

ಈ ಮೇರೆಗೆ ಎಲ್ಲ ಮಾತುಗಳು ಗೊತ್ತಾದ ಬಳಿಕ ಎರಡು ಯಾದಿಗಳನ್ನು ತಯಾರಿಸಿ, ಅವುಗಳ ಮೇಲೆ ಅಷ್ಟಪ್ರಧಾನರೂ ಆಕ್ಸಿಂಡನ್ನನೂ ಸಹಿಮಾಡಿ ಒಂದೊಂದು ಪ್ರತಿಯನ್ನು ತೆಗೆದುಕೊಂಡರು (೧೨ ಜೂನ ೧೬೭೪). ಈ ಕರಾರಪತ್ರವು ಕಯ್ಯಲ್ಲಿ ಬಂದಕೂಡಲೆ ಆಕ್ಸಿಂಡನ್ನನು ಹಿಗ್ಗಿ, ತನ್ನ ಸಂಗಡಿಗನಾದ ನಾರಾಯಣಶೇಣವಿಯೊಡನೆ ಸಂತೋಷದಿಂದ ಸುರತಕ್ಕೆ ತಿರುಗಿ ಹೋದನು.

---

* ಕೇಳುಸಕರ ಪು. ೪೯೮—೫೦೦.

ಮಾತು ಆಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು ಎಂಬ ಗಾದೆಯನ್ನು ವಾಚಕರು ಕೇಳಿರಬಹುದು. ಆದರೆ ಈ ಉಕ್ತಿಯು ಕಲಿಯುಗದ ಆರಂಭದ್ದೇ ಹೊರತು ಇತ್ತಲಾಗಿನದಲ್ಲೆಂದು ಅನುಭವದಿಂದ ಧಾರಾಳವಾಗಿ ಹೇಳಬಹುದು. ಮುಸಲ್ಮಾನರು ಈ ದೇಶಕ್ಕೆ ದಂಡೆತ್ತಿ ಬರುವುದಕ್ಕಿಂತ ಮೊದಲು ನಮ್ಮ ರಾಜರು ಪ್ರಜೆಗಳು ಇಬ್ಬರು ವಚನಿಕರಾಗಿದ್ದರೆಂದು ತೋರುತ್ತದೆ. ೨,೨೨೦ ವರ್ಷಗಳ ಹಿಂದೆ ನಮ್ಮ ಪೂರ್ವಜರು ತಮ್ಮ ತಮ್ಮ ಮನೆಗಳಿಗೆ ಬೀಗಹಾಕುವ ಕಾರಣವಿದ್ದಿಲ್ಲೆಂತಲೂ ಅವರು ಸುಳ್ಳು ಆಡುತ್ತಿದ್ದಿಲ್ಲವೆಂತಲೂ ಮೆಗಾಸ್ಥಿನಿಸನೆಂಬ ಹೆಸರುವಾಸಿಯಾದ ಗ್ರೀಕ ರಾಯಭಾರಿಯು ಬರೆದಿಟ್ಟಿದ್ದಾನೆ. ಧರ್ಮರಾಯನ ಆಳಿಕೆಯಲ್ಲಿ ಭೂಮಿಯನ್ನು ಕೊಂಡವರೂ ಮಾರಿದವರೂ ಆ ಭೂಮಿಯಲ್ಲಿ ಸಿಕ್ಕ ನಿಧಿನಿಕ್ಷೇಪಗಳು ತಮ್ಮ ತಮ್ಮವು ಅಲ್ಲೆಂದು ಖಂಡಿತವಾಗಿ ಹೇಳುತ್ತಿದ್ದರು. ನಮ್ಮ ಸರ್ವಜ್ಞಕವಿಯು ಯಾವುದಾದರೊಂದು ಸತ್ಕಾರ್ಯವನ್ನು ಮಾಡುತ್ತೇನೆಂದು ಮೊದಲು ಹೇಳಿಕೊಳ್ಳದೆ ಅದನ್ನು ಮಾಡುವವನು ಉತ್ತಮನೆಂತಲೂ ಆಡಿಮಾಡುವವನು ಮಧ್ಯಮನೆಂತಲೂ ಆಡಿಮಾಡದವನು ಅಧಮನೆಂತಲೂ ಬರೆದಿರುತ್ತಾನೆ.* ಇಂತಹ ಸತ್ಯವಂತರೂ ಇಂತಹ ಪ್ರಮಾಣಿಕರೂ ಇಂತಹ ಧಾರ್ಮಿಕರೂ ಇಂತಹ ಪರದ್ರವ್ಯಪರಾಙ್ಮುಖರೂ ಆದ ನಮ್ಮ ಪೂರ್ವಜರ ವಂಶಜರಾದ ನಾವು ಇಷ್ಟುಮಟ್ಟಿಗೆ ನೈತಿಕ ಅವನತಿಯನ್ನು ಹೊಂದುವುದಕ್ಕೆ ಕಾರಣವೇನಿರಬಹುದು? ಮುಸಲ್ಮಾನ ಯೂರೋಪಿಯರ ಸಂಸರ್ಗವೂ ದಿನದಿನಕ್ಕೆ ಹೆಚ್ಚುತ್ತಿರುವ ನಮ್ಮ ಪಾರತಂತ್ರ್ಯವೂ ವರ್ಷವರ್ಷಕ್ಕೆ ಬೆಳೆಯುತ್ತಿರುವ ನಮ್ಮ ಬಡತನವೂ ಸ್ವಾರ್ಥಪರವಾದ ಪಾಶ್ಚಾತ್ಯಶಿಕ್ಷಣದ ಪ್ರಸಾರವೂ ಈ ನೈತಿಕ ಅವನತಿಯ ಮುಖ್ಯಕಾರಣಗಳಾಗಿರಲಿಕ್ಕಿಲ್ಲವೇ? ಈ ಕಾಲಕ್ಕೆ ಎಲ್ಲಿ ನೋಡಿದಲ್ಲಿ ಶುದ್ಧ ಅನೀತಿಯಾಗಲಿ ಮಿಶ್ರ ಅನೀತಿಯಾಗಲಿ ಕಂಗೊಳಿಸುತ್ತವೆ. ಕೋರ್ಟಿಗೆ ಹೋಗಿರಿ, ಕಚೇರಿಗೆ ಹೋಗಿರಿ, ಬಾಜಾರಕ್ಕೆ ಹೋಗಿರಿ,

---

* ಆಡದೆ ಮಾಡುವನು ನಾಡಿನೊಳಗುತ್ತಮನು
ಆಡಿಮಾಡುವನು ಮಧ್ಯಮನು
ತಾನಾಡಿ ಮಾಡದವನಧಮನು ಕಾಣಯ್ಯಾ ಸರ್ವಜ್ಞ ॥

ಮಠಕ್ಕೆ ಹೋಗಿರಿ, ಮನೆಗೆ ಹೋಗಿರಿ ಸುಳ್ಳುಮೋಸಗಳೇ ನಮ್ಮನ್ನು ಎಡೆಬಿಡದೆ ಬೆನ್ನಟ್ಟುತ್ತವೆ. ವಕೀಲರಾಗಲಿ, ವೈದ್ಯರಾಗಲಿ, ವ್ಯಾಪಾರಿಗಳಾಗಲಿ, ಸರಕಾರದ ಅಧಿಕಾರಿಗಳಾಗಲಿ ಸುಳ್ಳಿನ ಹೊರತು ತಮ್ಮ ಕೆಲಸವು ಸಾಗುವುದಿಲ್ಲೆಂದು ಸ್ಪಷ್ಟವಾಗಿ ಹೇಳುತ್ತಾರೆ. ಇದು ನಮ್ಮ ದೇಶದ ದೌರ್ಭಾಗ್ಯವಲ್ಲವೇ? ನಮ್ಮ ವಂಶಕ್ಷಯದ ಕಾರಣವಲ್ಲವೇ? ಇನ್ನೂ ನೂರಕ್ಕೊಬ್ಬನಾಗಲಿ ಸಾವಿರಕ್ಕೊಬ್ಬನಾಗಲಿ ಸತ್ಯವಂತನು ನಮ್ಮೊಳಗೆ ಇರುವುದು ದೇವರ ದೊಡ್ಡ ಕೃಪೆಯೆಂದು ಎಣಿಸಲಿಕ್ಕೆ ಅಡ್ಡಿಯಿಲ್ಲ.

ಈ ನೈತಿಕಸ್ಥಿತ್ಯಂತರವು ನಮ್ಮ ಚರಿತ್ರನಾಯಕನ ಕಾಲದಲ್ಲಿ ರಾಜರೊಳಗೆ ಬಹಳವಾಗಿ ಆಗಿತ್ತೆಂದು ಬರೆದರೆ ಅತಿಶಯೋಕ್ತಿಯಾಗಲಾರದು. ಮೊಗಲರಾಗಲಿ, ಅದಿಲ್ಶಾಹಿಯವರಾಗಲಿ, ಮರಾಟರಾಗಲಿ ನೀತಿಯ ಕಟ್ಟಳೆಗಳನ್ನು ಬದಿಗೊತ್ತಿ, ತಮ್ಮತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವುದರಲ್ಲಿ ನಿರತರಾಗಿದ್ದರೆನ್ನಲಿಕ್ಕೆ ಅಡ್ಡಿಯಿಲ್ಲ. ಇಂಗ್ಲಿಷ ವರ್ತಕರಿಗೆ ಲುಕ್ಸಾನೆಯ ಹಣವನ್ನು ಸಿವಾಜಿಯು ಕಡೆತನಕ ಕೊಡಲಿಲ್ಲೆಂದು ಅವರು ಸಿವಾಜಿಯ ಮೇಲೆ ಆರೋಪವನ್ನು ಹೊರಿಸುತ್ತಾರೆ. ಆ ಹಣವನ್ನು ಮುಣಿಗಿಸಿಕೊಂಡು ಸಿವಾಜಿಯು ವಚನಭ್ರಷ್ಟನಾಗಿದ್ದರೂ ಆಗಿರಬಹುದು. ಅಥವಾ ಇಂಗ್ಲಿಷ ವರ್ತಕರು ತಗಲು ತಾಟವಮಾಡಿ ಸಿವಾಜಿಯಿಂದ ತಮಗೆ ಬರತಕ್ಕ ಹಣಕ್ಕಿಂತ ಹೆಚ್ಚು ಹಣವನ್ನು ಉಚ್ಚಿಕೊಂಡಿರಬಹುದು. ಏಕೆಂದರೆ ಇಂಗ್ಲಿಷರ ಕಾಗದ ಪತ್ರಗಳಿಂದಲೇ ಅವರು ಎಷ್ಟೋ ಸಾರಿ ಮರಾಟರನ್ನು ಮೋಸಗೊಳಿಸಿದರೆಂದು ಸ್ಪಷ್ಟವಾಗಿ ಕಂಡು ಬರುತ್ತದೆ.

ನಮ್ಮ ಚರಿತ್ರನಾಯಕನು ಹೆಬ್ಬಯಕೆಯುವ (ಮಹತ್ವಾಕಾಂಕ್ಷಿ) ನಾಗಿದ್ದನೆನ್ನಲಿಕ್ಕೆ ಅಡ್ಡಿಯಿಲ್ಲ. ನೆಪೋಲಿಯನ್ ಬೊನಾಪಾರ್ಟನಂತೆ ಈ ಪ್ರಪಂಚದಲ್ಲಿ ಅಸಂಭವವಾದ್ದು ಯಾವುದೂ ಇಲ್ಲೆಂದು ಆತನ ಮನವರಿಕೆಯಾಗಿತ್ತು. ಆದ್ದರಿಂದ ಅವನ ಮನಸ್ಸು ನೆಲದೊಡೆತನದಿಂದ ತಣಿಯದೆ ಕಡಲೊಡೆತನವನ್ನು ಬಯಸಿತು. ಅವನು ದಂಡರಾಜಾಪುರವನ್ನೂ ಜಂಜೀರಾಕೋಟೆಯನ್ನೂ ಹಿಡಿದುಕೊಂಡು, ಹಬಸಿಯರನ್ನು

ಹಣಿಯಲಿಕ್ಕೆ ವಿಶ್ವಪ್ರಯತ್ನಮಾಡಿದನು. ಅದಕ್ಕೋಸ್ಕರ ಎಷ್ಟೋ ಸಾರಿ ಇಂಗ್ಲಿಷರ ನೆರವನ್ನು ಕೇಳಿದನು. ಮೊಗಲಬಾದಶಹನ ಭಯದಿಂದ ಅವರು ಅವನಿಗೆ ಸಾಹಾಯ್ಯಮಾಡಲಿಲ್ಲ. ಈ ಮೇರೆಗೆ ಅವನು ಮಾಡಿದ ಎಲ್ಲ ಪ್ರಯತ್ನಗಳು ನಿಷ್ಫಲವಾದ್ದರಿಂದ ಅವನು ಹೊಸ ಹಡಗುಪಡೆಯನ್ನು ಕಟ್ಟಿಸಿ ಹೊಸ ಬಂದರುಗಳನ್ನು ಮಾಡಿಸಿ, ಹಬಸಿಯರನ್ನು ಹಣಿಯಬೇಕೆಂದು ಹವಣಿಸಿದನು. ಅವನು ಕಡಲೊಡೆತನದ ವಿಷಯವಾಗಿ ಮಾಡಿದ ಭಗೀರಥ ಪ್ರಯತ್ನವನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಿ, ಈ ಅಧ್ಯಾಯವನ್ನು ಮುಗಿಸುವೆವು.

ನಮ್ಮ ಈ ಪುಣ್ಯತಮ ಭರತಭೂಮಿಯನ್ನೂ ನಮ್ಮ ಈ ಅತಿ ಪವಿತ್ರವಾದ ಆರ್ಯಸಂಸ್ಕೃತಿಯನ್ನೂ ನಾವೇ ಕಾಡುಜನರಿಂದ ಕಾಪಾಡಿಕೊಳ್ಳಬೇಕೆಂಬ ಉದ್ದೇಶದಿಂದ ಶ್ರೀಪರಮೇಶ್ವರನು ನಮಗೆ ಕೆಲವು ಭೌತಿಕ ಮತ್ತು ಮಾನಸಿಕ ಅನುಕೂಲತೆಗಳನ್ನು ಮಾಡಿಕೊಟ್ಟಿರುತ್ತಾನಷ್ಟೇ. ನಮ್ಮ ಅಜರಾಮರ ಪೂರ್ವಜರಾದ ಮಹರ್ಷಿಗಳು ಇಂದ್ರಿಯ ನಿಗ್ರಹವನ್ನು ಮಾಡಿ, ವಿಷಯೋಪಭೋಗಕ್ಕೆ ಮೆಚ್ಚದೆ ಕಾಯಕಷ್ಟವನ್ನನುಭೋಗಿಸಿ, ತಮ್ಮ ಆತ್ಮೋನ್ನತಿಯನ್ನು ಹೆಚ್ಚಿಸಿಕೊಂಡು, ತಮ್ಮ ಬುದ್ಧಿ ಚಾತುರ್ಯದಿಂದಲೂ ಅತುಲಕಲ್ಪನಾಶಕ್ತಿಯಿಂದಲೂ ಅಂತರ್ಜ್ಞಾನದಿಂದಲೂ ದೂರದರ್ಶಿಕತ್ವದಿಂದಲೂ ಸೃಷ್ಟಿಯ ಅಮೋಘತತ್ವಗಳನ್ನು ಶೋಧಿಸಿ, ಅವುಗಳನ್ನು ಸಾಮಾಜಿಕ ಧಾರ್ಮಿಕ ತತ್ವಗಳೊಡನೆ ತಳಕು ಹಾಕಿ, ಆರ್ಯಸಂಸ್ಕೃತಿಯನ್ನು ತಿದ್ದಿ ಬೆಳಿಸಿ ಕ್ರಮಪಡಿಸಿ, ಆಚಂದ್ರಾರ್ಕ ಕೀರ್ತಿಯನ್ನು ಸಂಪಾದಿಸಿದರು. ಅವರ ಅಗಾಧಜ್ಞಾನವನ್ನು ನೋಡಿ ಅಚ್ಚರಿಗೊಂಡು ತಲೆದೂಗಿ, ಇಡೀಜಗತ್ತು ಅವರನ್ನು ಈಗಲೂ ಕೊಂಡಾಡುತ್ತಲಿದೆ!!! ಆದರೆ ಹಿಂದೆ ಆಗಿಹೋದ ನಮ್ಮ ಸಾರ್ವಭೌಮರೂ ಅರಸರೂ ಸಂಸ್ಥಾನಿಕರೂ ಪಾಳೆಯಗಾರರೂ ನಾಯಕರೂ ದೇವರ ಇಚ್ಛೆಯಂತೆ ತಮ್ಮ ಕರ್ತವ್ಯವನ್ನು ಸರಿಯಾಗಿ ಜರಗಿಸಲಿಲ್ಲೆಂದು ದುಃಖದಿಂದ ಬರೆಯಬೇಕಾಗಿದೆ. ಭಕ್ತವತ್ಸಲನಾದ ಪರಮೇಶ್ವರನು ದಯಾರ್ದ್ರ ಹೃದಯನಾಗಿ ಈ ಭರತಖಂಡದ ಉತ್ತರಕ್ಕೆ ಬಲು ಎತ್ತರವಾದ ಹಿಮಾ

ಲಯಪರ್ವತವನ್ನೂ ಪೂರ್ವ ಪಶ್ಚಿಮ ದಕ್ಷಿಣ ದಿಕ್ಕುಗಳಿಗೆ ಅಪಾರವಾದ ಸಮುದ್ರವನ್ನೂ ನಿರ್ಮಿಸಿ, ಈ ಪುಣ್ಯಭೂಮಿಯನ್ನು ಪರಕೀಯರಿಗೆ ಕೆಲ ಮಟ್ಟಿಗೆ ಅಭೇದ್ಯವಾಗಿ ಮಾಡಿಕೊಟ್ಟನು. ಆದರೆ ನಮ್ಮ ಕ್ಷತ್ರಿಯರು ತಮ್ಮ ಕರ್ತವ್ಯವನ್ನು ಮರೆತು, ದೇವತೇಚ್ಛೆಯನ್ನು ಬದಿಗೊತ್ತಿ, ಇಂದ್ರಿಯಪರ ವಶರೂ ಸ್ವಾರ್ಥಪರರೂ ವಿಷಯಲಂಪಟರೂ ಹೊಟ್ಟೆಕಿಚ್ಚಿನವರೂ ಆಗಿ, ಪರಕೀಯರು ನಮ್ಮ ಮಾತೃಭೂಮಿಯನ್ನು ಕಣಿವೆಗಳಿಂದ ಬಂದು ಒಳ ನುಗ್ಗದಂತೆಯೂ ಹಡಗುಗಳಿಂದ ಬಂದು ಪೂರ್ವ ಪಶ್ಚಿಮ ದಕ್ಷಿಣ ದಂಡೆ ಗಳನ್ನು ಆಕ್ರಮಿಸಿದಂತೆಯೂ ಎಚ್ಚರಪಡದೆ, ಹೊಟ್ಟೆಯುರಕತನದಿಂದ ತಮ್ಮತಮ್ಮೊಳಗೆ ಜಗಳಾಡುವುದರಲ್ಲಿ ಬಹುಶಃ ಕಾಲ ಕಳೆದರು. ಅವರು ಕಣಿವೆಗಳಲ್ಲಿ ಭದ್ರವಾದ ಕೋಟೆಗಳನ್ನು ಕಟ್ಟಿಸಿ ವಾಯುವ್ಯದಿಕ್ಕಿನ ದಾರಿ ಗಳನ್ನು ಬಂದುಮಾಡಿದ್ದರೆ, ಮುಸಲ್ಮಾನರು ಇಷ್ಟು ಸುಲಭವಾಗಿ ಈ ದೇಶದ ಮೇಲೆ ದಂಡೆತ್ತಿ ಬರುತ್ತಿದ್ದಿಲ್ಲ; ಮತ್ತು ನೌಕಾವಿದ್ಯೆಯನ್ನು ಬೆಳೆಸಿ ದಂಡೆಯ ಜನರನ್ನು ಹುರಿದುಂಬಿಸಿ, ಎಲ್ಲ ಬಂದರಗಳನ್ನೂ ಸಮುದ್ರದ ಒತ್ತುಗಳನ್ನೂ ದಕ್ಷತೆಯಿಂದ ಕಾಪಾಡಿದ್ದರೆ, ಹಬಸಿಯರು, ಡಚ್ಚರು, ಫ್ರೆಂಚರು, ಇಂಗ್ಲಿಷರು ಮುಂತಾದ ನಾವಿಕರು ಸಮುದ್ರದಿಂದ ಬಂದು ನಮ್ಮನ್ನು ಪಾರತಂತ್ರ್ಯಕ್ಕೆ ಗುರಿಮಾಡುತ್ತಿದ್ದಿಲ್ಲ. ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವೇನು? ಆದುದೆಲ್ಲ ಒಳಿತೇ ಸರಿ.

ಸಮುದ್ರದಿಂದ ಬಂದು ಎಲ್ಲಕ್ಕೂ ಮೊದಲು ಪಡುವಣ ದಂಡೆಯಲ್ಲಿ ಆಳತೊಡಗಿದವರು ಆಫ್ರಿಕಾಖಂಡದ ಸಿದ್ದಿಯರೇ ಸರಿ. ಇವರು ಅಬಸಿ ನಿಯಾ ದೇಶದವರಾದ್ದರಿಂದ ಇವರನ್ನು ಹಬಸಿಯರೆಂದು ವಾಡಿಕೆಯಾಗಿ ಕರೆಯುತ್ತಾರೆ. ೧೬ ನೆಯ ಶತಮಾನದ ಆರಂಭದಲ್ಲಿ ಈ ಸಿದ್ದಿಯರು ಬಂದು ಮುಂಬಯಿಯ ತೆಂಕಲಿಗೆ ೪೫ ಮೈಲಿನ ಮೇಲಿರುವ ಜಂಜೀರಾ ಎಂಬ ಕಲ್ಲುನಡುಗಡ್ಡೆಯಲ್ಲಿ ಒಕ್ಕಲಾಗಿ ನಿಂತರು. ಇವರು ಶೂರರೂ ಸಾಹಸಿಗಳೂ ಎದೆಗಾರರೂ ನೌಕಾವಿದ್ಯೆಯಲ್ಲಿ ನಿಪುಣರೂ ಆದ್ದರಿಂದ ಮೆಲ್ಲಮೆಲ್ಲನೆ ಕುಲಾಬಾಪ್ರಾಂತವನ್ನು ವ್ಯಾಪಿಸಿ, ಜಂಜೀರಾದ ಮೂಡಲಿಗೆ ಅರ್ಧಮೈಲಿನ ಮೇಲಿರುವ **ರಾಜಾಪುರ**ದ ಬಂದರವನ್ನೂ ಅದರ ಆಗ್ನೇ

ಯಕ್ಕೆ ೨ ಮೈಲಿನ ಮೇಲಿರುವ **ದಂಡ** ಎಂಬ ಊರನ್ನೂ ತಮ್ಮ ವ್ಯಾಪಾರದ ಮುಖ್ಯಸ್ಥಳಗಳಾಗಿ ಮಾಡಿಕೊಂಡರು. ಇವರ ಮುಖ್ಯಸ್ಥನು ವಂಶಪರಂಪರೆಯಾಗಿ ಬಂದವನಿರದೆ ಜನರಿಂದ ಆರಿಸಿದವನಾಗಿದ್ದನು. ೧೬ನೆಯ ಶತಮಾನದ ಆರಂಭದಲ್ಲಿ ಇವರು ಅಹಮ್ಮದನಗರದ ನಿಜಾಮಶಹಿಯ ಮಾಂಡಲಿಕರಾಗಿದ್ದರು. ೧೬೩೬ ರಲ್ಲಿ ಆ ರಾಜ್ಯವನ್ನು ಹಂಚಿಕೊಂಡಾಗ ಇವರು ಅದಿಲ್ಶಾಹಿಯ ಪಾಲಿಗೆ ಹೋದರು. ಆಗ ಅದಿಲ್ಶಹನು ಜಂಜೀರಾದ ಮುಖ್ಯಸ್ಥನಿಗೆ **ವಜೀರ**ನೆಂಬ ಬಿರುದನ್ನು ಕೊಟ್ಟು ತನ್ನ ಮಾಂಡಲಿಕನಾಗಿ ಮಾಡಿಕೊಂಡು, ತನ್ನ ರಾಜ್ಯದ ವ್ಯಾಪಾರವನ್ನೂ ಮಕ್ಕಾಯಾತ್ರಿಕರ ಸಂರಕ್ಷಣೆಯನ್ನೂ ಅವನಿಗೆ ಒಪ್ಪಿಸಿದನು. ಹಿಂದೆ ಹೇಳಿದಂತೆ ಈ ದೇಶದ ಕ್ಷತ್ರಿಯರು ನೌಕಾಪಡೆಯನ್ನು ಕಟ್ಟಲಿಕ್ಕೆ ಯತ್ನಮಾಡದ್ದರಿಂದ ಸಜ್ಜಾದ ಮತ್ತು ಬಲಿಷ್ಠವಾದ ಹಡಗುಪಡೆಯುಳ್ಳ ಹಬಸಿಯರ ನೆರವು ಈ ದೇಶದ ಅರಸರಿಗೆ ಅವಶ್ಯವಾಗಿತ್ತು. ಹಾಗೆಯೇ ಜಂಜೀರಾದ ಕಲ್ಲುನೆಲದಲ್ಲಿ ಏನೂ ಬೆಳೆಯುತ್ತಿದ್ದಿಲ್ಲವಾದಕಾರಣ ಈ ದೇಶದ ಅರಸರ ಆಶ್ರಯವಿಲ್ಲದೆ ಹಬಸಿಯರ ಹೊಟ್ಟೆಯು ಸಾಗುವಂತಿದ್ದಿಲ್ಲ.

ನಮ್ಮ ಚರಿತ್ರನಾಯಕನು ತನ್ನ ತಂದೆಯ ಜಹಗೀರನ್ನು ಬೆಳಿಸುವುದಕ್ಕೆ ಆರಂಭಿಸಿದ ಕೂಡಲೆ ಸಿದ್ದಿಯರೊಡನೆ ಬಡಿದಾಟ ಬಂತು. ಅವನು **ಥಾಲ, ಗೋಣಸಾಲ, ರಾಯರಿ** ಎಂಬ ಮೂರು ಸಿದ್ದಿಯರ ಕೋಟೆಗಳನ್ನು ೧೬೪೮ ರಲ್ಲೇ ಹಿಡಿದುಕೊಂಡನು. ಸಿದ್ದಿಯರ ಬಳಿಯಲ್ಲಿ ದಂಡು ಇದ್ದಿಲ್ಲ. ಆದ್ದರಿಂದ ನೆಲದ ಮೇಲೆ ಮರಾಟರನ್ನು ಎದುರಿಸಲಿಕ್ಕೆ ಅವರು ಅಸಮರ್ಥರಾಗಿದ್ದರು. ಸಿದ್ದಿಯರ ಹಡಗುಪಡೆಯ ಹಾವಳಿಯನ್ನು ನಿಲ್ಲಿಸಲಿಕ್ಕೆ ಮರಾಟರಿಗೆ ಮಾರ್ಗವಿದ್ದಿಲ್ಲ. ಆದಕಾರಣ ಅವರಿಬ್ಬರೊಳಗೆ ತಿಕ್ಕಾಟವು ಒಂದೇ ಸವನೇ ನಡೆಯುವುದು ಸೋಜಿಗವಲ್ಲ. ಇದಲ್ಲದೆ ಈ ಕಾಲಕ್ಕೆ ಜಂಜೀರೆಯ ಮುಖ್ಯಸ್ಥನಾದ **ಯುಸುಫಖಾನನು** (೧೬೪೨-೧೬೫೫) ಶೂರನಾದರೂ ಸೌಮ್ಯ ಸ್ವಭಾವದವನಾಗಿದ್ದನು. ಅವನು ಸ್ವಜನಾಭಿಮಾನಿಯೂ ಪ್ರಮಾಣಿಕನೂ ಆದ್ದರಿಂದ ಶಿವಾಜಿಯು ಎಷ್ಟು ಆಶಾ ತೋರಿಸಿದರೂ ಅವನ ಕಡೆಗೆ ಒಡೆಯದೆಯೂ ಹೆಚ್ಚಿನ ಗೊಂದಲಕ್ಕೆ ಹೋಗದೆಯೂ ತನ್ನ ಸಂಸ್ಥಾನವನ್ನು ಕಾಯ್ದುಕೊಂಡಿದ್ದನು. ಅವನ

ತರುವಾಯ ಮುಖ್ಯಸ್ಥನಾದ ಫಾತಖಾನನು ಕಲಿಯಾದರೂ ಉಲುಕೋಚಿ ಯಾಗಿದ್ದನು. ಆದ್ದರಿಂದ ಅವನ ಆಳಿಕೆಯಲ್ಲಿ ಹೊಸಗದ್ದಲಗಳಿದ್ದವು.

೧೬೫೯ ರಲ್ಲಿ ಅಫಜುಲ್ಖಾನನು ಸಿವಾಜಿಯ ಮೇಲೆ ದಂಡೆತ್ತಿ ಬರಲು ಫಾತಖಾನನು ಉಬ್ಬಿ, ಇದೇ ಸುಸಂಧಿಯೆಂದೆಣಿಸಿ, ಥಾಲಕೋಟೆಯನ್ನು ಮುತ್ತಿದನು. ಆದರೆ ಮುಂದೆ ತುಸುದಿನಗಳಲ್ಲಿಯೇ ಅವನು ಸತ್ತು ಅವನ ದಂಡು ಘಾನಾಘಾನ ಆದ್ದರಿಂದ ಮುತ್ತಿಗೆಯನ್ನೆಬ್ಬಿಸಿ ಅವನಿಗೆ ತಿರುಗಿ ಹೋಗಬೇಕಾಯಿತು. ಮರುವರುಷ ೨ ನೆಯ ಅಲ್ಲಿ ಅದಿಲ್ಶಹನು ಸಿವಾಜಿಯ ಮೇಲೆ ದಂಡೆತ್ತಿ ಬಂದಾಗ, ಈ ಫಾತಖಾನನು ವಾಡಿಯ ಸಾವಂತ ನೊಡನೆ ಕೊಂಕಣವನ್ನೊಳಸುಗ್ಗಿದನು. ಎರಡೂ ದಂಡುಗಳ ನಡುವೆ ಭಯಂಕರವಾದ ಕಾಳಗವೆಸಗಿತು. ಕೊನೆಗೆ ಸಾವಂತನೂ ಬಾಜಿಫಸಲ್ಕರನೂ ದ್ವಂದ್ವಯುದ್ಧವನ್ನು ಮಾಡಿ, ಇಬ್ಬರೂ ಸತ್ತು ಬಿದ್ದರು. ಈ ಸೋಲಿನಿಂದ ಸಿವಾಜಿಯ ಹುರುಪು ಹೆಚ್ಚಿತೇ ಹೊರತು ಕುಗ್ಗಲಿಲ್ಲ. ಅವನು ೭,೦೦೦ ದಂಡಿನೊಡನೆ ರಘುನಾಥ ಬಲ್ಲಾಳ ಅತ್ರೆಯೆಂಬ ಶೂರದಳವಾಯಿಯನ್ನು ಹಬಸಿಯರ ವಿರುದ್ಧವಾಗಿ ಕಳುಹಿದನು. ಅವನು ಮಳೆ ಚಳಿ ಎನ್ನದೆ ಹಬಸಿಯರ ನಾಡನ್ನೊಳಸುಗ್ಗಿ, ದಂಡರಾಜಾಪುರಗಳನ್ನೂ ಕೋಟೆಯನ್ನೂ ಹಿಡಿಮುಕೊಂಡನು (ಅಗಸ್ಟ ೧೬೬೧). ಅವನು ಇಷ್ಟಕ್ಕೆ ಸಂತುಷ್ಟನಾಗದೆ ಜಂಜೀರೆಯ ಕೋಟೆಯ ಮೇಲೆ ತೋಪುಗಳನ್ನು ಹಾರಿಸತೊಡಗಿದನು. ಫಾತಖಾನನಿಗೆ ವಿಜಾಪುರದಿಂದ ಬೆಂಬಲ ಬಾರದ್ದರಿಂದ ಅವನು ನಿರುಪಾಯನಾಗಿ ದಂಡರಾಜಾಪುರಗಳ ಮೇಲಿನ ತನ್ನ ಹಕ್ಕುಬಾಧ್ಯತೆಯನ್ನು ಬಿಟ್ಟುಕೊಟ್ಟು ಒಪ್ಪಂದವನ್ನು ಮಾಡಿಕೊಂಡನು.

ಈ ಜುಕ್ಕಜುಲುಮೆಯಿಂದ ಆದ ಒಪ್ಪಂದವು ಹೆಚ್ಚು ದಿವಸ ಬಾಳುವ ಸಂಭವವಿದ್ದಿಲ್ಲ. ಏಕೆಂದರೆ ಸಿದ್ದಿಯರಿಗೆ ಅನ್ನ ಸಾಮುಗ್ರಿಗಳ ಅಭಾವವಾಯಿತು. ಮತ್ತು ಸಿವಾಜಿಯ ಮನಸ್ಸಿನಲ್ಲಿ ಹಬಸಿಯರನ್ನು ತನ್ನ ಅಂಕಿತರಾಗಿ ಮಾಡಿಕೊಂಡು ಕಡಲೊಡೆಯನಾಗುವುದಿತ್ತು. ಆದ್ದರಿಂದ ಅವನು ಕುಲಾಬೆಯನ್ನು ಸ್ವತಂತ್ರಪ್ರಾಂತವಾಗಿ ಮಾಡಿ, ಅದಕ್ಕೆ ವೆಂಕಾಜಿದತ್ತು ಎಂಬೊಬ್ಬ ಶೂರ ಗೃಹಸ್ಥನನ್ನು ಸುಬೇದಾರನಾಗಿ ಸಿಯು

ಮಿಸಿ, ಆರೇಳುಸಾವಿರ ದಂಡನ್ನು ಅವನ ಕಯ್ಕೆಳಗಿಟ್ಟನು. ಅವನು ಎದೆ
ಗಾರನೂ ಜಾಣನೂ ಎಚ್ಚರುಳ್ಳವನೂ ಆದ್ದರಿಂದ ನೆಲದ ಮೇಲೆ ಸಿದ್ದಿಯ
ರನ್ನು ಸೋಲಿಸಿ, ರಾಜಾಪುರದ ಕೋಟೆಯನ್ನು ಭದ್ರಪಡಿಸಿ, ಅದರ ಒತ್ತಿನ
ಮೇಲೆ **ಬಿರವಾಡಿ, ಲಿಂಗಾಣಾ** ಎಂಬ ಕೋಟೆಗಳನ್ನು ಕಟ್ಟಿಸಿ, ಆ ಭಾಗ
ದಲ್ಲಿ ಸಿದ್ದಿಯರು ನೆಲದ ಮೇಲೆ ಕಾಲಿಡದಂತೆ ಮಾಡಿಬಿಟ್ಟನು. ಆದ್ದ
ರಿಂದ ಸಿದ್ದಿಯರು ದಂಡರಾಜಾಪುರದ ತೆಂಕಲಿಗಿದ್ದ ರತ್ನಾಗಿರಿ ಪ್ರಾಂತದ
ಊರುಗಳನ್ನು ಸುಲಿದು ತಮ್ಮ ಹೊಟ್ಟೆ ಹೊರಕೊಳ್ಳಲಾರಂಭಿಸಿದರು.

ಮನುಷ್ಯನು ಪರಿಸ್ಥಿತಿಯ ಪ್ರಾಣಿಯೆಂಬ ಇಂಗ್ಲಿಷ ಗಾದೆಯು
ನಮ್ಮ ವಾಚಕರೊಳಗೆ ಕೆಲವರಿಗೆ ಗೊತ್ತಿರಬಹುದು. ಮಹಾತ್ಮರ ಹೊರತು
ಉಳಿದವರೆಲ್ಲರ ನಡೆನುಡಿಗಳು ಅವರವರ ಪರಿಸ್ಥಿತಿಯ ಬದಲಾವಣೆಗಳನ್ನು
ಅನುಸರಿಸುತ್ತವೆಂಬುದು ಅನುಭವಸಿದ್ಧವಾದ ಮಾತಾಗಿರುತ್ತದೆ. ನೈಸ
ರ್ಗಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ ಅನುಕೂಲತಾಪ್ರತಿಕೂಲತೆ
ಗಳ ಒಟ್ಟುಗೂಡಿಸಿದ ಪರಿಣಾಮವೇ ಪರಿಸ್ಥಿತಿಯೆಂದು ಕರೆಯಲ್ಪಡುತ್ತದೆ.
ಈ ಪರಿಣಾಮದಂತೆ ಸಾಮಾನ್ಯ ಜನರು ಆಗಾಗ ತಂತಮ್ಮ ಆಚಾರ
ವಿಚಾರಗಳನ್ನು ಬದಲಿಸುತ್ತಾರೆಂಬುದನ್ನು ನಾವು ದಿನಾಲು ನೋಡು
ತ್ತೇವೆ. ಈ ಪರಿಣಾಮವು ಪ್ರತಿಕೂಲವಾದಾಗ ಅಳ್ಳೆದೆಯವರು ತಮ್ಮ
ಬಯಕೆಯನ್ನು ಬದಿಗೊತ್ತಿ ಹಳಹಳಿಸುತ್ತ ಕಾಲಕಳೆಯುತ್ತಾರೆ; ದಿಟ್ಟರೂ
ಎದೆಗಾರರೂ ತಮ್ಮ ಹೆಬ್ಬಯಕೆ (ಮಹತ್ವಾಕಾಂಕ್ಷೆ) ಯನ್ನು ಈಡೇರಿಸಿ
ಕೊಳ್ಳುವುದಕ್ಕೆ ತಮ್ಮ ಸರ್ವಸ್ವವನ್ನು ವೆಚ್ಚಮಾಡಿ, ತಮ್ಮ ದೀರ್ಘಪ್ರಯತ್ನ
ದಿಂದಲೂ ದೃಢನಿಶ್ಚಯದಿಂದಲೂ ಜನರನ್ನು ಬೆರಗುಮಾಡುತ್ತಾರೆ.

ಸಿದ್ದಿಯರನ್ನು ತನ್ನ ಕಯ್ಕೆಳಗಿನವರಾಗಿ ಮಾಡಿಕೊಂಡು ಕಡ
ಲೊಡೆತನವನ್ನು ದೊರಕಿಸುವುದಕ್ಕೋಸ್ಕರ ಎಡೆಬಿಡದೆ ೧೨ ವರ್ಷ ತಾನು
ಮಾಡಿದ ಎಲ್ಲ ಪ್ರಯತ್ನಗಳು ನಿಷ್ಫಲವಾದ್ದನ್ನು ಕಂಡು, ನಮ್ಮ ಚರಿತ್ರ
ನಾಯಕನು ಎದೆಗುಂದಲಿಲ್ಲ. ಹಿಂದೆ ನೂರಾರು ವರುಷ ಈ ಖಂಡದಲ್ಲಿ
ಅತಿವೈಭವದಿಂದ ಆಳಿದ ಸಾರ್ವಭೌಮರಿಗೆ ಹೊಳೆಯದ ಒಂದು ಅಪೂರ್ವ
ವಾದ ಹರವನ್ನು ಅವನು ಹುಡುಕಿ ತೆಗೆದನು. ಸ್ವದೇಶೀಯರಿಗೆ ನೌಕಾ

ವಿದ್ಯೆಯನ್ನು ಕಲಿಸಿ, ಹಡಗುಪಡೆಯನ್ನು ಕಟ್ಟಿ, ಪಡವಣ ದಂಡೆಯನ್ನು ಕಾಪಾಡುವುದಲ್ಲದೆ ಪರದೇಶಗಳೊಡನೆ ವ್ಯಾಪಾರ ಮಾಡುವುದೇ ಈ ಅಮೋಘವಾದ ಹಂಚಿಕೆಯಾಗಿತ್ತು. ಸಿವಾಜಿಯು ಸ್ಥಾಪಿಸಿದ ಹಡಗು ಪಡೆಯನ್ನು ಅವನ ಹಿಂದಿನವರು ಬೆಳಿಸಿ ಬಲಾಢ್ಯವಾಗಿ ಮಾಡಿದ್ದರೆ, ಭಾರತೀಯರು ಪಾರತಂತ್ರ್ಯದುಃಖಕ್ಕೆ ಎಂದೂ ಒಳಗಾಗುತ್ತಿದ್ದಿಲ್ಲೆಂದು ಎದೆತಟ್ಟಿ ಹೇಳಬಹುದು.

ನಮ್ಮ ಚರಿತ್ರನಾಯಕನಂತಹ ಮಹಾಪುರುಷರು ತಾವು ಮಾಡ ಲೆಳಸುವ ಕೆಲಸಕ್ಕೆ ಬರಬಹುದಾದ ಎಡರುಗಳನ್ನು ಎಂದೂ ಲೆಕ್ಕಿಸುವು ದಿಲ್ಲೆಂಬ ಸಂಗತಿಯು ಸುಪ್ರಸಿದ್ಧವಾಗಿರುತ್ತದಷ್ಟೆ.*ಸನ್ಯಾಸಿಯ ಮದುವೆಗೆ ಜುಟ್ಟುಜನಿವಾರಗಳು ಬೇಕಾಗುವಂತೆ ಹಡಗುಪಡೆ ಕಟ್ಟಿಸಲಿಕ್ಕೆ ತಕ್ಕ ಮರವೂ ಕುಶಲರಾದ ಕೆಲಸಗಾರರೂ ಬೇಕಾದರು. ಸಿವಾಜಿಯ ಆಳು ಗಳು ಬೇರೆ ಬೇರೆ ನಾಡುಗಳಿಗೆ ಹೋಗಿ ಬೇಕಾದ ಮರವನ್ನು ಹುಡುಕಿ ತಂದರು; ಸಾಷ್ಟಿ, ವಸಯಿ, ಗೋವೆ ಪ್ರಾಂತಗಳಿಗೆ ಹೋಗಿ ಬೇಡಿದಷ್ಟು ಸಂಬಳವನ್ನು ಕೊಡಲೊಪ್ಪಿ, ನೌಕೆಯಲ್ಲಿ ನಿಪುಣರಾದ ಕೆಲಸಗಾರರನ್ನು ಕರೆತಂದರು. ಕುಲಾಬಾ ಬಂದರದಲ್ಲಿ ಹಡಗುಕಟ್ಟುವ ದೊಡ್ಡ ಕಾರ ಖಾನೆಯು ಎದ್ದಿತು. ಸಾವಿರಾರು ಜನರು ದುಡಿಯುತ್ತಿದ್ದರು. ಹೊಸ ಹಡಗುಗಳನ್ನು ಕಟ್ಟುವ ಕೆಲಸವೂ ಹಳೆ ಹಡಗುಗಳನ್ನು ದುರಸ್ತಿಮಾಡುವ ಕೆಲಸವೂ ಎಡೆಬಿಡದೆ ನಡೆಯಿತು. ಒಟ್ಟು ಸುಮಾರು ೧೦ ಲಕ್ಷ ರೂಪಾಯಿ ಗಳ ವೆಚ್ಚದಿಂದ ೬೦೦ ಸಣ್ಣ ದೊಡ್ಡ ಹಡಗುಗಳು ಸಿದ್ಧವಾದವು. ಅವುಗ ಳೊಳಗೆ ಯುದ್ಧದ ಹಡಗುಗಳು ೪೦೦ ಮತ್ತು ವ್ಯಾಪಾರದ ಹಡಗುಗಳು ಸುಮಾರು ೨೦೦ ಇದ್ದವು. ಸಿವಾಜಿಯು ಯುದ್ಧದ ಹಡಗುಗಳನ್ನು ಇಬ್ಭಾ ಗಿಸಿ, ಒಂದು ಭಾಗದ ಮೇಲೆ ದರಿಯಾ (ಪಾರ್ಸಿ = ಸಮುದ್ರ) ಸಾರಂಗ ನೆಂಬ ಮುಸಲ್ಮಾನನನ್ನೂ ಮತ್ತೊಂದು ಭಾಗದ ಮೇಲೆ ಮಾಯ (ಅರಬಿ =

---

* ಜರೆಯಲಿ ಸುನೀತಿನಿಪುಣರ್ ಸ್ತುತಿಸಲ್ಕೆ ಮೇಣ್ ।
ಸಿರಿಬರಲಿ ಬಾರದಿರೆ ಪೋಗಲಿ ಯಥೇಷ್ಟಮ್ ॥
ಬರಲಿ ಮೃತಿಯಿಂದೆಯಥವಾಯುಗದ ಮೇಲೇ ।
ಸರಿಸನಡಿಯಮ್ ಸುಮತಿ ನೀತಿಪಥದಿಂದ ॥

ನೀರು) ನಾಯಕನೆಂಬ ಬಂಡಾರಿಯನ್ನೂ ಮುಖ್ಯಸ್ಥರಾಗಿ ನಿಯಮಿಸಿ, ಮಕ್ಕಾ ಯಾತ್ರಿಕರನ್ನೂ ವ್ಯಾಪಾರ ಹಡಗುಗಳನ್ನೂ ಹಿಡಿದು, ನೆಲದ ಮೇಲೆ ಪೊಳಲುಸುಲಿಗೆಯನ್ನು ಆರಂಭಿಸಿದಂತೆ, ನೀರ ಮೇಲೆ ಕಡಲು ಸುಲಿಗೆಯನ್ನು ಆರಂಭಿಸಿದನು; ಮತ್ತು ಸುವರ್ಣದುರ್ಗ, ವಿಜಯದುರ್ಗ, ರಾಜಾಪುರ, ಜೈತಾಪುರ ಮುಂತಾದ ತನ್ನ ವಶದಲ್ಲಿದ್ದ ಎಂಟೊಂಬತ್ತು ಬಂದರಗಳಿಂದ ಅಕ್ಕಿ, ಅಡಕೆ, ಮೆಣಸು, ಏಲಕ್ಕಿ ಮುಂತಾದ ಸರಕು ತುಂಬಿದ ಹಡಗುಗಳನ್ನು ಇರಾಣ, ಮಕ್ಕಾ, ಬಸ್ರಾ ಮೊದಲಾದ ಸ್ಥಳ ಗಳಿಗೆ ವ್ಯಾಪಾರಕ್ಕೋಸ್ಕರ ಪ್ರತಿವರ್ಷ ಕಳುಹತೊಡಗಿದನು. ಈ ವ್ಯಾಪಾರ ಸುಲಿಗೆಗಳಿಂದ ಬಂದ ಹೇರಳ ಹಣವನ್ನು ಅವನು ತನ್ನ ಹಡಗುಪಡೆ ಯನ್ನು ಹೆಚ್ಚಿಸಲಿಕ್ಕೆ ಉಪಯೋಗಿಸುತ್ತಿದ್ದನೆಂದು ಮರಾಟೆ ಬಖರಕಾರರು ಬರೆಯುತ್ತಾರೆ (೧೬೬೦).

ನಮ್ಮ ಚರಿತ್ರನಾಯಕನಿಗೆ ಕಡಲ್ಪಯಣವು ಹೆಚ್ಚಾಗಿ ಸೇರುತ್ತಿದ್ದಿ ಲ್ಲೆಂದು ಹೇಳಬಹುದು. ಏಕೆಂದರೆ ಅವನು ಒಮ್ಮೆ ಮಾತ್ರ ತನ್ನ ಹಡಗು ಪಡೆಯೊಡನೆ ಹೋದ ಉದಾಹರಣೆಯು ದೊರೆಯುತ್ತದೆ. ೧೬೬೫ ಫೇಬ್ರುವರಿಯಲ್ಲಿ ಅವನು ೮೫ ಹಡಗುಗಳೊಡನೆ ಮಾಲವಣ ಬಂದರ ದಿಂದ ಹೊರಟು, ಗೋವೆಯನ್ನು ದಾಟಿ, ಆ ಕಾಲಕ್ಕೆ ಸಂಪತ್ತಿಯುಳ್ಳ ಬಸರೂರನ್ನು ಲೂಟಮಾಡಿ, ಗೋಕರ್ಣಕ್ಕೆ ಹೋಗಿ ಶ್ರೀಮಹಾಬಲೇಶ್ವರ ನನ್ನು ಶಿವರಾತ್ರಿಯ ದಿವಸ (೫ ಫೇಬ್ರುವರಿ) ಭಕ್ತಿಪೂರ್ವಕವಾಗಿ ಪೂಜಿಸಿ, ಅಲ್ಲಿಂದ ಹೊರಟು ಅಂಕೋಲೆಯ ಮಾರ್ಗವಾಗಿ ಕಾರವಾರಕ್ಕೆ ಬಂದು, ಅಲ್ಲಿ ಆಗ ತಾನೇ ಒಬ್ಬ ಅದಿಲ್ಶಾಹಿಯ ಶೂರ ದಳವಾಯಿಯು ಬಂದುದ ರಿಂದ ಅವನನ್ನು ಕೆಣಕದೆ, ಬೆದರಿಕೆಹಾಕಿ ಇಂಗ್ಲಿಷ ವರ್ತಕರಿಂದ ೧೧೨ ಪೌಂಡು ಕಪ್ಪುಗಾಣಿಕೆಯಾಗಿ ತೆಗೆದುಕೊಂಡು, ಮೊಗಲರು ಪುರಂದರ ಗಡವನ್ನು ಮುತ್ತಿದರೆಂದು ಸುದ್ದಿ ಬಂದುದರಿಂದ ಲಗುಬಗೆಯಿಂದ ತನ್ನ ರಾಜ್ಯಕ್ಕೆ ತೆರಳಿದನು (ಎಪ್ರಿಲ). ಸಮುದ್ರಯಾನವು ತನ್ನ ಪ್ರಕೃತಿಗೆ ತಡೆಯದ್ದರಿಂದಲೋ ಹಡಗುಗಳ್ಳತನವು ಹೆಚ್ಚು ಲಾಭಕರವಲ್ಲೆಂದು ತೋರಿದ್ದರಿಂದಲೋ ಆ ಕಾಲಕ್ಕೆ ಹಡಗಿನ ವೇಗವು ಗಾಳಿಯಮೇಲೆ ಅವ

ಲಂಬಿಸಿದ್ದುದರಿಂದ ಬೇಕಾದಾಗ ಬೇಕಾದಲ್ಲಿ ಹೋಗುವ ತನ್ನ ಸ್ವಾತಂತ್ರ್ಯವು ಕಡಮೆಯಾಗುವುದೆಂಬ ಹೆದರಿಕೆಯಿಂದಲೋ ಅವನು ಮುಂದೆ ಕಡಲ್ಪಯಣವನ್ನು ಎಂದೂ ಮಾಡಲಿಲ್ಲ.

ಜಂಜೀರೆಯ ಹಬಸಿಯರನ್ನು ಹಣಿಯುವುದಕ್ಕೋಸ್ಕರ ಸಿವಾಜಿಯು ಹಡಗುಪಡೆಯನ್ನು ಕಟ್ಟಿಸಿದನಷ್ಟೇ. ಆದರೆ ಈ ಪಡೆಯು ಮಾಡಿದ ದೊಡ್ಡ ಕೆಲಸಗಳ ಸವಿಸ್ತಾರ ವರ್ಣನೆಯು ಮರಾಟಿ ಬಖರಗಳಲ್ಲಿ ದೊರೆಯುವುದಿಲ್ಲ. ಆದಕಾರಣ ಪರದೇಶೀಯ ವರ್ತಕರು ಬರೆದಿಟ್ಟ ಅಲ್ಪಸ್ವಲ್ಪ ಸಂಗತಿಗಳಿಂದ ಮಾತ್ರ ನಾವು ತೃಪ್ತರಾಗಲಿಕ್ಕೆ ಬೇಕು. ಸುರತದಲ್ಲಿದ್ದ ಇಂಗ್ಲಿಷ ವರ್ತಕರ ಕಾಗದಪತ್ರಗಳಲ್ಲಿ ಮರಾಟರ ಹಡಗುಪಡೆಯ ಸಾಮರ್ಥ್ಯದ ಬಗ್ಗೆ ಪಾಶ್ಚಿಮಾತ್ಯರ ಅಭಿಪ್ರಾಯವಿರುತ್ತದೆ. ಮರಾಟರ ಹಡಗುಗಳು ಸಣ್ಣವೂ ದುರ್ಬಲವೂ ಇದ್ದುದರಿಂದ ಇಂಗ್ಲಿಷರ ಒಂದು ಹಡಗು ಮರಾಟರ ೧೦೦ ಹಡಗುಗಳನ್ನು ಸುಲಭವಾಗಿ ನಾಶಮಾಡಬಹುದಾಗಿತ್ತಂತೆ. ಇದಲ್ಲದೆ ಅವರ ಹಡಗುಗಳಲ್ಲಿ ತೋಪುಗಳ ಕೊರತೆಯು ಬಹಳವಾಗಿತ್ತು. ೧೬೬೪ ರಲ್ಲಿ ಸಿವಾಜಿಯು ೬೦ ಯುದ್ಧದ ಹಡಗುಗಳನ್ನು ಸಜ್ಜುಮಾಡುತ್ತಾನೆಂಬ ಸುದ್ದಿಯು ಸುರತಕ್ಕೆ ಬಂತು. ಆಗ ಇಂಗ್ಲಿಷರು ಹಲವು ತರ್ಕಗಳನ್ನು ಮಾಡಿದರು. ಸಿವಾಜಿಯು ಅಹಮ್ಮದಾಬಾದಿನ ಮೇಲೆ ದಂಡೆತ್ತಿಹೋಗಬಹುದೆಂದೂ ಇರಾಣಬಸ್ರಾಗಳಿಂದ ತಿರುಗಿ ಬರುತ್ತಿದ್ದ ಮೊಗಲರ ವ್ಯಾಪಾರದ ಹಡಗುಗಳನ್ನು ಸುಲಿಯುತ್ತಾನೆಂದೂ ಶಂಕಿಸಿದರು. ಆದರೆ ಇವೆರಡನ್ನೂ ಮಾಡದೆ ಕನ್ನಡ ಪ್ರಾಂತವನ್ನು ಒಳನುಗ್ಗಲಿಕ್ಕೆ ಕಳುಹಿದ ತನ್ನ ದಂಡಿಗೆ ನೆರವಾಗುವುದಕ್ಕೆ ಸಿವಾಜಿಯು ಆ ಹಡಗುಪಡೆಯನ್ನು ಭಟಕಳಕ್ಕೆ ಕಳುಹಿಬಿಟ್ಟನು. ಮರುವರುಷ ಸಿವಾಜಿಯು ಮಾಡಿದ ಕಡಲ್ಪಯಣವನ್ನು ಮೇಲೆ ವಿವರಿಸಿರುತ್ತೇವೆ.

ಮುಂದೆ ಮೂರು ವರುಷ ಒಂಬತ್ತು ತಿಂಗಳುಗಳ ವರೆಗೆ ಮರಾಟರ ಹಡಗುಪಡೆಯು ಏನುಮಾಡುತ್ತಿತ್ತೆಂಬುದು ಗೊತ್ತಾಗುವುದಿಲ್ಲ. ಈ ಕಾಲವು ನಮ್ಮ ಚರಿತ್ರನಾಯಕನ ಅತಿವಿಪತ್ತಿಯ ಕಾಲವಾಗಿತ್ತು. ೧೬೬೫ ರಲ್ಲಿ ರಾಜಾ ಜಯಸಿಂಗನು ಸಿವಾಜಿಯ ಸರಕುಕಟ್ಟಿ ದಿಗ್ಬಂಧನ

ಮಾಡಿ ಪುರಂದರಗಡವನ್ನು ಹಿಡಿದುಕೊಂಡು ಅವನನ್ನು ಶರಣು ಬರ ಮಾಡಿಕೊಂಡನು; ಮರುವರುಷ ಔರಂಗಜೇಬ ಬಾದಶಹನನ್ನು ಕಾಣಲಿಕ್ಕೆ ಆಗ್ರಾಕ್ಕೆ ಹೋಗಿ ಅವನ ಕೋಪಕ್ಕೊಳಗಾಗಿ ಕಾವಲಿನಲ್ಲಿರಿ ಸಲ್ಪಟ್ಟು ಭಗೀರಥ ಪ್ರಯತ್ನದಿಂದ ಪಾರಾಗಿ ಹೊರಬಿದ್ದು ತೀರ್ಥಾಟನ ವನ್ನು ಮಾಡಿಕೊಂಡು ತನ್ನ ರಾಜಧಾನಿಗೆ ಸುರಕ್ಷಿತವಾಗಿ ತಿರುಗಿಬಂದನು. ಮುಂದೆ ಎರಡು ವರುಷ ಬಾದಶಹ ಆದಿಲ್ಶಹರೊಡನೆ ಹೋರಾಡಿ ತನ್ನ ಹೋದ ರಾಜ್ಯವನ್ನೆಲ್ಲ ತಿರುಗಿ ದೊರಕಿಸಿ, ತನಗೆ ಅನುಕೂಲರಾದ ಮುಜಮುಶಹ ಯಶವಂತಸಿಂಗರ ಸಾಹಾಯ್ಯದಿಂದ ಮೊಗಲಬಾದಶಹ ನೊಡನೆ ಒಪ್ಪಂದ ಮಾಡಿಕೊಂಡನು (ಸೇ ೧೬೬೮).

ಮರುವರುಷ ನಮ್ಮ ಚರಿತ್ರನಾಯಕನಿಗೆ ಕೆಲಮಟ್ಟಿಗೆ ಬಿಡುವು ದೊರೆಯಿತು. ಆದ್ದರಿಂದ ಅವನ ಮನಸ್ಸಿನಲ್ಲಿ ಬೇರುಗೊಂಡ ಕಡಲೊಡೆ ತನದ ಹೆಬ್ಬಯಕೆಯು ಚಿಗಿಯಿತು. ಆದಿಲ್ಶಹ ಮೊಗಲಬಾದಶಹರಿಗೆ ಮರಾಟರ ದಾಳಿಯನ್ನು ನಿಲ್ಲಿಸುವುದು ಎಷ್ಟು ದುಸ್ಸಾಧ್ಯವಾಗಿತ್ತೋ ಅಷ್ಟೇ ಹಬಸಿಯರ ಹಾವಳಿಯನ್ನು ಅಡಗಿಸುವುದು ಸಿವಾಜಿಗೆ ಬಲುಬಿರಿಯಾಗಿತ್ತು. ಈ ಕಾರಣದಿಂದ ಮರಾಟಿ ಬಖರಕಾರರು ಜಂಜಿರೆಯ ಹಬಸಿಯರು ಸಿವಾಜಿಯ ರಾಜ್ಯಕ್ಕೆ ಹೆಗ್ಗಣದಂತೆ ಹತ್ತಿ ಕಾಡುತ್ತಿದ್ದರೆಂದು ಸ್ಪಷ್ಟವಾಗಿ ಬರೆದಿರುತ್ತಾರೆ. ಅವರನ್ನು ಇಲ್ಲದಂತೆ ಮಾಡುವ ಉದ್ದೇಶದಿಂದ ಸಿವಾ ಜಿಯು ತನ್ನ ಹಡಗುಪಡೆಯನ್ನೂ ದಂಡನ್ನೂ ತೋಪುಗಳನ್ನೂ ಸಜ್ಜು ಮಾಡಿಕೊಂಡು ನೆಲದಿಂದಲೂ ನೀರಿನಿಂದಲೂ ಜಂಜೀರೆಯನ್ನು ಮುತ್ತಿ ದನು (೧೬೬೯). ಹೊರಗಿನಿಂದ ಅನ್ನಸಾಮಗ್ರಿಗಳು ಬಾರದ್ದರಿಂದ ಜಂಜೀರೆಯ ಮುಖ್ಯಸ್ಥನಾದ ಫಾತಖಾನನಿಗೆ ಎದ್ದುಲಗಟ್ಟೆ ಬಂತು. ಅದೇವರುಷ ಅಕ್ಟೋಬರ ತಿಂಗಳಲ್ಲಿ ತಾನೂ ತನ್ನ ಜನರೂ ಸಾಯುವ ವರೆಗೆ ಜಂಜೀರೆಯನ್ನು ಬಿಡುವುದಿಲ್ಲೆಂದು ಅವನು ಇಂಗ್ಲಿಷರಿಗೆ ಪತ್ರ ಬರೆದನು. ಮರುವರುಷ ಮುತ್ತಿಗೆಯು ಜೋರಾದ್ದರಿಂದಲೂ ಸಿವಾಜಿಯು ಹೇರಳ ಲಂಚವನ್ನೂ ದೊಡ್ಡ ಜಹಗೀರನ್ನೂ ಕೊಡಲೊಡಂಬಟ್ಟುದ ರಿಂದಲೂ ಅವನು ಜಂಜೀರೆಯನ್ನು ಸಿವಾಜಿಗೆ ಒಪ್ಪಿಸಲಿಕ್ಕೆ ಸಮ್ಮತಿಸಿದನು.

ಸಿವಾಜಿಯಂತಹ ಪರಮತಸ್ಥನ ಕಯ್ಯಲ್ಲಿ ಜಿಂಜೀರೆಯು ಹೋಗುವುದು ಅಸಹ್ಯವಾದ್ದರಿಂದ, ಫಾತಖಾನನ ಆಳುಗಳಾದ ಸಿದ್ದಿಸಂಬಳ, ಸಿದ್ದಿ ಕಾಸೀಮ, ಸಿದ್ದಿಖೈರಿಯಾತ ಎಂಬ ಮುವ್ವರು ತಮ್ಮ ಒಡೆಯನನ್ನು ಹಿಡಿದು ಸೆರೆಯಲ್ಲಿಟ್ಟು, ಜಿಂಜೀರೆಯು ತಮ್ಮ ಹಡಗುಪಡೆಯ ಸ್ವಾಮಿತ್ವವನ್ನು ತೆಗೆದುಕೊಳ್ಳುವುದಕ್ಕೆ ಮೊಗಲಬಾದಶಹನಿಗೂ ಆದಿಲ್ಶಹನಿಗೂ ಹೇಳಿ ಕಳುಹಿದರು. ಆದಿಲ್ಶಾಹಿ ಸರಕಾರವು ವಾನವಾ ಮಾಡುತ್ತ ಕುಳಿತಿರು ವಾಗ ಮೊಗಲಬಾದಶಹನು ಸ್ವಾಮಿತ್ವವನ್ನು ವಹಿಸಿ, ಸಿದ್ದಿಸಂಬಳ ನನ್ನು ನೌಕಾಧಿಪತಿಯಾಗಿ ನಿಯಮಿಸಿ, ಸಿದ್ದಿಕಾಸೀಮನನ್ನು ಜಿಂಜೀರೆಯ ಮುಖ್ಯಸ್ಥನಾಗಿಯೂ ಸಿದ್ದಿಖೈರಿಯಾತನನ್ನು ಆ ಸಂಸ್ಥಾನಕ್ಕೆ ಸೇರಿದ ಊರು ಗಳ ಸುಬೇದಾರನಾಗಿಯೂ ಮಾಡಿದನು. ಜಿಂಜೀರೆಯ ಮುಖ್ಯಸ್ಥನಿಗೆ **ಯಾಕುತ್ಖಾನ**ನೆಂಬ ಬಿರುದು ಕೊಡಲ್ಪಟ್ಟಿತು. ಈ ಮೇರೆಗೆ ಸಿದ್ದಿಯರ ಹಡಗುಪಡೆಯೂ ಜಿಂಜೀರಾ ಸಂಸ್ಥಾನವೂ ಆದಿಲ್ಶಾಹಿಯ ಕಯ್ಬಿಟ್ಟು ಮೊಗಲ್ಬಾದಶಹನಿಗೆ ಸೇರಿದ್ದರಿಂದ, ಸಿದ್ದಿಯರು ಹೆಚ್ಚು ಕಸುವುಳ್ಳವರಾಗಿ ಮರಾಟರಿಗೆ ಕಡೆತನಕ ಮುಳವಾದರು (೧೬೭೧).

ಇತ್ತ ಫಾತಖಾನನನ್ನು ಒಡೆದುಕೊಳ್ಳುವ ಪ್ರಯತ್ನವು ನಡೆದಾಗ, ನಮ್ಮ ಚರಿತ್ರನಾಯಕನು ಅತ್ತ ಸುರತಕೋಟೆಯನ್ನು ಹಿಡಿದುಕೊಳ್ಳ ಲಿಕ್ಕೆ ಒಳಸಂಚು ನಡಿಸಿದ್ದನು. ಸುರತದ ಕಿಲ್ಲೆದಾರನು ಹೇರಳ ಲಂಚ ವನ್ನು ತೆಗೆದುಕೊಂಡು, ೫ ನವಂಬರ ೧೬೭೦ ಇಸ್ವಿಯ ದಿವಸ ಸುರತ ಕೋಟೆಯನ್ನು ಒಪ್ಪಿಸುವೆನೆಂದು ಗುಪ್ತವಾಗಿ ಹೇಳಿಕಳುಹಿದನು. ಆದ್ದ ರಿಂದ ಸಿವಾಜಿಯು ೧೬೦ ಹಡಗುಗಳನ್ನು ನಂದಗಾವ ಬಂದರದಲ್ಲಿ ಕೂಡಿ ಹಾಕಿ ಅವುಗಳಮೇಲೆ ೩,೦೦೦ ದಂಡನ್ನು ಸುರತಬಂದರಕ್ಕೆ ಕಳುಹಿ, ತಾನು ೧೦,೦೦೦ ರಾಹುತರನ್ನೂ ೨೦,೦೦೦ ಕಾಲಾಳುಗಳನ್ನೂ ತೆಗೆದುಕೊಂಡು ಅತ್ತಕಡೆಗೆ ಹೊರಟನು. ದಾರಿಯಲ್ಲಿ ಸುರತದ ಕಿಲ್ಲೆದಾರನು ಮೋಸ ಮಾಡಲೆಳಸುತ್ತಾನೆಂಬ ವಿಶ್ವಸನೀಯವಾದ ಸುದ್ದಿಯು ಬಂದುದರಿಂದ ತನ್ನ ಹಡಗುಪಡೆಗೆ ತಿರುಗಿ ಹೋಗಲಿಕ್ಕೆ ಹೇಳಿಕಳುಹಿ, ತಾನು ದಂಡಿ ನೊಡನೆ ತಿರುಗಿ ವರ್ಹಾಡ ಖಾನದೇಶಪ್ರಾಂತಗಳನ್ನು ಸುಲಿಯಲಿಕ್ಕೆ ಹೊರ ಟನು (೨೬ ನವಂಬರ). ತಿರುಗಿ ಬರುವಾಗ ಹಡಗುಪಡೆಯು ಡಚ್ಚರ

ದೊಂದು ಹಡಗನ್ನು ಹಿಡಿದು, ಅವರೊಡನೆ ಕಾದಿ ಸೋತು ೧೨ ಹಡಗು ಗಳನ್ನು ಕಳಕೊಂಡು ಹಾಗೂ ಹೀಗೂ ಮಾಡಿ ಬಂದು ದಾಭೋಳ ಬಂದರ ವನ್ನು ಸೇರಿತು. ಹೀಗೆ ಸಮುದ್ರದಂಡಯಾತ್ರೆಯು ಧೂಪಾರತಿಯಾಟ ದಂತಾಯಿತು (ದಶಂಬರ ೧೬೭೦).

ಜಂಜೀರೆಯ ಮುಖ್ಯಸ್ಥನಾದ ಯಾಕುತ್‌ಖಾನನು (ಸಿದ್ದಿ ಕಾಸೀ ಮನು) ಚತುರನೂ ದಕ್ಷನೂ ಕಡಿವನೂ ಬಡವರ ಬೆನ್ನುಕಟ್ಟುವವನೂ ಆಗಿದ್ದನು. ಅವನು ಕೋಟೆಯನ್ನು ಭದ್ರಪಡಿಸಿ, ಹಡಗುಪಡೆಯನ್ನು ಹೆಚ್ಚಿಸಿ, ಸಿಕ್ಕ ಹಡಗುಗಳನ್ನು ಹಿಡಿದು, ಮರಾಟರ ಚಂಡು ಹಾರಿಸಿ, ಅವು ಗಳನ್ನು ಸುರತಕ್ಕೆ ಕಳಿಸಿಕೊಡುತ್ತಿದ್ದನು. ಅವನು ದಂಡರಾಜಾಪುರದ ಕೋಟೆಯನ್ನು ಹಿಡಿದುಕೊಳ್ಳಲಿಕ್ಕೆ ಹೊಂಚುಹಾಕಿಕೊಂಡು ಕುಳಿತ್ತಿದ್ದನು. ಆ ವರ್ಷದ ಹೋಳಿ ಹುಣ್ಣಿವೆಯ ರಾತ್ರಿಯಲ್ಲಿ ಕಾವಲುಗಾರರು ಸರಾಯಿ ಕುಡಿದು ಮದೋನ್ಮತ್ತರಾದಾಗ, ಸಿದ್ದಿ ಖೈರಾಯಿತನು ೫೦೦ ದಂಡಿ ನೊಡನೆ ಬಂದು ಗದ್ದಲವೆಬ್ಬಿಸಲು ಎಲ್ಲ ಮರಾಟರು ಹುರ್ಯೊ ಎಂತ ಅವರ ಮೇಲೆ ಕಾಣಿಸಿಕೊಳ್ಳಲು, ಅದೇ ಸಮಯಕ್ಕೆ ಯಾಕುತ್‌ಖಾನನು ತಾನು ಗುಪ್ತವಾಗಿ ಬಂದರದಲ್ಲಿ ತಂದಿಟ್ಟ ೪೦ ಹಡಗುಗಳ ನೆರವಿನಿಂದ ಗೋಡೆ ಯನ್ನೇರಿ ಒಳಹೊಕ್ಕು ಮದ್ದಿನ ಕೋಣೆಗೆ ಬೆಂಕಿ ಹಚ್ಚಿಸಿ, ಎದುರಾದ ವರನ್ನು ಕತ್ತಿಯಿಂದ ಸವರಿ, ಕೋಟೆಯನ್ನು ಹಿಡಿದುಕೊಂಡನು(ಮಾರ್ಚ ೧೬೭೧).

ಈ ಮೇರೆಗೆ ಯಾಕುತ್‌ಖಾನನು ಜಂಜೀರೆಯನ್ನು ಹಿಡಿದುಕೊಳ್ಳ ಲಿಕ್ಕೆ ಹಂಬಲಿಸುತಿದ್ದ ಸಿವಾಜಿಯ ಕಯ್ಯಿಂದ ದಂಡರಾಜಾಪುರವನ್ನು ಕಿತ್ತಿಕೊಂಡು, ಅಷ್ಟರಿಂದಲೇ ತಣಿಯದೆ, ನೆರೆಯಲ್ಲಿದ್ದ ಮತ್ತೆ ಏಳು ಮರಾ ಟರ ಕೋಟೆಗಳನ್ನು ಹಿಡಿದುಕೊಂಡನು. ಅವನ ಕಲಿತನಕ್ಕೆ ಹೆದರಿ ೬ ಕೋಟೆಗಳು ಅವನು ಬಂದ ಕೂಡಲೆ ಬಾಗಿಲು ತೆರೆದವು. ೭ ನೆಯ ಕೋಟೆಯ ಕಾವಲುಗಾರರು ಅದನ್ನು ಕಾಪಾಡುವುದಕ್ಕೆ ಕಾದಿದ್ದರಿಂದ ಅವನು ಸಿಟ್ಟಿಗೆದ್ದು ಕೋಟೆಯನ್ನು ಹಿಡಿದುಕೊಂಡು ಕಾವಲುಗಾರರನ್ನು ಕ್ರೂರತನದಿಂದ ಕೊಲ್ಲಿಸಿ, ಸೆರೆಸಿಕ್ಕ ಹುಡುಗರ ಮತ್ತು ಹೆಂಗಸರ ಜಾತಿ

ಯನ್ನು ಕೆಡಿಸಿಬಿಟ್ಟನು. ಈ ಸುದ್ದಿಯನ್ನು ಕೇಳಿ ನಮ್ಮ ಚರಿತ್ರನಾಯಕನ ಹೊಟ್ಟೆಯೊಳಗೆ ಸ್ವಾಭಾವಿಕವಾಗಿ ಉರಿಬಿದ್ದಿತು. ಆದ್ದರಿಂದ ಮುಂದೆ ಕೆಲವು ವರ್ಷಗಳವರೆಗೆ ಮರಾಟ ಸಿದ್ದಿಯರು ತಮ್ಮ ತಮ್ಮ ಕಯ್ಯಲ್ಲಿ ಸಿಕ್ಕ ಹಗೆಗಳನ್ನು ಅತಿ ಕ್ರೂರತನದಿಂದ ಕೊಲ್ಲಿಸ ತೊಡಗಿದರು.

ಇಬ್ಬರ ನ್ಯಾಯ, ಮತ್ತೊಬ್ಬರಿಗಾಯ ಎಂಬ ಗಾದೆಯಂತೆ, ಮರಾಟ ಸಿದ್ದಿಯರೊಳಗೆ ಹುಟ್ಟಿದ ಕಡುಹಗೆತನವು ಪರದೇಶಗಳ ವರ್ತಕರಾದ ಇಂಗ್ಲಿಷ ಫ್ರೆಂಚ ಡಚ್ಚ ಜನರಿಗೆ ಹಿತಕರವಾಯಿತು. ಸಿವಾಜಿ ಯಾಕುತ್ ಖಾನರು ಅವರ ನೆರವನ್ನು ಬಯಸಿ, ಅವರಿಗೆ ಹೆಚ್ಚು ಅನುಕೂಲರಾಗಿ ನಡೆಯಲಾರಂಭಿಸಿದರು. ಅವರೊಳಗೆ ಇಂಗ್ಲಿಷರು ಹೆಚ್ಚು ವ್ಯವಹಾರ ಜ್ಞರೂ ಸ್ವಾರ್ಥಪರರೂ ಧೂರ್ತರೂ ಆದ್ದರಿಂದ ಅವರು ಬಹಿರಂಗವಾಗಿ ಯಾರ ಬೆನ್ನನ್ನು ಕಟ್ಟದೆ, ಮಹಾಕವಿ ಭವಭೂತಿಯು ಬಣ್ಣಿಸಿದ ವಿದ್ವಾಂಸ ನಂತೆ ಆದಷ್ಟು ಮಟ್ಟಿಗೆ ತಮ್ಮ ಹಿತವನ್ನು ಸಾಧಿಸಿಕೊಂಡರು.* ನೀರಿನಲ್ಲಿ ಸಿದ್ದಿಯರು ಬಲಿಷ್ಠರಾದ್ದರಿಂದ ಪರಕೀಯರ ನೆರವಿಲ್ಲದೆ ದಂಡರಾಜಾಪುರ ವನ್ನು ಹಿಡಿದುಕೊಳ್ಳುವುದು ಅಸಾಧ್ಯವೆಂದು ಸಿವಾಜಿಗೆ ತೋರಿತು. ಆದ್ದರಿಂದ ಅವನು ಇಂಗ್ಲಿಷರ ನೆರವನ್ನು ಬೇಡಲಿಕ್ಕೆ ತನ್ನೊಬ್ಬ ವಕೀಲ ನನ್ನು ಮುಂಬಯಿಗೆ ಕಳುಹಿದನು (ಸಪ್ಟಂಬರ ೧೬೭೧). ಅಲ್ಲಿಯ ವರ್ತ ಕರು ಸುರತದಲ್ಲಿದ್ದ ತಮ್ಮ ಸಂಘದ ಮುಖ್ಯಸ್ಥನಿಗೆ ಬರೆದುಕೊಂಡರು. ದಂಡರಾಜಾಪುರವು ಸಿವಾಜಿಯ ಕಯ್ಸೇರಿದರೆ ತಮ್ಮ ವ್ಯಾಪಾರಕ್ಕೆ ಹೆಚ್ಚು ತೊಂದರೆ ಉಂಟಾಗಬಹುದೆಂದು ಸೂಚಿಸಿದ್ದರಿಂದ ಮುಂಬಯಿಯವರು ಸಿವಾಜಿಗೆ ಸಾಹಾಯ ಮಾಡಲಿಕ್ಕೆ ಒಡಂಬಡಲಿಲ್ಲ.

ಅಂಜಬೇಡವೆಂದರೆ ಆನೆಯ ಬಲವೆಂಬ ಗಾದೆಯನ್ನು ಓದುವವರು ಕೇಳಿರಬಹುದು. ನಮ್ಮ ಚರಿತ್ರನಾಯಕನಿಗೆ ಯಾರ ನೆರವೂ ದೊರೆಯ ಲಿಲ್ಲ. ಆದರೂ ಅವನು ಸ್ವತಃ ಶೂರನಾಗಿದ್ದನು. ಜಂಜೀರೆಯ ಹಬಸಿ ಯರು ಅವನಿಗೆ ತುತ್ತಾಗಬಹುದಾಗಿತ್ತು. ಆದರೆ ಅವರಿಗೆ ಈಗ ಮುರ

---

* ವರಂ ವಿದ್ವಾನೇಕೋ ಸಕಲಮಭಿಸಂಧಾಯ ಕಪಟೈಃ ।
ತಟಸ್ಥಃ ಸ್ವಾನರ್ಥಾನ್ ಘಟಯತಿ ಚ ಮೌನಂ ಚ ಭಜತೆ॥ ಮಾಲತೀಮಾಧವ.

ಕಳಿಗೆ ಬಂದ ಆದಿಲ್ಶಾಹಿಯು ಬದಲು ಹಣವುಳ್ಳ ಮೊಗಲ ಬಾದಶಾಹಿಯ ಒತ್ತಾಸೆಯು ದೊರೆದಿತ್ತು. ಅಡಚಣಿ ಬಿದ್ದಾಗ ಮೊಗಲ ರಾಜ್ಯದಿಂದ ಕಾಳುಕಡಿಗಳನ್ನು ತರಲಿಕ್ಕೆ ಅನುಕೂಲವಾದ್ದರಿಂದಲೂ ಬೇಕಾದಾಗ ಮೊಗಲರದಂಡು ಹಡಗುಪಡೆಗಳ ನೆರವು ಸಿಕ್ಕುದ್ದರಿಂದಲೂ ಸಿದ್ದಿಯರು ಹೆಚ್ಚು ಗಂಡಾಗಿ ಮರಾಟರೊಡನೆ ಎಡೆಬಿಡದೆ ಕಾದ ತೊಡಗಿದರು. ಸಿದ್ದಿಯರು ಪಕ್ಕಡಿಯಲ್ಲಿ ಚುಚ್ಚಿದ ಮುಳ್ಳಿನಂತೆ ಸಿವಾಜಿಯನ್ನು ಅಳಕಿಸುತ್ತಿದ್ದುದರಿಂದ, ಅವನು ಅವರನ್ನು ಏನಾದರು ಮಾಡಿ ಅಡಗಿಸಬೇಕೆಂದು ದೃಢಸಂಕಲ್ಪವನ್ನು ಮಾಡಿದ್ದನು. ಬಡಿದಾಡುವವರಿಬ್ಬರು ಬೇಸರಿಯದಿದ್ದಾಗ ಜಗಳವು ಬಗೆ ಹರಿಯುವ (ತೀರುವ) ಬಗೆ ಎಲ್ಲಿ? ಆದ್ದರಿಂದ ಈ ಸಿದ್ದಿಮರಾಟರ ಹೊಡೆದಾಟವು ಸಿವಾಜಿಯು ಸತ್ತ ಬಳಿಕಾದರೂ ನಡೆಯಿತು.

ದಂಡರಾಜಾಪುರವನ್ನು ಹಿಡಿಮುಕೊಳ್ಳಬೇಕೆಂಬ ಹೃದ್ರೋಗವು ಸಿವಾಜಿಗೆ ಯಾವಾಗಲೂ ಹತ್ತಿತ್ತು. ಆದಕಾರಣ ಮರಾಟರು ಅದನ್ನು ಮುತ್ತಿಮುತ್ತಿದರು (೧೬೭೨). ಮೊಗಲಬಾದಶಹನು ಸಿದ್ದಿಯರಿಗೆ ನೆರವಾಗಲಿಕ್ಕೆ ತನ್ನ ೩೬ ಹಡಗುಗಳನ್ನು ಸುರತಬಂದರದಿಂದ ಕಳುಹಿದನು. ಈ ಹಡಗುಪಡೆಯು ಮರಾಟರ ಎಲ್ಲ ಬಂದರಗಳನ್ನು ಹೊಕ್ಕು ಸುಲಿದು ಸುಟ್ಟು, ೫೦೦ ವ್ಯಾಪಾರದ ಹಡಗುಗಳನ್ನು ಹಿಡಿದುಕೊಂಡಿತು. ಸಿವಾಜಿಯು ಹೆದರಿ ತನ್ನ ೫ ಯುದ್ಧದ ಹಡಗುಗಳನ್ನು ಮುಂಬಯಿ ಬಂದರದಲ್ಲಿಟ್ಟನು. ಮೊಗಲನೌಕೆಯು ಅವುಗಳನ್ನು ಬೇಡಲು, ಇಂಗ್ಲಿಷರು ತಮ್ಮ ರಾಜಾಪುರದ ಲುಕ್ಸಾನೆಯನ್ನು ತುಂಬಿಕೊಳ್ಳಲಿಕ್ಕೆ ಹಿಡಿದು ತಂದಿದ್ದೇವೆಂದು ಸುಳ್ಳು ಹೇಳಿ, ಅವುಗಳನ್ನು ಉಳಿಸಿದರು. ಈ ಕಾಲಕ್ಕೆ ಮೊಗಲ ಮರಾಟರಿಬ್ಬರೂ ಇಂಗ್ಲಿಷರ ನೆರವನ್ನು ಹಾರೈಸುತ್ತಿದ್ದರೂ ಅವರು ಯಾರ ಪಕ್ಷವನ್ನು ಬಹಿರಂಗವಾಗಿ ಹಿಡಿಯದೆ, ಇಬ್ಬರಿಗೂ ಅನುಕೂಲರಾಗಿರುವಂತೆ ನಟಿಸುತ್ತಿದ್ದರು. ಇಂಗ್ಲಿಷರಿಂದ ಮದ್ದುಗುಂಡುಗಳು ದೊರೆಯದ್ದರಿಂದ ಸಿವಾಜಿಯು ೮೦ ತೋಪುಗಳನ್ನೂ ೨,೦೦೦ ಮಣ ಮದ್ದು ಗುಂಡುಗಳನ್ನೂ ಫ್ರೆಂಚರಿಂದ ಗುಪ್ತವಾಗಿ ಕೊಂಡುಕೊಂಡನು (೧೬೭೩). ಸಿವಾಜಿಗೆ ನೌಕಾಸಾಹಾಯವು ಬೇಕಾಗಿದ್ದುದನ್ನೂ ಇಂಗ್ಲಿಷರು ನೆರವಾಗಲಿಕ್ಕೆ

ಒಡಂಬಡದ್ದನ್ನೂ ಕೇಳಿ. ಡಚ್ಚನೌಕಾಧಿಪನು ಅವನ ಬಳಿಗೆ ಒಬ್ಬ ವಕೀಲನನ್ನು ಕಳುಹಿದನು. ಮುಂಬಯಿಯನ್ನು ಹಿಡಿದುಕೊಳ್ಳಲಿಕ್ಕೆ ಸಿವಾಜಿಯು ದಂಡಿನ ಸಾಹಾಯವನ್ನು ಮಾಡಿದರೆ ಡಚ್ಚರು ಸಿದ್ದಿಯರ ವಿರುದ್ಧವಾಗಿ ನೌಕಾಸಾಹಾಯವನ್ನು ಮಾಡುವುದಕ್ಕೆ ಸಿದ್ಧರಾಗಿರುತ್ತಾರೆಂದು ಆ ವಕೀಲನು ತಿಳಿಸಿದನು (ಮಾರ್ಚ ೧೬೭೩). ಆದರೆ ಸಿವಾಜಿಯು ಆ ಮಾತಿಗೆ ಒಡಂಬಡಲಿಲ್ಲ.

೧೬೭೩ ಮೇ ತಿಂಗಳಿನಲ್ಲಿ ಸಿದ್ದಿಸಂಬಳನು ಮತ್ತೆ ೩೦ ಹಡಗುಗಳೊಡನೆ ಬಂದು ಮರಾಟರ ಬಂದರಗಳನ್ನೆಲ್ಲ ಸುಲಿದು, ವ್ಯಾಪಾರದ ಹಡಗುಗಳನ್ನು ಹಿಡಿದುಕೊಂಡು, ಮುಂಬಯಿಯ ಹತ್ತರಿದ್ದ ಪೇಣ ನಾಗೋಠಾನಾಗಳ ಜನರನ್ನು ಸೆರೆಹಿಡಿದೊಯ್ದನು. ಮರುವರುಷ ಸಿವಾಜಿಯ ನೌಕಾಧಿಕಾರಿಯಾದ ದೌಲತ್ತಖಾನನಿಗೂ ಸಿದ್ದಿಸಂಬಳನಿಗೂ **ಮುಚಕುಂದಿ** ಒತ್ತಿನಲ್ಲಿ ಒಂದು ಜಲಕಲಹವಾಯಿತು. ಅದರಲ್ಲಿ ಸಂಬಳನು ಸೋತು ಹರೀಶ್ವರ ಬಂದರಕ್ಕೆ ಓಡಿಹೋದನು. ಈ ಸಣ್ಣ ಗೆಲವಿನಿಂದ ಹೆಚ್ಚಿನ ಲಾಭವೇನಾಗಲಿಲ್ಲ.

ಸಿದ್ದಿಯರ ಕಡಲ್ಗಳ್ಳತನವು ತಡೆಯಲಾರದಷ್ಟು ಹೆಚ್ಚಿದ್ದರಿಂದ ರಾಜ್ಯಾಭಿಷಕ್ತನಾದ ಬಳಿಕ ಸಿವಾಜಿಯು ದಂಡರಾಜಾಪುರವನ್ನು ಹೇಗಾದರೂ ಮಾಡಿ ಹಿಡಿದುಕೊಳ್ಳಬೇಕೆಂದು ನಿಶ್ಚಯಿಸಿ, ಅದನ್ನು ಮುತ್ತಲಿಕ್ಕೆ ಹಡಗುಪಡೆಯನ್ನೂ ದಂಡನ್ನೂ ಕಳುಹಿದ್ದಲ್ಲದೆ, ತನ್ನ ನಾಡಿನ ಬೇರೆಬೇರೆ ಕೋಟೆಗಳಿಂದ ತೋಪುಗಳನ್ನು ತರಿಸಿದನು (ಸಪ್ಟಂಬರ ೧೬೭೫). ಆ ಸಮಯಕ್ಕೆ ಪ್ರತಿವರ್ಷದಂತೆ ಸಿದ್ದಿಯರ ಹಡಗುಪಡೆಯು ಸುಲಿಗೆಗೆ ಹೊರಟಿತು. ಮರಾಟರ ಹಡಗುಪಡೆಗಳು ವಿಜಯದುರ್ಗ ರಾಜಾಪುರಗಳ ಬಂದರಗಳಿಂದ ಅದನ್ನು ಬೆನ್ನಟ್ಟಲಿಕ್ಕೆ ಹೊರಬಿದ್ದವು. ಮರಾಟರು ಎಷ್ಟು ಪ್ರಯತ್ನ ಮಾಡಿದರೂ ಅವರ ಕಯ್ಗೆ ಸಿಕ್ಕದೆ, ಆ ಹಡಗುಪಡೆಯು ಜಂಜೀರಾ ಬಂದರವನ್ನು ತಿರುಗಿ ಹೊಕ್ಕಿತು. ಮುತ್ತಿಗೆಯು ಜೋರಿನಿಂದ ನಡೆಯಿತು. ಅಷ್ಟರಲ್ಲಿ ಸಿದ್ದಿಸಂಬಳನು ಮೊಗಲರ ಹಡಗುಪಡೆಯೊಡನೆ ಅಲ್ಲಿಗೆ ಬಂದುದರಿಂದ ಮರಾಟರು ಮುತ್ತಿಗೆಯನ್ನೆಬ್ಬಿಸಬೇಕಾಯಿತು (ದಶಂಬರ೧೬೭೫). ಮರುವರುಷ ಮರಾಟರು ಮತ್ತೆ ಮುತ್ತಿಗೆಯನ್ನು ಹಾಕಿ

ಸಿದ್ದಿಯರನ್ನು ಜೇರಿಗೆ ತಂದರು. ಅಷ್ಟರಲ್ಲಿ ಸಿದ್ದಿಕಾಸೀಮನು ಮತ್ತೊಂದು ಮೊಗಲ ಹಡಗುಪಡೆಯೊಡನೆ ಬಂದು ತೋಫಿನ ಮಳೆಗರೆದುದರಿಂದ ಮರಾಟರು ಮತ್ತೆ ಮುತ್ತಿಗೆಯನ್ನೆಬ್ಬಿಸಿ ಹಿಂದಕ್ಕೆ ಸರಿದರು (ದಶಂಬರ ೧೬೭೬).

ಒಡಕೇ ಕೆಡಕೆಂಬ ಗಾದೆಯನ್ನು ಓದುವವರು ಎಂದೂ ಮರೆಯ ಕೂಡದು. ಈ ಸಮಯಕ್ಕೆ ಸಿದ್ದಿಯರೊಳಗೆ ಒಡಕು ಹುಟ್ಟಿತು. ಸಿದ್ದಿ ಸಂಬಳನು ಮೊಗಲ ಸರಕಾರದೊಡನೆ ಬಡಿದಾಡಿದ್ದರಿಂದ ಅವನನ್ನು ಕೆಲಸದಿಂದ ತೆಗೆದು ಸಿದ್ದಿಕಾಸೀಮನನ್ನು ದಂಡರಾಜಾಪುರದ ಸುಬೇದಾರ ನಾಗಿಯೂ ನೌಕಾಧಿಪನಾಗಿಯೂ ನೇಮಿಸಿದರು. ಸಂಬಳನು ತನ್ನ ಹಡಗುಪಡೆಯನ್ನು ಕಾಸೀಮನಿಗೆ ಒಪ್ಪಿಸುವುದಕ್ಕೆ ತಪ್ಪಿಸಲಾರಂಭಿಸಿ ದನು. ಕಾಸೀಮನು ಅವನನ್ನು ಬೆನ್ನಟ್ಟಿದನು. ಮುಂಬಯಿಯಲ್ಲಿ ಇಬ್ಬರು ಕೂಡಿ ಗುದುಮರಿಗೆ ಹಾಕತೊಡಗಿದರು. ಕಟ್ಟಕಡೆಗೆ ಇಂಗ್ಲಿಷರು ನಡುವೆ ಬಿದ್ದು ಕಾಸೀಮನಿಗೆ ಹಡಗುಪಡೆಯನ್ನು ಕೊಡಿಸಿದರು. ಸಂಬ ಳನು ಸಿಟ್ಟಿಗೆದ್ದು ಸಿದ್ದಿ ಮಿಸ್ರಿಯೊಡನೆ ಮರಾಟರನ್ನು ಕೂಡಿದನು (ಅಕ್ಟೋಬರ ೧೬೭೭). ಮರಾಟರ ಹಡಗುಗಳು ಸಣ್ಣವಿದ್ದುದರಿಂದಲೂ ಅವರು ಸಿದ್ದಿಯರನ್ನು ನಂಬಲಿಕ್ಕೆ ಹೆದರುತ್ತಿದ್ದುದರಿಂದಲೂ ಸಂಬಳ ಮಿಸ್ರರು ಬಂದು ಕೂಡಿದ್ದರಿಂದ ಸಿವಾಜಿಗೆ ಹೆಚ್ಚಿನ ಲಾಭವಾವುದೂ ಆಗಲಿಲ್ಲ.

ಮುಂದಿನ ತಿಂಗಳು ಕಾಸೀಮನು ತನ್ನ ಹೊಸ ಹಡಗುಪಡೆಯೊಡನೆ ಮುಂಬಯಿ ಬಂದರವನ್ನು ಬಿಟ್ಟು, ಪಶ್ಚಿಮತೀರಗುಂಟ ೫ ತಿಂಗಳು ವರೆಗೆ ಪರ್ಯಟನ ಮಾಡಿ, ಕೊಂಕಣದ ದಂಡೆಯ ಊರುಗಳನ್ನು ಮನದಣಿ ಸುಲಿದು, ಬ್ರಾಹ್ಮಣರನ್ನು ಸೆರೆಯಾಳಾಗಿ ಮುಂಬಯಿಗೆ ಒಯ್ದು, ಅವರಿಂದ ಕೀಳ್ತರದ ಕೆಲಸವನ್ನು ಮಾಡಿಸತೊಡಗಿದನು. ಪೌರಾಣಿಕ ಕಾಲದಲ್ಲಿ ದೈತ್ಯರು ಬ್ರಾಹ್ಮಣರನ್ನು ಹಿಂಸೆಬಡಿಸಿದಂತೆ ಈ ಸಿದ್ದಿಯರು ಅವರನ್ನು ಉರಿಸಿಕೊಳ್ಳುವುದನ್ನು ಕೇಳಿ, ಸಿವಾಜಿಯು ಮನಸ್ಸಿನಲ್ಲಿ ಬಹಳ ವಾಗಿ ನೊಂದುಕೊಂಡನು. ಆದರೆ ಅವನೇನು ಮಾಡಿಯಾನು? ಅವನ

ಹೊಟ್ಟೆಯೊಳಗಿದ್ದ ಸಿಟ್ಟು ಅವನ ರಟ್ಟೆ (ಹಡಗುಪಡೆ) ಯಲ್ಲಿದ್ದಿಲ್ಲ. ಸಿವಾಜಿಯು ನೆಲದ ಮೇಲಿನ ಹಾವಳಿಯನ್ನು ತಡೆಯುವುದು ಅವರಂಗಜೇಬ ಬಾದಶಹನಿಗೆ ಎಷ್ಟು ದುಸ್ತರವಾಗಿತ್ತೋ ಅಷ್ಟೇ ದುಸ್ತರವು ನೀರಮೇಲಿನ ಸಿದ್ದಿಯರ ಹಾವಳಿಯನ್ನು ನಿಲ್ಲಿಸುವುದು ಸಿವಾಜಿಗೆ ಆಗಿತ್ತು. ಉಪಾಯಾಂತರವನ್ನು ಕಾಣದೆ, ಅವನು ಹೊಸ ಹಡಗುಗಳನ್ನು ಕಟ್ಟಿಸಿ, ಹಡಗು ಪಡೆಯೊಡನೆ ದರಿಯಾ ಸರಂಗನನ್ನೂ ೪,೦೦೦ ದಂಡಿನೊಡನೆ ದೌಲತ್ತಖಾನನನ್ನೂ **ಪನವೇಲಕ್ಕೆ** ಕಳುಹಿ, ಮಾಜಗಾವಿನಲ್ಲಿದ್ದ ಸಿದ್ದಿಯರ ಹಡಗುಪಡೆಯನ್ನು ಸುಟ್ಟು ಬೂದಿಮಾಡಬೇಕೆಂದು ಕಟ್ಟಪ್ಪಣೆಯನ್ನಿತ್ತನು. ಆದರೆ ಮನುಷ್ಯನು ಬಯಸುವುದೊಂದು, ದೇವರು ಮಾಡುವುದು ಮತ್ತೊಂದು ಎಂಬ ಗಾದೆಯಂತೆ ಈ ಪ್ರಯತ್ನವು ನಿಷ್ಫಲವಾಯಿತು (ಜುಲೈ ೨೮). ಆ ವರ್ಷ ಮಳೆಗಾಲವು ಹೆಚ್ಚಾದ್ದರಿಂದಲೂ ಡಚ್ಚರು ತಮ್ಮ ನೀರಿನಲ್ಲಿ ಹೋಗಗೊಡದಿದ್ದುದರಿಂದಲೂ ದೌಲತ್ತಖಾನನು ಬರಿಗಯ್ಯಿಂದ ರಾಯಗಡಕ್ಕೆ ತಿರುಗಿ ಬರಬೇಕಾಯಿತು. ಮರಾಟರ ದಂಡು ತಿರುಗಿ ಹೋದುದನ್ನು ನೋಡಿ ಸಿದ್ದಿಕಾಸೀಮನು ಹುರಪುಗೊಂಡು ಅಲ್ಲಿ ಬಾಗದ ಡಂಡೆಯನ್ನು ಸುಲಿದನು. ಸಿವಾಜಿಯು ದೀರ್ಘಪ್ರಯತ್ನಿಯಾದ್ದರಿಂದ ದೊಡ್ಡ ದಂಡನ್ನೂ ದೊಡ್ಡದೊಡ್ಡ ತೋಫುಗಳನ್ನೂ ಕೊಟ್ಟು ಜಂಜೀರೆಯನ್ನು ಮತ್ತೆ ಮುತ್ತುವುದಕ್ಕೋಸ್ಕರ ದೌಲತ್ತಖಾನನನ್ನು ಕಳುಹಿದನು (ಅಕ್ಟೋಬರ ೨೮).

ಮುಂಬಯಿಯ ತೆಂಕಲಿಗೆ ೧೧ ಮೈಲಿನ ಮೇಲೆ **ಖಾಂದೇರಿ** ಎಂಬುದೊಂದು ಸಣ್ಣ ಕಲ್ನಡುಗಡ್ಡೆ (೧॥ ಮೈ× ॥ ಮೈ) ಇರುತ್ತದಷ್ಟೇ. ಜಂಜೀರೆಯ ಕೋಟೆಯು ಸಿಕ್ಕಲಿ ಬಿಡಲಿ ಮುಂಬಯಿಯ ಬಂದರದ ಹತ್ತಿರ ತನ್ನದೊಂದು ಬಂದರವು ಇರಬೇಕೆಂಬ ಬಯಕೆಯಿಂದ ಖಾಂದೇರಿಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡು, ಅಲ್ಲಿಯೊಂದು ಕೋಟೆಯನ್ನು ಕಟ್ಟಿಸಬೇಕೆಂದು ನಮ್ಮ ಚರಿತ್ರನಾಯಕನು ೧೬೭೨ ರಿಂದ ಆಲೋಚಿಸುತ್ತಿದ್ದನು. ಜಂಜೀರೆಗೆ ಹಾಕಿದ ಮುತ್ತಿಗೆಯನ್ನು ೧೬೭೮ ರಲ್ಲಿ ಮರಾಟರು ಎಬ್ಬಿಸಿದ ಬಳಿಕ ಸಿವಾಜಿಯು ಖಾಂದೇರಿ ಕೋಟೆಯ ಮಹತ್ವವನ್ನು ಮನಗಂಡು,

ಆದರ ವೆಚ್ಚಕ್ಕಾಗಿ ಒಂದು ಲಕ್ಷ ರೂಪಾಯಿ ಮಂಜೂರುಮಾಡಿ ಚೌಲ ಬಂದರದಿಂದ ಕೆಲಸಗಾರರನ್ನೂ ಸಾಮುಗ್ರಿಗಳನ್ನೂ ಕಳುಹಿಸಿ ಕೊಟ್ಟನು (೧೫ ಸಪ್ಟಂಬರ ೧೬೭೯). ಈ ಸುದ್ದಿಯನ್ನು ಕೇಳಿ ಇಂಗ್ಲಿಷರು ಖಾಂದೇರಿಯು ತಮ್ಮದೆಂತಲೂ ಮರಾಟರು ಅಲ್ಲಿ ಕೋಟೆಯನ್ನು ಕಟ್ಟಕೂಡದೆಂತಲೂ ಹೇಳಿ ಕಳುಹಿದರು. ಮರಾಟರು ಅವರ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳದೆ ತಮ್ಮ ಕೆಲಸವನ್ನು ಮುಂದರಿಸಿದರು. ಅದನ್ನು ಕಂಡು ಇಂಗ್ಲಿಷರು ಸಿಟ್ಟಗೆದ್ದು ಒಂದು ಸಣ್ಣ ಹಡಗುಪಡೆಯನ್ನು ಖಾಂದೇರಿಯನ್ನು ಹಿಡಿದುಕೊಳ್ಳಲಿಕ್ಕೆ ಕಳುಹಿದರು. ದೊಡ್ಡ ಹಡಗುಗಳು ಆ ನಡುಗಡ್ಡೆಯ ಹತ್ತಿರ ಹೋಗುವುದಕ್ಕೆ ಹೆದರಿ ದೂರದಲ್ಲಿ ನಿಂತವು. ಲೆಫ್ಟನೆಂಟ ಫ್ರಾನ್ಸಿಸ ಥೋರ್ಪನೆಂಬ ಎದೆಗಾರನು ಕೆಲ ಸಿಬಾರ (ಒಂದು ತರದ ಹಡಗು) ಗಳನ್ನು ತೆಗೆದುಕೊಂಡು ನಡುಗಡ್ಡೆಯ ಬಳಿಗೆ ಹೋದನು. ಮರಾಟರು ಮೇಲಿಂದ ಗುಂಡುಗಳನ್ನು ಹಾರಿಸಿದರು. ಥೋರ್ಪ, ಬ್ರಾಡ್ಬರಿ, ರೆಲ್ಚ ಎಂಬ ಮುವ್ವರು ಇಂಗ್ಲಿಷರು ಸತ್ತರು; ಉಳಿದವರು ಗಾಯಹೊಂದಿದರು, ಮತ್ತೆ ಕೆಲವರು ಸೆರೆಸಿಕ್ಕರು; ಇಂಗ್ಲಿಷರ ಎರಡು ಸಿಬಾರಗಳು ಮರಾಟರ ಕಯ್ಸೇರಿದವು (೧೯ ಸಪ್ಟಂಬರ). ಈ ಮೊದಲನೆಯ ಕಡಲ್ಕಾಳಗದಲ್ಲಿ ಜಯಲಕ್ಷ್ಮಿಯು ಮರಾಟರ ಕೊರಳಲ್ಲಿ ಮಾಲೆಯನ್ನು ಹಾಕಿದ್ದರಿಂದ ಅವರು ಸ್ವಾಭಾವಿಕವಾಗಿ ಉಬ್ಬಿದರು. ಚೌಲದಿಂದ ೬೦ ಹಡಗುಗಳು ಖಾಂದೇರಿಯ ಸಂರಕ್ಷಣಕ್ಕೋಸ್ಕರ ಬಂದವು. ಮುಂಬಯಿಯ ಬಂದರದಿಂದ ಇಂಗ್ಲಿಷರ ಹಡಗುಪಡೆಯು ಖಾಂದೇರಿಯನ್ನು ಹಿಡಿದುಕೊಳ್ಳುವುದಕ್ಕೆ ಬಂದಿತು. ಎರಡೂ ಹಡಗುಪಡೆಗಳ ನಡುವೆ ಯುದ್ಧವೆಸಗಿತು (೧೮ ಅಕ್ಟೋಬರ). ಆರ್ಮನೆಂಬ ಇಂಗ್ಲಿಷ ಇತಿಹಾಸಕರ್ತನು ಈ ಕಾಳಗವನ್ನು ಕೆಳಗೆ ಬರೆವಂತೆ ವರ್ಣಿಸಿರುತ್ತಾನೆ:-

ಒಂದು ಸಣ್ಣ ಇಂಗ್ಲಿಷರ ಹಡಗುಪಡೆಯು ಖಾಂದೇರಿಯ ಬಳಿಯಲ್ಲಿ ನಿಂತಿತ್ತು. ಆ ಪಡೆಯಲ್ಲಿ ರಿವೆಂಜ ಎಂಬ ೧ ಯುದ್ಧದ ಹಡಗು, ಎರಡು ಕಂಬಗಳುಳ್ಳ ೨ ಗುರಾಬಗಳು, ೩ ಸಿಬಾರಗಳು, ೨ ಮಚವೆಗಳು ಹೀಗೆ ೮ ಹಡಗುಗಳಿದ್ದವು. ಅವುಗಳಲ್ಲಿ ಹಡಗು ನಡಿಸುವವರನ್ನೂ ಆಳುಗಳನ್ನೂ

ಬಿಟ್ಟು ೨೦೦ ಮಂದಿ ಯುರೋಪೀಯ ದಂಡಾಳುಗಳಿದ್ದರು. ೧೮ ಅಕ್ಟೋಬರ ದಿವಸ ಬೆಳಗಿನಲ್ಲಿ ದೌಲತ್ತಖಾನನು ತನ್ನ ಪಡೆಯೊಡನೆ ಹೋಗಿ ರಭಸದಿಂದ ಇಂಗ್ಲಿಷರ ಹಡಗುಗಳ ಮೇಲೆ ಬಿದ್ದನು. ಮುಂದೆ ಅರ್ಧ ತಾಸಿನೊಳಗೇ **ಮುವುಲೆವೀರರ** ಎಂಬ ಇಂಗ್ಲಿಷ ಅಧಿಕಾರಿಯ ಕಯ್ಯೊಳಗಿದ್ದ **ಡೋವರ** ಎಂಬ ಗುರಾಬವು ಮರಾಟರ ಕಯ್ಸೇರಿತು. ೨ ನೆಯ ಗುರಾಬವೂ ೩ ಸಿಬಾರಗಳೂ ೨ ಮಚವೆಗಳೂ ಓಡಿಹೋದವು. ರಿವ್ಹೆಂಜ ಎಂಬ ಯುದ್ಧದ ಹಡಗು ಮಾತ್ರ ಉಳಿಯಿತು. ಅದು ಮರಾಟರ ೫ ಗಲಬತಗಳನ್ನು ಮುಳಗಿಸಿದ್ದರಿಂದ, ಮರಾಟರ ಹಡಗುಪಡೆಯು ಹೆದರಿ ನಾಗೊಠಾಣಾ ಬಂದರಕ್ಕೆ ಓಡಿಹೋಯಿತು. ೨ ದಿವಸಗಳ ಮೇಲೆ ಮರಾಟರ ಹಡಗುಪಡೆಯು ಮತ್ತೆ ಹೊರಗೆ ಬರಲು, ಇಂಗ್ಲಿಷರ ಹಡಗುಗಳು ಅದರ ಮೇಲೆ ಸಾಗಿ ಹೋದ್ದರಿಂದ, ಅದು ಮತ್ತೆ ಓಡಿಹೋಯಿತು. ಮರಾಟರ ೫೦ ಸಣ್ಣ ಹಡಗುಗಳು ಇಂಗ್ಲಿಷರ ಒಂದು ಯುದ್ಧದ ಹಡಗನ್ನು ಕೂಡ ಸರಿಗಟ್ಟಲಾರವು. ಈ ಕ್ಷುದ್ರ ಹಡಗುಗಳಿಂದ ಆಗುವುದೇನು?

ಇದು ಖಾಂದೇರಿ ಕಾಳಗದ ಇಂಗ್ಲಿಷ ವರ್ಣನೆ ಆಯಿತು. ಕೇಳುಸಕರರು ಮರಾಟಿ ಲೇಖಗಳ ಆಧಾರದಿಂದ ಇದೇ ಕಾಳಗವನ್ನು ಕೆಳಗೆ ಬರೆದಂತೆ ವರ್ಣಿಸುತ್ತಾರೆ:—

ಇಂಗ್ಲಿಷರು ಮಾಡಿದ ಅಡ್ಡಿಯನ್ನು ಸಡ್ಡೆಮಾಡದೆ ಮರಾಟರು ಖಾಂದೇರಿಯ ಕೋಟೆಯ ಕೆಲಸವನ್ನು ಮುಂದರಿಸಿದ್ದರಿಂದ ಅವರು ಎಂಟು ಯುದ್ಧದ ಹಡಗುಗಳನ್ನೂ ೨೦೦ ಯುರೋಪೀಯ ಸಿಪಾಯರನ್ನೂ ಖಾಂದೇರಿಯನ್ನು ಮುತ್ತಲಿಕ್ಕೆ ಕಳುಹಿದರು. ಅವರ ಹಡಗುಗಳು ದೊಡ್ಡವೂ ಮಂದಗತಿಯುಳ್ಳವೂ ಆದ್ದರಿಂದ, ಅವು ಖಾಂದೇರಿಯಿಂದ ದೂರದಲ್ಲಿ ನಿಂತಿದ್ದವು. ಖಾಂದೇರಿಯಲ್ಲಿ ಕೆಲಸಮಾಡುವವರಿಗೆ ಅನ್ನ ಸಾಮುಗ್ರಿಗಳನ್ನು ಹೊತ್ತು ಹೊತ್ತಿಗೆ ಸರಿಯಾಗಿ ಮುಟ್ಟಿಸುವ ಉದ್ದೇಶದಿಂದ, ಸಿವಾಜಿಯು ದೌಲತ್ತಖಾನನನ್ನು ಒಂದು ಹಡಗುಪಡೆಯೊಡನೆ ಚೌಲ ಬಂದರದಲ್ಲಿರಿಸಿದ್ದನು. ಆದ್ದರಿಂದ ಇಂಗ್ಲಿಷ ಹಡಗುಪಡೆಯನ್ನು ಕೆಣಕಿ

ಸೋಲಿಸುವುದು ದೌಲತ್ತಖಾನನ ಗುರಿಯಾಗಿದ್ದಿಲ್ಲ. ಮರಾಟರ ಹಡಗುಗಳು ಸಣ್ಣವೂ ಹೆಚ್ಚು ವೇಗವುಳ್ಳವೂ ಆದ್ದರಿಂದ, ಅವು ಇಷ್ಟು ದಿವಸ ಇಂಗ್ಲಿಷರ ೨/೩ ಹಡಗುಗಳನ್ನು ತಪ್ಪಿಸಿ ಸುಲಭವಾಗಿ ಹೋಗಿ ಬರುತ್ತಿದ್ದವು. ಈಗ ಇಂಗ್ಲಿಷರ ೮ ಹಡಗುಗಳು ದಾರಿಯನ್ನು ಕಟ್ಟಿಕೊಂಡು ನಿಂತುದರಿಂದ ೧೮ ಅಕ್ಟೋಬರ ದಿವಸ ಬೆಳಿಗ್ಗೆ ದೌಲತ್ತಖಾನನು ಸಾಮಾನುಹಡಗುಗಳ ಸಂರಕ್ಷಣಾರ್ಥವಾಗಿ ತನ್ನ ಹಡಗುಪಡೆಯನ್ನು ಸಂಗಡ ತೆಗೆದುಕೊಂಡು ಹೊರಟನು. ಮರಾಟರ ಹಡಗುಗಳು ಅತಿ ವೇಗದಿಂದ ನಡೆಯುತ್ತಿದ್ದುದರಿಂದ ಇಂಗ್ಲಿಷರಿಗೆ ಲಂಗುರ ತೆಗೆಯಲಿಕ್ಕೆ ಅವಕಾಶ ದೊರೆಯಲಿಲ್ಲ. ಮರಾಟರು ಒತ್ತರದಿಂದ ಬಂದು ಒಂದು ಗುರಾಬನ್ನು ಹಿಡಿದುಕೊಂಡುದರಿಂದ, ಇಂಗ್ಲಿಷರ ಉಳಿದ ೫ ಹಡಗುಗಳು ಅಂಜಿ ಓಡಿಹೋದವು. ರಿವ್ಹೆಂಜ ಒಂದು ಮಾತ್ರ ಗಾಂಭೀರ್ಯದಿಂದ ನಿಂತುಕೊಂಡಿತು. ಮರಾಟರ ಹಡಗುಗಳು ಅದರ ಹತ್ತಿರ ಹೋಗಲು ಅದರ ಮುಖ್ಯಸ್ಥರಾದ **ಕಿಗ್ವಿನ-ಮಿಂಚಿನ**ರೆಂಬುವರು ತಮ್ಮ ಹಡಗಿನ ನಿಶಾನೆಗಳನ್ನು ಇಳಿಸಿ, ಶರಣುಬರುವವರಂತೆ ಸೂಚಿಸಿ, ಮರಾಟರನ್ನು ಮೋಸಗೊಳಿಸಿದರು. ಮರಾಟರು ಇಂಗ್ಲಿಷರನ್ನು ನಂಬಿ ತಮ್ಮ ದೋಣಿಗಳನ್ನು ನೀರಲ್ಲಿ ಹಾಕಿ, ಅವುಗಳೊಳಗೆ ಕುಳಿತು ರಿವ್ಹೆಂಜದ ಬಳಿಗೆ ನಡೆದರು. ಅದೇ ಸುಸಂಧಿಯೆಂದೆಣಿಸಿ ಇಂಗ್ಲಿಷರು ಮರಾಟರ ಮೇಲೆ ತೋಫಿನ ಮಳೆಗರೆದು ಅವರ ೫ ಹಡಗುಗಳನ್ನು ಮುಳಿಗಿಸಿದ್ದಲ್ಲದೆ, ಎಷ್ಟೋ ಜನರ ಪ್ರಾಣಹಾನಿಯನ್ನುಮಾಡಿದರು. ಅಷ್ಟರೊಳಗೆ ಸಾಮಾನಿನ ಹಡಗುಗಳು ಖಾಂದೇರಿಯ ಬಳಿಗೆ ಸುರಕ್ಷಿತವಾಗಿ ಹೋದುದರಿಂದ, ದೌಲತ್ತಖಾನನು ಯುದ್ಧದಲ್ಲಿ ತೊಡಗದೆ ತನ್ನ ಪಡೆಯನ್ನು ತೆಗೆದುಕೊಂಡು, ನಾಗೊಠಾಣೆಗೆ ತಿರುಗಿ ಹೋದನು. ರಿವ್ಹೆಂಜವು ಕೆಲ ಹೊತ್ತು ಬೆನ್ನಟ್ಟಿತು. ಆದರೆ ಮರಾಟರ ಹಡಗುಗಳು ಅತಿ ಒತ್ತರದಿಂದ ಹೋದುದರಿಂದ ಅವನ್ನು ಮುಟ್ಟಲಿಕ್ಕೆ ಅದಕ್ಕೆ ಆಗಲಿಲ್ಲ.*

ಮೇಲೆ ಕೊಟ್ಟ ಈ ಕಡಲ್ಕಾಳಗದ ಎರಡು ವರ್ಣನೆಗಳಲ್ಲಿ ನಿಜಾಂಶವು ಎಷ್ಟಿರಬಹುದೆಂಬುದನ್ನು ಓದುವವರೇ ನಿರ್ಣಯಿಸಬಹುದು. ಪಂಡಿತ

* ಕೀಳುಸಕರ ಪುಟ ೫೦೮–೫೦೯.

ಜದುನಾಥ ಸರ್ಕಾರರು ಇಂಗ್ಲಿಷರ ಬರಹಕ್ಕೆ ಮೆಚ್ಚಿದವರಾದ್ದರಿಂದ ಅವರ ವರ್ಣನೆಯನ್ನೇ ನಂಬುತ್ತಾರೆ. ಆದರೆ "ಕಿಗ್ವಿನನ ಬಂಡು" ಎಂಬ ಪುಸ್ತಕದಲ್ಲಿ ಅವನು ನೌಕಾಯುದ್ಧದ ನೇಮುಗಳ ವಿರುದ್ಧವಾಗಿ ಮರಾಟರನ್ನು ಮೋಸಗೊಳಿಸಿದನೆಂದು ಸ್ಪಷ್ಟವಾಗಿ ಬರೆದಿರುತ್ತದೆ. ಈ ಬಿಳಿನಾವಾಡಿಗನ ನೀಚತನವನ್ನು ಬಚ್ಚಿಟ್ಟು, ತಮ್ಮ ಹಡಗಿನ ಸಾಮರ್ಥ್ಯವನ್ನು ಹೊಗಳಿ, ಮರಾಟ ನಾವಾಡಿಗರು ಹೇಡಿಗಳೆಂದು ಸೂಚಿಸುವುದು ಇತಿಹಾಸಕಾರರ ಕರ್ತವ್ಯವೇ? ನಾವು ಶಾಲಾವಿದ್ಯಾಲಯಗಳಲ್ಲಿ ಭಕ್ತಿಯಿಂದ ಕಲಿಯುವ ಇತಿಹಾಸಗಳಲ್ಲಿ ಈ ತರದ ಸುಳ್ಳುಗಳು ಎಷ್ಟು ತುಂಬಿರುತ್ತವೋ ದೇವರೇ ಬಲ್ಲ. ೧೭೫೭ ರಲ್ಲಿ ಕಲಕತ್ತೆಯಲ್ಲಿ ಆಯಿತೆಂದು ಬರೆದಿರುವ ಕತ್ತಲೆಕೋಣೆಯ ಕೊಲೆಯು ಪೂರಾ ಸುಳ್ಳೆಂದು ಕೆಲವು ಇಂಗ್ಲಿಷ ಗ್ರಂಥಕಾರರೇ ಸಾರುತ್ತಾರೆ. ಆದ್ದರಿಂದ ಇಂಗ್ಲಿಷರು ಬರೆದ ನಮ್ಮ ದೇಶದ ಇತಿಹಾಸಗಳನ್ನು ನಮ್ಮ ದೇಶದ ದೇಶಾಭಿಮಾನಿಗಳು ಶೋಧಮಾಡಿ ತಿದ್ದಿದ ಹೊರತು, ನಾವು ಅವುಗಳನ್ನು ಸಾಮಾನ್ಯವಾಗಿ ನಂಬಲಾರೆವು. ಆದರೂ ಅವರೊಳಗೆ ನಿಷ್ಪಕ್ಷಪಾತಿಗಳಾದ ಇತಿಹಾಸಕರ್ತರು ಯಾರೂ ಇಲ್ಲೆಂದು ಹೇಳಲಿಕ್ಕಾಗುವುದಿಲ್ಲ. ಅಂತಹರು ಅಪರೂಪವಾಗಿ ಕಂಡುಬರುತ್ತಾರೆ.

ಈ ಕಾಳಗವಾದ ಬಳಿಕ ಮರಾಟರ ಹಡಗುಗಳು ಮೊದಲಿನಂತೆ ಅನ್ನಸಾಮಗ್ರಿಗಳನ್ನು ಒಯ್ಯುವ ಮುಟ್ಟಿಸುತ್ತಿದ್ದುದರಿಂದ, ಖಾಂದೇರಿಯ ಕೋಟೆಯನ್ನು ಕಟ್ಟುವ ಕೆಲಸವು ಯಥಾಪ್ರಕಾರವಾಗಿ ನಡೆಯಿತು. ತಮ್ಮಿಂದ ಅದನ್ನು ಸರಿಯಾಗಿ ಮುತ್ತುವುದಕ್ಕೆ ಆಗುವುದಿಲ್ಲೆಂದೆಣಿಸಿ, ಇಂಗ್ಲಿಷರು ಸಿದ್ದಿಯರ ಸಾಹಾಯವನ್ನು ಬೇಡಿದ್ದರಿಂದ, ತೂಕಡಿಸುವವರಿಗೆ ಹಾಸಿಗೆ ಹಾಸಿಕೊಟ್ಟಂತಾಯಿತು. ಕೂಡಲೆ ಅವರು ತಮ್ಮ ೩೪ ಹಡಗುಗಳನ್ನು ಇಂಗ್ಲಿಷರಿಗೆ ನೆರವಾಗಲಿಕ್ಕೆ ಖಾಂದೇರಿಗೆ ಕಳುಹಿದರು (ನವಂಬರ).

ಅತ್ತ ಖಾಂದೇರಿಯ ಮುತ್ತಿಗೆಯ ಸುದ್ದಿಯೂ ಕಡಲ್ಗಾಳಗಗಳ ಪರಿಣಾಮವೂ ತಿಳಿದಕೂಡಲೆ, ಸುರತದ ಸಂಘದವರು ಗಾಬರಿಯಾದರು; ಮಳೆಗಾಲದಲ್ಲಿ ಖಾಂದೇರಿಯನ್ನು ಮುತ್ತುವುದಾಗಲಿ, ಯುದ್ಧದ ವೆಚ್ಚ

ವನ್ನು ಪೂರೈಸುವುದಾಗಲಿ, ಸತ್ತ ಅಥವಾ ಸೆರೆಸಿಕ್ಕ ಯುರೋಪಿಯರ ಸ್ಥಳಗಳನ್ನು ತುಂಬುವುದಾಗಲಿ ತಮ್ಮಿಂದ ಆಗದ ಕೆಲಸವೆಂದು ನೆಲಹಿಡಿದರು; ಇದಲ್ಲದೆ ಸಿವಾಜಿಯೊಡನೆ ಯುದ್ಧ ಹೂಡಿದರೆ ಅವನು ಮುಂಬಯಿಯಿಂದ ಇಂಗ್ಲಿಷ ವರ್ತಕರನ್ನು ಹೊರಗೆ ಹಾಕುವನೆಂದು ತುಂಬಾ ಹೆದರಿದರು. ಈ ಕಾರಣಗಳ ಮೂಲಕವಾಗಿ ಸುರತದ ಸಂಘದವರು ಖಾಂದೇರಿಯ ಗೊಡವಿಗೆ ಹೋಗಬಾರದೆಂತಲೂ ಸಿದ್ದಿಪೋರ್ತುಗೀಸರು ಅದರ ವಿಷಯವಾಗಿ ಬಡಿದಾಡಲೊಲ್ಲರೇಕೆಂತಲೂ ಯುದ್ಧವನ್ನು ನಿಲ್ಲಿಸಿ, ಸಿವಾಜಿಯೊಡನೆ ಒಪ್ಪಂದ ಮಾಡಿಕೊಳ್ಳಬೇಕೆಂತಲೂ ನಿರ್ಣಯಿಸಿದರು (೨೫ ಅಕ್ಟೋಬರ).

ಇತ್ತ ಸಿವಾಜಿಯು ಖಾಂದೇರಿಯ ಹತ್ತಿರ ಇಂಗ್ಲಿಷರು ನಡಿಸಿದ ಅನಾಹುತವನ್ನು ಕೇಳಿ, ಸಂತಪ್ತನಾಗಿ ಮುಂಬಯಿಯನ್ನು ಒಳನುಗ್ಗುವುದಕ್ಕೋಸ್ಕರ, ೪,೦೦೦ ದಂಡನ್ನು ಕಲ್ಯಾಣಭಿವಂಡಿಗೆ ಕಳುಹಿ, ಠಾಣೆಯ ಮಾರ್ಗವಾಗಿ ಮುಂಬಯಿಗೆ ಹೋಗಬೇಕೆಂದು ಅಪ್ಪಣೆಯನ್ನಿತ್ತನು (ಅಕ್ಟೋಬರ). ಆದರೆ ಆ ದಂಡಿನ ದಾರಿಯಲ್ಲಿ ಪೋರ್ತುಗೀಸರ ವಸಯಿ ಪ್ರಾಂತವಿತ್ತು. ಅಲ್ಲಿಯ ಸುಬೇದಾರನು ಮರಾಟರಿಗೆ ತನ್ನ ಪ್ರಾಂತದಲ್ಲಿ ಹಾಯಗೊಡಲಿಲ್ಲ. ಆದ್ದರಿಂದ ಅವರು ಆ ದಾರಿಯನ್ನು ಬಿಟ್ಟು, ಪನವೇಲಕ್ಕೆ ಹೋಗಿ, ಅಲ್ಲಿಂದ ಸಿಬಾರಗಳಿಂದ ಮುಂಬಯಿಗೆ ಹೋಗಬೇಕೆಂದು ನಿಶ್ಚಯಿಸಿದರು. ಮುಂಬಯಿಯ ನಿವಾಸಿಗಳು ಗಾಬರಿಯಾದರು; ಮುಂಬಯಿಯ ಸುಬೇದಾರನು ದಾಳಿಗಾರರನ್ನು ಎದುರಿಸಲಿಕ್ಕೆ ಯತ್ನನಡಿಸಿದನು. ಆದರೆ ಸುರತದಲ್ಲಿದ್ದ ಇಂಗ್ಲಿಷಸಂಘದ ಅಧ್ಯಕ್ಷನು ಸಿವಾಜಿಗೆ ಒಂದು ಬಿನ್ನಹ ಪತ್ರವನ್ನು ಬರೆದನು. ಅದರಲ್ಲಿ ಸಿವಾಜಿಯಂತಹ ಪರಾಕ್ರಮಶಾಲಿಯಾದ ದೊಡ್ಡ ಅರಸನು ಖಾಂದೇರಿಯಂತಹ ಹಾಳು ನಡುಗಡ್ಡೆಯನ್ನು ಗುಪ್ತರೀತಿಯಿಂದ ಹಿಡಿದುಕೊಳ್ಳುವುದಕ್ಕೆ ಹವಣಿಸಿದ್ದು ಸಖೇದಾಶ್ಚರ್ಯಕರವಾದ ಸಂಗತಿ ಎಂತಲೂ ಅದು ಅವನಿಗೆ ಅವಶ್ಯವಾಗಿ ಬೇಕಾಗಿದ್ದರೆ ಇಂಗ್ಲಿಷರು ಕೊಡಲಿಕ್ಕೆ ಸಿದ್ಧರಾಗಿರುತ್ತಾರೆಂತಲೂ ಆ ವಿಷಯವಾಗಿ ಮಾತಾಡಲಿಕ್ಕೆ ಒಬ್ಬ ವಕೀಲನನ್ನು

ಕಳಿಸಬಹುದೆಂತಲೂ ಬರೆದಿತ್ತು. ಆ ಪತ್ರದ ನಕಲು ಬಂದ ಕೂಡಲೆ ಮುಂಬಯಿಯ ಸುಬೇದಾರನು ಬಹಳವಾಗಿ ತಲ್ಲಣಿಸಿ ಯುದ್ಧವನ್ನು ಮುಂದರಿಸಬೇಕೆಂದು ಅಂಗಲಾಚಿ ಬೇಡಿಕೊಂಡನು. ಆದರೆ ಸುರತದ ಅಧ್ಯಕ್ಷನು ಅವನ ಮಾತಿಗೆ ಕಿವಿಗೊಡದ್ದರಿಂದ, ಈ ಯುದ್ಧವು ಅಷ್ಟಕ್ಕೇ ನಿಂತುಹೋಯಿತು; ಮತ್ತು ಇಂಗ್ಲಿಷರು ತಮ್ಮ ಹಡಗುಗಳನ್ನು ತಿರುಗಿ ಒಯ್ದರು (ಜನವರಿ ೧೬೮೦).

ಇದ್ದುದಷ್ಟನ್ನು ಇಲಿ ಕಚ್ಚಿಕೊಂಡು ಹೋಯಿತೆಂಬ ಗಾದೆಯಂತೆ, ಸಿವಾಜಿಯು ಇಷ್ಟು ಶ್ರಮಪಟ್ಟು ದೊರಕಿಸಿದ ಖಾಂದೇರಿಯಿಂದ ಮರಾಟರಿಗೆ ಏನೂ ಹೆಚ್ಚಿನ ಪ್ರಯೋಜನವಾಗಲಿಲ್ಲ. ಏಕೆಂದರೆ ಇಂಗ್ಲಿಷರೊಡನೆ ಗುದುಮುರಿಗೆಯು ನಡೆದಾಗ ಸಿದ್ದಿಯರು ಖಾಂದೇರಿಯ ನೆರೆಯಲ್ಲಿದ್ದ ಉಂದೇರಿಯೆಂಬ ಅರ್ಧಮೈಲು ಪರಿಘವುಳ್ಳ ಒಂದು ಸಣ್ಣ ಕಲ್ಲಡು ಗಡ್ಡೆಯನ್ನು ಹಿಡಿದುಕೊಂಡು, ಅದರಮೇಲೆ ಒಂದು ಕೋಟೆಯನ್ನು ಕಟ್ಟಿ, ಅದರಲ್ಲಿ ೩೦೦ ಸಿಪಾಯರನ್ನೂ ೧೦ ತೋಪುಗಳನ್ನೂ ಇಟ್ಟರು. ಇಂಗ್ಲಿಷರ ಹಡಗುಗಳು ಖಾಂದೇರಿಯಿಂದ ಹೋದ ಬಳಿಕ ದೌಲತ್ತಖಾನನು ಅದನ್ನು ಮುತ್ತಿದನು (೨೬ ಜನವರಿ). ಸಿದ್ದಿಯರು ಜೀವದ ಹಂಗು ತೊರೆದು ಕಾದಿದರು. ಆ ಕಾಲಕ್ಕಾದ ೪ ತಾಸಿನ ಕದನದಲ್ಲಿ ೨೦೦ ಮಂದಿ ಮರಾಟರು ಮಡಿದರು. ಅವರ ೮ ಹಡಗುಗಳು ಶತ್ರುಗಳ ಕಯ್ಸೇರಿದವು. ದೌಲತ್ತಖಾನನು ಗಾಯಹೊಂದಿ ಚೌಲಕ್ಕೆ ತಿರುಗಿ ಹೋದನು. ಅಂತೂ ಇಂತೂ ಕುಂತಿಮಕ್ಕಳಿಗೆ ರಾಜ್ಯವಿಲ್ಲದಂತಾಯಿತು. ಖಾಂದೇರಿಯ ಮರಾಟರು ತುಸು ಮಿಸುಕಾಡಿದರೆ, ಉಂದೇರಿಯ ತೋಪುಗಳು ಅವರನ್ನು ಕುಕ್ಕರ ಬಡಿಯುತ್ತಿದ್ದವು.

——

# ೧೩ನೆಯ ಪ್ರಕರಣ

## ರಾಜ್ಯವಿಸ್ತಾರವೂ ರಾಜ್ಯಭಾರಪದ್ಧತಿಯೂ.

ನಮ್ಮ ಚರಿತ್ರನಾಯಕನು ಹರೆಯಕ್ಕೆ ಬಂದಾಗ ಅವನ ಪಿತ್ರಾರ್ಜಿತ ಜಹಗೀರು ತೀರ ಸಣ್ಣ ಪ್ರದೇಶವಾಗಿತ್ತು. ಪುಣೆ, ಸುಪೆ, ಇಂದಾಪುರ, ಬಾರಾಮತಿ ಪ್ರಾಂತಗಳೂ ಮಾವಳದ ಚಿಕ್ಕಭಾಗವೂ ಅವನ ಪಿತ್ರಾರ್ಜಿತ ಜಹಗೀರಾಗಿತ್ತು. ಈ ಜಹಗೀರಿನ ಉತ್ತರಕ್ಕೆ ಘೋಡನದಿಯೂ ಪಶ್ಚಿಮಕ್ಕೆ ಸಹ್ಯಾದ್ರಿಪರ್ವತವೂ ಪೂರ್ವಕ್ಕೆ ಭೀಮಾಹೊಳೆಯೂ ತೆಂಕಲಿಗೆ ನೀರಾನದಿಯೂ ಅವನ ಚಿಕ್ಕ ಸಂಸ್ಥಾನದ ಮೇರೆಗಳಾಗಿದ್ದವು (೧೬೩೬). ಆಗ ಅವನ ಜಹಗೀರಿನ ವಾರ್ಷಿಕೋತ್ಪನ್ನವು ಲಕ್ಷರೂಪಾಯಿ ಮಾತ್ರವಿತ್ತು. ಅವನು ಸಾಯುವಾಗ ಅವನ ರಾಜ್ಯದ ವಿಸ್ತಾರವೂ ಹುಟ್ಟುವಳಿಯೂ ಅತಿಶಯವಾಗಿ ಬೆಳೆದಿದ್ದವು. ಅವನ ರಾಜ್ಯದ ಬಡಗಣ ಮೇರೆಯು ರಾಮನಗರವಾಗಿತ್ತು. ಇದು ಈಗ ಸುರತ ಜಿಲ್ಲೆಗೆ ಸೇರಿದ ಧರ್ಮಪುರ ಸಂಸ್ಥಾನವಾಗಿರುತ್ತದೆ. ಕಾರವಾರ ಜಿಲ್ಲೆಯಲ್ಲಿದ್ದ ಗಂಗಾವತಿ ಹೊಳೆಯೇ ಅವನ ರಾಜ್ಯದ ದಕ್ಷಿಣ ಮೇರೆಯಾಗಿತ್ತು. ಪಡುವಣ ಮೇರೆಯು ಅರಬಿ ಸಮುದ್ರವೇ ಇತ್ತು. ಮೂಡಣ ಎಲ್ಲೆಯ ಗೆರೆಯು ಉತ್ತರದಲ್ಲಿ ಬಲ್ಗಾಣದಿಂದ ಸೊಟ್ಟ ಡೊಂಕಾಗಿ ಹೊರಟು ಪುಣೆ, ನಾಸಿಕ ಜಿಲ್ಲೆಗಳಲ್ಲಿ ಹಾಯ್ದು, ಸಾತಾರೆ, ಕೊಲ್ಹಾಪುರ ಪ್ರಾಂತಗಳನ್ನು ಒಳಗೊಂಡಿತ್ತು. ಈ ಹರವಾದ ನಾಡಿಗೆ ಮರಾಟೆ ಬಖರಿನಲ್ಲಿ ಸ್ವರಾಜ್ಯವೆಂದು ಕರೆಯುತ್ತಾರೆ. ಈ ನಾಡಿನಲ್ಲಿ ಅವನ ಅಧಿಕಾರವು ತುಂಬಾ ನೆಲೆಗೊಂಡಿತ್ತು. ಈ ನಾಡಲ್ಲದೆ ಸಿವಾಜಿಯು ಪಶ್ಚಿಮ ಕರ್ನಾಟಕವನ್ನು ಹೊಸದಾಗಿ ತನ್ನ ರಾಜ್ಯಕ್ಕೆ ಜೋಡಿಸಿಕೊಂಡಿದ್ದನು. ಈ ನಾಡು ಬೆಳಗಾವಿ, ಧಾರವಾಡ, ಬೆಂಗಳೂರುಗಳನ್ನೊಳಗೊಂಡು ಬಳ್ಳಾರಿ ಪ್ರಾಂತದಲ್ಲಿ ಹರಿಯುವ ತುಂಗಭದ್ರಾಹೊಳೆಯವರಿಗೆ ಹಬ್ಬಿತ್ತು. ಈ ಪ್ರಾಂತದಲ್ಲಿ ಅವನ ಒಡೆತನವು ಬೇರುಗೊಂಡಿದ್ದಿಲ್ಲ.

ಸಿವಾಜಿಯು ತನ್ನ ಇಡಿ ರಾಜ್ಯವನ್ನು ೩ ಭಾಗಗಳಾಗಿ ವಿಭಾಗಿಸಿ† ಪ್ರತಿಯೊಂದು ಭಾಗಕ್ಕೂ ಒಬ್ಬ ಸುಬೇದಾರನನ್ನು ನಿಯುಮಿಸಿದ್ದನು. **ಮೊರೊ ತ್ರಿಯಂಬಕ ಪಿಂಗಳೆಯು** ಉತ್ತರಭಾಗದ ಸುಬೇದಾರ

---

† ಸಿವಾಜಿಯು ತನ್ನ ರಾಜ್ಯದಲ್ಲಿ ೧೪ ಭಾಗಗಳನ್ನು ಮಾಡಿದ್ದನೆಂದು ಚಿಟ್ನಿಸನು ತನ್ನ ಬಖರದಲ್ಲಿ ಬರೆಯುತ್ತಾನೆ. ಅವು ಯಾವುವೆಂದರೆ:—

೧ ಈಗಿನ ಮಾವಳ, ಸಾಸ್ವಾಡ, ಜುನ್ನರ, ಖೇಡ ತಾಲೂಕುಗಳನ್ನೊಡಗೊಂಡ ಮಾವಳಪ್ರಾಂತವು. ಇದರಲ್ಲಿ ಸಿಂಹಗಡ (ಕೊಂಡಣ), ಪುರಂದರ, ರಾಜಗಡ, ತೋರಣ, ಸಿವನೇರಿ ಮುಂತಾದ ಕೋಟೆಗಳಿದ್ದವು.

೨ ಸಾತಾರೆ ವಾಯಿಪ್ರಾಂತವು ಇದರಲ್ಲಿ ಸಾತಾರಾ, ಸಜ್ಜನಗಡ, ಪಾಂಡವಗಡ ಮುಂತಾದಕೋಟೆಗಳಿದ್ದವು.

೩ ಕರಹಾಡಪ್ರಾಂತ. ಇದರಲ್ಲಿ ವಸಂತಗಡ ಮುಂತಾದಕೋಟೆಗಳಿದ್ದವು.

೪ ಪನ್ಹಾಳಪ್ರಾಂತ. ಇದರಲ್ಲಿ ಪನ್ಹಾಳ, ವಿಶಾಲಗಡ ಮುಂತಾದಕೋಟೆಗಳಿದ್ದವು.

೫ ಕೊಂಕಣ ಬಂಧಾರಿನಳದುರ್ಗಪ್ರಾಂತವು. ಇದರಲ್ಲಿ ಸಿಂಧುದುರ್ಗ, ವಿಜಯದುರ್ಗ, ಖಾಂದೇರಿ, ರಾಯದುರ್ಗ, ಪ್ರತಾಪಗಡ, ಲಿಂಗಾಣ ಮುಂತಾದ ಕೋಟೆಗಳಿದ್ದವು.

೬ ತ್ರಿಯಂಬಕಪ್ರಾಂತ. ಇದರಲ್ಲಿ ತ್ರಿಯಂಬಕ, ಸಿಂಧಗಡ ಮುಂತಾದ ಕೋಟೆಗಳಿದ್ದವು.

೭ ಬಗಲಾಣಪ್ರಾಂತ. ಇದರಲ್ಲಿ ಸಾಲ್ಹೇರಿ ಮುಂತಾದಕೋಟೆಗಳಿದ್ದವು.

೮ ಧಾರವಾಡ ಚಿತ್ರದುರ್ಗಗಳನ್ನೊಳಗೊಂಡ ವನಗಾಡುಪ್ರಾಂತವು. ಇದರಲ್ಲಿ ಚಿತ್ರದುರ್ಗ, ಕಾಂಚನಗಡ ಮುಂತಾದಕೋಟೆಗಳಿದ್ದವು.

೯ ಫೋಂಡ ಬಿದನೂರಪ್ರಾಂತ. ಇದರಲ್ಲಿ ಕಲಬುರ್ಗಿ, ಕೃಷ್ಣಗಡ ಮುಂತಾದಕೋಟೆಗಳಿದ್ದವು.

೧೦ ಕೊಲ್ಹಾರಬಾಳಾಪುರಪ್ರಾಂತ. ಇದರಲ್ಲಿ ಕೊಲ್ಹಾರ ಮುಂತಾದಕೋಟೆಗಳಿದ್ದವು.

೧೧ ಶ್ರೀರಂಗಪಟ್ಟಣಪ್ರಾಂತ.

೧೨ ಕರ್ನಾಟಕಜಗದೇವಗಡಪ್ರಾಂತ.

೧೩ ವೆಲ್ಲೂರಪ್ರಾಂತ.

೧೪ ಚಂದಿ ಅಥವಾ ಜಿಂಜೀಪ್ರಾಂತ.

ನಾಗಿದ್ದನು. ದಾಂಗ, ಬಲ್ಸಾಣ, ರಾಮನಗರ (ಸುರತ ಜಿಲ್ಲೆಯಲ್ಲಿ), ಮುಂಬಯಿಯ ಉತ್ತರಕ್ಕಿದ್ದ ಕೊಂಕಣವು, ಪುಣೆಯ ವರೆಗಿದ್ದ ದೇಶವು ಇವೆಲ್ಲ ಇವನ ಆಡಳಿತಕ್ಕೆ ಒಳಗಾಗಿದ್ದವು. ದಕ್ಷಿಣಭಾಗವು ಅಣ್ಣಾಜಿ ದತ್ತುವಿನ ವಶದಲ್ಲಿತ್ತು. ಅದರೊಳಗೆ ಮುಂಬಯಿಯ ತೆಂಕಲಿಗಿದ್ದ ಕೊಂಕಣವೂ ಸಾವಂತವಾಡಿಯೂ ಕಾರವಾರ ಜಿಲ್ಲೆಯ ಸಮುದ್ರ ದಂಡೆಯ ಊರುಗಳೂ ಸೇರಿದ್ದವು. ಆಗ್ನೇಯ ಭಾಗವು ದತ್ತಾಜಿಪಂತನ ಕಯ್ಯೊಳಗಿತ್ತು. ಅದರೊಳಗೆ ಸಾತಾರೆ ಕೊಲ್ಹಾಪುರ ಪ್ರಾಂತಗಳೂ ತುಂಗ ಭದ್ರೆಯ ವರೆಗೆ ಹಬ್ಬಿದ ಧಾರವಾಡ, ಬೆಳಗಾವಿ, ಕೊಪ್ಪಳ ಮುಂತಾದ ಕರ್ನಾಟಕ ಪ್ರಾಂತವೂ ಇದ್ದವು. ‡ ಈ ರಾಜ್ಯದ ಹೊರತು ಕೊಪ್ಪಳದ ಆಚೆಯ ದೊಡ್ಡ ಕರ್ನಾಟಕದ ಭಾಗವು ಇತ್ತಲಾಗ ಸಿವಾಜಿಯ ಕಯ್ಸೇರಿತ್ತು. ಇದರಲ್ಲಿ ವೆಲ್ಲೂರು ಜಿಂಜಿ ಕೋಟೆಗಳೂ, ಬಳ್ಳಾರಿ, ಚಿತ್ತೂರು, ಆರ್ಕಾಡು ಪ್ರಾಂತಗಳೂ ಈಗಿನ ಮೈಸೂರು ಸಂಸ್ಥಾನದ ಪೂರ್ವ ಭಾಗವೂ ಅಡಕವಾಗಿದ್ದವು. ಈ ಪ್ರದೇಶವು ಹೊಸದಾಗಿ ಅವನ ಆಳಿಕೆಗೆ ಒಳಪಟ್ಟುದರಿಂದ ಇಲ್ಲಿ ಅವನ ಅಧಿಕಾರವು ದೃಢವಾಗಿದ್ದಿಲ್ಲ. ಈ ನಾಡಿನಲ್ಲಿ ಅವನದೊಂದು ದಂಡುಮಾತ್ರವಿತ್ತು. ಈ ಪ್ರಾಂತದೊಳಗಿದ್ದ ಸುಮಾರು ೮೦ ಕೋಟೆಗಳಲ್ಲಿ ಅವನ ದಂಡು ಇತ್ತು. ಆದ್ದರಿಂದ ಕೋಟೆಯ ಸುತ್ತ ಮುತ್ತಲಿದ್ದ ಹಳ್ಳಿಗಳು ಮಾತ್ರ ಅವನ ಅಂಕೆಯಲ್ಲಿದ್ದವೆಂದು ಹೇಳ ಬಹುದು. *

ಸಿವಾಜಿಯು ಸಾಯುವಾಗ ಇಡಿ ಕರ್ನಾಟಕವು ಅವನ ವಶವಾಗಿದ್ದಿಲ್ಲ. ಬಂಕಾಪುರ ಪ್ರಾಂತದ ದೊಡ್ಡಭಾಗವು ಮರಾಟರ ಕಯ್ಸೇರಿದ್ದರೂ

‡ ಸಿವಾಜಿಯು ತನ್ನ ರಾಜ್ಯವನ್ನು ೧೫ ಪ್ರಾಂತಗಳೊಳಗೆ ವಿಭಾಗಿಸಿದ್ದನೆಂದು ರಡ್ಡಿಯವರು ಬರೆಯುತ್ತಾರೆ.

* ಈ ಎಲ್ಲ ರಾಜ್ಯಕ್ಕೆ ಮರಾಟರು ಸ್ವರಾಜ್ಯವೆನ್ನುತ್ತಾರೆ. ಇದು ಹಿಂದೂ ರಾಜ್ಯವಾಗಬಹುದೇ ಹೊರತು ಸ್ವರಾಜ್ಯವಾಗಲಾರದು. ಇದರ ಸುತ್ತಲಿನ ಪ್ರದೇಶವನ್ನು ಮರಾಟರು ಆಗಿಂದಾಗ ಹೊಕ್ಕು ಚೌಥ ಅಥವಾ ತೆರಿಗೆಯ ನಾಲ್ಕಾಂಶವನ್ನು ಒತ್ತಾಯದಿಂದ ಎತ್ತುತ್ತಿದ್ದರು. ಅಂದರೆ ಆ ಜನರ ಸಂರಕ್ಷಣಭಾರವು ಸಿವಾಜಿಯಮೇಲೆ ಇಲ್ಲುದರಿಂದ ಅದು ಅವನ ರಾಜ್ಯವೆಂದು ಹೇಳಲಿಕ್ಕಾಗುವುದಿಲ್ಲ.

ಬಂಕಾಪುರದ ಕೋಟೆಯು ಆದಿಲ್ಶಾಹಿ ಸರದಾರನ ಕಯ್ಯಲ್ಲಿತ್ತು. ಸ್ವಾದಿ ಪ್ರಾಂತವು ಸ್ವತಂತ್ರವಾಗಿತ್ತು. ಬಿದನೂರ ನಾಯಕನೂ ಸವಣೂರ ನವಾಬನೂ ಸಿವಾಜಿಗೆ ಕಪ್ಪುಗಾಣಿಕೆಯನ್ನು ಕೊಡಲಿಕ್ಕೆ ಒಡಂಬಟ್ಟಿದ್ದರೂ ಮರಾಟರ ಅಧಿಕಾರವನ್ನು ಹಾರ ಹೊಡೆಯಲಿಕ್ಕೆ ಹಾತೊರೆಯುತ್ತಿದ್ದರು.

ಸಿವಾಜಿಯ ವಶದಲ್ಲಿ ಒಟ್ಟು ೨೮೦ ಕೋಟೆಗಳಿದ್ದವೆಂದು ಸಭಾಸದನೂ ಚಿಟ್ನೀಸನೂ ಬರೆಯುತ್ತಾರೆ. ಆದರೆ ಪಂಡಿತ ಯದುನಾಥ ಸರ್ಕಾರರು ಅವನ ಕೋಟೆಗಳು ೨೪೦ ಮಾತ್ರ ಇದ್ದವೆಂತಲೂ ಅವುಗಳೊಳಗೆ ೭೯ ಕೋಟೆಗಳು ಮೈಸೂರು ಮದ್ರಾಸ ಸೀಮೆಗಳಿಗೆ ಸೇರಿದ್ದವೆಂತಲೂ ಬರೆಯುತ್ತಾರೆ.

ಸಿವಾಜಿಯ ರಾಜ್ಯದ ವಾರ್ಷಿಕೋತ್ಪನ್ನವು ಎಷ್ಟಿತ್ತೆಂಬುದು ಸರಿಯಾಗಿ ಗೊತ್ತಾಗುವುದಿಲ್ಲ. ಚಿಟ್ನೀಸನು ಸುಮಾರು ನಾಲ್ವತ್ತು ಕೋಟಿ ರೂಪಾಯಿ ಇತ್ತೆಂದು ಬರೆಯುತ್ತಾನೆ. ಆದರೆ ಇದು ಆನೆಗುಂದಿ ಸಂಸ್ಥಾನದ ಲೆಕ್ಕವೆಂದು ಧಾರಾಳವಾಗಿ ಹೇಳಬಹುದು. ಸಭಾಸದನು ತೆರಿಗೆಯ ಉತ್ಪನ್ನವು ೫ ಕೋಟಿ ರೂಪಾಯಿಯೆಂತಲೂ ಚೌಥಾಯಿಯ ಉತ್ಪನ್ನವು ೪ ಕೋಟಿ ರೂಪಾಯಿಯೆಂತಲೂ ಒಟ್ಟು ವಾರ್ಷಿಕೋತ್ಪನ್ನವು ೯ ಕೋಟಿ ರೂಪಾಯಿಯೆಂತಲೂ ಬರೆಯುತ್ತಾನೆ. ಇದು ಕೂಡ ಕಾಗದದ ಮೇಲಣ ಲೆಕ್ಕವೆಂತಲೂ ನಿಜವಾಗಿ ಒಂದೆರಡು ಕೋಟಿ ರೂಪಾಯಿ ಇರಬಹುದೆಂತಲೂ ಪಂಡಿತ ಯದುನಾಥ ಸರ್ಕಾರರು ಅಭಿಪ್ರಾಯಪಡುತ್ತಾರೆ.

ಸಿವಾಜಿಯ ಚರಾಸ್ತಿಯ ವಿವರವು ಸಭಾಸದನ ಬಖರದಲ್ಲಿಯೂ ತರೀಖ–ಈ–ಸಿವಾಜಿ ಎಂಬ ಪಾರ್ಸಿಗ್ರಂಥದಲ್ಲಿಯೂ ಕಂಡು ಬರುತ್ತದೆ. ಅವುಗಳಿಂದ ಸಿವಾಜಿಯು ಸಾಯುವಾಗ ಅವನ ಬೊಕ್ಕಸದಲ್ಲಿ ಸುಮಾರು ೩ ಕೋಟಿ ರೂಪಾಯಿ ಬೆಲೆ ಬಾಳುವ ೭೫ ಲಕ್ಷ ಚಿನ್ನದ ನಾಣ್ಯಗಳೂ ೫೫ ಲಕ್ಷ ಬೆಳ್ಳಿಯ ನಾಣ್ಯಗಳೂ ೧೨॥ ಖಂಡಿ ಚಿನ್ನವೂ ೫೦ ಖಂಡಿ ಬೆಳ್ಳಿಯೂ ೧೦ ಕೋಟಿ ರೂಪಾಯಿಯ ಬೆಲೆಯುಳ್ಳ ಹರಳುಕಲ್ಲುಗಳೂ ೫ ಕೋಟಿ ರೂಪಾಯಿ ಬೆಲೆಬಾಳುವ ವಸ್ತ್ರಗಳೂ ಇದ್ದವೆಂದು ಗೊತ್ತಾಗುತ್ತದೆ. ಚಿನ್ನದ ನಾಣ್ಯಗಳೊಳಗೆ ೧೨ ಲಕ್ಷ ಧಾರವಾಡಿ ನಾಣ್ಯಗಳೂ

೩ ಲಕ್ಷ ಆದವಾನಿ ನಾಣ್ಯಗಳೂ ೧॥ ಲಕ್ಷ ತಾಡಪತ್ರಿ ನಾಣ್ಯಗಳೂ ಇದ್ದವು.

೧೭ ನೆಯ ಶತಮಾನದಲ್ಲಿ ಅರಸೊತ್ತಿಗೆ (ಅರಸುತನವು) ಯು ಈಗಿನಂತೆ ವಿಸ್ತಾರವಾಗಿ ಟಿಸಲೊಡೆದು ಪ್ರಜೆಗಳ ನೆತ್ತರವನ್ನು ನಾನಾ ಬಗೆಯಾಗಿ ಹೀರುತ್ತಿದ್ದಿಲ್ಲ. ಆಗಿದ್ದ ಅದರ ಅಂಗಗಳು ಒಂದು ಕಯ್ಯ ಬೆರಳುಗಳಿಂದ ಎಣಿಸುವುದಕ್ಕಾದರೂ ಸಾಕಾಗುತ್ತಿದ್ದಿಲ್ಲ. ಸಿವಾಜಿಯು ಕಾಲಕ್ಕಿದ್ದ ರಾಜ್ಯಾಂಗಗಳು ಅಥವಾ ಸರಕಾರದ ಖಾತೆಗಳಾವುವೆಂದರೆ:— ೧ ದಂಡು, ೨ ಹೊಲದ ತೆರಿಗೆಯನ್ನು ಗೊತ್ತುಮಾಡುವ ಮತ್ತು ಎತ್ತುವ ಖಾತೆ ಅಥವಾ ಮುಲ್ಕಿಖಾತೆ, ೩ ನ್ಯಾಯವಿಚಾರಣೆ ಖಾತೆ, ೪ ಪರರಾಜ್ಯ ಖಾತೆ. ಈ ಖಾತೆಗಳೊಳಗೆ ದಂಡಿನ ಖಾತೆಯೇ ಆ ಕಾಲಕ್ಕೆ ಅತಿ ಮಹತ್ವದ್ದಾಗಿತ್ತು. ಆದ್ದರಿಂದ ಅದನ್ನು ಮೊದಲು ವಿವರಿಸುವೆವು.

ಸಿವಾಜಿಯು ತನ್ನ ಪುಂಡತನವನ್ನು ಆರಂಭಿಸಿದಾಗ ಅವನ ಬಳಿಯಲ್ಲಿ ೧,೨೦೦ ಪಾಗೆಯೂ* ೨,೦೦೦ ಸಿಲ್ಲೇದಾರರೂ ಇದ್ದರು. ಮುಂದೆ ಅವನ ದಂಡು ಕ್ರಮಕ್ರಮವಾಗಿ ಬೆಳೆಯಿತು. ಅದರ ವಿವರವು ಕೆಳಗೆ ಬರೆದಂತೆ:—

| ಇಸವಿ ಸನ್ನ | ಪಾಗೆ | ಸಿಲ್ಲೇದಾರರು | ಕಾಲಾಳು |
|---|---|---|---|
| ೧೬೫೫ (ಜಾವಳಿಯನ್ನು ಹಿಡಿಕೊಂಡಬಳಿಕ) .. | ೭,೦೦೦ | ೩,೦೦೦ | ೧೦,೦೦೦ |
| ೧೬೫೯ (ಅಫಜುಲ್ಖಾನನು ಸತ್ತಬಳಿಕ) .. | ೭,೦೦೦ | ೮,೦೦೦ | ೧೨,೦೦೦ |
| ೧೬೮೦ (ಸಿವಾಜಿಯು ಸಾಯುವಾಗ) .. | ೪೫,೦೦೦ (೨೯ ದಳವಾಯಿಗಳು) | ೬೦,೦೦೦ (೩೧ ದಳವಾಯಿಗಳು) | ೧,೦೦,೦೦೦ (೩೬ ದಳವಾಯಿಗಳು) |

* ಪಾಗೆಯ ಕುದುರೆಗಳು ಸಿವಾಜಿಯ ಸ್ವಂತ ಕುದುರೆಗಳಾಗಿದ್ದವು. ಅವುಗಳ ಸಂರಕ್ಷಣೆಯು ಅವನ ಖರ್ಚಿನಿಂದಲೇ ಆಗುತ್ತಿತ್ತು. ಸಂಬಳ ಕೊಟ್ಟು ಇಟ್ಟುಕೊಂಡವರೇ ಸಿಲ್ಲೇದಾರರು.

ನಮ್ಮ ಚರಿತ್ರನಾಯಕನ ಬೆಳವಣಿಗೆಯ ಮೂಲಾಧಾರವು ಕಾಲಾಳು ಗಳೇ ಸರಿ. ಇವರು ಕೊಂಕಣದ ನಿವಾಸಿಗಳಾಗಿದ್ದರೂ ಎರಡು ವರ್ಗದ ಜನರಾಗಿದ್ದರು:—೧ ಗುಡ್ಡಗಾಡಿನಲ್ಲಿ ಮನೆಮಾಡಿಕೊಂಡಿದ್ದ **ಮಾವ ಳರೂ** ೨ ಬೈಲು ಸೀಮೆಯಲ್ಲಿ ವಾಸವಾಗಿದ್ದ **ಹೆಟಕಾರಿಯರೂ.** ಇವ ರಿಬ್ಬರೂ ದೊಡ್ಡ ಕಲ್ಲುಬಂಡೆಗಳನ್ನೂ ಎತ್ತರವಾದ ಕೋಟೆಯ ಗೋಡೆ ಗಳನ್ನೂ ಏರುವುದರಲ್ಲಿ ನೆಗಳ್ತೆಪಡೆದಿದ್ದರು. ಇವರಿಬ್ಬರೂ ತಮ್ಮತಮ್ಮ ತುಬಾಕಿ ಕತ್ತಿ ಡಾಲು ಬಿಲ್ಲುಬಾಣಗಳನ್ನು ತೆಗೆದುಕೊಂಡು ಬರುತ್ತಿದ್ದರು. ಅವರ ತುಬಾಕಿಗಳಿಗೆ ಬೇಕಾದ ಮದ್ದುಗುಂಡುಗಳನ್ನು ಮಾತ್ರ ಸರಕಾರ ದವರು ಕೊಡುತ್ತಿದ್ದರು. ಅವರ ಪೋಷಾಕು ಸಾದಾ. ಲಗಳಿಚಣ್ಣ ಅಥವಾ ಪಂಚೆಯೂ ಉದ್ದವಾದ ನಡುಕಟ್ಟೂ ಕಪನಿಯೂ ರುಮಾಲವೂ ಅವರ ಉಡಿಗೆತೊಡಿಗೆಗಳಾಗಿದ್ದವು. ಹೆಟಕಾರಿಯರು ಗುರಿಹೊಡೆಯುವುದರಲ್ಲಿ ಜಾಣರಾಗಿದ್ದಂತೆ, ಮಾವಳರು ಮಲ್ಲಯುದ್ಧದಲ್ಲಿಯೂ ಕತ್ತಿಕಾದಾಟ ದಲ್ಲಿಯೂ ನಿಪುಣರಾಗಿದ್ದರು. ಎರಡೂ ವರ್ಗದವರು ಕೋಟೆಯ ಗೋಡೆಗಳ ನ್ನು ಏರುವುದರಲ್ಲಿ ಚತುರರೂ ಧೈರ್ಯಶಾಲಿಗಳೂ ಆಗಿದ್ದರು. ಒಂಬತ್ತು ಕಾಲಾಳುಗಳಿಗೆ ಒಬ್ಬ ಬಿಲ್ಲಾಳು ಇರುತ್ತಿದ್ದನು. ೧೦ ಮಂದಿ ಕಾಲಾಳು ಗಳಿಗೆ ಒಬ್ಬ **ನಾಯಕ**ನೂ ೫೦ ಮಂದಿಗೆ ಒಬ್ಬ **ಹವಲ್ದಾರ**ನೂ ೧೦೦ ಮಂದಿಗೆ ಒಬ್ಬ **ಜಮಾದಾರ**ನೂ ೧,೦೦೦ ಕ್ಕೆ ಒಬ್ಬ **ಏಕಹಜಾರಿ**ಯೂ ೫,೦೦೦ ಕ್ಕೆ ಒಬ್ಬ **ಪಂಚಹಜಾರಿ**ಯೂ ಅಧಿಕಾರಿಗಳಾಗಿದ್ದರು. ಇವರೆಲ್ಲರ ಮೇಲೆ **ಸರನೌಬತ್ತ**ನಿದ್ದನು. ೨,೦೦೦ ಮಾವಳರು ಸಿವಾಜಿಯ ಬೆನ್ನು ಗಾವಲುಗಾರರಾಗಿದ್ದರು. ಅವರ ಉಡುಪುತೊಡಪುಗಳು ಬಹಳ ಬೆಲೆ ಯುಳ್ಳವಾದ್ದರಿಂದ ಜನರ ಕಣ್ಣಿಗೆ ಅವರು ಚಂದವಾಗಿ ಕಾಣಿಸುತ್ತಿದ್ದರು.

ಮರಾಟರ ಕಾಲಾಳುಗಳಲ್ಲಿ ಎರಡು ತರದ ಜನರಿದ್ದಂತೆ ಅವರ ರಾಹುತರಲ್ಲಿ ಎರಡು ಪ್ರಕಾರದ ಜನರಿದ್ದರು:—**೧ ಸಿಲ್ಲೇದಾರರು,** ೨ **ಬಾರ್ಗೀರರು.** ಸಿಲ್ಲೇದಾರರಿಗೆ ಸ್ವಂತ ಕುದುರೆಗಳೂ ಶಸ್ತ್ರಾಸ್ತ್ರಗಳೂ ಇರು ತ್ತಿದ್ದವು. ಅವರು ತಮಗೆ ಕೊಡತಕ್ಕ ಪ್ರತಿಫಲವನ್ನು ಗೊತ್ತುಮಾಡಿಕೊಂಡು ಯುದ್ಧದಲ್ಲಿಯಾಗಲಿ ದಂಡಯಾತ್ರೆಯಲ್ಲಿಯಾಗಲಿ ಬೇರೆಯವರಿಗೆ ನೆರ

ವಾಗುತ್ತಿದ್ದರು. ಅವರಲ್ಲಿ ದೇಶಾಭಿಮಾನವು ಎಳ್ಳಷ್ಟಾದರೂ ಇದ್ದಿಲ್ಲ. ಅವರು ಬಾಡಿಗೆಯ ಸವಾರರೆಂದರೂ ಸಲ್ಲುವುದು. ಮೊಗಲರಾಗಲಿ ಅದಿಲ್ಶಾಹಿಯವರಾಗಲಿ ಅವರು ಬೇಡಿದಷ್ಟು ಹಣಕೊಡಲೊಡಂಬಟ್ಟರೆ ತೀರಿತು; ಅವರು ತಮ್ಮ ದೇಶಬಾಂಧವರನ್ನು ಗೋಳಾಡಿಸಲಿಕ್ಕೆ ಅನುವಾಗುತ್ತಿದ್ದರು. ಸಿವಾಜಿಯು ಹಣಕೊಟ್ಟಾಗ ಅವನಿಗೆ ನೆರವಾಗುತ್ತಿದ್ದರು. ಅವರು ಯಾವ ಅರಸನ ಆಳಾಗದೆ, ಧನಪಿಶಾಚಿಯ ಆಳಾಗಿದ್ದರೆಂದು ಧಾರಾಳವಾಗಿ ಹೇಳಬಹುದು. ಆದರೆ ಬಾರ್ಗೀರರು ಸಿವಾಜಿಯು ಸಂಬಳಕ್ಕೆ ಇಟ್ಟುಕೊಂಡ ಆಳುಗಳಾಗಿ ಅವನ ಅಂಕೆಯಲ್ಲಿರುತ್ತಿದ್ದರು. ಸಿವಾಜಿಯು ಆಗಿಂದಾಗ ಸಿಲ್ಲೇದಾರರ ನೆರವನ್ನು ಕೇಳುತ್ತಿದ್ದನು. ಮುಂದೆ ಅವರ ಪುಂಡಾಟಿಗೆಯನ್ನು ತಾಳಲಾರದೆ ಅದನ್ನು ನಿಲ್ಲಿಸಲಿಕ್ಕೆ ತನ್ನ ರಾಜ್ಯವು ಬೆಳೆದಂತೆ ತನ್ನ ಪಾಗೆಯನ್ನು ಹೆಚ್ಚಿಸತೊಡಗಿದನು.

ಸಿವಾಜಿಯ ಪಾಗೆಯು ಸುವ್ಯವಸ್ಥಿತವಾಗಿತ್ತು. ೨೫ ಮಂದಿ ರಾಹುತರಿಗೆ ಒಬ್ಬ ಹವಾಲ್ದಾರನೂ ೧೨೫ ಮಂದಿ ರಾಹುತರಿಗೆ (ಒಂದು ಜುಮ್ಲೆಗೆ) ಒಬ್ಬ ಜಮಾದಾರನೂ ೫ ಜುಮ್ಲೆಗಳಿಗೆ (೬೨೫) ಒಬ್ಬ ಸುಬೇದಾರನೂ ೧೦ ಸುಬೆಗಳಿಗೆ ಒಬ್ಬ ಪಂಚಹಜಾರಿಯೂ ಅಧಿಕಾರಿಗಳಾಗಿದ್ದರು. ಈ ಸುಬೇದಾರ ಪಂಚಹಜಾರಿಗಳಿಗೆ ಸಾಹಾಯ್ಯ ಮಾಡಲಿಕ್ಕೆ ಅವರ ಕಯ್ಕೆಳಗೆ ಒಬ್ಬ ಮುಜುಮುದಾರ (ಲೆಕ್ಕಿಗ)ನೂ ಒಬ್ಬ ಅಮೀನ (ಕಾರಕೂನ)ನೂ ಇರುತ್ತಿದ್ದರು. ಮೊದಲು ಕಾಲಾಳುಗಳಿಗೂ ರಾಹುತರಿಗೂ ಬೇರೆಬೇರೆ ಸರನೌಬತ್ತರಿದ್ದರು. ರಾಜ್ಯಾಭಿಷೇಕವಾದ ಬಳಿಕ ಈ ಎರಡೂ ಸ್ಥಳಗಳು ಕಡಮೆಯಾದ್ದರಿಂದ ಸೇನಾಪತಿಯೇ ಎಲ್ಲ ದಂಡಿನ ಮುಖ್ಯಸ್ಥನಾದನು.

ನಮ್ಮ ಚರಿತ್ರನಾಯಕನ ದಂಡಿನಾಡಳಿತವು ಅತ್ಯುಗ್ರವಾಗಿತ್ತು. ಪ್ರತಿಯೊಬ್ಬನು ತನ್ನ ಮೇಲಧಿಕಾರಿಯ ಅಪ್ಪಣೆಯನ್ನು ಮೀರಿದರೆ ಕಠಿಣ ಶಿಕ್ಷೆಗೆ ಗುರಿಯಾಗುತ್ತಿದ್ದನು. ಮಳೆಗಾಲದೊಳಗೆ ಮರಾಟರ ದಂಡು ಗೊತ್ತುಮಾಡಿದ ಬೇರೆಬೇರೆ ಸ್ಥಳಗಳಲ್ಲಿ ಇರುತ್ತಿತ್ತು. ಪ್ರತಿ ವರ್ಷ ವಿಜಯದಶಮಿಯ ದಿವಸ ಸಿವಾಜಿಯು ತನ್ನ ಎಲ್ಲ ದಂಡನ್ನು ಒಂದೇ ಸ್ಥಳದಲ್ಲಿ

ಕೂಡಿಸಿ, ಅದನ್ನು ತಾನೇ ನೋಡಿ ಜನರನ್ನು ಹುರಿದುಂಬಿಸುತ್ತಿದ್ದನು. ಹೊಸದಾಗಿ ದಂಡಿನಲ್ಲಿ ಸೇರಲೆಳಸುವವರನ್ನು ಸಿವಾಜಿಯು ತಾನೇ ನೋಡಿ ತನ್ನ ದಂಡಿನಲ್ಲಿದ್ದವರಾರಾದರೂ ಹೊಣೆಯಾದರೆ ಮಾತ್ರ ಅವರನ್ನು ಇಟ್ಟುಕೊಳ್ಳುತ್ತಿದ್ದನು. ಯುದ್ಧಕ್ಕಾಗಲಿ ದಂಡಯಾತ್ರೆಗಾಗಲಿ ಹೊರಡುವಾಗ ಎಲ್ಲ ದಂಡಾಳುಗಳ ಸಾಮಾನುಗಳ ಪಟ್ಟಿಯನ್ನು ಮಾಡಿಸಿ ಯುದ್ಧ ಅಥವಾ ದಂಡಯಾತ್ರೆಯು ಮುಗಿದ ಬಳಿಕ ಆ ಪಟ್ಟಿಯಲ್ಲಿ ಕಾಣಿಸಿದ ಸಾಮಾನುಗಳಿಗಿಂತ ಹೆಚ್ಚಿಗಿದ್ದ ಸಾಮಾನುಗಳನ್ನು ಸರಕಾರಕ್ಕೆ ಜಮೆ ಮಾಡಿಕೊಳ್ಳುತ್ತಿದ್ದನು. ಯುದ್ಧಕ್ಕೆ ಹೊರಡುವಾಗ ಹೆಂಗಸರನ್ನು ಸಂಗಡ ಒಯ್ಯಕೂಡದೆಂದು ಕಟ್ಟಪ್ಪಣೆಯಿತ್ತು. ಯುದ್ಧದಲ್ಲಿ ಹೆಂಗಸು ಹುಡುಗರು ಆಕಳು ಹೊಲಮಾಡುವವರನ್ನು ನೋಯಿಸಕೂಡದೆಂದು ನಿರ್ಬಂಧವಿತ್ತು. ಜಾಣರೂ ನಂಬಿಗಸ್ಥರೂ ಆದ ಸುದ್ದಿಕಾರರು ದಂಡಿನವರ ಸ್ಥಿತಿಗತಿ ವಿಚಾರಗಳನ್ನು ದಿನಾಲು ತಪ್ಪದೆ ತಿಳಿಸುತ್ತಿದ್ದರು. ಕಾಳಗದಲ್ಲಿ ಗಾಯಹೊಂದಿದವರಿಗೂ ಹೆಚ್ಚಿನ ಧೈರ್ಯ ಸಾಹಸ ಕುಶಲತೆಯನ್ನು ತೋರಿಸಿದವರಿಗೂ ಸಿವಾಜಿಯು ಇನಾಮನ್ನು ಕೊಡುತ್ತಿದ್ದನೆ ಹೊರತು ಜಹಗೀರನ್ನು ಹಾಕಿಕೊಡುತ್ತಿದ್ದಿಲ್ಲ. ದೇವ ಬ್ರಾಹ್ಮಣರಿಗೆ ಮಾತ್ರ ಸಿವಾಜಿಯು ಭೂಮಿಗ್ರಾಮಗಳನ್ನು ಇನಾಮಾಗಿ ಕೊಡುತ್ತಿದ್ದನು. ಮುಸಲ್ಮಾನರಿಂದ ಗೆದ್ದ ನಾಡಿನಲ್ಲಿದ್ದ ಮಸೀದೆ, ದರ್ಗಾ ಮುಂತಾದವುಗಳಿಗೆ ಇದ್ದ ಇನಾಮಭೂಮಿಯನ್ನು ಸಿವಾಜಿಯು ಎಂದೂ ಕಸಕೊಳ್ಳಲಿಲ್ಲ. ಕಾಳಗ ಸುಲಿಗೆಗಳಲ್ಲಿ ಸಿಕ್ಕ ಹೆಂಗಸರ ಮಾನರಕ್ಷಣೆ ಮಾಡುವುದರಲ್ಲಿ ಅವನಷ್ಟು ಹೆಸರುವಾಸಿಯಾದ ಅರಸರು ತೀರ ಅಪರೂಪ. ದಂಡಿನವರಿಂದಾಗಲಿ ಉಳಿದ ಸರಕಾರದ ಉದ್ಯೋಗಸ್ಥರಿಂದಾಗಲಿ ಹಳ್ಳಿಗಾಡಿನ ಜನರಿಗೆ ತೊಂದರೆಯಾಗದಂತೆ ಅವನು ಯಾವಾಗಲೂ ಜಾಗರೂಕತೆಯಿಂದ ಏರ್ಪಾಡುಗಳನ್ನು ಮಾಡುತ್ತಿದ್ದನು. ಅಧಿಕಾರಿಗಳು ತಮ್ಮ ಇನಾಮು ಸಂಬಳಗಳನ್ನು ಬಡರೈತರಿಂದ ತೆಗೆದುಕೊಳ್ಳುವುದಕ್ಕೆ ಅವನು ಎಂದೂ ಅಪ್ಪಣೆಕೊಡುತ್ತಿದ್ದಿಲ್ಲ. ಅವರಿಗೆ ಸಲ್ಲತಕ್ಕ ಎಲ್ಲ ಹಣವು ಬೊಕ್ಕಸದಿಂದ ದೊರೆಯುತ್ತಿತ್ತು. ತೆರಿಗೆಯೆತ್ತುವ ಕಮಾವಿಸದಾರರ ಹೊರತು ಉಳಿದ ಸರಕಾರದ ಉದ್ಯೋಗಸ್ಥರಿಗೆ ರೈತರಿಂದ ಒಂದು ಕಾಸನ್ನಾದರೂ ತೆಗೆದು

ಕೊಳ್ಳುವ ಅಧಿಕಾರವಿದ್ದಿಲ್ಲ. ಆದ್ದರಿಂದ ರೈತರಿಗೆ ಮುಸಲ್ಮಾನರ ಆಳಿಕೆ ಗಿಂತ ನಮ್ಮ ಚರಿತ್ರನಾಯಕನ ಆಳಿಕೆಯು ಹೆಚ್ಚು ಪ್ರಿಯಕರವಾಗಿತ್ತು.

ನಮ್ಮ ಚರಿತ್ರನಾಯಕನ ದಂಡಿನಲ್ಲಿದ್ದ ಆನೆ ಒಂಟೆ ತೋಪುಗಳ ಲೆಕ್ಕವು ಸರಿಯಾಗಿ ತಿಳಿಯುವುದಿಲ್ಲ. ಸಭಾಸದನು ೧,೨೬೦ ಆನೆಗಳಿದ್ದ ವೆಂತಲೂ ಚಿಟ್ನೀಸನು ೩೦೦ ಆನೆಗಳಿದ್ದವೆಂತಲೂ ಬರೆಯುತ್ತಾರೆ. ತರೀ—ಖೀ—ಸಿವಾಜಿಯಲ್ಲಿ ೩,೦೦೦ ಒಂಟೆಗಳಿದ್ದವೆಂತಲೂ ಚಿಟ್ನೀಸ ಬಖರ ದಲ್ಲಿ ೧,೫೮೦ ಒಂಟೆಗಳಿದ್ದವೆಂತಲೂ ಲೇಖವಿದೆ. ಕೋಟೆಗಳ ಸಂರಕ್ಷ ಣಾರ್ಥವಾಗಿಟ್ಟ ತೋಪುಗಳ ಹೊರತು ಸಿವಾಜಿಯ ಸೇನೆಯಲ್ಲಿ ೨೦೦ ತೋಫುಗಳಿದ್ದವೆಂತಲೂ ಪ್ರತಿಯೊಂದು ತೋಫನ್ನು ಎಳೆಯಲಿಕ್ಕೆ ಕೆಲವು ಆನೆಗಳೂ ಅದನ್ನು ಕಾಪಾಡಲಿಕ್ಕೆ ಒಂದು ಕಾಲಾಳಿನ ಪಥಕವೂ ಇದ್ದ ವೆಂದು ಚಿಟ್ನೀಸನು ತನ್ನ ಬಖರದಲ್ಲಿ ಬರೆಯುತ್ತಾನೆ. ಆದರೆ ಪಂಡಿತ ಸರ್ಕಾರರ ಅಭಿಪ್ರಾಯದಂತೆ ಇವನ ಲೇಖವು ವಿಶ್ವಸನೀಯವಾಗಿರು ವುದಿಲ್ಲ.

ದಂಡಿನ ತರುವಾಯ ಅಥವಾ ಅದಕ್ಕೂ ಹೆಚ್ಚಿನ ಮಹತ್ವವುಳ್ಳ ಖಾತೆಯೆಂದರೆ ಮುಲ್ಕಿಖಾತೆಯು. ತಂಡುಲವ್ ಪ್ರಸ್ತಮೂಲವ್ ಎಂಬ ಸಕ್ಕದ ನಾಣ್ಣುಡಿಯಂತೆ ರಾಜ್ಯವನ್ನು ಬೆಳಿಸುವ ದಂಡಿಗಿಂತ ದಂಡನ್ನು ಇಟ್ಟುಕೊಳ್ಳಲಿಕ್ಕೆ ಸಾಧನವಾದ ಹಣವನ್ನು ಒದಗಿಸಿಕೊಡುವ ಮುಲ್ಕಿಖಾತೆಯೇ ದಂಡಿನ ಖಾತೆಗಿಂತ ಹೆಚ್ಚಿನದೆಂದು ಕೆಲವರು ಅಭಿ ಪ್ರಾಯಪಡಬಹುದು. ಹಣದೊರಕಿಸಿ ಸಾಮಾನ್ಯವಾಗಿ ಕುಟುಂಬವನ್ನು ಸಂರಕ್ಷಿಸುವ ತಂದೆಗಿಂತ ಸಾಕಿಸಲಹುವ ತಾಯಿಯು ಹೇಗೆ ಮಕ್ಕಳಿಗೆ ಹೆಚ್ಚು ಪೂಜ್ಯಳೋ ಹಾಗೆ ನೆರೆಹೊರೆಯುವರನ್ನು ಕೊಂದು ಸುಲಿದು ನೋಯಿಸುವ ದಂಡಿಗಿಂತ ತಮ್ಮ ತಮ್ಮ ಸಂಸಾರವನ್ನು ಸುಖಕರವಾಗಿ ಸಾಗಿಸುಗೊಡುವ ಮುಲ್ಕಿನ್ಯಾಯ—ಖಾತೆಗಳು ಪ್ರಜೆಗಳಿಗೆ ಹೆಚ್ಚು ಪೂಜ್ಯವಾಗಿಯೂ ಪ್ರಿಯಕರವಾಗಿಯೂ ಇರುತ್ತವೆ. ಮುಲ್ಕಿಖಾತೆಯಿಂದ ಜನರ ಸ್ವತ್ತನ್ನೂ ನ್ಯಾಯಖಾತೆಯಿಂದ ಜನರ ನೀತಿಮತ್ತತೆಯನ್ನೂ ದಕ್ಷತೆ ಯಿಂದಲೂ ಜಾಗರೂಕತನದಿಂದಲೂ ಕಾಪಾಡುವ ಸರಕಾರವೇ ಒಳ್ಳೆಯ

ಸರಕಾರವು. ಏನಾದರೊಂದು ನೆವನಮಾಡಿ, ಜನರ ವಿತ್ತಾಪಹಾರ ಮಾಡುವ ಮುಲ್ಕಿಖಾತೆಯೂ ಮನಸ್ಸಿಗೆ ಬಂದಂತೆ ಅನೀತಿಯ ನಿಯಮ ಗಳನ್ನು ಮಾಡಿ ಜನರ ನೀತಿಯನ್ನು ಕೆಡಿಸಿ, ಅವರನ್ನು ತಮ್ಮತಮ್ಮೊಳಗೆ ಬಡಿದಾಡಲಿಕ್ಕೆ ಹಚ್ಚುವ ನ್ಯಾಯಖಾತೆಯೂ ಉಳ್ಳ ಸರಕಾರವು ಕೆಟ್ಟ ಸರಕಾರವೆಂದು ನಿಸ್ಸಂದೇಹವಾಗಿ ಹೇಳಬಹುದು.

ಆರಂಭದಲ್ಲಿ ಸಿವಾಜಿಗೆ ನಾಲ್ಕು ಜನರು ಮಾತ್ರ ಪ್ರಧಾನರಿದ್ದರು. ಅವನ ರಾಜ್ಯವು ಬೆಳೆದಂತೆ ಅವನು ಅವರ ಸಂಖ್ಯೆಯನ್ನು ಹೆಚ್ಚಿಸಿದನು. ೧೬೭೪ ರ ಸುಮಾರಕ್ಕೆ ಅವನಿಗೆ ಎಂಟು ಮಂದಿ ಪ್ರಧಾನರಿದ್ದರು ಮತ್ತು ಅವರಿಗೆ ಪಾರ್ಸಿಭಾಷೆಯ ಹೆಸರುಗಳಿದ್ದವು. ರಾಜ್ಯಾಭಿಷೇಕದ ಕಾಲದಲ್ಲಿ ಅವನು ಪಾರ್ಸಿಹೆಸರುಗಳನ್ನು ತೆಗೆದುಹಾಕಿ, ಅವರಿಗೆಲ್ಲ ಸಂಸ್ಕೃತ ಹೆಸರು ಗಳನ್ನು ಕೊಟ್ಟನು. ಈ ಅಷ್ಟಪ್ರಧಾನರ ಹೆಸರುಗಳನ್ನೂ ಅವರಿಗೆ ಒಪ್ಪಿ ಸಿದ ಕೆಲಸವನ್ನೂ ಕೆಳಗೆ ಕೊಡುತ್ತೇವೆ:—

೧. **ಮುಖ್ಯಪ್ರಧಾನ** (ಪೇಶವೆ). ಇವನು ಅರಸನ ಪ್ರತಿನಿಧಿ ಯಂತೆ ರಾಜ್ಯದ ಎಲ್ಲ ವ್ಯವಸ್ಥೆಯನ್ನು ನೋಡುತ್ತಿದ್ದನು. ಎಲ್ಲ ಸನದು ಸೂತ್ರ ರಾಜಪತ್ರಗಳಿಗೆ ಇವನ ರುಜುವು ಅವಶ್ಯವಾಗಿ ಬೇಕಾಗುತ್ತಿತ್ತು. ಸಿವಾಜಿಯು ರಾಜಧಾನಿಯಲ್ಲಿಲ್ಲದಾಗ ಇವನ ಸಹಿಯೊಂದೇ ಸಾಕಾಗು ತ್ತಿತ್ತು.

೨. **ಅಮಾತ್ಯ** (ಮುಜುಮುದಾರ). ಪೇಶವೆಯು ಎಲ್ಲ ರಾಜ್ಯ ದಾಡಳತೆಗೆ ಮುಖ್ಯವಾಗಿದ್ದಂತೆ ಅಮಾತ್ಯನು ಇಡಿ ರಾಜ್ಯದ ಲೆಕ್ಕಕ್ಕೆ ಮುಖ್ಯನಾಗಿದ್ದನು. ಅವನ ರುಜುವಿಲ್ಲದ ಲೆಕ್ಕವು ಸರಿಯಾದ್ದೆಂದು ಎಣಿಸ ಲ್ಪಡುತ್ತಿದ್ದಿಲ್ಲ.

೩. **ಮಂತ್ರಿ** (ವಾಕಿಯಾನವೀಸ). ಅರಸನು ಮಾಡುವ ಕೆಲಸ ಗಳನ್ನೂ ರಾಜಸಭೆಯಲ್ಲಿ ನಡೆಯುವ ಸಂಗತಿಗಳನ್ನೂ ಇವನು ದಿನಾಲು ಬರೆದಿಡುವುದಲ್ಲದೆ, ಅರಸನನ್ನು ಕಾಣಲಿಕ್ಕೆ ಬಂದ ಜನರ ವ್ಯವಸ್ಥೆ ಯನ್ನೂ ಅರಸನ ಊಟದ ಏರ್ಪಾಡನ್ನೂ ನೋಡುತ್ತಿದ್ದನು.

೪. **ಸಚಿವ** (ಶುರುನವೀಸ). ಇವನು ಅರಸನಿಂದ ರಾಜ್ಯದೊಳಗೆ ಹೋಗುವ ಎಲ್ಲ ಪತ್ರಗಳು ಸರಿಯಾಗಿ ಬರೆದಿರುತ್ತವೋ ಇಲ್ಲವೋ ಎಂಬುದನ್ನು ನೋಡುವುದಲ್ಲದೆ, ಪರಗಣೆಮುಹಾಲುಗಳಿಂದ ಬಂದ ಲೆಕ್ಕಗಳನ್ನು ಪರೀಕ್ಷಿಸುತ್ತಿದ್ದನು.

೫. **ಸಾಮಂತ** (ಡಬೀರ). ಪರರಾಜರೊಡನೆ ಪತ್ರವ್ಯವಹಾರ ನಡಿಸುವುದು, ರಾಯಭಾರಿಗಳೊಡನೆ ಮಾತುಕಥೆಯಾಡುವುದು, ಬೇಹಿನವರಿಂದ ಪರರಾಜ್ಯಗಳ ಸುದ್ದಿಯನ್ನು ತರಿಸುವುದು ಇವೆಲ್ಲ ಕೆಲಸಗಳು ಇವನ ಕಯ್ಯಲ್ಲಿದ್ದವು.

೬. **ಸೇನಾಪತಿ** (ಸರಯಿನೌಬತ್ತ). ದಂಡಿನ ಎಲ್ಲ ಏರ್ಪಾಡಿಗೆ ಇವನು ಜವಾಬುದಾರನಾಗಿದ್ದನು.

೭. **ದಾನಾಧ್ಯಕ್ಷ** (ಪಂಡಿತರಾವ). ಬ್ರಾಹ್ಮಣ ವಿದ್ವಾಂಸರಿಗೆ ದೇಶಾವರಕೊಡುವುದೂ, ಜಾತಿಯ ಸಂಬಂಧದ ಜಗಳಗಳನ್ನು ತೀರಿಸುವುದೂ, ವ್ರತೋತ್ಸವಗಳ ತಿಥಿಗಳನ್ನು ನಿರ್ಣಯಿಸುವುದೂ, ಧರ್ಮೋಲ್ಲಂಘನ ಮಾಡಿದವರಿಗೆ ತಕ್ಕ ಶಿಕ್ಷೆಯನ್ನು ವಿಧಿಸುವುದೂ ಇವನ ಕೆಲಸಗಳಾಗಿದ್ದವು.

೮. **ನ್ಯಾಯಾಧೀಶ.** ಇವನು ಸಿವಾಜಿಯ ರಾಜ್ಯದಲ್ಲಿ ಹುಟ್ಟಿದ ದೊಡ್ಡ ದೊಡ್ಡ ನ್ಯಾಯಗಳನ್ನು ವಿಚಾರಿಸಿ, ಧರ್ಮಶಾಸ್ತ್ರಕ್ಕನುಸರಿಸಿ ತೀರ್ಪುಗಳನ್ನು ಕೊಡುತ್ತಿದ್ದನು.

ದಾನಾಧ್ಯಕ್ಷನ್ಯಾಯಾಧೀಶರು ಮಾತ್ರ ರಾಜಧಾನಿಯಲ್ಲಿ ಇಡಿವರುಷ ವಾಸಮಾಡಿಕೊಂಡಿರುತ್ತಿದ್ದರು. ಮಿಕ್ಕ ೬ ಮಂದಿ ಪ್ರಧಾನರಲ್ಲಿ ಸೇನಾಪತಿಯ ಹೊರತು ಉಳಿದವರು ಹೊತ್ತುಬಿದ್ದಾಗ ದಂಡೆತ್ತಿ ಹೋಗಿ, ಪರರಾಜ್ಯಗಳಲ್ಲಿ ಕೊಳ್ಳೆ ಸುಲಿಗೆಗಳನ್ನು ಮಾಡುತ್ತಿದ್ದರು. ಸೇನಾಪತಿಯ ಹೊರತು ಉಳಿದವರೆಲ್ಲರು ಬ್ರಾಹ್ಮಣರಾಗಿದ್ದರು. ಈ ಪ್ರಧಾನರ ಕಯ್ಕೆಳಗೆ ಕೆಲ ಬ್ರಾಹ್ಮಣರೂ ಹಲವು ಕಾಯಸ್ಥರೂ ಅಧಿಕಾರಿಗಳಾಗಿದ್ದರು. ಅವರಿಗೆ ಚಿಟ್ನೀಸ, ಫಡ್ನೀಸ, ಸಬ್ನೀಸ, ಕಾರಭಾರಿ, ಮುತಾಲಿಕ, ಮುನಸಿ ಮುಂತಾದ ಬೇರೆಬೇರೆ ಹೆಸರುಗಳಿದ್ದವು. ಸಬ್ನೀಸರು ದಂಡಾಳುಗಳ

ಪತ್ರಿಕೆಯನ್ನು ಮಾಡಿ, ಅವರಿಗೆ ಸಲ್ಲತಕ್ಕ ಸಂಬಳವನ್ನು ಆಗಿಂದಾಗ ಕೊಡುತ್ತಿದ್ದರು. ಇವರು ಮೊಗಲರ ದಂಡಿನಲ್ಲಿದ್ದ ಬಕ್ಷಿಗಳ ಕೆಲಸವನ್ನು ಮಾಡುತ್ತಿದ್ದರೂ ಅವರಿಗಿದ್ದಷ್ಟು ಮಾನವು ಇವರಿಗಿದ್ದಿಲ್ಲ. ಈ ಕೆಳಗಿನ ಅಧಿಕಾರಿಗಳೊಳಗೆ **ಬಾಳಾಜಿ ಅಬಾಜಿ** ಎಂಬ ಚಿಟ್ನೀಸನೂ, ನೀಳೋಜಿ ಎಂಬ ಮುನಸಿಯೂ ಬಲುಜಾಣರೆಂದು ಹೆಸರುವಾಸಿಯಾಗಿದ್ದರು.

ಪ್ರಧಾನರ ತರುವಾಯ ಚಿಟ್ನೀಸ-ಫಡನೀಸರೇ ದೊಡ್ಡ ಅಧಿಕಾರಿಗಳಾಗಿದ್ದರು. ಇವರು ಪೇಶವೆ-ಅಮಾತ್ಯರ ಕಾರಭಾರಿಗಳಾಗಿದ್ದರು. ಫಡನೀಸನು ಲೆಕ್ಕದ ಕಾಗದಪತ್ರಗಳನ್ನೂ ಚಿಟ್ನೀಸನು ಉಳಿದ ಕಾಗದಪತ್ರಗಳನ್ನೂ ದಿನಾಲು ಸಿವಾಜಿಯ ಬಳಿಗೆ ಒಯ್ದು, ಪ್ರಧಾನರ ಅಭಿಪ್ರಾಯಗಳನ್ನು ಅವನಿಗೆ ತಿಳಿಸಿ, ಅವನ ಇಷ್ಟವನ್ನು ಕೇಳಿಕೊಂಡು ಬರುತ್ತಿದ್ದರಾದ್ದರಿಂದ, ಇವರು ಅರಸುಪ್ರಧಾನರಿಬ್ಬರಿಗೂ ಆವಶ್ಯಕರಾಗಿದ್ದರು. ಆದಕಾರಣ ದರ್ಬಾರದಲ್ಲಿ ಇವರ ವರ್ಚಸ್ಸು ವಿಶೇಷವಾಗಿತ್ತು. ಇವರಿಬ್ಬರೊಳಗೆ ಬಾಳಾಜಿ ಅಬಾಜಿಯು ಬಲುಜಾಣನಾದ್ದರಿಂದ ಕರ್ತುಮಕರ್ತುಮ್ ಶಕ್ತಿಯುಳ್ಳವನೆಂದು ನೆಗಳ್ತೆಪಡೆದಿದ್ದನು. ಇವನು ಜಾತಿಯಿಂದ ಕಾಯಸ್ಥನಾಗಿದ್ದನು.

ಸಿವಾಜಿಯು ರಾಜ್ಯದಲ್ಲಿ ರೂಢಿಸಿದ ಕಂದಾಯದ ಕ್ರಮವನ್ನು ಆವನು ತನ್ನ ಗುರುವಾದ ದಾದೋಜಿಕೋಂಡದೇವನಿಂದ ಕಲಿತಿದ್ದನು. ಅವನ ನಾಡಿನಲ್ಲಿ ೧೪ ಪ್ರಾಂತಗಳಿದ್ದವೆಂದು ಹಿಂದೆ ಬರೆದಿರುತ್ತೇವಷ್ಟೇ.* ಪ್ರತಿಯೊಂದು ಪ್ರಾಂತಕ್ಕೆ ಒಬ್ಬೊಬ್ಬ **ಸುಬೇದಾರನಿದ್ದನು.** ಅಷ್ಟಪ್ರಧಾನರ ತರುವಾಯ ಈ ಸುಬೇದಾರರೇ ಆಗಿನ ಸರಕಾರದ ದೊಡ್ಡ ಉದ್ಯೋಗಸ್ಥರು. ಈಗಿನ ಸರಕಾರದ ಇಲಾಖಾಧಿಪತಿ (Governor) ಯಷ್ಟು ಅವರ ಅಧಿಕಾರವಿತ್ತೆಂದು ಸಾಮಾನ್ಯವಾಗಿ ಹೇಳಬಹುದು. ಪ್ರತಿಯೊಂದು ಪ್ರಾಂತದಲ್ಲಿ ಕೆಲವು ಮಹಾಲುಗಳಿದ್ದವು. ಈ ಮಹಾಲುಗಳ ಮೇಲಧಿಕಾರಿಗಳಿಗೆ **ಮಹಾಲ್ಕರಿಗಳೆನ್ನುತ್ತಿದ್ದರು.** ಇವರ ಅಧಿಕಾರವು ಸಾಧಾರಣವಾಗಿ ಈಗಿನ ಅಮುಲ್ದಾರ ಅಥವಾ ಮಾಮಲೆದಾರರಷ್ಟು ಇತ್ತೆಂದು

---

* **ಪುಟ ೩೩೦ ಅಡಿ ಟೀಪನ್ನು ನೋಡಿರಿ.**

ಹೇಳಬಹುದು. ಈ ಮಹಲ್ಕರಿಗಳ ಕಯ್ಕೆಳಗೆ ಕೆಲವು ಹಳ್ಳಿಗಳ ಗುಂಪಿ ಗೊಬ್ಬನಂತೆ ಕಮಾವಿಸದಾರರಿರುತ್ತಿದ್ದರು. ಇವರು ಸಾಮಾನ್ಯವಾಗಿ ಈಗಿರುವ ಸರಕಲ್ ಇನಸ್ಪೆಕ್ಟರ್ಸ (Circle Inspectors) ರನ್ನು ಹೋಲು ತ್ತಿದ್ದರು. ಈ ಕಮಾವಿಸದಾರರು ಹಳ್ಳಿಗೊಬ್ಬೊಬ್ಬನಂತಿದ್ದ ಗೌಡಕುಲ ಕರ್ಣಿಯರ ಸಹಾಯದಿಂದ ಸರಕಾರಕ್ಕೆ ಬರತಕ್ಕ ತೆರಿಗೆಯನ್ನು ಎತ್ತು ತ್ತಿದ್ದರು. ಈಗಿನ ರಾಜ್ಯಪದ್ಧತಿಯಲ್ಲಿ ಸುಬೇದಾರ ಮಹಾಲ್ಕರಿಗಳ ನಡುವೆ ಸಾವಿರಗಟ್ಟಲೆ ಸಂಬಳ ತಿಂಬುವ ಕಮಿಶನರ ಕಲೆಕ್ಟರ ಅಸಿಸ್ಟಂಟ ಕಲೆಕ್ಟರೆಂಬ ಯುರೋಪಿಯ ಅಧಿಕಾರಿಗಳೂ ನೂರುಗಟ್ಟಲೆ ಸಂಬಳ ತಿಂಬುವ ದೇಶೀಯ ಡಿಪುಟಿ ಕಲೆಕ್ಟರರೂ ಸೇರಿರುತ್ತಾರೆಂಬುದು ಸ್ಪಷ್ಟ ವಾಗಿ ಕಂಡು ಬರುತ್ತದೆ.

ತನ್ನ ಪ್ರಜೆಗಳು ಸುಖಿಗಳಾಗಿರಬೇಕೆಂಬ ಬಯಕೆಯು ನಮ್ಮ ಚರಿತ್ರ ನಾಯಕನಲ್ಲಿ ಬಲ್ಲಿದವಾಗಿತ್ತು. ಆದ್ದರಿಂದ ತನ್ನ ಕಮಾವೀಸರದಾರರ ಹೊರತು ಬೇರೆಯಾರೂ ಹೊಲ ಮಾಡುವ ರೈತರನ್ನು ಹಣಕಾಸಿಗೋಸುಗ ಕಾಡಕೂಡದೆಂದು ಯಾವಾಗಲೂ ಅವನು ಪ್ರಯತ್ನಪಡುತ್ತಿದ್ದನು. ಈ ಸದುದ್ದೇಶದಿಂದ ಕಾಳೆಗದಲ್ಲಿ ಕಲಿತನ ತೋರಿಸಿದ ಗಟ್ಟಿಗರಿಗೆ ಊರು ಗಳನ್ನು ಉಂಬಳಿ ಹಾಕಿಕೊಡುವ ಪದ್ಧತಿಯನ್ನು ನಿಲ್ಲಿಸಿಬಿಟ್ಟನು. ಎದೆ ಗಾರಿಕೆ ಮುತ್ಸದ್ದಿತನಗಳಿಗೋಸ್ಕರ ಹೆಸರಾದವರಿಗೆ ದ್ರವ್ಯ ವಸ್ತ್ರಾಲಂಕಾರ ಗಳನ್ನು ಮುಚ್ಚಿಗೊಡುತ್ತಿದ್ದನೇ ಹೊರತು ಭೂಮಿಯನ್ನು ಕೊಡುತ್ತಿದ್ದಿಲ್ಲ. ದಂಡಿನವರಾಗಲಿ ಬೇರೆ ಅಧಿಕಾರಿಗಳಾಗಲಿ ಜನರಿಂದ ಯಾವಕಾರಣ ದಿಂದಲೂ ಹಣ ತೆಗೆದುಕೊಳ್ಳಕೂಡದೆಂದು ಕಟ್ಟುಮಾಡಿದ್ದನು. ಹಿಂದಿನ ಮುಸಲ್ಮಾನ ಸರಕಾರದಲ್ಲಿ ತೆರಿಗೆ ಎತ್ತುತ್ತಿದ್ದ ಜಮೀದಾರ, ದೇಸಾಯಿ, ದೇಶಪಾಂಡೆ, ಸರದೇಸಾಯಿ, ನಾಡುಗೌಡ ಮುಂತಾದವರು ಸರಕಾರಕ್ಕೆ ಬರತಕ್ಕ ಹಣದಲ್ಲಿ ಕಯ್ಹಾಕಕೂಡದೆಂದು ನಿರ್ಬಂಧಮಾಡಿದ್ದಲ್ಲದೆ, ಅವರು ಊರಸುತ್ತ ಕಟ್ಟಿಸಿದ ಗೋಡೆಗಳನ್ನೂ ಕೋಟೆಗಳನ್ನೂ ಕೆಡವಿ ಹಾಕಿ ಸಿದನು. ವತನದಾರ ಗೌಡಕುಲಕರ್ಣೀಯರನ್ನು ಮಾತ್ರ ಅವನು ತಡವ ಲಿಲ್ಲ. ಅವರನ್ನು ನಿರ್ಮಾಲ್ಯವಾಗಿ ಮಾಡಿ ಮೂಲಿಗೊತ್ತುವ ಪ್ರಯತ್ನವು

ಈಗ ಬ್ರಿಟಿಷ್ ಅಮಲಿನಲ್ಲಿ ನಡೆಯಬೇಕೆಂದು ದೇವತಾ ಸಂಕಲ್ಪವಿದ್ದಂತೆ ತೋರುತ್ತದೆ. ಸಿವಾಜಿಯ ರಾಜ್ಯದಲ್ಲಿ ಸರಕಾರದಿಂದ ಬಂದ **ಸಾಹೇಬ ಕಾರಕೂನರ** ಹೊರತು ಬೇರೆಯವರು ಯಾರೂ ರೈತರಿಗೆ ಹಣ ಕೇಳ ಕೂಡದೆಂಬ ಕಟ್ಟಪ್ಪಣೆಯಿತ್ತು.

ಸಿವಾಜಿಯು ಯಾವದಾದರೊಂದು ಊರನ್ನು ಗೆದ್ದಕೂಡಲೆ ಆ ಹಳ್ಳಿಗೆ ಅಳತೆ ಮಾಡುವ ಕಾರಕೂನರು (ಬಾಂದಿನವರು) ಹೋಗಿ, ಆ ಹಳ್ಳಿಯ ಎಲ್ಲ ಭೂಮಿಯನ್ನು ಅಳೆಯುತ್ತಿದ್ದರು. ಅವರ ಅಳತೆಯ ಕಟ್ಟಿಗೆಯು ೫ ಮೊಳ, ೫ ಮುಷ್ಟಿ ಉದ್ದವಾಗಿತ್ತು. ಪ್ರತಿಯೊಬ್ಬನ ಮೊಳವು ಹೆಚ್ಚುಕಡಮೆ ಉದ್ದವಾಗಿರುವುದರಿಂದ ೧೪ **ತಸು**ಗಳ ಉದ್ದಳತೆಗೆ ಒಂದು ಮೊಳವೆಂದು ಗೊತ್ತುಮಾಡಿದ್ದರು. ಈ ಲೆಕ್ಕದಿಂದ ಅಳತೆಯ ಕಟ್ಟಿಗೆಯು ೮೦ ತಸು ಉದ್ದವಾಗಿತ್ತು. ೨೦ ಕಟ್ಟಿಗೆ ಉದ್ದ ಮತ್ತು ೨೦ ಕಟ್ಟಿಗೆ ಅಗಲವುಳ್ಳ ಭೂಮಿಗೆ ಒಂದು **ಬಿಘೆ** ಎಂತಲೂ ೧೨೦ ಬಿಘೆಗಳಿಗೆ ಒಂದು **ಚಾವರ**ವೆಂತಲೂ ಹೇಳುತ್ತಿದ್ದರು. ಈ ಮೇರೆಗೆ ಪ್ರತಿಯೊಂದು ಹಳ್ಳಿಯ ಭೂಮಿಯನ್ನು ಅಳೆದು, ಪ್ರತಿಯೊಂದು ಹೊಲದ ಒಂದು ಬಿಘೆಯ ಹುಟ್ಟುವಳಿಯನ್ನು ಗೊತ್ತುಮಾಡಿ, ಹೊಲದ ಒಟ್ಟು ಉತ್ಪನ್ನ ದಲ್ಲಿ ೨/೩ ರೈತರಿಗೂ ೧/೩ ಸರಕಾರಕ್ಕೂ ಸಲ್ಲತಕ್ಕದ್ದೆಂದು ನಿರ್ಣಯಿಸು ತ್ತಿದ್ದರು.* ಭೂಮಿಯ ಕಂದಾಯವನ್ನು ಈಗಿನಂತೆ ಹಣದಲ್ಲಿ ತೆಗೆದು ಕೊಳ್ಳದೆ, ಕಾಳಿನಲ್ಲಿ ತೆಗೆದುಕೊಳ್ಳುತ್ತಿದ್ದುದರಿಂದ ತೆರಿಗೆಗೋಸ್ಕರ ರೈತರು ಸಾಲಗಾರರಾಗುವ ಸಂಭವವಿದ್ದಿಲ್ಲ. ಬೀಳುಭೂಮಿಯನ್ನು ಊಳಲೆಳಸು ವವನಿಗೆ ಎತ್ತುಬೀಜಗಳ ಸಲುವಾಗಿ ಸರಕಾರದಿಂದ ಹಣ ದೊರೆಯು ತ್ತಿತ್ತು. ಆ ಹಣವನ್ನು ರೈತರು ೩/೪ ವಾರ್ಷಿಕ ಕಂತುಗಳಲ್ಲಿ ಮುಟ್ಟಿಸಿ ನಿಶ್ಚಿಂತರಾಗುತ್ತಿದ್ದರು.

ಪ್ರತಿಯೊಂದು ಪ್ರಾಂತಕ್ಕೆ ಒಬ್ಬ ಸುಬೇದಾರನಿರುತ್ತಿದ್ದನೆಂದು ಹಿಂದೆ ಹೇಳಿರುತ್ತೇವಷ್ಟೆ. ಎರಡುಮಹಾಲುಗಳು ಕೂಡಿ ಒಂದು ಪ್ರಾಂತವಾ

---

* ಸರಕಾರಕ್ಕೆ ೨/೫ ವೂ ರೈತನಿಗೆ ೩/೫ ವೂ ಬರುತ್ತಿತ್ತೆಂದು ಸಭಾಸದನು ಬರೆಯುತ್ತಾನೆ.

ಗುತ್ತಿತ್ತು. ಆದರ ತೆರಿಗೆಯ ಉತ್ಪನ್ನವು ೭೫,೦೦೦ ದಿಂದ ೧,೨೫,೦೦೦ ಹೊನ್ನು ಇತ್ತು. ಪ್ರತಿಯೊಬ್ಬ ಸುಬೇದಾರನಿಗೆ ವರ್ಷಕ್ಕೆ ೪೦೦ ಹೊನ್ನು ಸಂಬಳವಾಗಿಯೂ ೪೦೦ ಹೊನ್ನು ಪಲ್ಲಕ್ಕಿಯ ವೆಚ್ಚವಾಗಿಯೂ ದೊರೆಯುತ್ತಿತ್ತು. ಅವನಿಗೆ ಸಹಾಯಕನಾಗಿ ಒಬ್ಬ ಮುಜುಮದಾರನಿರುತ್ತಿದ್ದನು. ಅವನಿಗೆ ೧೦೦ ರಿಂದ ೧೨೫ ಹೊನ್ನು ಸಂಬಳವಾಗಿ ಸಿಕ್ಕುತ್ತಿತ್ತು. ಇದಲ್ಲದೆ ಅವನಿಗೆ ಅಪ್ತಾಗಿರಿ ಹಿಡಿಸಿಕೊಳ್ಳುವ ಅಧಿಕಾರವಿತ್ತು. ಈ ಅಪ್ತಾಗಿರಿಯ ಖರ್ಚನ್ನು ಸರಕಾರದವರು ಬೇರೆಯಾಗಿ ಕೊಡುತ್ತಿದ್ದರು. ಎಲ್ಲಾ ಸುಬೇದಾರರು ಬ್ರಾಹ್ಮಣರಾಗಿದ್ದರು. ಈ ಸುಬೇದಾರರಿಗೆ ನೆರವಾಗಲಿಕ್ಕೆ ಪ್ರತಿಯೊಂದು ಪ್ರಾಂತದಲ್ಲಿ ಕೆಲ ರಾಹುತರೂ ಕಾಲಾಳುಗಳೂ ಇರುತ್ತಿದ್ದರು. ಆ ಕಾಲಕ್ಕೆ ಸುಬೇದಾರನ ಕಯ್ಯಲ್ಲಿ ಮುಲ್ಕಿದಿವಾನಿಲಷ್ಕರಿ ಖಾತೆಗಳ ಅಧಿಕಾರವು ಒಟ್ಟುಗೂಡಿತ್ತೆಂದು ಹೇಳಬಹುದು. ಆದರೆ ಆ ಕಾಲಕ್ಕೆ ದಿವಾನಿಖಾತೆಯ ಪ್ರಸ್ತವು ಈಗಿನಷ್ಟು ಬೆಳೆದಿದ್ದಿಲ್ಲ. ಆಗ ದುಡ್ಡು ತಿಂದು ಪೂರ್ವವು ಪಶ್ಚಿಮವೆಂದು ಹೊಟ್ಟೆ ಹೊಟ್ಟೆ ಬಡಿಕೊಳ್ಳುವ ವಕೀಲರೂ ಅರ್ಧರೂಪಾಯಿ ಪಾವಲಿಗೆ ಪ್ರಮಾಣಮಾಡಿ ಕೋರ್ಟಿನಲ್ಲಿ ಸುಳ್ಳು ಹೇಳುವ ಸಾಕ್ಷಿದಾರರೂ ಇದ್ದಿದ್ದಿಲ್ಲ. ಇವರೆಲ್ಲ ನಮ್ಮ ಇಂಗ್ರೇಜ ಬಹದ್ದೂರರ ಪಾಶ್ಚಿಮಾತ್ಯ ನ್ಯಾಯಪದ್ಧತಿಯ ದುಷ್ಟಫಲಗಳೇ ಸರಿ. ಆ ಕಾಲಕ್ಕೆ ಈಶಪ್ರಣೀತ ನೀತಿಯ ನೇಮುಗಳೇ ಪ್ರಚಾರದಲ್ಲಿದ್ದವೇ ಹೊರತು ಕೃತ್ರಿಮ ನೇಮುಗಳು ಪ್ರಸಾರವಾಗಿದ್ದಿಲ್ಲ. ಇಷ್ಟು ಬೆಲೆಯ ಕಾಗದಗಳ ಮೇಲೆ ಬರೆದ ಸಂಗತಿಗಳು ಮಾತ್ರ ನಿಜವಾದವು; ಇಂತಹ ಅಧಿಕಾರಿಗಳ ಮುಂದೆ ಹೇಳಿದ ಮಾತುಗಳು ಮಾತ್ರ ದಿಟವಾದವು; ಇಷ್ಟು ದಿವಸಗಳಲ್ಲಿ ಕೇಳಿದ ಹಣವು ಮಾತ್ರ ತಿರುಗಿ ಕೊಡಿಸಲಿಕ್ಕೆ ಯೋಗ್ಯವಾದುದು ಎಂಬ ನೀತಿ ವಿರುದ್ಧವಾದ ನೇಮುಗಳು ಜನರ ನೀತಿಯನ್ನು ಕೆಡಿಸಿದ್ದಿಲ್ಲ. ಹಣದ ಆಸೆಗಾಗಿ ಸುಳ್ಳು ಹೇಳಲಿಕ್ಕೆ ಕಲಿಸುವ ಸಣ್ಣ ಪುಟ್ಟ ವಕೀಲರ ಸಾಲೆಗಳು ತಾಲ್ಲೂಕ ಜಿಲ್ಲಾ ಸ್ಥಳಗಳಲ್ಲಿ ನೆಲೆಗೊಂಡಿದ್ದಿಲ್ಲ. ಮುಖ್ಯವಾಗಿ ನ್ಯಾಯವಿಕ್ರಯ ಮಾಡಿ ದುಡ್ಡುಗಳಿಸುವ ದುರಾಶೆಯು ಆಗಿನ ಸರಕಾರದವರ ಮನಸ್ಸಿನಲ್ಲಿ ಇನ್ನೂ ಹುಟ್ಟಿದ್ದಿಲ್ಲ. ಆದಕಾರಣ ಯಾವನಾದರೂ ಜಗಳಾಡಿ

ಫಿರ್ಯಾದಿ ಬಂದರೆ, ಸುಬೇದಾರಮುಹಲಕರಿಯರು ಅವನನ್ನು ಅವನ ಊರಿನ ಅಥವಾ ನೆರೆಯ ಊರಿನ ಪಂಚರ ಕಡೆಗೆ ಕಳುಹಿ ಅವರು ಮಾಡಿದ ತೀರ್ಪನ್ನು ಅಮಲಿನಲ್ಲಿ ತರುತ್ತಿದ್ದರು. ಸಿವಾಜಿಯು ಕಾಲದಲ್ಲಿ ನ್ಯಾಯು ವಿಚಾರಣೆಯ ಕೆಲಸವೆಲ್ಲ **ಪಂಚರ** ಮುಖಾಂತರದಿಂದಲೇ ಸಾಗುತ್ತಿತ್ತೆ ನ್ನಲಿಕ್ಕೆ ಅಡ್ಡಿಯಿಲ್ಲ. ಆದ್ದರಿಂದ ಆ ಕಾಲದ ಜನರು ಹೆಚ್ಚು ಸತ್ಯವಂತರೂ ನ್ಯಾಯಪಕ್ಷಪಾತಿಗಳೂ ಪರರ ಹಕ್ಕುಬಾಧ್ಯತೆಯನ್ನು ಮನ್ನಿಸುವವರೂ ಪ್ರಾಮಾಣಿಕರೂ ಪಾಪಭೀರುಗಳೂ ಕಾಲುಕೆದರಿ ಜಗಳ ತೆಗೆಯದವರೂ ಸ್ವಾರ್ಥಪರತ್ವದಿಂದ ಮಂದಿಯನ್ನು ಮುಳಗಿಸಲಿಕ್ಕೆ ತಮ್ಮ ಬುದ್ಧಿಯನ್ನು ವೆಚ್ಚಮಾಡದವರೂ ನ್ಯಾಯಮಾಡುವುದೊಂದು ಜೂಜಾಟವೆಂದೆಣಿಸಿ, ಅದರಲ್ಲೇ ಗುಂಗಾಗದವರೂ ಆಗಿದ್ದರು.

ನಮ್ಮ ಚರಿತ್ರನಾಯಕನು ಧರ್ಮದಲ್ಲಿ ವಿಶೇಷವಾಗಿ ಶ್ರದ್ಧೆಯುಳ್ಳವ ನಾದ್ದರಿಂದ ದಾನಾಧ್ಯಕ್ಷ ಅಥವಾ ಪಂಡಿತರಾಯನೆಂಬ ಒಬ್ಬ ಪ್ರಧಾನ ನನ್ನು ಇಟ್ಟುಕೊಂಡಿದ್ದನೆಂದು ಹಿಂದೆ ಬರೆದಿರುತ್ತೇವಷ್ಟೆ. ಗುಡಿಗುಂಡಾರ ಗಳನ್ನು ಕಟ್ಟಿಸುವುದೂ ಅವುಗಳ ದುರಸ್ತಿಮಾಡಿಸುವುದೂ ದೇವತೆಗಳ ಉತ್ಸವ ಪೂಜಾನೈವೇದ್ಯಗಳಿಗೋಸ್ಕರ ಹಣವನ್ನು ಪೂರೈಸುವುದೂ ವೇದ ಶಾಸ್ತ್ರಸಂಪನ್ನರಾದ ಬ್ರಾಹ್ಮಣರ ಯೋಗಕ್ಷೇಮವನ್ನು ವಿಚಾರಿಸುವುದೂ ಜಾತಿಯ ಸಂಬಂಧವಾಗಿ ಹುಟ್ಟಿದ ವ್ಯಾಜ್ಯಗಳನ್ನು ಪಂಡಿತರ ನೆರವಿನಿಂದ ತೀರಿಸುವುದೂ ಅವನು ಮಾಡತಕ್ಕ ಕೆಲಸಗಳಾಗಿದ್ದವು. ಅವರಂಗಜೇಬ ಬಾದಶಹನಂತೆ ಸಿವಾಜಿಯು ಧರ್ಮದುರಭಿಮಾನಿಯಾಗಿದ್ದಿಲ್ಲ. ಪರಧ ರ್ಮದವರನ್ನು ದ್ವೇಷಿಸುವುದು ತಪ್ಪೆಂದು ಅವನು ಚೆನ್ನಾಗಿ ಅರಿತಿದ್ದನು. ತನ್ನ ಅಜ್ಜಿಯು ಒಬ್ಬ ಫಕೀರನಿಗೆ ಹರಿಕೆ ಹೊತ್ತು ತನ್ನ ತಂದೆಯನ್ನು ಹೆತ್ತುದು ಅವನ ನೆನಪಿನಲ್ಲಿತ್ತು. ಆದ್ದರಿಂದ ಅವನು ಫಕೀರರಿಗೂ ಹೆಸರು ವಾಸಿಯಾದ ಕಬರಸ್ಥಾನಗಳಿಗೂ ಉಂಬಳಿಯನ್ನು ಹಾಕಿಕೊಡುತ್ತಿ ದ್ದನು.* ಈ ಉಂಬಳಿವರಷಾಸನಗಳ ವ್ಯವಸ್ಥೆಯಾದರೂ ಪಂಡಿತರಾಯನ

---

* ಬಾಣಕೋಟದ ತೆಂಕಲಿಗೆ ೮ ಮೈಲಿನ ಮೇಲಿರುವ ಕೆಲ್ಸಿ ಎಂಬ ಊರಿನಲ್ಲಿದ್ದ ಬಾಬಾ ಯಾಕೂತನೆಂಬುವ ಸಾಧುವಿಗೆ ಸಿವಾಜಿಯು ಭೂಮಿ ಯನ್ನು ಉಂಬಳಿಯಾಗಿ ಹಾಕಿ ಕೊಟ್ಟಿದ್ದನು.

ಕಡೆಗಿತ್ತು. ಪ್ರತಿವರ್ಷ ಶ್ರಾವಣಮಾಸದಲ್ಲಿ ಬಂದ ಬ್ರಾಹ್ಮಣರ ಪರೀಕ್ಷೆ ಯಾಗುತ್ತಿತ್ತು. ಒಂದು ವೇದ ಬಂದವರಿಗೆ ಒಂದು ಮಣ ಅಕ್ಕಿಯನ್ನೂ ೨ ವೇದ ಬಂದವರಿಗೆ ೨ ಮಣ ಅಕ್ಕಿಯನ್ನೂ, ೩ ವೇದ ಬಂದವರಿಗೆ ೩ ಮಣ ಅಕ್ಕಿಯನ್ನೂ, ೪ ವೇದ ಬಂದವರಿಗೆ ೪ ಮಣ ಅಕ್ಕಿಯನ್ನೂ ವರ್ಷಾಶನ ವಾಗಿ ಕೊಡುವ ನಿಯಮವಿತ್ತು. ಘನಪಾಠಿಗಳಿಗೂ ದೊಡ್ಡ ದೊಡ್ಡ ಪಂಡಿತ ರಿಗೂ ಉಂಬಳಿಗಳೂ ದೊಡ್ಡ ದೊಡ್ಡ ಸಂಭಾವನೆಗಳೂ ದೊರೆಯು ತ್ತಿದ್ದವು. ಮುಖ್ಯವಾಗಿ ಶಿವಾಜಿಯು ಬ್ರಾಹ್ಮಣರಲ್ಲಿ ಹೆಚ್ಚು ಭಕ್ತಿವಿಶ್ವಾಸ ವುಳ್ಳವನಾದ್ದರಿಂದ ಅವರು ಹೊಟ್ಟೆಯ ಸಲುವಾಗಿ ತಾಪತ್ರಯಪಡಬಾರ ದೆಂದು ತಕ್ಕ ಏರ್ಪಾಡನ್ನು ಮಾಡಿದ್ದನು. ಈಗ ಅವರ ಗೋಳಾಟವನ್ನು ಕೇಳುವರಾರು?

---

## ೧೪ ನೆಯ ಪ್ರಕರಣ

### ಸತ್ಸಂಗತಿ.

ಮನುಷ್ಯನು ಸಾಮಾನ್ಯವಾಗಿ **ಆವರಣದ ಅಥವಾ ಪರಿಸ್ಥಿ ತಿಯ ಫಲವಾಗಿರುತ್ತಾನೆಂಬ** ಪಾಶ್ಚಿಮಾತ್ಯರ ನಾಣ್ಣುಡಿಯು ನಿಜ ವಾಗಿರುತ್ತದೆ. ಜಿತೇಂದ್ರಿಯರಾಗಿ ಮೈಯೊಲವುಗಳಿಗೆ ಎಷ್ಟು ಮಾತ್ರವೂ ಒಳಗಾಗದ ಮಹಾತ್ಮರ ಹೊರತು ಮಿಕ್ಕವರೆಲ್ಲ ಈ ಪರಿಸ್ಥಿತಿಯ ಕೈಯಲ್ಲಿ ಸಿಕ್ಕಿ ಒದ್ದಿಯಾಡುವವರೇ ಸರಿ. ಈ ಪರಿಸ್ಥಿತಿಯ ಅಂಗಗಳು ಎಷ್ಟೋ ಇರುತ್ತವೆ. ಅವುಗಳೊಳಗೆ **ಸಂಗತಿ** ಅಥವಾ ಜತೆಯು ಒಂದು ಮುಖ್ಯ ವಾದ ಅಂಗವಾಗಿರುತ್ತದೆ. ಕೆಟ್ಟ ಜನರೊಂದಿಗೆ ಒಡನಾಡಿದವರು ಕೆಟ್ಟ ವರಾಗುತ್ತಾರೆಂತಲೂ ಚೆಲೊ ಜನರ ಜತೆಯಲ್ಲಿದ್ದವರು ಒಳ್ಳೆಯವ ರಾಗುತ್ತಾರೆಂತಲೂ ನಾವು ಗಟ್ಟಿಯಾಗಿ ನಂಬುತ್ತೇವೆ. ಆದ್ದರಿಂದ ನಾವು ನಮ್ಮ ಮಕ್ಕಳು ಕೆಟ್ಟ ಜನರ ಸಂಗತಿಯನ್ನು ಮಾಡಬಾರದೆಂದು ಯಾವಾ

ಗಲೂ ಎಚ್ಚರಪಡುತ್ತೇವೆ, ಮತ್ತು ಚಿಕ್ಕವರಿರುವಾಗ ನಮ್ಮಿಂದ ದೂರವಾಗಿ ಅವರನ್ನು ಇಡಲಿಕ್ಕೆ ನಾವು ಒಡಂಬಡುವುದಿಲ್ಲ. ಒಬ್ಬ ಸಂಸ್ಕೃತಕವಿಯು ಕೆಟ್ಟ ಮಂದಿಯ ಗೆಳೆತನ ಮಾಡುವವರು ಕಾದ ಕಬ್ಬಿಣದ ಮೇಲೆ ಬಿದ್ದ ನೀರಿನಂತೆ ನಿರ್ನಾಮರಾಗುತ್ತಾರೆಂದು ಬರೆದಿರುತ್ತಾನೆ. *

ಈ ಜಗತ್ತಿನಲ್ಲಿ ಎಷ್ಟೋ ತರಗತಿಯ ಕೆಟ್ಟ ಜನರಿರುವಂತೆ ಅನೇಕ ವರ್ಗದ ಒಳ್ಳೆಯ ಜನರಾದರೂ ಇರುತ್ತಾರೆ. ಈ ಒಳ್ಳೆಯ ಜನರೊಳಗೆ ಸಾಧುಸಂತರು ಎಲ್ಲಕ್ಕು ಹೆಚ್ಚಿನವರು; ಅವರೇ ಮನುಷ್ಯಶ್ರೇಷ್ಠರು; ಅವರೇ ದೇವತಾಂಶರು; ಅವರೇ ಭೂಸುರರು; ಅವರಿಂದಲೇ **ಬೆಯ್ಯುಗುಬೆಳಗುಗಳಾಗುತ್ತವೆ;** ಅವರೇ ಜಗತ್ತಿನ ಸಂಸ್ಥಿಯ ಕಾರಣರು; ಅವರೇ ಸಂಸಾರದ ಮೂಲಾಧಾರರೂ; ಅವರೇ ಧರ್ಮಸಂಸ್ಥಾಪನಾಕರ್ತರು. ಕಲ್ಪವೃಕ್ಷ ಕಾಮಧೇನು ಚಿಂತಾಮಣಿಗಳಿಂದ ದೊರೆಯಬಹುದಾದ ಕಲ್ಪಿತ ಕಾಮಿತ ಚಿಂತಿತ ಫಲಗಳು ಸತ್ಸಂಗತಿಯೊಂದರಿಂದಲೇ ಸಿಕ್ಕುವವೆಂದು ಒಬ್ಬ ಕವಿಯು ವರ್ಣಿಸಿದ್ದಾನೆ. ಬುದ್ಧಿಯ ಮರಳುತನವನ್ನು ಹೋಗಲಾಡಿಸುವ ಸತ್ಯವಂತನಾಗಿ ಮಾಡುವ ಮಾನವನ್ನು ಹೆಚ್ಚಿಸುವ ಪಾಪಕ್ಷಾಲನಮಾಡುವ ಮನಸ್ಸನ್ನು ಆನಂದಮಯವಾಗಿ ಮಾಡುವ ಎಲ್ಲ ಕಡೆಯಲ್ಲಿ ಕೀರ್ತಿಯನ್ನು ಹಬ್ಬಿಸುವ ಸತ್ಸಂಗತಿಯು ಏನು ಮಾಡಲಿಕ್ಕಿಲ್ಲೆಂದು ಮತ್ತೊಬ್ಬಕವಿಯು ಕೇಳುತ್ತಾನೆ. ಗಂಗಾನದಿಯಂತೆ ಪಾಪವಿನಾಶಿನಿಯೂ ಹುಣ್ಣಿಮೆಯ ಚಂದ್ರನಂತೆ ಜನರ ಮನಸ್ಸನ್ನು ಸಂತೋಷಗೊಳಿಸುವುದೂ ಸೂರ್ಯನಂತೆ ಜ್ಞಾನಾಂಧಕಾರವನ್ನು ಹೋಗಲಾಡಿಸುವುದೂ ನೆರಳಿನಂತೆ ಎಲ್ಲ ತಾಪಗಳನ್ನು ಶಮನಮಾಡುವುದೂ ಕಾಮಧೇನುವಿನಂತೆ ಬಯಸಿದ ಫಲವನ್ನು ಕೊಡುವುದೂ ದುರ್ಲಭವಾದುದೂ ಆದ ಸತ್ಸಂಗತಿಯು ಸೈಪಿನವರಿಗೆ ಪುಣ್ಯದಿಂದ ಮಾತ್ರ ಲಭಿಸುತ್ತದೆಂದು ಮಗದೊಬ್ಬ ಕವಿಯು

---

* ಸಂತಪ್ತಾಯಸಿ ಸಂಸ್ಥಿತಸ್ಯ ಪಯಸೊ ನಾಮಾಪಿ ನ ಶ್ರೂಯತೆ।
ಮುಕ್ತಾಕಾರತಯಾ ತದೇವ ನಲಿನೀಪತ್ರಸ್ಥಿತಂ ರಾಜತೆ॥
ಸ್ವಾತ್ಯಾಂ ಸಾಗರಶುಕ್ತಿಸಂಪುಟಗತಂ ತಜ್ಜಾಯತೆ ಮೌಕ್ತಿಕಮ್।
ಪ್ರಾಯೇಣಾಧಮಮಧ್ಯಮೋತ್ತಮಗುಣಃ ಸಂಸರ್ಗತೋ ಜಾಯತೆ॥

ಬರೆಯುತ್ತಾನೆ.* ಇಂತಹ ಅಮೌಲ್ಯವಾದ ಸತ್ಸಂಗತಿಯು ಸಿವಾಜಿಗೆ ದೊರಕಿದ್ದು ಅವನು ಪೂರ್ವಜನ್ಮದಲ್ಲಿ ಮಾಡಿದ ಪುಣ್ಯದ ಫಲವೇ ಸರಿ.

ನಮ್ಮ ಚರಿತ್ರನಾಯಕನ ಸುದೈವದಿಂದ ಅವನ ಕಾಲದಲ್ಲಿ ಕೆಲವು ಸುಪ್ರಸಿದ್ಧರಾದ ಸಾಧುಸಂತರು ಇರುತ್ತಿದ್ದರು. ಅವರೊಳಗೆ ಶ್ರೀರಾಮ ದಾಸ ತುಕಾರಾಮರೇ ಮುಖ್ಯರಾಗಿದ್ದರು. ಸಿವಾಜಿಯ ಶಿಕ್ಷಣವು ಈಗಿನಂತೆ ದೇವಲಂಡಪಿತೃಲಂಡವಾಗದೆ ಭಾವಿಕತರದ್ದಾಗಿತ್ತೆಂದು ಹಿಂದೆ ವಿವರಿಸಿರುತ್ತೇವಷ್ಟೆ. ದೇವಬ್ರಾಹ್ಮಣರಲ್ಲಿದ್ದ ಜೀಜಿಬಾಯಿಯ ಪೂರ್ಣ ವಿಶ್ವಾಸಭಕ್ತಿಗಳೂ ಪುರಾಣಪುಣ್ಯಕಥೆಗಳಲ್ಲಿದ್ದ ಆಕೆಯ ಅತುಲಪ್ರೇಮವೂ ಚಿಕ್ಕ ಬಾಲಕನಾದ ಸಿವಾಜಿಯ ಎಳೆಮನಸ್ಸಿನಲ್ಲಿ ಆಳವಾಗಿ ನಟ್ಟಿದ್ದವು. ಸಣ್ಣವನಿರುವಾಗ ಸಿವಾಜಿಯು ತನ್ನ ತಾಯಿಯ ಬಳಿಯಲ್ಲಿ ಕುಳಿತು, ಏಕ ಮನಸ್ಸಿನಿಂದ ಪುರಾಣಶ್ರವಣ ಮಾಡುತ್ತಿದ್ದನಾದ್ದರಿಂದ ಶ್ರೀರಾಮನ ಪಿತೃ ಭಕ್ತಿಯೂ ಕಷ್ಟಸಹಿಷ್ಣುತೆಯೂ ರಾವಣನಂತಹ ದುಷ್ಟರಾಜರ ದ್ವೇಷವೂ ಹನುಮಂತನ ನಿಸ್ಸೀಮಸ್ವಾಮಿಭಕ್ತಿಯೂ ಪಾಂಡವರ ಪಕ್ಷಪಾತಿಯಾದ ಶ್ರೀಕೃಷ್ಣನ ಕಪಟನಾಟಕವೂ ಅರ್ಜುನನ ಧೈರ್ಯವೂ ಭೀಮನ ಸಾಹಸವೂ ವಿದುರನ ನೀತಿಯೂ ಅವನ ಮನಸ್ಸಿನ ಮೇಲೆ ಚೆನ್ನಾಗಿ ಬಿಂಬಿ

---

* ಕಲ್ಪದ್ರುಮಃ ಕಲ್ಪಿತಮೇವ ಸೂತೆ।
ಸಾ ಕಾಮಧುಕ್ಕಾಮಿತಮೇವ ದೋಗ್ಧಿ॥
ಚಿಂತಾಮಣಿಶ್ಚಿಂತಿತಮೇವ ದತ್ತೆ।
ಸತಾಂ ಹಿ ಸಂಗಃ ಸಕಲಮ್ ಪ್ರಸೂತೆ॥
ಜಾಡ್ಯಮ್ ಧಿಯೋ ಹರತಿ ಸಿಂಚತಿ ವಾಚಿ ಸತ್ಯಮ್।
ಮಾನೋನ್ನತಿಂ ದಿಶತಿ ಪಾಪಮಪಾಕರೋತಿ॥
ಚೇತಃ ಪ್ರಸಾದಯತಿ ದಿಕ್ಷು ತನೋತಿ ಕೀರ್ತಿಮ್।
ಸತ್ಸಂಗತಿಃ ಕಥಯ ಕಿಂ ನ ಕರೋತಿ ಪುಂಸಾಮ್॥
ಗಂಗೇವಾಘವಿನಾಶಿನೀ ಜನಮನಃಸಂತೋಷಸಚ್ಚಂದ್ರಿಕಾ।
ತೀಕ್ಷ್ಣಾಂಶೋರಪಿ ಸತ್ಪ್ರಭೇವ ಜಗದಜ್ಞಾನಾಂಧಕಾರಾವಹಾ॥
ಛಾಯೇವಾಖಿಲತಾಪನಾಶನಕರೀ ಸ್ವರ್ಧೇನುವತ್ಕಾಮದಾ।
ಪುಣ್ಯೈರೇವ ಹಿಲಭ್ಯತೆ ಸುಕೃತಿಭಿಃ ಸತ್ಸಂಗತಿರ್ದುರ್ಲಭಾ॥

ಸಿದ್ದವು. ಚಿಕ್ಕಂದಿನಲ್ಲಿ ಬಿತ್ತಿದ ಈ ದೊಡ್ಡಗುಣಗಳು ಧರ್ಮಿಷ್ಠಳಾದ ಜೀಜಿಬಾಯಿಯ ಜತೆಯೆಂಬ ನೀರಿನಿಂದ ಮೊಳಕೆಯೊಡೆದು, ದಾದೋಜಿ ಕೋಂಡ ದೇವನಂತಹ ಸಚ್ಛಿಕ್ಷಕನ ಆರೈಕೆಯಿಂದ ಬೆಳೆದು, ದೊಡ್ಡಗಿಡ ಗಳಾದವು. ಈ ಸದ್ಗುಣವೃಕ್ಷಗಳು ಹೂಕಾಯಿಗಳಿಂದ ತುಂಬುವುದಕ್ಕೆ ಬೇರೊಂದು ಅನುಕೂಲತೆಯು ಬೇಕಾಗಿತ್ತು. ನಮ್ಮ ಚರಿತ್ರನಾಯಕನ ಪೂರ್ವಜನ್ಮ ಪುಣ್ಯದಿಂದ ಈ ಅನುಕೂಲತೆಯಾದರೂ ಅನಾಯಾಸವಾಗಿ ದೊರೆಯಿತು. ಅದು ಹೇಗೆಂದರೆ:—

ಎರಡು ಕಯ್ಗಳು ಕೂಡಿದ ಹೊರತು ಚಪ್ಪಾಳೆಯಾಗುವುದಿಲ್ಲೆಂಬ ಗಾದೆಯ ಮಾತಿನ ನಿಜತ್ವದ ಅನುಭವವು ನಮ್ಮ ಎಲ್ಲ ಓದುವವರಿಗೆ ಬಂದಿರಬಹುದು. ಶ್ರೀ ಶಂಕರಾಚಾರ್ಯರು ಸಿದ್ಧಮಾಡಿ ತೋರಿಸಿದಂತೆ ಅದ್ವೈತವೇ ಸೃಷ್ಟಿಯ ಮೂಲಾಧಾರವು. ಚರ್ಮಚಕ್ಷುಗಳಿಗೆ ಸ್ಪಷ್ಟವಾಗಿ ಕಾಣುವ ದ್ವೈತವು ಜ್ಞಾನದೃಷ್ಟಿಗೆ ಅದ್ವೈತವಾಗಿ ತೋರುತ್ತದೆ.* ಆದಿ ಶಕ್ತಿಪರಮಾತ್ಮರ ಸಂಯೋಗದಿಂದ ಸೃಷ್ಟಿಯ ನಿರ್ಮಾಣವು; ಗಂಡು ಹೆಣ್ಣುಗಳ ಐಕ್ಯದಿಂದ ಸಂತಾನವೃದ್ಧಿಯೂ, ಒಕ್ಕಟ್ಟಿನಿಂದ ಮನೆತನದ ಏಳ್ಗೆಯೂ ಒಮ್ಮನಸೊಕ್ಕಟ್ಟುಗಳಿಂದ ಹಳ್ಳಿಗಳ ಪಟ್ಟಣಗಳ ಪ್ರಾಂತಗಳ ನಾಡುಗಳ ಸುಖಸ್ವಾತಂತ್ರ್ಯಸಾಮ್ರಾಜ್ಯವೂ ದೊರೆಯುತ್ತವೆ. ನಮ್ಮ ತೊಗಲ್ಗಣ್ಣಿಗೆ ಸ್ಪಷ್ಟವಾಗಿ ಕಾಣಿಸುವ ವಸ್ತುವಸ್ತುಗಳ ಜೀವಜೀವಗಳ ಭೇದವು ಕಣ್ಮಸಕೆಂದು ನಿಶ್ಚಯವಾಗಿ ಮನಗಂಡು, ಅವುಗಳೊಳಗಿರುವ ಐಕ್ಯದ ಮೂಲಕಾರಣಗಳನ್ನು ತಪ್ಪದೆ ಕಂಡುಹಿಡಿದು, ಅವುಗಳನ್ನು ಪೋಷಿಸಿ ಬೆಳೆಸಿ ನೆಲಗೊಳಿಸಿ ಜನರನ್ನು ಸ್ವಾರ್ಥತ್ಯಾಗಿಗಳಾಗಿಯೂ ಸ್ವಾತಂತ್ರ್ಯಪ್ರಿಯುಳ್ಳವರಾಗಿಯೂ ದೇಶಾಭಿಮಾನಿಗಳಾಗಿಯೂ ಧರ್ಮ ದಲ್ಲಿ ಪ್ರೀತಿಯುಳ್ಳವರಾಗಿಯೂ ದೇವರಲ್ಲಿ ಭಕ್ತಿವಿಶ್ವಾಸವುಳ್ಳವರಾಗಿಯೂ ಒಮ್ಮನಸ್ಸಿನವರಾಗಿಯೂ ಮಾಡುವವರೇ **ತಕ್ಕ ಯೋಜಕರು;** ಅವರೇ ಜಗದೋದ್ಧಾರಕರು, ಲೋಕಪಾಲಕರು, ಮಹಾತ್ಮರು, ದೇವಾಂಶಸಂಭೂ

---

* ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಮ್ ಗ್ರಂಥಕೋಟಿಭಿಃ ।
ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋ ಬ್ರಹ್ಮೈವ ನಾಪರಃ ॥

ತರು. ಶೌರ್ಯ ಧೈರ್ಯ ಸಾಹಸ ದೇಶಾಭಿಮಾನಗಳಿಂದ ಯುಕ್ತನಾದ ನಮ್ಮ ಚರಿತ್ರನಾಯಕನೆಂಬ ಒಂದು ಕೈಗೆ ಸ್ವಾರ್ಥತ್ಯಾಗ ಸ್ವಾಭಿಮಾನ ಧರ್ಮಶ್ರದ್ಧೆಯುಳ್ಳ ಆಗಿನ ಜನರ ಒಮ್ಮನಸ್ಸಿನಿಂದ ನೆರವಾಗುವ ಲವಲವಿಕೆಯೆಂಬ ಮತ್ತೊಂದು ಕೈಯು ಕೂಡಿದ್ದರಿಂದ ಪರದೇಶೀಯರೂ ಭಿನ್ನ ಧರ್ಮಿಗಳೂ ಆದ ಮುಸಲ್ಮಾನರ ಜುಲುಮಿಯ ರಾಜ್ಯಭಾರವಿನಾಶವೆಂಬ ಚಪ್ಪಾಳೆ ಆಯಿತು. ಶಿವಾಜಿಯನ್ನೂ ಆ ಕಾಲದ ಜನರನ್ನೂ ತಿದ್ದಿ, ಸ್ವಾತಂತ್ರ್ಯಪ್ರೀತಿಯನ್ನು ಅವರಲ್ಲಿ ಹುಟ್ಟಿಸಿ, ಅವರನ್ನು ಸ್ವಮತಾಭಿರಕ್ಷಣೆ ಗೋಸ್ಕರ ಒಕ್ಕಟ್ಟಾಗಿ ಒಮ್ಮನಸ್ಸಿನಿಂದ ಮುಸಲ್ಮಾನರೊಡನೆ ಕಾದಲಿಕ್ಕೆ ಹುಚ್ಚಿ ಹುರಿದುಂಬಿಸಿದವರೇ ಸಾಧುಸಂತರು. ಆದ್ದರಿಂದ ಅವರ ವಿಷಯವಾಗಿ ಇಲ್ಲಿ ತುಸು ಬರೆಯುವುದು ಅವಶ್ಯವೆಂದು ತೋರುತ್ತದೆ.

ನಮ್ಮ ಅತಿಪ್ರಿಯತಮ ಮಾತೃಭೂಮಿಯಾದ ಕರ್ನಾಟಕವು* ರಾಜಕೀಯ ಕಾರಣಗಳ ಸಲುವಾಗಿ ತುಂಡರಿಸಲ್ಪಟ್ಟದರಿಂದಲೂ ನಮ್ಮ ಪೂರ್ವಜರು ಅಪರೋಕ್ಷವಿಚಾರಕ್ಕೆ ಮರುಳಾಗಿ, ಮತಕಲಹದಲ್ಲಿ ಮುಳುಗಿ, ಲೌಕಿಕವ್ಯವಹಾರಜ್ಞಾನವನ್ನು ಬದಿಗೊತ್ತಿ, ಅಭಿಮಾನ ಶೂನ್ಯರಾಗಿ, ಸ್ವಾಭಿಮಾನವನ್ನೂ ಒಕ್ಕಟ್ಟನ್ನೂ ಸ್ವಾತಂತ್ರ್ಯವನ್ನೂ ಕಳೆಕೊಂಡುದರಿಂದಲೂ ನಾವು ಈಗ ತೀರ ಕೀಳಸ್ಥಿತಿಗೆ ಬಂದಿರುತ್ತೇವಷ್ಟೇ. ಆದರೆ ನಮ್ಮ ಈ ಅತಿಪ್ರಿಯವಾದ ಮಾತೃಭೂಮಿಯು ಬುನಾದಿಕಾಲದಿಂದ ಇಡಿ ಭರತಖಂಡದಲ್ಲಿ ಹಬ್ಬಿದ ೪ ಮುಖ್ಯ ಮತಗಳ ಸ್ಥಾಪನಾಚಾರ್ಯರ ಮೂಲಪೀಠಗಳ ಆಧಾರಸ್ಥಾನವಾಗಿರುತ್ತದೆಂಬ ಮತ್ತು ಅರ್ವಾಚೀನಕಾಲದಲ್ಲಿ (೧೪, ೧೫, ೧೬ ಶತಮಾನಗಳಲ್ಲಿ) ನಮ್ಮ ಪೂರ್ವಜರು ಆಸೇತು—ವಿಂಧ್ಯಾದ್ರಿಯವರೆಗೆ ಘನತೆಯಿಂದ ಪ್ರಜಾಪರಿಪಾಲನ ಮಾಡಿದರೆಂಬ ಈ ಎರಡು ಅಭಿಮಾನೋತ್ಪಾದಕ ಸಂಗತಿಗಳನ್ನು ನಾವು ಎಂದೂ ಮರೆಯಕೂಡದು. ಶ್ರೀಮಚ್ಛಂಕರಾಚಾರ್ಯರು (ಅದ್ವೈತ ಮತಸ್ಥಾಪಕರು) ಶ್ರೀಮದ್ಮಧ್ವಾಚಾರ್ಯರು (ದ್ವೈತಮತಸ್ಥಾಪಕರು) ಶ್ರೀ ಬಸವೇಶ್ವರರು (ವೀರಶೈವ ಮತಸ್ಥಾಪಕರು). ಈ ಮೂವರ ಮತಗಳಲ್ಲಿ

---

* ಜನನೀಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ ॥

ದ್ವೈತ ವೀರಶೈವ ಮತಗಳು ಮೊದಲಿನಿಂದಲೇ ಮರಾಟೆ ನಾಡಿನಲ್ಲಿ ಹೆಚ್ಚಾಗಿ ಹಬ್ಬಲಿಲ್ಲ. ಇಂದ್ರಿಯಜನ್ಯವಾದ ಭೇದಬುದ್ಧಿಯನ್ನು ಬೆಳಿಸಿ, ಒಳಜಗಳವನ್ನು ಹೆಚ್ಚಿಸಿ* ಕಟ್ಟುಹರಕ ಪಂಜಿನಂತೆ ನಮ್ಮನ್ನು ಹೇಡಿಗಳಾಗಿ ಮಾಡುವ ದ್ವೈತಮತವು ಮರಾಟರನ್ನು ಮೆಚ್ಚಿಸಲಿಲ್ಲ. ೧೭ ನೆಯ ಶತಮಾನದ ಆರಂಭದಲ್ಲಿ ಆ ನಾಡಿನೊಳಗೆ ಅಮೌಲ್ಯವಾದ ಅದ್ವೈತಮತವು ಬಲವಾಗಿ ಬೇರುಗೊಂಡು, ದೊಡ್ಡಗಿಡವಾಗಿ ಹೂಕಾಯಿಗಳನ್ನು ಬಿಡಲಾರಂಭಿಸಿತ್ತು. ನಮ್ಮ ಚರಿತ್ರನಾಯಕನ ಕಾಲದಲ್ಲಿದ್ದ ಸಾಧುಸಂತರು ಅದ್ವೈತದ ತತ್ವಗಳನ್ನು ಜನರಿಗೆ ಬೋಧಿಸಿ ಅವರಲ್ಲಿ ಸ್ವಾತಂತ್ರ್ಯ ಪ್ರೀತಿಯನ್ನೂ ಐಕ್ಯಾಭಿಲಾಷೆಯನ್ನೂ ಕಷ್ಟಸಹಿಷ್ಣುತೇಚ್ಛೆಯನ್ನೂ ಹುಟ್ಟಿಸಿ, ಸಿವಾಜಿಗೆ ನೆರವಾಗಲಿಕ್ಕೆ ಜನರನ್ನು ಹುರಿದುಂಬಿಸುತ್ತಿದ್ದರು.

೧೩ ನೆಯ ಶತಮಾನದಿಂದ೧೭ ನೆಯ ಶತಮಾನದ ವರೆಗೆ **ಮುಕುಂದರಾಜ** (ಪರಮಾಮೃತ ಮತ್ತು ವಿವೇಕಸಿಂಧು), ಜ್ಞಾನದೇವ (೧೨೭೧-೯೬ ಜ್ಞಾನೇಶ್ವರಿ)† ನಾಮದೇವ (೧೨೭೫ ಅಭಂಗಗಳು), ಏಕನಾಥ (೧೫೩೮-೯೯ ಭಾಗವತದ ೧೧ ನೆಯ ಸ್ಕಂಧ), ಈ ನಾಲ್ವರು ಸಿವಾಜಿಯು ಬಲಿಯುವುದಕ್ಕಿಂತ ಮೊದಲು ಜನರಿಗೆ ಅದ್ವೈತಾಮೃತವನ್ನು ಕುಡಿಸಿ, ಸ್ವಾತಂತ್ರ್ಯ ಯುದ್ಧಕ್ಕಾಗಿ ಹೋರಾಡಲಿಕ್ಕೆ ಅವರ ಮನಸ್ಸನ್ನು ಅಣಿಮಾಡಿಟ್ಟಿದ್ದರು. ಮುಕ್ತೇಶ್ವರ (೧೬೦೯-೫೩ ಭಾರತದ ಕೆಲ ಪರ್ವಗಳು) ರಾಮದಾಸ (೧೬೦೮-೮೨ ದಾಸಬೋಧ), ವಾಮನ ಪಂಡಿತ (೧೬೩೬-೯೬), ತುಕಾರಾಮ (೧೫೬೮-೧೬೪೯ ಅಭಂಗ),, ಜಯರಾಮಸ್ವಾಮಿ (೧೬೭೨ ರಾಮದಾಸರಶಿಷ್ಯ), ರಂಗನಾಥಸ್ವಾಮಿ (೧೬೦೮ ರಾಮದಾಸರಶಿಷ್ಯ), ಈ ೬ ಜನ ಸಿವಾಜಿಯ ಸಮಕಾಲೀನರಾದ ಸಂತರು ಜನರನ್ನು ಒಟ್ಟುಗೂಡಿಸಿ, ಮುಸಲ್ಮಾನರಾಜರ ವಿರುದ್ಧವಾಗಿ ಹೆಣಗಾ

---

* ಬ್ರಾಹ್ಮಣಾನಾಮನೇಕತ್ವಮ್ ವೈಷ್ಣವಾನಾಮ್ ವಿಶೇಷತಃ॥

† ಈ ಗ್ರಂಥದಲ್ಲಿ ಕನ್ನಡ ಶಬ್ದಗಳು ಬಹಳವಾಗಿರುತ್ತವೆಂದು ಬಲ್ಲವರು ಹೇಳುತ್ತಾರೆ.

ಡುವ ಶಿವಾಜಿಗೆ ಒಮ್ಮನಸ್ಸಿನಿಂದ ನೆರವಾಗುವುದಕ್ಕೆ ಹುರಿದುಂಬಿಸುತ್ತಿದ್ದರು. ಇವರ ಸಾಹಾಯವಿಲ್ಲದಿದ್ದರೆ ನಮ್ಮ ಚರಿತ್ರನಾಯಕನಿಂದ ಇಷ್ಟು ದೊಡ್ಡ ರಾಜಕೀಯ ಕಾರ್ಯಭಾಗವು ಆಗುತ್ತಿದ್ದಿಲ್ಲೆಂದು ನಿಸ್ಸಂದೇಹವಾಗಿ ಹೇಳಬಹುದು. ಈ ೬ ಮಂದಿ ಸಂತರೊಳಗೆ ತುಕಾರಾಮ, ರಾಮದಾಸ ಇವರಿಬ್ಬರ ಸಂಬಂಧವು ನಮ್ಮ ಚರಿತ್ರನಾಯಕನಿಗೆ ನಿಕಟವಾಗಿದ್ದುದರಿಂದ ಅದನ್ನು ಇಲ್ಲಿ ವಿವರಿಸುವುದು ಅನುಚಿತವಾಗಲಾರದು.

ಸಾಮಾನ್ಯವಾಗಿ **ಭಾರತೀಯರು ವೈರಾಗ್ಯಕ್ಕೆ ಮೆಚ್ಚಿದವರೇ ಸರಿ.** ಚಿಕ್ಕಂದಿನಲ್ಲಿ ಶಿವಾಜಿಯು ತನ್ನ ತಾಯಿಯ ಜತೆಯಲ್ಲಿ ಪುರಾಣ ಪುಣ್ಯಕಥೆಗಳನ್ನು ಕೇಳುತ್ತಿದ್ದನಾದ್ದರಿಂದ ಅವನು ವೈರಾಗ್ಯಚಕ್ರವರ್ತಿಯಾದ ತುಕಾರಾಮನ ಕೀರ್ತನಗಳಿಗೆ ಮರುಳಾಗಿದ್ದನು. ಒಮ್ಮೆ ಶಿವಾಜಿಯು ಸಿಂಹಗಡದಲ್ಲಿರುವಾಗ ತುಕಾರಾಮನು ಪುಣೆಗೆ ಬಂದು ದಿನಾಲು ಕೀರ್ತನಮಾಡಲಾರಂಭಿಸಿದನು. ಆ ಸುದ್ದಿಯನ್ನು ಕೇಳಿ ಶಿವಾಜಿಯು ದಿನಂಪ್ರತಿ ಸಾಯಂಕಾಲಕ್ಕೆ ಪುಣೆಗೆ ಬಂದು, ತುಕಾರಾಮನ ಕೀರ್ತನವನ್ನು ಕೇಳಿ, ಇರುಳಿನಲ್ಲೇ ತಿರುಗಿ ಸಿಂಹಗಡಕ್ಕೆ ಹೋಗುತ್ತಿದ್ದನಂತೆ. ಈ ವಾರ್ತೆಯು ಚಾಕಣದ ಮುಸಲ್ಮಾನ ಕಿಲ್ಲೆದಾರನಿಗೆ ತಿಳಿಯಲು, ಅವನು ಶಿವಾಜಿಯನ್ನು ಹಿಡಿಯಬೇಕೆಂಬ ಉತ್ಕಟೇಚ್ಛೆಯಿಂದ ಒಂದು ದಿನ ಕೆಲ ಸ್ವಾರರೊಡನೆ ಪುಣೆಗೆ ಬಂದು ಕಥೆಯು ನಡೆದಿದ್ದ ಒಬ್ಬ ಕೋಮಟಿಗನ ಮನೆಯನ್ನು ಮುತ್ತಿದನು. ಈ ಸುದ್ದಿಯು ಒಳಗೆ ತಿಳಿದ ಕೂಡಲೆ ಕಥೆ ಕೇಳಲಿಕ್ಕೆ ಬಂದವರೊಳಗೆ ಹಾಹಾಕಾರವೆದ್ದಿತು. ಈ ಗಂಡಾಂತರ ಸಮಯದಲ್ಲಿ ಶಿವಾಜಿಯ ಸೇವಕನೊಬ್ಬನು ತನ್ನ ಯಜಮಾನನಿಗೆ ಹೋಗಲಿಕ್ಕೆ ಅಪ್ಪಣೆಕೊಡಬೇಕೆಂದು ತುಕಾರಾಮನಿಗೆ ಬೇಡಿಕೊಂಡನು. ಆಗಲಾ ಭೀತಿಯಿಲ್ಲದ ಭಗವದ್ಭಕ್ತನು ಆ ಹೊತ್ತು ಏಕಾದಶಿಯಾದ್ದರಿಂದ ಒಬ್ಬನೂ ಏಳಕೂಡದೆಂತಲೂ ಹರಿಕಥಾಶ್ರವಣದಲ್ಲಿ ಮರಣಹೊಂದಿದವರು ಜನನ ಮರಣ ದುಃಖದಿಂದ ಮುಕ್ತರಾಗುವರೆಂತಲೂ ಸಾರಿಹೇಳಿ “ಪುಂಡರೀಕ ವರದ ಹರಿವಿಠ್ಠಲ” ಎಂಬ ಜಯಘೋಷದ ಪ್ರಚಂಡಗರ್ಜನೆಯನ್ನು ಮಾಡಿದನು. ಬಳಿಕ ಶಿವಾಜಿಯ ನಂಬಿಗಸ್ತನೊಬ್ಬನು ಅವನ ತೊಡಿಗೆ

ಯನ್ನು ಹಾಕಿಕೊಂಡು ಅವನ ಕುದುರೆಯನ್ನೇರಿ, ಹಗೆಗಳಿಗೆ ಕಾಣಿಸುವಂತೆ ಅದನ್ನು ಓಡಿಸಿಕೊಂಡು ಹೋದನು. ಪಠಾಣರಾಹುತರು ಸಿವಾಜಿಯೇ ಹೋಗುತ್ತಾನೆಂದು ನಂಬಿ ಅವನನ್ನು ಬೆನ್ನಟ್ಟಿದರು. ಇತ್ತ ಸಿವಾಜಿಯು ಕಥೆಯನ್ನು ಕಡೆತನಕ ಕೇಳಿ, ಅದು ಮುಗಿದ ಬಳಿಕ ಸಾವಕಾಶವಾಗಿ ತುಕಾರಾಮನನ್ನು ಬೀಳ್ಕೊಂಡು ಸುರಕ್ಷಿತವಾಗಿ ಸಿಂಹಗಡಕ್ಕೆ ಬಂದು ಮುಟ್ಟಿದನು. ಅವನ ವೇಷಧಾರಿಯಾದ ಸ್ನೇಹಿತನು ಈ ಮೊದಲೇ ಸಿಂಹಗಡಕ್ಕೆ ಬಂದು ಮುಟ್ಟಿದ್ದನು. ಭಾವಿಕರು ಶ್ರೀ ವಿಠ್ಠಲನೇ ಸಿವಾಜಿಯ ರೂಪವನ್ನು ಧರಿಸಿ ಮುಸಲ್ಮಾನರನ್ನು ಮೋಸಗೊಳಿಸಿ ಸಿವಾಜಿಯನ್ನು ಸಂರಕ್ಷಿಸಿದನೆಂದು ಈಗಲೂ ನಂಬಬಹುದು. ಆದರೆ ಸಿವಾಜಿಯ ಒಬ್ಬ ಸೇವಕನು ಮೇಲೆ ಬರೆದಂತೆ ತನ್ನ ಒಡೆಯನಿಗೋಸ್ಕರ ತನ್ನ ಪ್ರಾಣವನ್ನು ಕೊಡಲಿಕ್ಕೆ ಸಿದ್ಧನಾಗಿದ್ದುದು ನಿಜವಿದ್ದರೆ ಇಂತಹ ಸ್ವಾರ್ಥತ್ಯಾಗ ಬುದ್ಧಿಯನ್ನೂ ಅತುಲಪ್ರೇಮವನ್ನೂ ನಿಸ್ಸೀಮ ಸ್ವಾಮಿಭಕ್ತಿಯನ್ನು ಜನರಲ್ಲಿ ಆ ಕಾಲಕ್ಕೆ ಹುಟ್ಟಿಸಿದ ಶ್ರೇಯಸ್ಸು ಸಾದುಸಂತರದೇ ಸರಿ.*

ಮತ್ತೊಮ್ಮೆ ನಮ್ಮ ಚರಿತ್ರನಾಯಕನು ತುಕಾರಾಮಬಾವಾನ ಕೀರ್ತನವನ್ನು ಕೇಳಲಿಕ್ಕೆ ಲೋಹಗಾವಿಗೆ ಹೋದನಂತೆ. ಆ ದಿವಸದ ಕೀರ್ತನದ ವಿಷಯವು ನಿವೃತ್ತಿಮಾರ್ಗದ ಶ್ರೇಷ್ಠತ್ವವಾಗಿತು. ತುಕಾರಾಮಬಾವಾನ ಮಧುರವಾಣಿಯೂ ಅವನ ಇಂಚರವೂ ಅವನ ಪ್ರಾಸಾದಿಕ ಕವಿತ್ವವೂ ಅವನ ಮನೋಹರವಾದ ವಾಕ್ಸರಣಿಯೂ ಅವನ ಚಿತ್ತಾಕರ್ಷಕ ವಿಚಾರಶಕ್ತಿಯೂ ಅವನ ಅಪ್ರತಿಮ ಭಕ್ತಿವಿಶ್ವಾಸಗಳೂ ಅವನ ಮೋಹಕವಾದ ಹಾವಭಾವಗಳೂ ಜನರನ್ನು ತಲ್ಲೀನರಾಗಿ ಮಾಡಿ ಅವರ ಮನಸ್ಸನ್ನು ವೈರಾಗ್ಯದ ಕಡೆಗೆ ಎಳೆದವು. ನಮ್ಮ ಚರಿತ್ರನಾಯಕನು ಭಾವಿಕನಾದ್ದರಿಂದ ವಿರಕ್ತನಾಗುವುದರಿಂದಲೇ ತನ್ನ ಜನ್ಮಸಾರ್ಥಕ್ಯವಾಗುವುದೆಂದು ಮನಗಂಡು ಕೀರ್ತನವು ಮುಗಿದ ಬಳಿಕ ಮನೆಗೆ

---

* ಅಡಿಯಮುಂದಿಡೆ ಸ್ವರ್ಗ । ಅಡಿಯ ಹಿಂದಿಡೆ ನರಕ ॥
ಅಡಿಗಶ್ವಮೇಧಫಲ । ಸ್ವಾಮಿಕಾರ್ಯಕ್ಕೆ ತಾ ಮಡಿಯಲೇಬೇಕು
ಸರ್ವಜ್ಞ ॥

ಹೋಗದೆ ಒಂದು ನಿರ್ಜನಪ್ರದೇಶದಲ್ಲಿ ವಿಚಾರಮಾಡುತ್ತ ಕುಳಿತನು. ಅವನ ಆಳುಗಳೂ ಗೆಳೆಯರೂ ಅವನನ್ನು ಹುಡುಕಿ ಮನೆಗೆ ಕರೆಕೊಂಡು ಹೋಗಲಿಕ್ಕೆ ಮಾಡಿದ ಪ್ರಯತ್ನವೆಲ್ಲ ವ್ಯರ್ಥವಾದ್ದರಿಂದ ಜೀಜಿಬಾಯಿಯೇ ಸ್ವತಃ ಬಂದು ಅವನನ್ನು ಕರೆದೊಯ್ದಳು. ಮನೆಗೆ ಬಂದರೂ ಅವನು ರಾಜ್ಯದಾಡಳತದ ಕಡೆಗೆ ಲಕ್ಷ್ಯಕೊಡದೆ ಪಾರಮಾರ್ಥಿಕ ವಿಚಾರದಲ್ಲೇ ಕಾಲಕಳೆಯಲಾರಂಭಿಸಿದನು. ಈ ವೈರಾಗ್ಯವೃತ್ತಿಯನ್ನು ನೋಡಿ ಜೀಜಿಬಾಯಿಯು ಗಾಬರಿಯಾಗಿ ಲೋಹಗಾವದಲ್ಲಿದ್ದ ತುಕಾರಾಮಬಾವಾನಿಗೆ ಶರಣುಹೋದಳು. ಬಾವಾನು ಆಕೆಯನ್ನು ಸಂತಯಿಸಿ, ಆ ದಿನ ಸಾಯಂಕಾಲಕ್ಕೆ ನಡೆಯುವ ಕೀರ್ತನದಲ್ಲಿ ಸಿವಾಜಿಗೆ ತಕ್ಕ ಉಪದೇಶವನ್ನುಮಾಡಿ ಹಾದಿಗೆ ತರುವೆನೆಂದು ಅಭಯಕೊಟ್ಟುದರಿಂದ ಆಕೆಯು ಆ ದಿನದ ಕೀರ್ತನಕ್ಕೆ ತನ್ನ ಮಗನೊಡನೆ ಹೋದಳು. ದಿನದ ಹೊತ್ತಿಗೆ ಕೀರ್ತನವು ಆರಂಭವಾಯಿತು. ಆ ಹೊತ್ತು ಬಾವಾನು ಕರ್ಮಮಾರ್ಗ ಪ್ರಶಂಸೆಯನ್ನೇ ಕೀರ್ತನದ ವಿಷಯವಾಗಿ ಇಟ್ಟುಕೊಂಡು, ಪ್ರವೃತ್ತಿನಿವೃತ್ತಿ ಮಾರ್ಗಗಳ ಭೇದವನ್ನು ವಿವರಿಸಿ ಹೇಳಿದನು. ಮುಕ್ತಿಯ ಅಥವಾ ಮೋಕ್ಷದ ದಾರಿಗಳು ಎರಡು—೧ ನಿವೃತ್ತಿಮಾರ್ಗ—೨ ಪ್ರವೃತ್ತಿಮಾರ್ಗ ನಿವೃತ್ತಿಮಾರ್ಗವು ಪ್ರವೃತ್ತಿಮಾರ್ಗಕ್ಕಿಂತ ಸನಿಯದ ದಾರಿಯಾದರೂ ಅದರ ಬಿಗಿಯಾದ ನಿಯಮಗಳನ್ನು ಸರಿಯಾಗಿ ಪಾಲಿಸುವುದು ಅತಿಕಷ್ಟತಮವಾಗಿರುತ್ತದೆ. ಚಿಕ್ಕಂದಿನಿಂದಲೇ ನಾವು ಆತ್ಮಶಕ್ತಿಯನ್ನು ದೇಹಶಕ್ತಿಗಿಂತ ಹೆಚ್ಚಾಗಿ ಬೆಳಿಸಿದರೆ ಮಾತ್ರ, ಪ್ರಾಯದಲ್ಲಿ ಇಂದ್ರಿಯಗಳನ್ನು ನಮ್ಮ ವಶವರ್ತಿಗಳಾಗಿ ಇಟ್ಟುಕೊಳ್ಳಬಹುದು. ಇಲ್ಲವಾದರೆ ಅವು ನಮ್ಮ ದೇಹವು ಬೆಳೆದಂತೆ ಬಲಿಷ್ಠವಾಗಿ ಆತ್ಮಶಕ್ತಿಯನ್ನು ಕುಗ್ಗಬಡಿದು, ತಮ್ಮ ಅತ್ಯಾಚಾರಗಳನ್ನು ಸ್ವಚ್ಛಂದವಾಗಿ ನಡಿಸಬಹುದು. ದೊಡ್ಡವಿದ್ವಾಂಸರೂ ಸತ್ಕುಲಪ್ರಸೂತರೂ ಸುಶೀಲರೂ ಕೂಡ ಒಮ್ಮೊಮ್ಮೆ ಇಂದ್ರಿಯಗಳ ಹೊಡತವನ್ನು ತಾಳಲಾರದೆ ಅವುಗಳ ಅಧೀನರಾಗಿ ತಂತಮ್ಮ ಪಾಂಡಿತ್ಯ ಕುಲಶೀಲಗಳನ್ನು ವ್ಯರ್ಥವಾಗಿ ಹಾಳುಮಾಡಿಕೊಳ್ಳುತ್ತಾರೆ.* ಈ

---

* ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿಕರ್ಷತಿ॥ ಮಹಾಭಾರತ.

ಮೇರೆಗೆ ತಂತಮ್ಮ ಬಹುಕಾಲದ ತಪಸ್ಸನ್ನು ಕಳೆಕೊಂಡ ಉದಾಹರಣೆ ಗಳು ಪುರಾಣಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಪೌರಾಣಿಕ ಕಾಲ ದಷ್ಟು ದೂರ ಹೋಗುವುದು ಬೇಡ. ೩೦೦ ವರುಷಗಳ ಹಿಂದೆ ಜ್ಞಾನ ದೇವನ ತಂದೆಯಾದ ವಿಠ್ಠಲಪಂತನು ಸನ್ಯಾಸಾಶ್ರಮವನ್ನು ಸ್ವೀಕರಿಸಿ, ಅದನ್ನು ನಡಿಸಲಾರದೆ **ಅಳಂದಿ**ಯಲ್ಲಿ ತನ್ನ ಹೆಂಡತಿಯೊಡನೆ ಸಂಸಾರ ಮಾಡಿ, ಜ್ಞಾನದೇವ ಮುಂತಾದ ಮಕ್ಕಳನ್ನು ಹಡೆಯಲಿಲ್ಲವೇ? ಆ ತಂದೆ ಮಕ್ಕಳನ್ನು ಜನರು ಎದ್ವೆಣಿಸಿ ಹಿಂಸೆಪಡಿಸಲಿಲ್ಲವೇ? ಆದ್ದರಿಂದ ದುಸ್ಸಾಧ್ಯ ವಾದ ನಿವೃತ್ತಿಮಾರ್ಗವನ್ನು ಬಲುಗಟ್ಟಿಗರು ಮಾತ್ರ ಕಯ್ಕೊಳ್ಳಬೇಕೇ ಹೊರತು ಸಾಮಾನ್ಯಜನರು ಅದರ ಗೊಡವೆಗೆ ಹೋಗುವುದು ಕ್ಷೇಮಕರ ವಾಗಲಾರದು. ಈ ಕಾಲಕ್ಕೆ ಎಲ್ಲರಿಗೂ ಸುಲಭಸಾಧ್ಯವಾದ ಮುಕ್ತಿಯ ಉತ್ತಮಮಾರ್ಗವು ಪ್ರವೃತ್ತಿಮಾರ್ಗವೇ ಸರಿ. ಸಂಸಾರದಲ್ಲಿದ್ದು ಸುಲಭ ಸಾಧ್ಯವಾದ ಇಂದ್ರಿಯನಿಗ್ರಹವನ್ನು ಕೆಲಮಟ್ಟಿಗೆ ಮಾಡಿ, ಗೃಹಸ್ಥಾ ಶ್ರಮ ಧರ್ಮವನ್ನು ಸರಿಯಾಗಿ ಪಾಲಿಸಿದರೆ, ಮೋಕ್ಷವು ನಿಶ್ಚಯವಾಗಿ ದೊರೆಯುವದು. ಸಂಸಾರದುಃಖಗಳಿಗೆ ಅಂಜಿ ವಿರಕ್ತರಾಗಿ ಅಡವಿ ಯನ್ನು ಸೇರುವುದು ಸ್ವಾರ್ಥತ್ವವನ್ನೂ ಹೇಡಿತನವನ್ನೂ ತೋರಿಸುವ ಕೃತ್ಯವೇ ಸರಿ. ಚಾತುರ್ವರ್ಣದ ಜನರು ಗೃಹಸ್ಥಾಶ್ರಮದಲ್ಲೇ ಇದ್ದು ತಂತಮ್ಮ ಧರ್ಮವನ್ನು ಸರಿಯಾಗಿ ಪಾಲಿಸಿದರೆ ಮುಕ್ತಿಯು ಅನಾಯಾಸ ವಾಗಿ ದೊರೆಯುವುದೆಂಬುದರಲ್ಲಿ ಸಂಶಯವಿಲ್ಲ. ಬ್ರಾಹ್ಮಣರು ತಮ್ಮ ಅಧ್ಯಾತ್ಮವಿಚಾರ ದೇವತಾರಾಧನೆಯನ್ನೂ ಕ್ಷತ್ರಿಯರು ತಮ್ಮ ಶತ್ರು ಸಂಹಾರ ಪ್ರಜಾಪಾಲನೆಯನ್ನೂ ವೈಶ್ಯರು ತಮ್ಮ ವ್ಯವಸಾಯ ವ್ಯಾಪಾರ ವನ್ನೂ ಶೂದ್ರರು ತಮ್ಮ ಸೇವಾವೃತ್ತಿಯನ್ನೂ ಮನಃಪೂರ್ವಕವಾಗಿ ಮಾಡಿ ದರೆ, ಇಹಲೋಕವೇ ಸ್ವರ್ಗವಾಗಿ ಪರಿಣಮಿಸುವದು. ಹಿಂದೆ ಕೃತತ್ರೇತಾ ದ್ವಾಪರಯುಗಗಳಲ್ಲಿ ಗೃಹಸ್ಥಾಶ್ರಮಿಗಳಾಗಿದ್ದು, ತಂತಮ್ಮ ವರ್ಣಧರ್ಮ ದಂತೆ ಮನಮುಟ್ಟಿ ನಡೆದು, ಮೋಕ್ಷವನ್ನೈಯ್ದಿದವರು ಅಸಂಖ್ಯಾತರಾಗಿರ ಬಹುದು. ವಸಿಷ್ಠ, ವಿಶ್ವಾಮಿತ್ರ, ಭರದ್ವಾಜ, ಕಶ್ಯಪ ಮುಂತಾದ ಮಹ ರ್ಷಿಗಳೂ ಶ್ರೀರಾಮಚಂದ್ರ, ಜನಕ, ಅಂಬರೀಷ, ಧ್ರುವ ಮುಂತಾದ ರಾಜ ರ್ಷಿಗಳೂ ಈಗಲೂ ಕೀರ್ತಿಶೇಷರಾಗಿಲ್ಲವೇ? ಸಾರಾಂಶ, ಪ್ರತಿಯೊಬ್ಬನು

ತನ್ನತನ್ನ ವರ್ಣಧರ್ಮದಂತೆ ನಿಷ್ಠೆಯಿಂದ ಆಚರಿಸಿ ಕೃತಾರ್ಥನಾಗ ಬೇಕು. ಪರೋಪಕಾರವೇ ಪುಣ್ಯವು, ಪರಪೀಡನೆಯೇ ಪಾಪವು ಎಂಬ ಮಹಾತತ್ವವನ್ನು ಯಾರೂ ಎಂದೂ ಮರೆಯಕೂಡದು.* ಈ ಕಲಿ ಯುಗದ ಎಲ್ಲ ಜನರು ತಂತಮ್ಮ ವರ್ಣಗಳಂತೆ ಧರ್ಮವನ್ನು ಭಕ್ತಿ ಪೂರ್ವಕವಾಗಿ ಆಚರಿಸಿ ಕೃತಕೃತ್ಯರಾಗಿ ಮುಕ್ತಿಯನ್ನು ಹೊಂದಲೆಂದು ಪರಮೇಶ್ವರನನ್ನು ಅನನ್ಯಭಾವದಿಂದ ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ ಎಂದು ಹೇಳಿ, ಪುಂಡಲೀಕವರದಹರಿವಿಠ್ಠಲ ಎಂಬ ಪ್ರಚಂಡವಾದ ಜಯ ಘೋಷವನ್ನು ಮಾಡಿ ಕೀರ್ತನವನ್ನು ಮುಗಿಸಿದನು.†

ಈ ಕೀರ್ತನದಲ್ಲಿ ತುಕಾರಾಮಬಾವಾನು ವರ್ಣಾಶ್ರಮಧರ್ಮದ ವಿಷಯವಾಗಿ ಮಾಡಿದ ಉಪದೇಶವು ಅಲ್ಲಿ ಕೂಡಿದ ಎಲ್ಲ ಜನರ ಮನ ಸ್ಸಿನಲ್ಲಿ ಚನ್ನಾಗಿ ನಟ್ಟಿತು. ನಮ್ಮ ಚರಿತ್ರನಾಯಕನ ಮನಸ್ಸಿನ ಮೇಲೆ ಅದು ಪೂರ್ಣವಾಗಿ ಬಿಂಬಿಸಿದ್ದರಿಂದ ಅವನ ತಲೆಯಲ್ಲಿ ಸೇರಿದ ನಿವೃತ್ತಿ ಮಾರ್ಗದ ಮೇಲ್ಮೆಯ ಮಬ್ಬು ಇಳಿಯಿತು; ಇಂದ್ರಿಯನಿಗ್ರಹವನ್ನು ಪೂರ್ಣವಾಗಿ ಮಾಡುವ ಸಾಮರ್ಥ್ಯವು ತನ್ನಲ್ಲಿಲ್ಲೆಂಬ ಸಂಗತಿಯ ಮನವರಿಕೆಯು ಅವನಲ್ಲಿ ಹುಟ್ಟಿತು. ಕೀರ್ತನವು ಮುಗಿದ ಬಳಿಕ ಅವನು ತುಕಾರಾಮಬಾವಾನ ಬಳಿಗೆ ಹೋಗಿ ಸಾಷ್ಟಾಂಗ–ನಮಸ್ಕಾರಹಾಕಿ ಕಯ್ಜೋಡಿಸಿಕೊಂಡು ನಿಂತು, "ಸ್ವಾಮಿ, ಈ ಹೊತ್ತಿನ ತಮ್ಮ ಅಮೃತ ತುಲ್ಯವಾಕ್ಯದಿಂದ ನನ್ನ ಸಂಶಯವೆಲ್ಲ ಪರಿಹಾರವಾಯಿತು. ದೂರಿನ ಬೆಟ್ಟ ಕಣ್ಣಿಗೆ ನುಣ್ಣುಣ್ಣಗೆ ಎಂಬ ಗಾದೆಯಂತೆ ನಿವೃತ್ತಿಮಾರ್ಗವು ಸುಸಾಧ್ಯವೆಂದು ಎಣಿಸಿದ್ದೆನು. ಆದರೆ ಆ ಭ್ರಮವು, ಆ ತಪ್ಪು ತಿಳಿವಳಿ ಕೆಯು ಈ ದಿವಸದ ತಮ್ಮ ವಿವರಣೆಯಿಂದ ನೀರಿನಗುಳ್ಳೆಯಂತೆ ಕರಗಿ ಹೋಯಿತು. ಈ ಹೊತ್ತು ನಾನು ತಮ್ಮ ಅನುಗ್ರಹದಿಂದ ಧನ್ಯ

---

* ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್ ॥

† ಪಂಢರಪುರದ ವಿಠೋಬನ ಮಹತ್ವವು ೧೨ ನೆಯ ಅಥವಾ ೧೩ ನೆಯ ಶತಮಾನದಲ್ಲಿ ಬೆಳೆಯಿತೆಂದು ತೋರುತ್ತದೆ.

ನಾದೆನು. ಬಹಳ ದಿವಸದಿಂದ ನಾನು ನಿವೃತ್ತಿಮಾರ್ಗವನ್ನು ಹಿಡಿಯ ಬೇಕೆಂದು ಆಲೋಚಿಸುತ್ತಿದ್ದೆನು. ಪ್ರವೃತ್ತಿಮಾರ್ಗದಿಂದಲೇ ಮುಕ್ತಿ ಯನ್ನು ಗಳಿಸಬಹುದೆಂಬ ಅರಿವು ನನಗೆ ಇದ್ದಿಲ್ಲ. ಈ ದಿವಸವ ತಮ್ಮ ಉಪದೇಶದಿಂದ ನನ್ನ ಸಂದೇಹವೆಲ್ಲ ದೂರಾಯಿತು. ನನ್ನ ಕರ್ತವ್ಯ ದಕ್ಷತೆಯು ಬಲಗೊಂಡಿತು. ನನ್ನ ಧರ್ಮದೃಷ್ಟಿಯು ನಿಚ್ಚಳಿಸಿತು. ವಿಶ್ವ ಪ್ರಯತ್ನಮಾಡಿ ಯವನರನ್ನು ಸದೆಬಡಿದು, ಅವರ ಬಾಧೆಯನ್ನು ತಪ್ಪಿಸ ಬೇಕೆಂಬ ನನ್ನ ಇಚ್ಛೆಯು ಇಮ್ಮಡಿಸಿತು. ಧರ್ಮದಿಂದ ರಾಜ್ಯವಾಳಿ ಪ್ರಜಾ ಜನರ ಸುಖವನ್ನು ಹೆಚ್ಚಿಸಬೇಕೆಂಬ ನನ್ನ ಹುರಪು ಹುರಿಗೊಂಡಿತು.

ತುಕಾರಾಮಬಾವಾ—ವತ್ಸ ನಿನ್ನ ಮಾತನ್ನು ಕೇಳಿ ಸಂತೋಷ ವಾಯಿತು. ನೀನು ನಿನ್ನ ಧರ್ಮವನ್ನು ಸರಿಯಾಗಿ ಮಾಡಿದರೆ ದೇವರು ನಿನಗೆ ಕಲ್ಯಾಣಮಾಡುವನಲ್ಲದೆ ನಿನಗೆ ಕೀರ್ತಿಯು ಬರುವದು. ಪರ ಧರ್ಮಸ್ವೀಕಾರಕ್ಕಿಂತ ಸ್ವಧರ್ಮದಲ್ಲಿ ಸಾಯುವುದೇ ಲೇಸು.* ನೀನು ಅರಸನಾದ್ದರಿಂದ ಹಗೆಗಳನ್ನು ಹಣಿದು ಜನರನ್ನು ಕಾಪಾಡು.

ಸಿವಾಜಿ—ಸ್ವಾಮಿ, ನನ್ನದು ಇನ್ನೊಂದು ಕೋರಿಕೆಯುಂಟು. ಅದನ್ನು ಪೂರ್ಣಮಾಡುವ ಭಾರವು ತಮ್ಮ ಮೇಲಿರುತ್ತದೆ. ತಾವು ಶಿಷ್ಯನ ಮೇಲೆ ಅನುಗ್ರಹವಿಟ್ಟು, ಆಗಾಗ್ಗೆ ದರ್ಶನಲಾಭವನ್ನು ಕೊಟ್ಟು, ಸದುಪದೇಶಮಾಡಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ.

ತು.—ದೇವರು ಯಾವಾಗಲು ಸಜ್ಜನರಿಗೆ ಸಹಾಯಮಾಡು ವನು. ಅವನ ಪ್ರೇರಣೆಯಿಂದಲೇ ಈ ಜಗತ್ತಿನ ಎಲ್ಲ ವ್ಯವಹಾರಗಳು ನಡೆಯುತ್ತವೆ. ಅವನ ಪ್ರೇರಣೆಯಿಂದಲೇ ನಾನು ಈಗ ಇಲ್ಲಿ ಬಂದಿರು ತ್ತೇನೆ. ಮುಂದೆಯಾದರೂ ಅವನು ಪ್ರೇರೇಪಿಸಿದಲ್ಲಿ ಹೋಗುವೆನು.

ಇಷ್ಟಾದ ಬಳಿಕ ಸಿವಾಜಿಯು ಮನಮುಟ್ಟಿ ಪೊಡಮಟ್ಟು ಬೀಳ್ಕೊಂ ಡನು. ತನ್ನ ಮಗನ ಮನೋವೃತ್ತಿಯು ಬಾವಾನ ಉಪದೇಶದಿಂದ ತೀರ ಬದಲಾದುದನ್ನು ನೋಡಿ ಜೀಜಿಬಾಯಿಯು ಅತಿ ಸಂತುಷ್ಟಳಾಗಿ

---

* ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ಭಗವದ್ಗೀತೆ.

ಭಕ್ತಿಪೂರ್ವಕವಾಗಿ ಅವನ ಕಾಲಿಗೆರಗಿ, ಅವನನ್ನು ಮನದಣಿ ಹೊಗಳಿ, ಆವನ ಅಪ್ಪಣೆತೆಗೆದುಕೊಂಡು, ಮಗನನ್ನು ಹಿಂಬಾಲಿಸಿದಳು. ಮುಂದೆ ಸಿವಾಜಿಯು ಅಧ್ಯಾತ್ಮಕವಿಚಾರದಲ್ಲಿ ಮುಳುಗದೆ, ರಾಜಕಾರ್ಯವನ್ನು ಮನಸ್ಸುಗೊಟ್ಟು ಮಾಡತೊಡಗಿದ್ದರಿಂದ ಅವನ ತಾಯಿಗೂ ಎಲ್ಲ ಅಧಿಕಾರಿಗಳಿಗೂ ಅತ್ಯಾನಂದವಾಯಿತು.

ನಮ್ಮ ಚರಿತ್ರನಾಯಕನು ಭಾವಿಕನಾದ್ದರಿಂದ ಸಂತಸಮಾಗಮವು ತನಗೆ ಆಗಿಂದಾಗ ಆಗಬೇಕೆಂಬ ಲವಲವಿಕೆಯು ಅವನಲ್ಲಿ ಬಲವಾಗಿತ್ತು. ಆದ್ದರಿಂದ ಮುಂದೆ ಕೆಲದಿವಸ ಹೋದಬಳಿಕ ಅವನು ಅಪ್ತಾಗಿರಿ ಕುದುರೆ ಕೊಡೆಗಳನ್ನೂ ಒಂದು ಪತ್ರವನ್ನೂ ಕೊಟ್ಟು ಒಬ್ಬ ಕಾರಕೂನನನ್ನು ತುಕಾರಾಮಬಾವಾನನ್ನು ಕರೆಕೊಂಡು ಬರಲಿಕ್ಕೆ ಅವನು ಇದ್ದ ಎಡೆಗೆ ಕಳುಹಿದನು. ಆ ಪತ್ರವನ್ನು ನೋಡಿ ಬಾವಾನು ನಸುನಕ್ಕು ಕೆಲವು ಅಭಂಗಗಳನ್ನು ರಚಿಸಿ ಆ ಪತ್ರಕ್ಕೆ ಉತ್ತರವಾಗಿ ಅವುಗಳನ್ನು ಕಳುಹಿದನು. ಈ ಅಭಂಗಗಳ ಸಾರಾಂಶವೇನಂದರೆ:—ಬ್ರಹ್ಮನು ಈ ಸೃಷ್ಟಿಯನ್ನು ನಿರ್ಮಿಸಿದನು. ಇದರಲ್ಲಿ ಎಷ್ಟೋ ಸೋಜಿಗಗಳೂ ಅದ್ಭುತಗಳೂ ಇರುತ್ತವೆ. (ಅವುಗಳನ್ನು ಕಂಡುಹಿಡಿಯುವಂತೆ) ಬುದ್ಧಿಯನ್ನು ಪ್ರೇರೇಪಿಸುವವನು ಬಲ್ಲವನಾದ ತತ್ವಜ್ಞಾನಿಯೇ ಸರಿ. ಭಕ್ತಿ ವಿಶ್ವಾಸವುಳ್ಳವರು ಮಾತ್ರ ಇಂತಹ ಜ್ಞಾನಿಯ ಪ್ರೀತಿಗೆ ಪಾತ್ರರಾಗುತ್ತಾರೆ. ನಿನ್ನ ಪತ್ರದಿಂದ ನಿನ್ನಲ್ಲಿ ಭಕ್ತಿವಿಶ್ವಾಸಗಳಿರುತ್ತವೆಂದು ತೋರುತ್ತದೆ. ನಿನಗಿಟ್ಟ ಶಿವ ಎಂಬ ಪವಿತ್ರವಾದ ಹೆಸರು ಸಾರ್ಥಕವಾಗಿರುತ್ತದೆ. **ನೆಲದೆರೆಯನಾದ** ಕೊಡೆಯೊಡೆಯನೇ, ನೀನು ವ್ರತನೇಮಧ್ಯಾನತಪಶ್ಚರ್ಯ ಯೋಗಾಭ್ಯಾಸಗಳನ್ನು (ಹಿಂದಿನ ಜನ್ಮದಲ್ಲಿ) ಮಾಡಿ, ಈ ಸ್ಥಿತಿಗೆ ಬಂದಿರುತ್ತಿ. ನನ್ನನ್ನು ಕಾಣುವುದೇ ನಿನ್ನ ಮುಖ್ಯೋದ್ದೇಶವೆಂದು ನಿನ್ನ ಕಾಗದದಿಂದ ಕಂಡುಬರುತ್ತದೆ. ಅದಕ್ಕೆ ನಾನು ಕೊಡುವ ಮನಃಪೂರ್ವಕವಾದ ಉತ್ತರವನ್ನು ಕೇಳು. ಚಿಂದಿಗಳನ್ನುಟ್ಟು ತೊಟ್ಟು ಹಣ್ಣುಹಂಪಲಗಳನ್ನು ಅರೆಹೊಟ್ಟೆ ತಿಂದು, ಮೆಯ್ಯೆಲ್ಲ ಬೂದಿಯನ್ನು ಬಡಿಕೊಂಡು, ಅಸಹ್ಯವಾದ ಮತ್ತು ಕೀಳಾದ ರೂಪದಿಂದ ಗೊತ್ತುಗುರಿಯಿಲ್ಲದೆ ಅಡವಿಯಲ್ಲಿ ತಿರುಗಾಡುವುದೇ ನನ್ನ ಇಷ್ಟವು. ಸೊರಗಿ ಕಡ್ಡಿಯಾದ ನನ್ನ ಅವಯವಗಳೂ ಕುಗ್ಗಿದ ನನ್ನ

ದೇಹವೂ ನೋಡುವವರಿಗೆ ಅಸಹ್ಯವಾಗಿ ಕಾಣಿಸುವುವು. ಆದ್ದರಿಂದ ಜೆಟ್ಟಿಯು ಮಾತನ್ನೇ ಎತ್ತಬೇಡೆಂದು ಪ್ರೇಮಪೂರ್ವಕವಾಗಿ ಬೇಡಿ ಕೊಳ್ಳುತ್ತೇನೆ. ನಾನು ನಿನ್ನ ಬಳಿಗೆ ಬರುವುದರ ಪ್ರಯೋಜನವೇನು? ಕಾಲುಗಳು ಮಾತ್ರ ದಣಿಯುವುವು. ಅಲ್ಲಿ ಇರುವುದರಿಂದ ನನ್ನ ಆಯು ಷ್ಯವು ವ್ಯರ್ಥವಾಗಿ ಕಳೆದು ಹೋಗುವದು. ನನ್ನ ಊಟಕ್ಕೆ ತಿರಿದನ್ನವೂ ಉಡಿಗೆಗೆ ಚಿಂದಿಗಳೂ ಮಲಗುವುದಕ್ಕೆ ಕಲ್ಲೂ ಹೊದಿಕೆಗೆ ಮುಗಿಲೂ ಇರು ವುದರಿಂದ ನಾನು ಏನುಕಾರಣ ಬೇರೆಯವರನ್ನು ಆಶ್ರಯಿಸಲಿ? ಸನ್ಮಾ ನಾರ್ಥವಾಗಿ ರಾಜಸಭೆಗೆ ಹೋಗಬೇಕೆಂದರೆ ಅಲ್ಲಿ ಸಮಾಧಾನವಿರುವುದಿಲ್ಲ. ಅರಮನೆಯಲ್ಲಿ ಹಣವುಳ್ಳವರಿಗೆ ಮಾನ, ಉಳಿದವರಿಗೆ ಅನಾದರವು. ನಮ್ಮಂತಹ ವಿರಕ್ತರಿಗೆ ವಸ್ತ್ರಾಲಂಕಾರ ಭೂಷಿತರಾದ ಜನರನ್ನು ನೋಡು ವುದೇ ಮರಣವೆನಿಸುತ್ತದೆ. ಈ ಮಾತನ್ನು ಕೇಳಿ ನೀನು ಉದಾಸೀನ ನಾಗಬಹುದು. ಆದರೆ ದೇವರು ನಮ್ಮಿಬ್ಬರನ್ನೂ ಉಪೇಕ್ಷಿಸಲಾರನು. ನಿನಗೊಂದು ಸೋಜಿಗದ ಮಾತನ್ನು ಹೇಳುತ್ತೇನೆ. ಅದೇನಂದರೆ, ನಮಗೆ ತಿರಕಿಯೇ ಹೆಚ್ಚು ಸುಖಕರವಾದುದು. ಸಿರಿವಂತರು ಆಶಾಪಾಶಬದ್ಧ ರಾಗಿ ವ್ರತತಪಯಾಗಗಳನ್ನು ಮಾಡುತ್ತಾರೆ. ನಾವು ಮನಸ್ಸಿನಿಂದ ಶ್ರೀಮಂತರು; ನಮ್ಮಲ್ಲಿ ಪೂರ್ವಜನ್ಮದ ಪುಣ್ಯವೂ ದೇವತಾ-ಪ್ರೇಮವೂ ತುಂಬಿರುತ್ತವೆ.

ಈ ಅಭಂಗಗಳನ್ನು ಓದಿ ನಮ್ಮ ಚರಿತ್ರನಾಯಕನು ಉಸ್ಸೆಂದು ನಿಟ್ಟುಸುರು ಬಿಟ್ಟನು. ತಾನೇ ದೊಡ್ಡವನೆಂಬ ಅವನ ಹೆಮ್ಮೆಯು ಅಳಿ ಯಿತು. ವೈರಾಗ್ಯಚಕ್ರವರ್ತಿಗಳು ಲೋಭಕ್ಕೊಳಗಾಗುವುದಿಲ್ಲೆಂಬ ಮಾತು ಅವನ ಅನುಭವಕ್ಕೆ ಬಂತು. ತುಕಾರಾಮಬಾವಾನ ವಿಷಯವಾಗಿ ಅವನ ಪೂಜ್ಯಬುದ್ಧಿಯು ಹೆಚ್ಚಿತು. ಬಾವಾನು ತನ್ನ ಬಳಿಗೆ ಬರಲೊಡಂಬಡದ್ದ ರಿಂದ ತಾನೇ ಅವನಿದ್ದೆಡೆಗೆ ಹೋಗಬೇಕೆಂಬ ವಿಚಾರವು ಅವನಲ್ಲಿ ತಲೆದೋರಿತು. ಹಾಗೆ ಮಾಡಿದರೆ ತನ್ನ ಧರ್ಮಚ್ಯುತಿಯಾಗುವುದೆಂಬ ಭೀತಿಯು ಅವನ ಆ ವಿಚಾರವನ್ನು ಅಡಿಗಿಸಿತು. ಬಹಳ ಹೊತ್ತು ವಿಚಾರಮಾಡಿ ಬಾವಾನ ಚರಿತಾರ್ಥವು ಸರಿಯಾಗಿ ಸಾಗಲಿಕ್ಕೆ ಸಾಕಾಗು ವಷ್ಟು ಉಂಬಳಿಯನ್ನು ಅವನಿಗೆ ಹಾಕಿಕೊಡಬೇಕೆಂದು ನಿಶ್ಚಯಿಸಿದನು.

ಆದರೆ ಪೇಯುವುಳ್ಳ ಬಟ್ಟಲವು ತುಟಿಗಳನ್ನು ಮುಟ್ಟುವಷ್ಟರೊಳಗೆ ಎಷ್ಟೋ ಎಡರುಗಳು ಬರುತ್ತವೆಂಬ ಪಾಶ್ಚಿಮಾತ್ಯರ ಗಾದೆಯಂತೆ ಅವನ ಇಚ್ಛೆಯು ಮೂರ್ತಸ್ವರೂಪವನ್ನು ಹೊಂದಲಿಕ್ಕೆ ತಡವಾಯಿತು. ಅನಿವಾರ್ಯವಾದ ರಾಜಕರಣಗಳ ಮೂಲಕ ಈ ಉಂಬಳಿಯ ಸನದುಸೂತ್ರಗಳು ಬೇಗನೆ ಸಿದ್ಧವಾಗಲಿಲ್ಲ. ಅಷ್ಟರೊಳಗೆ ತುಕಾರಾಮಬಾವಾನು ದೇಹವಿಟ್ಟನು (೧೬೪೯). ಈ ಸುದ್ದಿಯನ್ನು ಕೇಳಿ ಸಿವಾಜಿಯು ಬಹಳವಾಗಿ ಹಳಹಳಿಸಿದನು. ಅವನಲ್ಲಿ ಲೋಭಕ್ಕಿಂತ ಕೃತಜ್ಞತೆಯು ಮಿಗಿಲಾಗಿದ್ದುದರಿಂದ ೩ ಹಳ್ಳಿಗಳನ್ನು ತುಕಾರಾಮಬಾವಾನ ಮಕ್ಕಳಿಗೆ ಉಂಬಳಿಯಾಗಿ ಹಾಕಿಕೊಟ್ಟನು. ಈ ಉಂಬಳಿಯು ಆ ಮಹಾನುಭಾವನ ವಂಶಜರಿಗೆ ಈಗಲೂ ನಡೆಯುತ್ತದೆ. *

ಒಮ್ಮೆ ತುಕಾರಾಮಬಾವಾನು ಮಹಾಡದಲ್ಲಿ ಧ್ರುವಾಖ್ಯಾನವನ್ನು ಕುರಿತು ಮಾಡಿದ ಕೀರ್ತನವನ್ನು ಕೇಳುವುದಕ್ಕೆ ನಮ್ಮ ಚರಿತ್ರನಾಯಕನು ಹೋಗಿದ್ದನು. ಬಾವಾನ ಎಲ್ಲ ಕೀರ್ತನಗಳಂತೆ ಇದಾದರೂ ಚಿತ್ತಾಕರ್ಷಕವಾಗಿತ್ತು. ಈ ಕೀರ್ತನದಲ್ಲಿ ಧ್ರುವನು ನಾರದರನ್ನು ತನ್ನ ಗುರುಗಳಾಗಿ ಮಾಡಿಕೊಂಡು ಮುಕ್ತಿಯನ್ನು ದೊರಕಿಸಿದನೆಂತಲೂ ಮೋಕ್ಷಸಾಧನೆಗೆ ಗುರುಸಾನ್ನಿಧ್ಯವು ಅತ್ಯವಶ್ಯಕವಾದ್ದೆಂತಲೂ ತುಕಾರಾಮಬಾವಾನು ಸಿವಾಜಿಯ ಮನಸ್ಸಿನ ಮೇಲೆ ಚೆನ್ನಾಗಿ ಬಿಂಬಿಸಿದ್ದನು. ಆಕಾರಣ ಒಬ್ಬ ಮಹಾಪುರುಷನನ್ನು ತನ್ನ ಗುರುವಾಗಿ ಮಾಡಿಕೊಳ್ಳಬೇಕೆಂಬ ಲವಲವಿಕೆಯು ಅವನ ಮನಸ್ಸನ್ನು ಯಾವಾಗಲೂ ಕಟಿಯುತ್ತಿತ್ತು. ಆದ್ದರಿಂದ ಅವನು ಹೋದಹೋದಲ್ಲಿ ಸಾಧುಸಂತರ ಬಗ್ಗೆ ವಿಚಾರಿಸಿ, ಅವರಿದ್ದೆಡೆಗೆ ಹೋಗಿ ದರ್ಶನಲಾಭವನ್ನು ಹೊಂದುತ್ತಿದ್ದನು. ತುಕಾರಾಮನಂತಹ ವೈರಾಗ್ಯಚಕ್ರವರ್ತಿಯನ್ನು ಕಣ್ಣಾರೆ ಕಂಡ ಬಾಯಾರ ಮಾತಾಡಿದ ಮತ್ತು ಕಿವಿಯಾರ ಅವನ ಕೀರ್ತನವನ್ನು ಕೇಳಿದ ನಮ್ಮ ಚರಿತ್ರನಾಯಕನಿಗೆ ಕಡಮೆ ತರದ ಸಾಧುಗಳು ಸೇರಲಿಲ್ಲೆಂಬುದು ಸ್ವಾಭಾವಿಕವಾದ ಮಾತೇಸರಿ. ಅವನಿಗೆ ತುಕಾರಾಮನಷ್ಟು ಅಥವಾ ಅವನಿಗಿಂತ ಹೆಚ್ಚಿನ

---

* ಕೇಳುಸಕರ ಪುಟ ೫೨೦.

ಯೋಗ್ಯತೆಯ ಸಾಧುವು ಬೇಕಾಗಿದ್ದನು. ಶೋಧಾಂತ್ಯದಲ್ಲಿ ಅವನಿಗೆ ಬೇಕಾದಂತಹ ಮಹಾಸಾಧುವು ಸುದೈವದಿಂದ ದೊರೆತುದರಿಂದ ಅವನಿಗೆ ಹೊಟ್ಟೆ ಹಿಡಿಯಲಾರದಷ್ಟು ಆನಂದವಾಯಿತು. ಇತಿಹಾಸದಲ್ಲಿ ಪ್ರಸಿದ್ಧರಾದ ಸಮರ್ಥರಾಮದಾಸ ಸ್ವಾಮಿಗಳೇ ಈ ಮಹಾಸಾಧುಗಳು.

ರಾಮದಾಸ ಸ್ವಾಮಿಗಳು ಎಲ್ಲಿ ಹುಟ್ಟಿದರು, ಅವರ ತಂದೆತಾಯಿಗಳಾರು ಅವರ ಗುರುಗಳು ಎಲ್ಲಿದ್ದರು, ಅವರಿಗೆ ಆಶ್ರಮಕೊಟ್ಟವರಾರು ಮುಂತಾದ ಸಂಗತಿಗಳ ವಿಷಯವಾಗಿ ನಮಗೆ ಗೊತ್ತಾಗುವ ಕೆಲವು ಮಾತುಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಬರೆಯುತ್ತೇವೆ. *

೧೭ ನೆಯ ಶತಮಾನದ ಆರಂಭದಲ್ಲಿ **ಸೂರ್ಯಾಜಿಪಂತ**ನೆಂಬವನು ಪುಣೆಗೆ ಸೇರಿದ **ಜಾಂಬಳಗಾವ** ಎಂಬ ಊರಿನ ಕುಲಕರ್ಣಿಯಾಗಿದ್ದನು. ಅವನ ಹೆಂಡತಿಯ ಹೆಸರು **ರೇಣುಬಾಯಿ.** ಈ ದಂಪತಿಗಳಿಗೆ ಗಂಗಾಧರನೆಂಬ ಮಗನು ಹುಟ್ಟಿದ ಬಳಿಕ ೩॥ ವರ್ಷಕ್ಕೆ ನಾರಾಯಣನೆಂಬ ಮತ್ತೊಬ್ಬ ಮಗನು ಹುಟ್ಟಿದನು (ಶಕೆ ೧೫೩೦ ಇಸ್ವಿ ೧೬೦೮). ಈ ಮಗುವೇ ಮುಂದೆ ಸಮರ್ಥರಾಮದಾಸ ಸ್ವಾಮಿಯೆಂದು ಹೆಸರುವಾಸಿಯಾದನು. ಒಂದುವರ್ಷದ ಕೂಸಿದ್ದಾಗಲೇ **ಏಕನಾಥ** ಮಹಾರಾಜರು ಇವನನ್ನು ಮುದ್ದಿಟ್ಟು, ಇವನು ಮಾರುತಿಯ ಅವತಾರವೆಂದು ಹೇಳಿ, ಹಡೆದವರನ್ನು ಹೊಗಳಿದರಂತೆ. ಚಿಕ್ಕಂದಿನಲ್ಲಿ ಇವನು ಬಲು ಚುರುಕುಬುದ್ಧಿಯವನೂ ಕಿಡಿಗೇಡಿಯೂ ಹಾವಳಿಗಾರನೂ ಪುಂಡನೂ ಜಿಗತಹಾರಿಕೆಯೇರಿಕೆಗಳಲ್ಲಿ ಗಟ್ಟಿಗನೂ ಆಗಿದ್ದನು. ಇವನು ೭ ವರ್ಷದವನಿರುವಾಗಲೇ ಇವನ ತಂದೆಯಾದ ಸೂರ್ಯಾಜಿಯು ಕಾಲವಾದನು. ಇವನು ತನ್ನತಾಯಿಯಣ್ಣಂದಿರಿಗೆ ಅನುಕೂಲವಾಗಿ ನಡೆದುದರಿಂದ ಮುಂದೆ ಕೆಲವರ್ಷ ಸಂಸಾರವು ಸುಸೂತ್ರವಾಗಿ ಸಾಗಿತು. ಗಂಗಾಧರನು ಸಾಧುವೂ ಔದಾರಿಯೂ ವಿವೇಕಿಯೂ ಸ್ವಾರ್ಥತ್ಯಾಗಿಯೂ ಆದ್ದರಿಂದ, ಎಲ್ಲ ನೆರೆಹೊರೆಯುವರು ಅವನನ್ನು ಶ್ರೇಷ್ಠನೆಂದು ಕರೆಯುತ್ತಿದ್ದರು. ಹಿರಿಯಕ್ಕನ

---

* ಈ ಸಂಗತಿಗಳನ್ನು ಮ॥ ರಾ॥ ಗ. ಹು. ಹೊನ್ನಾಪುರಮಠ ಇವರ ಶ್ರೀರಾಮದಾಸ ಸ್ವಾಮಿಗಳ ಚರಿತ್ರದಿಂದ ತೆಗೆದುಕೊಂಡಿರುತ್ತೇನೆ.

ಚಾಳಿ ಮನೆಯುವರಿಗೆಲ್ಲ ಎಂಬ ಗಾದೆಯಂತೆ ಶ್ರೇಷ್ಠನ ಗುಣಗಳು ನಾರಾಯಣನಲ್ಲಿ ಸೇರಿದವು. ಇಷ್ಟೇ ಅಲ್ಲ, ಅವನ ವಿರಕ್ತಿಯು ದಿನದಿನಕ್ಕೆ ಬೆಳೆಯುತೊಡಗಿತು. ಅವನು ಮನೆಯಿಂದ ಓಡಿಹೋಗಿ ನಾಲ್ಕುನಾಲ್ಕು ಎಂಟೆಂಟು ದಿವಸ ಗಿಡದ ಹೊದರಿನಲ್ಲಾಗಲಿ ಗವಿಯಲ್ಲಾಗಲಿ ಕುಳಿತು, ದೇವತಾಧ್ಯಾನ ಮಾಡಲಾರಂಭಿಸಿದನು. ಈ ಸ್ಥಿತ್ಯಂತರವನ್ನು ನೋಡಿ ರೇಣುಬಾಯಿಯು ಸ್ವಾಭಾವಿಕವಾಗಿ ಹೆದರಿ, ಅವನ ಮದುವೆ ಮಾಡಿ ಕೊರಳೊಳಗೆ ಗುದ್ದಿಯನ್ನು ಕಟ್ಟಿ, ಸಂಸಾರಿಕನಾಗಿ ಮಾಡಬೇಕೆಂದಾಲೋಚಿಸಿ, ಮದುವೆಯ ಅಂತಃಪಟ ಹಿಡಿಯುವ ವರೆಗೆ ತಾನು ಹೇಳಿದಂತೆ ಕೇಳಬೇಕೆಂದು ಅವನಿಂದ ಮಾತು ತೆಗೆದುಕೊಂಡಳು. ನಾರಾಯಣನು ತನ್ನ ವಚನವನ್ನು ಅಕ್ಷರಶಃ ಪಾಲಿಸಿ, ಮಂಗಳಾಷ್ಟಕಕ್ಕೆ ಆರಂಭವಾದ ಕೂಡಲೆ ಹಸೆಮಣೆಯಿಂದೆದ್ದು ಓಡಿ ಹೋಗಿ, ನಾಸಿಕದ ಹತ್ತಿರಿದ್ದ **ಪಂಚವಟಿ**ಯಲ್ಲಿ ಕೆಲವರ್ಷ ಉಗ್ರತಪಸ್ಸನ್ನು ಮಾಡಿ, ಶ್ರೀರಾಮಚಂದ್ರನ ದರ್ಶನ ಲಾಭವನ್ನು ಪಡೆದು, ತೀರ್ಥಾಟನಮಾಡಿ ಪಂಚಲಿಂಗಗಳ ದರ್ಶನ ತೆಗೆದುಕೊಂಡು, ಸಹ್ಯಾದ್ರಿಯ ಕಣಿವೆಯಲ್ಲಿದ್ದ ಚಾಫಳವೆಂಬ ಊರಿನಲ್ಲಿ ಶ್ರೀರಾಮಮಂದಿರವನ್ನೂ ಮಠವನ್ನೂ ಕಟ್ಟಿಸಿ, ಅಲ್ಲಿ ನಿಂತುಕೊಂಡನು. ಈ ಕಾಲಕ್ಕೆ ಅವನು ಅದ್ಭುತಕೃತ್ಯಗಳನ್ನು ಮಾಡಿ ತೋರಿಸಿದನಂತೆ. ಅವನು ಭಿಕ್ಷಾಟನಕ್ಕೆ ಹೋದಾಗ 'ಶ್ರೀರಘುವೀರಸಮರ್ಥ' ಎಂದು ಹೇಳುತ್ತಿದ್ದುದರಿಂದ ಅವನಿಗೆ ಸಮರ್ಥರಾಮದಾಸರೆಂದು ಜನರು ವಾಡಿಕೆಯಾಗಿ ಕರೆಯಲಾರಂಭಿಸಿದರು.

ಈ ಸುಮಾರಿಗೆ ನಮ್ಮ ಚರಿತ್ರನಾಯಕನು ರಾಮದಾಸರನ್ನು ಹುಡುಕಿಕೊಂಡು ಹೋಗಿ ಅವರಿಂದ ಉಪದೇಶ ತೆಗೆದುಕೊಂಡು, ಅವರ ಶಿಷ್ಯನಾದನೆಂದು ಸ್ವಾಮಿಗಳ ಚರಿತ್ರದಿಂದ ತಿಳಿದು ಬರುತ್ತದೆ (೧೬೪೯). ತುಕಾರಾಮಬಾವಾನು ಸ್ಪಷ್ಟವಾಗಿ ಅಲ್ಲಗಳೆದುದರಿಂದ ಮತ್ತೊಬ್ಬರನ್ನು ತನ್ನ ಗುರುವಾಗಿ ಮಾಡಿಕೊಳ್ಳುವುದು ಸಿವಾಜಿಗೆ ಅಗತ್ಯ ಬಿತ್ತು. ಶ್ರೀರಾಮದಾಸರು ಯೋಗ್ಯರಾದ ಗುರುಗಳೆಂದು ಕಂಡು ಬಂದುದರಿಂದ ಎಲ್ಲಿಗೆ ಹೋಗಿ ಅವರನ್ನು ಕಾಣಬೇಕೆಂಬುದನ್ನು ವಿಚಾರಮಾಡತೊಡಗಿದನು. ಕಡೆಗೆ ವಿಚಾರಮಾಡುತ್ತ ಕೂಡ್ರುವುದಕ್ಕಿಂತ ಚಾಫಳಕ್ಕೆ

ಹೋಗಿ ಅವರನ್ನು ಹುಡುಕುವುದೇ ಹೆಚ್ಚು ಶ್ರೇಯಸ್ಕರವೆಂದೆಣಿಸಿ, ಮಿತ ಪರಿವಾರದೊಡನೆ ಅಲ್ಲಿಗೆ ಹೋಗಿ ಕೇಳಲು, ಸ್ವಾಮಿಗಳು ಅಲ್ಲಿದ್ದಿಲ್ಲ. ಅಲ್ಲಿದ್ದ ಸ್ವಾಮಿಗಳ ಶಿಷ್ಯರಾದ ವಿಠ್ಠಲ, ಭಾನಜಿ ಗೋಸಾವಿಯರು ಮಹಾ ಫಲವನ್ನೂ ಗಂಧಪುಷ್ಪಗಳನ್ನೂ ಶ್ರೀರಘುಪತಿಯ ಪ್ರಸಾದವಾಗಿ ಕೊಟ್ಟರು.

ಸಿವಾಜಿ —ಇಷ್ಟು ಸಮೀಪದಲ್ಲೇ ಶ್ರೀರಾಮಮಂದಿರವಿದ್ದು ಅದರ ಸೇವೆಯು ನನ್ನಿಂದ ಆಗಲಿಲ್ಲೆಂದು ಬಹಳವಾಗಿ ಹಳಹಳಿಸುತ್ತೇನೆ.

ವಿಠ್ಠಲಗೋಸಾವಿ—ಮಹಾರಾಜ, ತಾವು ಹಾಗೆ ಎಣಿಸಕೂಡದು. ತಮ್ಮ ದ್ರವ್ಯಸಾಹಾಯದಿಂದಲೇ ಈ ಮಂದಿರವು ಪೂರ್ಣವಾಗಿರುತ್ತದೆ.

ಸಿ.—ಸ್ವಾಮಿ, ಕ್ಷಮಿಸಿರಿ. ಇಂತಹ ಔಪಚಾರಿಕ ಸ್ತುತಿಯಿಂದ ನನ್ನ ಮನಸ್ಸು ತಣಿಯಲಾರದು. ನಿಜವಾಗಿ ನಾನು ಏನೂ ಕೊಟ್ಟಿಲ್ಲ. ಆದ್ದರಿಂದ ಈ ಪೊಳ್ಳು ಹೊಗಳಿಕೆಗೆ ಮೆಚ್ಚಲಾರೆನು.

ಭಾನಜಿಗೋಸಾವಿ—ಮಹಾರಾಜ, ಶ್ರೀರಾಮದಾಸರ ಶಿಷ್ಯರು ಸತ್ಯ ಸಂಧರೆಂಬ ಮಾತಿನ ಪ್ರತೀತಿಯು ತಮಗೆ ಇನ್ನೂ ಆಗಿಲ್ಲೆಂದು ತೋರು ತ್ತದೆ. ಪ್ರಾಣಹೋದರೂ ಅವರು ಸಟೆಯನ್ನಾಡಲಾರರು.

ಸಿ.—ಸ್ವಾಮಿ, ಕ್ಷಮಿಸಿರಿ. ತಾವು ಸುಳ್ಳಾಡಿದಿರೆಂದು ನನ್ನ ಬಾಯಿಂದ ಎಂದೂ ಬರಲಿಲ್ಲ. ಈ ಗುಡಿಯನ್ನು ಕಟ್ಟಲಿಕ್ಕೆ ನಾನು ಹಣ ಕೊಟ್ಟಂತೆ ನನ್ನ ನೆನಪಿಗೆ ಬರಲಿಲ್ಲೆಂದು ಮಾತ್ರ ಹೇಳಿದೆನು. ಮರವಾ ಗಿದ್ದರೆ ಎಂದು ಎಲ್ಲಿ ಹೇಗೆ ಕೊಟ್ಟೆನೆಂಬುದನ್ನು ದಯವಿಟ್ಟು ತಿಳಿಸಿದರೆ ಬಹಳ ಉಪಕಾರವಾಗುವದು.

ವಿಠ್ಠಲಗೋಸಾವಿ—ಮಹಾರಾಜ, ಕೇಳಿರಿ. ತಾವು ಮರೆತರೂ ನಾವು ಮರೆಯಲಾರೆವು. ತಾವು ಎಂದು ಹೇಗೆ ಈ ಕಟ್ಟಡಕ್ಕೆ ಹಣದ ಸಾಹಾಯವನ್ನು ಮಾಡಿದರೆಂಬುದನ್ನು ನೆನಪಿದ್ದ ಮಟ್ಟಿಗೆ ವಿವರವಾಗಿ ತಿಳಿಸುತ್ತೇನೆ.

ಈಗ ಸುಮಾರು ೨ ವರ್ಷಗಳ ಹಿಂದೆ ನಾಸಿಕವಾಸಿಯಾದ ಗಿರಿ ಗೋಸಾವಿಯೆಂಬವರು ಪುಣೆಯಲ್ಲಿ ತಮ್ಮ ಪುರೋಹಿತರ ಮನೆಯಲ್ಲಿ ಕೀರ್ತನವನ್ನು ಮಾಡಿದರಷ್ಟೇ. ಆ ಕಥೆಯನ್ನು ಕೇಳಲಿಕ್ಕೆ ತಾವು ದಯ ಮಾಡಿಸಿದ್ದು ತಮ್ಮ ನೆನಪಿನಲ್ಲಿರಬಹುದು. ಕಥೆಯು ಸ್ವಾರಸ್ಯವುಳ್ಳ ದಾದ್ದರಿಂದ ಅದಕ್ಕೆ ಮೆಚ್ಚಿ ತಾವು ಗೋಸಾವಿಯ ಮುಂದೆ ೩೦೦ ಹೊನ್ನು ಗಳನ್ನಿಟ್ಟಿರಿ. ಅದನ್ನು ನೋಡಿ ಅವರು 'ಮಹಾರಾಜ ನಾನು ನಿರಿಚ್ಛನು ಈ ಹಣವನ್ನು ತೆಗೆದುಕೊಂಡು ನಾನು ಏನು ಮಾಡಲಿ? ನನಗೆ ಈ ಹಣ ಬೇಡ' ಎಂದು ಖಂಡಿತವಾಗಿ ಹೇಳಿಬಿಟ್ಟರು. ಅದಕ್ಕೆ 'ತಾವು ಭಗವದ್ಭ ಕ್ತರು, ಈ ಹಣವನ್ನು ತಮಗೆ ಅರ್ಪಣಮಾಡಿರುತ್ತೇನೆ. ತಮ್ಮ ಸ್ವಂತಕ್ಕೆ ಹಣವು ಬೇಡಾಗಿದ್ದರೂ ಅದರಿಂದಾಗಬಹುದಾದ ಅನೇಕ ಭಗ ವತ್ಕಾರ್ಯಗಳಿರಬಹುದು. ಆದ್ದರಿಂದ ಅದನ್ನು ತಮ್ಮ ಮನಸ್ಸಿಗೆ ಬಂದಂತೆ ವಿನಿಯೋಗಿಸಬಹುದು. ಕೊಟ್ಟುದನ್ನು ನಾನು ತಿರುಗಿ ತೆಗೆದು ಕೊಳ್ಳಲಾರೆನು' ಎಂದು ಹೇಳಿದಿರಿ. ಆದನ್ನು ಕೇಳಿ ಗಿರಿಗೋಸಾವಿಯರು ಮಹಾರಾಜ, ನಾನು ಈ ಹಣವನ್ನು ಮುಟ್ಟಲಾರೆನು, ತಾವು ಇದನ್ನು ತಿರುಗಿ ತೆಗೆದುಕೊಳ್ಳಲಾರಿರಿ. ಇಂತಹ ಇರಕಿನಲ್ಲಿ ನನಗೊಂದು ಹೂಟು ಸೂಚಿಸುತ್ತದೆ. ರಾಮದಾಸಸ್ವಾಮಿಗಳು ಚಾಫಳದ ಕಣಿವೆಯಲ್ಲಿ ಒಂದು ರಾಮಮಂದಿರವನ್ನು ಕಟ್ಟಿಸಲಾರಂಭಿಸಿದ್ದಾರೆ. ತಾವು ದಯವಿಟ್ಟು ಈ ಹಣವನ್ನು ಆ ಕಟ್ಟಡಕ್ಕೆ ಕೊಟ್ಟರೆ, ಅದನ್ನು ಸರಿಯಾಗಿ ಉಪಯೋಗಿಸಿ ದಂತಾಗುವುದು—ಎಂದು ಹೇಳಿದ್ದರಿಂದ ತಾವು ಆ ಸೂಚನೆಗೆ ಒಡಂಬಟ್ಟು, ಚಾಫಳದ ಮಾಮಲೆದಾರನಾದ ನರಸೋಮಲ್ಲನಾಥನ ಮುಖಾಂತರವಾಗಿ ಆ ಹಣವನ್ನು ಸ್ವಾಮಿಗಳಿಗೆ ಮುಟ್ಟಿಸಿದಿರಿ. ಇನ್ನೂ ತಮಗೆ ಸಂಶಯ ವಿದ್ದರೆ ನರಸೋಮಲ್ಲನಾಥನನ್ನು ಕೇಳಬಹುದು.

ನರಸೋಮಲ್ಲನಾಥ--ಸರಕಾರ, ಈ ಗೋಸಾವಿಯರು ಹೇಳಿದ್ದು ಅಕ್ಷರಶಃ ನಿಜವಾಗಿರುತ್ತದೆ. ತಮ್ಮ ಅಪ್ಪಣೆಯಂತೆ ನಾನೇ ಈ ಹಣ ವನ್ನು ಸ್ವಾಮಿಗಳಿಗೆ ಮುಟ್ಟಿಸಿದೆನು.

ಸಿ.—ಹೌದು. ಈಗ ತುಸು ನೆನಪಿಗೆ ಬಂತು. ಆದರೆ ಆ ಹಣ ವನ್ನು ಗೋಸಾವಿಯರೇ ಸ್ವಾಮಿಗಳಿಗೆ ಕೊಟ್ಟರು ಹೊರತು, ನಾನೇ ಅವ

ರಿಗೆ ಕೊಡಲಿಲ್ಲ. ಶ್ರೀರಾಮಮಂದಿರದ ಸೇವೆಯು ನನ್ನಿಂದ ಏನೂ ಆಗಿಲ್ಲೆನ್ನಬಹುದು.

ಇಷ್ಟು ಮಾತುಕಥೆಗಳಾದ ಬಳಿಕ ನಮ್ಮ ಚರಿತ್ರನಾಯಕನು ಎದ್ದು ಶ್ರೀರಾಮನಿಗೆ ಪೊಡಮಡಿದು ಗುಡಿಯ ಸುತ್ತಲು ತಿರುಗಾಡಿ ನೋಡಲು, ಗುಡಿಯ ಹತ್ತಿರ ಒಂದು ಹಳ್ಳವು ಹರಿಯುತ್ತಿತ್ತು. ಈ ಹೊನಲಿನಿಂದ ಗುಡಿಯ ಕಟ್ಟಡಕ್ಕೆ ಧಕ್ಕೆಯಾಗಬಹುದೆಂದು ತೋರಿದ್ದರಿಂದ ಸಿವಾಜಿಯು ಆಕ್ಷಣವೇ ೫೦೦ ಹೊನ್ನು ಖರ್ಚುಮಾಡಿ ಅಲ್ಲಿಯೊಂದು ಪೂಲನ್ನು ಕಟ್ಟಿಸುವುದಕ್ಕೆ ನರಸೋಮಲ್ಲನಾಥನಿಗೆ ಅಪ್ಪಣೆಯನ್ನಿತ್ತು. ಸ್ವಾಮಿಗಳ ದರ್ಶನಾರ್ಥವಾಗಿ **ಕೋಂಡವಣ**ಕ್ಕೆ ಹೋಗಲು, ಅಲ್ಲಿಯೂ ಸ್ವಾಮಿಗಳಿರಲಿಲ್ಲ. ಆದ್ದರಿಂದ ಅವನು ಬಯಕೆಗೆಟ್ಟು ಪ್ರತಾಪಗಡಕ್ಕೆ ತಿರುಗಿ ಹೋಗಿ, ಅಲ್ಲಿಯೂ ಮನಸ್ಸಿನ ಸ್ವಾಸ್ಥ್ಯವು ದೊರೆಯದ್ದರಿಂದ ಮಹಾಬಲೇಶ್ವರ, ವಾಯಿಮಾಹುಲಿಗಳಿಗೆ ಹೋಗಿ ಅಲ್ಲಿ ಕೃಷ್ಣಾವೇಣ್ಯಾಸಂಗಮದಲ್ಲಿ ಸ್ನಾನ ಮಾಡಿ, ಬ್ರಾಹ್ಮಣಭೋಜನವನ್ನು ಮಾಡಿಸುತ್ತಿರುವಾಗ ರಾಮದಾಸ ಸ್ವಾಮಿಗಳಿಂದ ಒಂದು ಶ್ಲೋಕಬದ್ಧ ಅನುಗ್ರಹಪತ್ರವು ಬಂತು. ಅದನ್ನು ನೋಡಿ ಅವನಿಗೆ ಅತ್ಯಾನಂದವಾಯಿತು. ಅದರ ಸಾರಾಂಶವೇನೆಂದರೆ:—

"ನಿಶ್ಚಯದ ಮಹಾಮೇರುವೇ, ಬಹುಜನರ ಆಧಾರಿಯೇ, ಬದಲಾಗದಂತಹ ಹೊಲಬಿನ ನಿರ್ಧಾರಿಯೇ, ಸಿರಿವಂತನಾದ ಯೋಗಿಯೇ, ಪರೋಪಕಾರದ ರಾಶಿಯೇ, ಗೆಲವಿನ ಆಗರವೇ, ನಿನ್ನ ಗುಣಗಳಿಗೆ ಎಣೆಯಾರು? ನೀನು ನರಪತಿಯೂ ಹಯಪತಿಯೂ ಗಜಪತಿಯೂ ಗಡಪತಿಯೂ ಭೂಪತಿಯೂ ಜಲಪತಿಯೂ ಪುರಂದರನೂ ಛತ್ರಪತಿಯೂ ಆಗಿದ್ದು, ಪ್ರಜಾಕ್ಷೇಮದ ಹೊರೆಯನ್ನು ಬೆನ್ನುಮೇಲೆ ಹೊತ್ತಿರುತ್ತಿ. ನೀನು ಯಶಸ್ಸುಳ್ಳವನೂ ಕೀರ್ತಿವಂತನೂ ಕಸುವುಳ್ಳವನೂ ಪುಣ್ಯವಂತನೂ ನೀತಿವಂತನೂ ತಿಳಿವಳಿಕೆಯುಳ್ಳವನೂ ಆದ ಅರಸನಾಗಿರುತ್ತಿ. ನೀನು ಆಚಾರವಿಚಾರಶೀಲನೂ ದಾನಶೀಲನೂ ಧರ್ಮಶೀಲನೂ ಅರವುಳ್ಳವನೂ ಎಲ್ಲರೊಡನೆ ಸುಶೀಲತೆಯಿಂದ ನಡೆಯುವವನೂ ಧೀರನೂ ಉದಾರನೂ ಗಂಭೀರನೂ ಶೂರನೂ ರಾಜತಂತ್ರದಿಂದ ಎದುರಾಳಿಗಳನ್ನು ಮೂಲಿ

ಗೊತ್ತುವವನೂ ಆಗಿರುತ್ತಿ. ತೀರ್ಥಕ್ಷೇತ್ರಗಳು ಹಾಳಾದವು; ಬ್ರಾಹ್ಮಣರ ದೇವಸ್ಥಾನಗಳು ಭ್ರಷ್ಟವಾದವು; ಇಡಿ ಭರತಖಂಡವು ವಿಲಿವಿಲಿಯಾಯಿತು; ಧರ್ಮವು ದೇಶತ್ಯಾಗಮಾಡಿತು. ಧರ್ಮವನ್ನೂ ದೇವಬ್ರಾಹ್ಮಣರನ್ನೂ ಕಾಪಾಡುವುದಕ್ಕೆ ನಾರಾಯಣನು ನಿನ್ನ ಹೃದಯವನ್ನು ಹೊಕ್ಕು ಪ್ರೇರಣೆಮಾಡಿದನು. ನಿನ್ನ ಆಸ್ಥಾನದಲ್ಲಿ ಎಷ್ಟೋಮಂದಿ ಪುರಾಣಿಕರೂ ಕವೀಶ್ವರರೂ ಯಾಜ್ಞಿಕರೂ ವೈದಿಕರೂ ಸಭಾಭೂಷಣರೂ ಧೂರ್ತರೂ ಆದ ತಾರ್ಕಿಕರೂ ಇರುತ್ತಾರೆ. ಈ ಭೂಮಂಡಲದಲ್ಲಿ ಧರ್ಮಸಂರಕ್ಷಕರು ಯಾರೂ ಇಲ್ಲ. ಮಹಾರಾಷ್ಟ್ರಧರ್ಮವು ನಿನ್ನಿಂದ ಮಾತ್ರ ಕೆಲಮಟ್ಟಿಗೆ ಉಳಿದಿರುತ್ತದೆ. (ನಿನ್ನ ರಾಜ್ಯದಲ್ಲಿ) ಕೆಲವು ಧರ್ಮಕೃತ್ಯಗಳು ನಡೆಯುತ್ತವೆ; ಕೆಲಮಂದಿ ನಿನ್ನ ಆಶ್ರಿತರಾಗಿರುತ್ತಾರೆ; ಆದ್ದರಿಂದ ನೀನೇ ಧನ್ಯನು; ನಿನ್ನ ಕೀರ್ತಿಯು ಹಬ್ಬಿರುತ್ತದೆ. ನೀನು ಕೆಲಕೆಡಕರನ್ನು ಕೊಂದಿರುತ್ತಿ; ಕೆಲದುಷ್ಟರು ನಿನಗೆ ಅಂಜಿ ನಡೆಯುತ್ತಾರೆ; ಮತ್ತೆ ಕೆಲವರು ನಿನ್ನ ಆಶ್ರಿತರಾಗಿರುತ್ತಾರೆ. ದೇವರು ನಿನಗೆ ಕಲ್ಯಾಣಮಾಡಲಿ. ನಿನ್ನ ರಾಜ್ಯದಲ್ಲಿ ನಾನು ಇದ್ದರೂ ನೀನು ನನ್ನ ಸಮಾಚಾರವನ್ನು ತೆಗೆದುಕೊಳ್ಳಲಿಲ್ಲ. ದೇವತಾ ಸಂಕಲ್ಪದಿಂದ ನೀನು ನನ್ನನ್ನು ಮರೆತಿರುತ್ತಿಯೇನು? ಧರ್ಮಿಷ್ಠರೂ ಜ್ಞಾಣರೂ ಆದ ಉಪದೇಶಕರು ನಿನ್ನ ಬಳಿಯಲ್ಲಿರುತ್ತಾರೆ; ಧರ್ಮಸ್ಥಾಪಕನೆಂಬ ಕೀರ್ತಿಯನ್ನು ನೀನು ಕಾಯ್ದುಕೊಳ್ಳಬೇಕು. ಅನೇಕ ರಾಜಕಾರ್ಯಗಳಿಂದ ನಿನ್ನ ಮನಸ್ಸು ವ್ಯಗ್ರವಾಗಿರಬಹುದು. ಅನುಮರಿಯದೆ ನಾವು ಬರೆದುದನ್ನು ಕ್ಷಮಿಸು.”

ಈ ಶ್ಲೋಕಬದ್ಧ ಆಶೀರ್ವಾದಪತ್ರವನ್ನು ನೋಡಿ ನಮ್ಮ ಚರಿತ್ರನಾಯಕನು ಹಿಂದೆ ಹೇಳಿದಂತೆ ಹಿರಿಹಿರಿ ಹಿಗ್ಗಿದನು. ತನ್ನ ಬಹಳ ದಿವಸದ ಬಯಕೆಯು ಈಡೇರುವ ಹೊತ್ತು ಸಮೀಪಿಸಿದ್ದನ್ನು ನೋಡಿ ಸಂತೋಷಪಟ್ಟನು. ಕಾಗದವನ್ನು ತಂದ ಶಿಷ್ಯನನ್ನು ಊಟೋಪಚಾರದಿಂದ ತಣಿಸಿ, ತಾನು ಬಹುದಿವಸದಿಂದ ದರ್ಶನಾಕಾಂಕ್ಷಿಯಾಗಿದ್ದೆನೆಂತಲೂ ಒಂದೆರಡು ಸಾರಿ ಮಾಡಿದ ಪ್ರಯತ್ನವು ಪೋಲಾಯಿತೆಂತಲೂ ಬೆಟ್ಟಗೋಸ್ಕರ ಕೂಡಲೆ ಹೊರಡುವೆನೆಂತಲೂ ಉತ್ತರ ಬರಿಸಿ, ಆ ಶಿಷ್ಯನ

ಕಯ್ಯಲ್ಲಿ ಕೊಟ್ಟು ಬೀಳ್ಕೊಂಡು ಮರುದಿವಸ ಬೆಳಗ್ಗೆ ಕೆಲ ಸಂಗಡಿಗರೊಡನೆ ಚಾಫಳಕ್ಕೆ ಹೊರಟನು. ಅಲ್ಲಿ ಹೋಗಿ ನೋಡಲು ಸ್ವಾಮಿಗಳು ಇದ್ದಿಲ್ಲ. ಅವರು ಸಿಂಗಣವಾಡಿಯ ಮಾರುತಿದೇವಾಲಯಕ್ಕೆ ಹೋಗಿದ್ದರು. ಅರ್ಚಕರು ಶ್ರೀ ರಘುಪತಿಯ ಪ್ರಸಾದವನ್ನು ತೆಗೆದುಕೊಂಡು ಹೋಗಬೇಕೆಂದು ಎಷ್ಟು ಒತ್ತಾಯಮಾಡಿದರೂ ಅವರ ಮಾತಿಗೆ ಕಿವಿಗೊಡದೆ, ಆ ಹೊತ್ತು ಗುರುವಾರವಾದ್ದರಿಂದ ಸಮರ್ಥರ ದರ್ಶನ ತೆಗೆದುಕೊಳ್ಳದೆ ಅನ್ನಗ್ರಹಣ ಮಾಡುವುದಿಲ್ಲೆಂದು ಹೇಳಿ, ಸಿವಾಜಿಯು ಸಿಂಗಣವಾಡಿಯ ದಾರಿಯನ್ನು ಹಿಡಿದನು. ಅಲ್ಲಿ ಸ್ವಾಮಿಗಳ ದರ್ಶನವಾಯಿತು. ಆ ಕಾಲಕ್ಕೆ ಸ್ವಾಮಿಗಳು ಔದುಂಬರವೃಕ್ಷದ ಬುಡದಲ್ಲಿ ಕುಳಿತಿದ್ದರು; ಕಲ್ಯಾಣಗೋಸಾವಿಯು ಅವರ ಮುಂದೆ ಕುಳಿತು ಸಿವಾಜಿಯು ಬರೆದ ಉತ್ತರವನ್ನು ಓದಿಹೇಳುತ್ತಿದ್ದನು. ಸಿವಾಜಿಯ ಪುರೋಹಿತನಾದ ದಿವಾಕರಭಟ್ಟನು ಮುಂದೆ ಹೋಗಿ ಪ್ರೊಡಮಡಿದನು. ತರುವಾಯ ಸಿವಾಜಿಯು ತಾನು ತಂದ ಕಾಣಿಕೆಯನ್ನೂ ಶ್ರೀ ಫಲವನ್ನೂ ಸಮರ್ಥರ ಮುಂದಿಟ್ಟು ಸಾಷ್ಟಾಂಗವಾಗಿ ಎರಗಿ ಕೈಜೋಡಿಸಿಕೊಂಡು ನಿಂತನು.

ಸಮರ್ಥರು—ಸಿವಾಜಿರಾಜಾ, ನಿಮ್ಮ ಪತ್ರವೂ ನೀವೂ ಒಮ್ಮೆಲೆ ಬಂದಿರಿ. ಇಷ್ಟು ಅಡಾಡಿ ಏಕೆ ಮಾಡಿದಿರಿ? ನಾವು ನಿಮ್ಮ ರಾಜ್ಯದಲ್ಲಿದ್ದು ಬಹಳ ದಿವಸಗಳಾದವು. ಇಷ್ಟು ದಿವಸ ನಮ್ಮ ಪರಾಮರಿಕೆಯನ್ನು ಬಹಳವಾಗಿ ಮಾಡಿದಿರಿ. ಈಗ ಏನು ಕಾರಣ ಬರೋಣಾಯಿತು!

ಸಿವಾಜಿ—ಸ್ವಾಮಿ, ತಾವು ದಯಮಿಟ್ಟು ಈ ಬಡಸೇವಕನನ್ನು ಕ್ಷಮಿಸಬೇಕು. ತಮ್ಮ ಚರಣಕಮಲವನ್ನು ಕಾಣಲಿಕ್ಕೆ ಎಷ್ಟೋ ಸಾರಿ ಪ್ರಯತ್ನಪಟ್ಟೆನು. ಆದರೆ ನನ್ನ ದುರದೃಷ್ಟದಿಂದ ಆ ಪ್ರಯತ್ನಗಳೆಲ್ಲ ವ್ಯರ್ಥವಾದವು. ಈ ಹೊತ್ತು ನನ್ನ ಭಾಗ್ಯೋದಯವಾಯಿತು: ನನ್ನ ಕಣ್ಣುಗಳು ಸಫಲವಾದವು. ನನ್ನ ಬಯಕೆಯು ಪೂರೈಸಿತು. ತಾವು ದಯಾಸಾಗರರು. ನನ್ನ ಮೇಲೆ ಕನಿಕರಪಟ್ಟು ನನ್ನನ್ನು ಶಿಷ್ಯನಾಗಿ ಗ್ರಹಿಸಿದರೆ, ನನ್ನ ಜನ್ಮ ಸಾರ್ಥಕ್ಯವಾಗುವದು.

ಸ.—ರಾಜಾ, ನೀನು ಸುಜ್ಞನೆಂದು ಎಣಿಸಿದ್ದೆನು. ಇದೇನು? ಈಗ ತಿಳಿಗೇಡಿಯಂತೆ ಮಾತಾಡುತ್ತಿ. ನೀನು ಕ್ಷತ್ರಿಯವೃತ್ತಿಯನ್ನು ಸ್ವೀಕರಿ

ಸಿದ್ದರಿಂದ ನೀನು ಕ್ಷಾತ್ರಧರ್ಮವನ್ನೇ ಪಾಲಿಸುವುದು ಯೋಗ್ಯವಾಗಿರುತ್ತದೆ.

ಸಿ.—ಸ್ವಾಮಿ, ಈ ಕ್ಷಾತ್ರವೃತ್ತಿಯಲ್ಲಿ ಎಷ್ಟೋ ಪಾಪಕೃತ್ಯಗಳನ್ನು ಮಾಡಬೇಕಾಗುತ್ತದೆ; ಎಷ್ಟೋ ಕೊಲೆಸುಲಿಗೆಗಳ ದೋಷವು ತಟ್ಟುತ್ತದೆ. ಆದ್ದರಿಂದ ತಮ್ಮ ಶಿಷ್ಯನಾಗಿ ಶಾಂತಮನಸ್ಸಿನಿಂದ ಮೋಕ್ಷಸಾಧನವನ್ನು ಮಾಡಿಕೊಂಡು ಕೃತಕೃತ್ಯನಾಗಬೇಕೆಂದು ಹಂಬಲಿಸುತ್ತೇನೆ.

ಸ.—ಸಿವರಾಯಾ, ನೀನು ವ್ಯವಹಾರಜ್ಞನು. ಪಾರಮಾರ್ಥಿಕ ವಿಚಾರದಲ್ಲಿ ನಿನಗೆ ಹೆಚ್ಚು ಗತಿಯಿಲ್ಲ. ದೂರಿನ ಬೆಟ್ಟ ಕಣ್ಣಿಗೆ ನುಣ್ಣಣ್ಣಗೆ ಎಂಬ ಗಾದೆಯ ಮಾತು ನಿನಗೆ ಗೊತ್ತಿರಬಹುದು. ನಿವೃತ್ತಿ ಮಾರ್ಗದ ಕಷ್ಟಗಳು ನಿನಗೆ ಗೊತ್ತಿಲ್ಲುದರಿಂದ ಅದು ಸುಲಭ ಸಾಧ್ಯವೆಂದೆಣಿಸುತ್ತಿ. ಹಿಂದಿನ ಜನ್ಮಗಳ ಪುಣ್ಯಸಂಚಯುದಿಂದ ಅದು ಲಭ್ಯವಾಗುವುದೇ ಹೊರತು ಇಚ್ಛಾಮಾತ್ರದಿಂದ ಲಭಿಸದು.

ಸಿ.—ಸ್ವಾಮಿ, ಈ ದೀನನ ಬಿನ್ನಹವನ್ನು ದಯವಿಟ್ಟು ಲಾಲಿಸಬೇಕು. ಚಿಕ್ಕಂದಿನಿಂದ ನನ್ನ ಮನಸ್ಸಿನ ಒಲವು ನಿವೃತ್ತಿಮಾರ್ಗದ ಕಡೆಗ ಇರುತ್ತದೆ. ಇದೇನು ಹಿಂದಿನ ಜನ್ಮಗಳ ಸಯ್ಸಿನ ಫಲವೋ ಹೇಗೋ ಎಂಬುದನ್ನು ತಾವೇ ನಿರ್ಣಯಿಸಬಹುದು. ಗುರೂಪದೇಶವಾದರೆ ನಾನು ವೈರಾಗ್ಯವೃತ್ತಿಯನ್ನು ಸರಿಯಾಗಿ ಧರಿಸಿ ತಮ್ಮ ಶಿಷ್ಯನಾಗಿ ಇರಬಹುದೆಂದು ನನಗಂತೂ ತೋರುತ್ತದೆ.

ಸ.—ಸಿವಬಾ, ಬೆಳ್ಳಗೆ ಕಂಡುದೆಲ್ಲ ಹಾಲಲ್ಲ; ಮತ್ತು ನುಡಿಯಂತೆ ನಡೆಯಾಗುವುದು ಬಲುಬಿಗಿ. ಪೂರ್ವಜನ್ಮದ ಪುಣ್ಯಪ್ರಭಾವದಿಂದಲೇ ನೀನು ಈ ಸ್ಥಿತಿಯನ್ನು ಹೊಂದಿರುತ್ತಿ. ಮತ್ತು ಮುಂದೆ ಹೆಚ್ಚಿನ ಅವಸ್ಥೆಯನ್ನು ಹೊಂದುವಿ. ಆದರೆ ಗಾಳಿಯನ್ನು ಹಿಡಿಯುವುದು ಬಿಗಿಯಾದಷ್ಟೇ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದು ಬಿಗಿಯಾಗಿರುತ್ತದೆ. ಇದಕ್ಕೆ ಬಾಲಾಭ್ಯಾಸ ವೈರಾಗ್ಯಗಳೇ ಮುಖ್ಯಸಾಧನಗಳು.* ಚಿಕ್ಕಂದಿನಿಂದ

* ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ ಭಗವದ್ಗೀತಾ.

ವಿಷಯೋಪಭೋಗದಲ್ಲೇ ಕಾಲಕಳೆದುದರಿಂದ ನಿನ್ನ ಇಂದ್ರಿಯಗಳು ಬಲಿಷ್ಠವಾಗಿ ಆತ್ಮಶಕ್ತಿಯನ್ನು ಕುಗ್ಗಿಸಿರುತ್ತವೆ. ಆದ್ದರಿಂದ ಮನೋನಿಗ್ರಹ ಸಾಮರ್ಥ್ಯವು ನಿನಗೆ ಈ ಹರೆಯಲ್ಲಿ ಬಾರದು. ಧ್ರುವ ಪ್ರಹ್ಲಾದರು ಸಣ್ಣವರಿರುವಾಗಲೇ ಆತ್ಮಶಕ್ತಿಯನ್ನು ಬೆಳಸಿಕೊಳ್ಳಲಿಲ್ಲವೇ? ಆದ್ದರಿಂದ ನೀನು ನಿವೃತ್ತಿಮಾರ್ಗದ ವಿಚಾರವನ್ನು ಬಿಟ್ಟು, ಕ್ಷಾತ್ರಧರ್ಮವನ್ನೇ ಸರಿಯಾಗಿ ಪಾಲಿಸಿ, ಆತ್ಮಸಾರ್ಥಕ್ಯವನ್ನು ಮಾಡಿಕೊ.

ಸಿ.—ಸ್ವಾಮಿ, ತಮ್ಮ ಆಜ್ಞೆಯಂತೆ ನಡೆಕೊಳ್ಳುವೆನು. ಬಡಶಿಷ್ಯನ ಮೇಲೆ ದಯವಿಟ್ಟು ಆಗಿಂದಾಗ ತಕ್ಕ ಉಪದೇಶವನ್ನು ಮಾಡಿ, ಅನುಗ್ರಹಿಸಬೇಕೆಂದು ಅಂಗಲಾಚಿ ಬೇಡಿಕೊಳ್ಳುತ್ತೇನೆ.

ಸ.—ಏಕಾಗಲೊಲ್ಲದು, ಚಿಂತೆಮಾಡಬೇಡ. ಭಕ್ತರನ್ನು ಪೊರೆಯುವುದರಲ್ಲಿ ಶ್ರೀರಾಮನು ಸಮರ್ಥನಾಗಿರುತ್ತಾನೆ.

ಈ ಮೇರೆಗೆ ಭಾವೀಗುರುಶಿಷ್ಯರ ಸಂವಾದ ಮುಗಿಯುವಷ್ಟರಲ್ಲಿ ಸಿವಾಜಿಯ ಪುರೋಹಿತನಾದ ದಿವಾಕರ ಭಟ್ಟನು ಸ್ನಾನಮಾಡಿ ಎಲ್ಲ ಪೂಜಾಸಾಹಿತ್ಯಗಳನ್ನು ಅಣಿಮಾಡಿಟ್ಟಿದ್ದನು. ಸಂವಾದವು ಮುಗಿದ ಕೂಡಲೆ ಅವನು ಸಿವಾಜಿಯನ್ನು ಕರೆಕೊಂಡು ಹೋಗಿ ಸ್ನಾನಮಾಡಿಸಿ, ಅವನಿಂದ ಸಮರ್ಥರ ಪೂಜೆಯನ್ನು ಯಥಾವಿಧಿಯಾಗಿ ಮಾಡಿಸಿದನು. ಸಮರ್ಥರು ಸಿವಾಜಿಗೆ ಮಂತ್ರೋಪದೇಶವನ್ನು ಕೊಟ್ಟರು; ಸಿವಾಜಿಯು ಸಮರ್ಥರ ಬಳಿಯಲ್ಲಿ ೩ ರಾತ್ರಿಯಿದ್ದು, ಅವರಿಂದ ಮಣ್ಣು-ಲದ್ದಿ-ಹರಳುಗಳನ್ನು † ಪ್ರಸಾದವಾಗಿ ತೆಗೆದುಕೊಂಡು ಸಂತೋಷಭರಿತನಾಗಿ ಪ್ರತಾಪಗಡಕ್ಕೆ ತಿರುಗಿ ಹೋದನು (೧೬೪೯). *

---

† ಮಣ್ಣು ಎಂದರೆ ಭೂಮಿ, ಲದ್ದಿ ಎಂದರೆ ಐಶ್ವರ್ಯ, ಹರಳು ಎಂದರೆ ಕೋಟೆ.

* ಶ್ರೀ ರಾಮದಾಸಸ್ವಾಮಿಗಳ ಚರಿತ್ರ ಪುಟ ೧೬. ಸಿವಾಜಿಯು ಇದೇ ವರುಷ ಶಿಷ್ಯನಾದನೆಂದು ಬಹಳ ಜನರ ತಿಳಿವಳಿಕೆಯಲ್ಲಿ ಇರುತ್ತದೆ. ಇತ್ತಲಾಗಿನ ಕೆಲವು ಆಂಗ್ಲಭಾಷಾಜ್ಞರು ಈ ಸಂಗತಿಯು ೧೬೭೩ ರಲ್ಲಿ ಒದಗಿತೆಂದು ಪ್ರತಿಪಾದಿಸುತ್ತಾರೆ. ಆದರೆ ಹೆಚ್ಚಿನ ಆಧಾರಗಳು ದೊರೆಯುವ ವರೆಗೆ ಈ ಹಳೆ ತಿಳಿವಳಿಕೆಯೇ ನಿಲ್ಲುವದೆನ್ನಲಿಕ್ಕೆ ಅಡ್ಡಿಯಿಲ್ಲ.

ಮುಂದೆ ೨೨ ವರುಷ ನಮ್ಮ ಚರಿತ್ರನಾಯಕನು ಸ್ವಾಮಿಗಳಿದ್ದ ಲ್ಲಿಗೆ ಹೋಗಿ ಅವರ ದರ್ಶನವನ್ನು ತೆಗೆದುಕೊಂಡು, ಅವರ ಸದುಪದೇಶ ಗಳನ್ನು ಹೃದಯಕಮಲದಲ್ಲಿ ಸಂಗ್ರಹಿಸಿ, ಅವರ ಹೇಳಿಕೆಯಂತೆ ನಡೆಯ ಬೇಕೆಂದು ದೃಢವಾಗಿ ನಿಶ್ಚಯಿಸಿಕೊಂಡು ತಿರುಗಿ ಬರುತ್ತಿದ್ದನು. ಆದರೆ ಸ್ವಾಮಿಗಳು ಒಂದೇ ಎಡೆಯಲ್ಲಿ ನಿಲ್ಲದವರಾದ್ದರಿಂದ ಎಷ್ಟೋ ಸಾರಿ ಅವನು ದರ್ಶನವಿಲ್ಲದೆ ತಿರುಗಿ ಹೋಗಬೇಕಾಗುತ್ತಿತ್ತು. ಈ ಅಡಚಣೆ ಯನ್ನು ದೂರಮಾಡಿಕೊಳ್ಳುವುದಕ್ಕೋಸ್ಕರ ಸಿವಾಜಿಯು ತನ್ನ ಹತ್ತಿರ ದಲ್ಲಿರುವ **ಪರ್ಲಿ** ಕೋಟೆಯಲ್ಲಿ ವಾಸಮಾಡಬೇಕೆಂದು ಅಂಗಲಾಚಿ ಬೇಡಿ ಕೊಂಡನು. ಅದಕ್ಕೆ ಸ್ವಾಮಿಗಳು ಕೆಲದಿನ ಅನುಮಾನಿಸಿ ಕೊನೆಗೆ ಒಡಂಬಟ್ಟರು. ಕೂಡಲೆ ಪರ್ಲಿಯಲ್ಲಿ ಒಂದು ಮಾರುತಿಮಂದಿರವೂ ಮಠವೂ ಸಿದ್ಧವಾದವು; ಆ ಕೋಟೆಗೆ **ಸಜ್ಜನಗಡ**ವೆಂಬ ಹೆಸರು ಕೊಡ ಲ್ಪಟ್ಟಿತು. ಇಲ್ಲಿ ಸಮರ್ಥರು ತಾವು ದೇಹವಿಡುವ ವರೆಗೆ ಉಳಿದರು(೧೬೮೯).

೧೬೪೯ ರಿಂದ ಸಿವಾಜಿಯ ಮರಣದ ವರೆಗೆ ಅಂದರೆ ೧೬೮೦ ರ ವರೆಗೆ ರಾಮದಾಸ ಸಿವಾಜಿಯರ ವಿಷಯವಾಗಿ ಎಷ್ಟೋ ಸಂಗತಿಗಳು ರಾಮದಾಸಸ್ವಾಮಿಗಳ ಚರಿತ್ರದಲ್ಲಿ ಬರೆಯಲ್ಪಟ್ಟಿವೆ. ಅವುಗಳನ್ನೆಲ್ಲ ಇಲ್ಲಿ ವಿವರಿಸುವುದು ಸರಿಯಾಗಲಾರದು. ಮುಖ್ಯವಾದ ಕೆಲವು ಸಂಗತಿಗಳನ್ನು ಮಾತ್ರ ಇಲ್ಲಿ ಕೊಟ್ಟು ಈ ಅಧ್ಯಾಯವನ್ನು ಮುಗಿಸುವೆವು.

೧. ಒಮ್ಮೆ ನಮ್ಮ ಚರಿತ್ರನಾಯಕನಿಗೆ ತಾನೇ ಶ್ರೇಷ್ಠನೆಂತಲೂ ತನ್ನಿಂದಲೇ ಎಷ್ಟೋ ಅಧಿಕಾರಿಗಳೂ ಕಾರಕೂನರೂ ದಂಡಿನವರೂ ಕೂಲಿಕಾರರೂ ಬ್ರಾಹ್ಮಣರೂ ವ್ಯಾಪಾರಸ್ಥರೂ ಬೇಸಾಯದವರೂ ಸಂರ ಕ್ಷಿಸಲ್ಪಡುತ್ತಾರೆಂತಲೂ ಗರ್ವಬಂತು. ಅದನ್ನು ನೋಡಿ ಅವನು ಬೆಟ್ಟಿಗೆ ಬಂದಾಗ ಸಮರ್ಥರು ಅವನಿಗೆ ಒಂದು ದೊಡ್ಡ ಬಂಡೆಗಲ್ಲನ್ನು ತೋರಿಸಿ, "ಸಿವರಾಯಾ, ಇದನ್ನು ಒಡಿಸಿ, ಎರಡು ತುಂಡುಮಾಡಿಸು" ಎಂದು ಹೇಳಿದರು. ಆ ಕ್ಷಣವೇ ಕಲ್ಲುಕುಟಿಕರು ಬಂದು ಚಾಣದಿಂದ ಹೊಡೆ ಯಲು ಅದು ಎರಡು ಹೋಳಾಯಿತು. ಆ ಪಾಳಿಗಳ ನಡುವೆ ನೀರೂ ಕಪ್ಪೆಗಳೂ ಇದ್ದವು. ಅವುಗಳನ್ನು ಬೆರಳಿನಿಂದ ತೋರಿಸಿ,

ಸಮರ್ಥರು—ಸಿವರಾಯಾ, ನೀನು ಧನ್ಯನು. ನಿನ್ನ ಸಾಮರ್ಥ್ಯವು ಅತ್ಯಗಾಧವಾದುದು. ಈ ಕಲ್ಲಿನಲ್ಲಿದ್ದ ಕಪ್ಪೆಗಳನ್ನಾದರೂ ನೀನು ನೀರುಕೊಟ್ಟು ಸಲಹುತ್ತೀಯಲ್ಲ?

ಸಿ.—ಸ್ವಾಮಿ; ಈ ಪಾಮರನನ್ನು ಕ್ಷಮಿಸಬೇಕು. ಈ ಕಪ್ಪೆಗಳನ್ನು ಕಾಪಾಡಲಿಕ್ಕೆ ನಾನೆಷ್ಟರವನು? ಅವುಗಳನ್ನು ಪೊರೆಯುವ ಶಕ್ತಿಯು ನನಗೆಲ್ಲಿ?

ಸ.—ಹಾಗಲ್ಲ. ಸಿವರಾಯಾ, ನೆನೆದು ನೋಡು. ಈ ರಾಜ್ಯದಲ್ಲಿದ್ದ ಎಲ್ಲ ಜೀವರಾಶಿಗಳ ಸಂರಕ್ಷಣೆಯು ನಿನ್ನಿಂದಲೇ ಆಗುತ್ತದೆಂದು ನೀನು ತಿಳಿಯುವುದಿಲ್ಲವೇ? ಹಾಗಾದರೆ ನಿನ್ನ ಶಕ್ತಿಯು ಅತ್ಯದ್ಭುತವಲ್ಲವೇ?

ಸಿ.—ಮಹಾರಾಜ, ಈ ದೀನದಾಸನ ಅಪರಾಧವನ್ನು ದಯವಿಟ್ಟು ಕ್ಷಮಿಸಬೇಕು. ನನ್ನಲ್ಲಿ ಈ ತರದ ಹೆಮ್ಮೆಯು ಹುಟ್ಟಿದ್ದು ನಿಜವು. ಇಂತಹ ಹೆಮ್ಮೆಗೆ ನನ್ನ ಹೃದಯದಲ್ಲಿ ಎಡೆಕೊಟ್ಟುದೊಂದು ದೊಡ್ಡ ತಪ್ಪಾಯಿತು. ಇದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ತಿಳಿಸಿದರೆ ಮನಃಪೂರ್ವಕವಾಗಿ ಮಾಡಿಕೊಳ್ಳುವೆನು.

ಸ.—ಸಿವಬಾ, ದೇವರು ಎಲ್ಲ ಜೀವಜಂತುಗಳನ್ನು ಸಂರಕ್ಷಿಸುವವನು. ನಿನ್ನ ಮುಖಾಂತರವಾಗಿ ಅವನೇ ಕೆಲಜನರನ್ನು ಕಾಪಾಡುತ್ತಾನೆ. ದೇವರು ನಿನ್ನಿಂದ ಮಾಡಿಸುವ ಕೆಲಸವನ್ನು ನೀನೇ ಮಾಡುತ್ತಿ ಎನ್ನುವುದು ಒಣಹೆಮ್ಮೆಯ ಮಾತೇ ಸರಿ. ಅಹಂಕಾರವನ್ನು ಬಿಡು. ನೀನು ಮಾಡುವುದನ್ನೆಲ್ಲ ದೇವರಿಗೆ ಅರ್ಪಿಸು. ದೇವರಿಗೆ ವಿಧೇಯನಾಗಿಯೂ ನಮ್ರನಾಗಿಯೂ ಮುಂದೆ ನಡೆಯುವುದೇ ನೀನು ಮಾಡತಕ್ಕ ಪ್ರಾಯಶ್ಚಿತ್ತವು.

೨. ಸಮರ್ಥರು ಶ್ರೀರಾಮೇಶ್ವರ ಯಾತ್ರೆಯನ್ನು ಮುಗಿಸಿಕೊಂಡು ೧೬೫೭ ರಲ್ಲಿ ತಿರುಗಿ ಬಂದರು. ಆಗ ಸಿವಾಜಿಯು ತೊರಗಲ್ಲಿನ ವರೆಗೆ ಹೋಗಿ ಅವರನ್ನು ಎದುರುಗೊಂಡು ಮಹೋತ್ಸವದಿಂದ ಚಾಫಳಕ್ಕೆ ಕರೆದುಕೊಂಡು ಬಂದನು.

೩. ಶಕೆ ೧೫೮೦ ಮಾರ್ಗಶಿರಮಾಸದಲ್ಲಿ ನಿಜಾನಂದಸ್ವಾಮಿಗಳ ಪುಣ್ಯತಿಥಿಗಾಗಿ ಸಮರ್ಥರು ಕರ್ನಾಡಕ್ಕೆ ಹೋಗಿ ತಿರುಗಿ ಬರುವಾಗ, **ದೇವ ಗಾವ** ಎಂಬ ಊರಿನ ಹತ್ತಿರ ಅವರ ಶಿಷ್ಯರಿಗೆ ಬಹಳ ಹಸಿವೆಯಾದ್ದ ರಿಂದ ಸಮರ್ಥರ ಅಪ್ಪಣೆಯಂತೆ ಅವರು ಒಂದೊಂದು ಹೊಲದಿಂದ ೫-೫ ಬೆಳಸಿತೆನೆಗಳನ್ನು ತಂದು ದೇವಗಾವದ ಗೌಡನ ಹೊಲದಲ್ಲಿ ಅವುಗಳನ್ನು ಸುಟ್ಟು ತಿನ್ನಲಾರಂಭಿಸಿದರು. ಆ ಸುದ್ದಿಯನ್ನು ಕೇಳಿ ಗೌಡನು ಅಲ್ಲಿಗೆ ಬಂದು ಜೋಳದ ದಂಟಿನಿಂದ ಸಮರ್ಥರನ್ನು ಹೊಡೆದನು. ಈ ವರ್ತ ಮಾನವು ಸಿವಾಜಿಗೆ ತಿಳಿಯಲು, ಅವನು ಸಿಟ್ಟಿಗೆದ್ದು ಆ ಗೌಡನನ್ನು ಸಮ ರ್ಥರ ಮಠಕ್ಕೆ ಕರಿಸಿದನು. ಸಮರ್ಥ ಸಿವಾಜಿಯರನ್ನು ನೋಡಿ, ಗೌಡನು ತನಗೆ ದೇಹಾಂತ ಶಿಕ್ಷೆಯಾಗುವುದೆಂದೆಣಿಸಿ ಅಳಲಾರಂಬಿಸಿದನು. ಅವನ ಸ್ಥಿತಿಯನ್ನು ನೋಡಿ ಸಮರ್ಥರು ಕನಿಕರಪಟ್ಟು, ಅವನನ್ನು ಸಂತವಿಸಿ, ಬೆಳಸಿತಿಂದ ಹೊಲವನ್ನು ಅವನಿಗೆ ಇನಾಮು ಹಾಕಿಕೊಡಲಿಕ್ಕೆ ಹೇಳಿ ದರು. ಅದರಂತೆ ಸಿವಾಜಿಯು ಆ ಹೊಲವನ್ನು ಇನಾಮಾಗಿ ಕೊಟ್ಟನು. ಈ ಇನಾಮು ಇನ್ನೂ ನಡೆಯುತ್ತದೋ ಇಲ್ಲೋ ಗೊತ್ತಾಗುವುದಿಲ್ಲ.

೪. ಸಮರ್ಥರ ತಾಯಿಯು ಕಾಲವಾದ ಸುದ್ದಿಯು ಬಂದ ಕೂಡಲೆ ಸಿವಾಜಿಯು ಅವರ ದರ್ಶನಕ್ಕೆ ಹೋಗಿ ಅವರ ಮಠದಲ್ಲಿ ೧-೨ ದಿವಸ ನಿಂತನು. ಒಂದು ದಿನ ರಾತ್ರಿ ಸ್ವಾಮಿಗಳು ಸ್ವಸ್ಥಚಿತ್ತದಿಂದ ಕುಳಿತು ದನ್ನು ಕಂಡು,

ಸಿವಾಜಿ—ಸ್ವಾಮಿ, ಪುನರ್ಜನ್ಮದ ಕಾರಣವೇನು? ಅದನ್ನು ಹೇಗೆ ತಪ್ಪಿಸಬಹುದು?

ಸಮರ್ಥರು—ಅಪ್ಪಾ, ಇಚ್ಛೆಯೇ ಜನ್ಮಾಂತರದ ಕಾರಣವು. ಅದನ್ನು ಕಡಿದವರಿಗೆ ಪುನರ್ಜನ್ಮವೇ ಇಲ್ಲ.†

ಸಿ.—ಮಹಾರಾಜ, ಇಚ್ಛೆಯನ್ನು ಕಡಿಯುವ ಬಗೆಯಾವುದು? ಅದು ಪ್ರಾಣ ಇರುವ ವರೆಗೆ ದೇಹದಿಂದ ತೊಲಗುವುದಿಲ್ಲೆಂದು ತೋರುತ್ತದೆ.

---

† ಎಲ್ಲ ಆಶೆಯ ಬಿಟ್ಟ। ರಿಲ್ಲಿಯೇ ಕೈಲಾಸ। ಎಲ್ಲವ ಬಯಸಿ
ಭ್ರಮಿಸಿದಡೆ ನರಕ ತಾ। ಸಿಲ್ಲಿಯೇ ನೋಡು ಸರ್ವಜ್ಞ॥

ಸ.—ಸಿವರಾಯಾ, ನೀನು ತುಕಾರಾಮಬಾವಾನನ್ನು ನೋಡ ಲಿಲ್ಲವೇ? ಅವನಿಗೆ ಏನಾದರೂ ಇಚ್ಛೆ ಇತ್ತೇ?

ಸಿ.—ಸ್ವಾಮಿ, ಅವರು ನಿರಿಚ್ಛರೇ ಸರಿ. ಆದರೆ ಅವರಿಗೆ ಜನ ಕಲ್ಯಾಣೇಚ್ಛೆಯೊಂದು ಇತ್ತಲ್ಲ?

ಸ.—ಅಪ್ಪಾ, ಜನಕಲ್ಯಾಣೇಚ್ಛೆಯು ಮನುಷ್ಯನ ಇಚ್ಛೆಯಲ್ಲ. ಅದು ಪರಮೇಶ್ವರನ ಆಜ್ಞೆಯು; ಅದನ್ನು ಪಾಲಿಸುವುದು ಎಲ್ಲ ಜನರ ಕರ್ತವ್ಯವೇ ಸರಿ.

ಸಿ.—ಸ್ವಾಮಿ, ಈ ಇಚ್ಛೆಯನ್ನು ಕಡಿದುಕೊಳ್ಳುವುದಕ್ಕೆ ಸಾಧನ ಗಳಾವುವು?

ಸ.—ಸಿವರಾಯಾ, ಸದ್ಗುರುವಿನಿಂದ† ದೊರಕಿಸಿದ ಅಧ್ಯಾತ್ಮ ಜ್ಞಾನವೂ ಅಭ್ಯಾಸವೂ ಇದಕ್ಕಿದ್ದ ಮುಖ್ಯ ಸಾಧನಗಳು.

ಸಿ.—ಸ್ವಾಮಿ, ತಮ್ಮ ಉಪದೇಶವಾದಂದಿನಿಂದ ನಾನು ಈ ಇಚ್ಛೆ ಯನ್ನು ತಗ್ಗಿಸಲಿಕ್ಕೆ ಯತ್ನಿಸುತ್ತಿದ್ದೇನೆ. ಆದರೆ ಅದು ಎಳ್ಳಷ್ಟಾದರೂ ಕಡಮೆಯಾಗಿಲ್ಲ.

ಸ.—ಅಪ್ಪಾ, ನಾನು ನಿನಗೆ ಹಿಂದಕ್ಕೊಮ್ಮೆ ಹೇಳಲಿಲ್ಲವೇ? ಚಿಕ್ಕಂದಿನಿಂದ ಮನೋನಿಗ್ರಹಶಕ್ತಿಯು ಬೆಳೆಯುತ್ತಿದ್ದವರ ಪ್ರಯತ್ನ ಗಳು ಮಾತ್ರ ಬೇಗನೆ ಸಫಲವಾಗುತ್ತವೆ.

ಸಿ.—ಮಹಾರಾಜ, ತಾವು ಹೇಳಿದ್ದು ನನಗೆ ಚೆನ್ನಾಗಿ ತಿಳಿಯ ಲೊಲ್ಲದು. ಒಂದು ದೃಷ್ಟಾಂತವನ್ನು ಕೊಟ್ಟು ಹೇಳಿದರೆ ಬಹಳ ಉಪ ಕಾರವಾಗುವದು.

ಸ.—ಒಳ್ಳೆಯದು.

ಆಗ ಸಮರ್ಥರು ತಮ್ಮ ಬಳಿಯಲ್ಲಿದ್ದ ಗಂಧವನ್ನು ನೀರುಮಾಡಿ ಸಿವಾಜಿಯು ಹೊತ್ತುಕೊಂಡ ದೋತರದ ಮೇಲೆ ಆ ನೀರನ್ನು ಸುರವಿ,

---

† ಗುರುರಾಯನುಪದೇಶ ದೊರಕೊಂಡಿತಾದಡೆ।
ಪರಿವುದು ಪಾಪವೆಂತೆನಲು ವಜ್ರದಿಂ। ಗಿರಿಯು ಹೊಯಿದಂತೆ ಸರ್ವಜ್ಞ॥

ಸಿವರಾಯಾ, ನಿನ್ನ ಬೆಳ್ಳಗಿದ್ದ ದೋತರವು ಈಗ ಅರಿಸಿನ ಬಣ್ಣಾದ್ದಾಗಲಿಲ್ಲವೇ?

ಸಿ.—ಹೌದು, ಸ್ವಾಮಿ, ಅಹುದು.

ಸ.—ನಿನ್ನ ಬಟ್ಟೆಯೇ ದೇಹವು; ಅದರ ನೆಯ್ಗೆಯೇ ಆತ್ಮವು; ಅದರ ಬಣ್ಣವೇ ಮನಸ್ಸು; ಗಂಧದ ಅರಿಸಿನ ಬಣ್ಣವೇ ಇಚ್ಛೆಯು. ತಿಳಿಯಿತೇ?

ಸಿ.—ಸ್ವಾಮಿ, ತಿಳಿಯಿತು.

ಸ.—ದೇಹವು ಆತ್ಮದಿಂದ ಭಿನ್ನವಾಗಿರುತ್ತದೆಂತಲೂ ಇಚ್ಛೆಯು ಮನಸ್ಸಿನ ವಿಕಾರವಾದ್ದರಿಂದ ಅದನ್ನು ಆತ್ಮಶಕ್ತಿಯಿಂದ ಕಟ್ಟಬಹುದೆಂತಲೂ ಹೀಗೆ ಮಾಡುವುದು ಮಹಾತ್ಮರ ಕರ್ತವ್ಯವೆಂತಲೂ ಮನಗಾಣುವುದೇ ಅಧ್ಯಾತ್ಮಜ್ಞಾನವು. ತಿಳಿಯಿತೇ?

ಸಿ.—ತಿಳಿಯಿತು, ಸ್ವಾಮಿ.

ಸ.—ಇನ್ನು ಗಂಧದಿಂದ ಅರಿಸಿನವಾದ ನಿನ್ನ ದೋತರವನ್ನು ಆ ಹಳದಿ ಬಣ್ಣ ಹೋಗುವವರೆಗೆ ಮತ್ತೆ ಮತ್ತೆ ತೊಳೆದು ನುರಿಯಾಗಿ ಹಿಂಡು.

ಸಿ.—(ಹಾಗೆಮಾಡಿ), ಸ್ವಾಮಿ, ಮೊದಲಿನಂತೆ ನನ್ನ ದೋತರವು ಬೆಳ್ಳಗಾಯಿತು.

ಸ.—ಪುನಃ ಪುನಃ ತೊಳೆದು ಹಿಂಡುವುದೇ ಅಭ್ಯಾಸವು. ಈ ಗುಟ್ಟೂ ಈ ಅಭ್ಯಾಸಕ್ರಮವೂ ಸಾಧುಸಂತರಿಗೆ ಮಾತ್ರ ಗೊತ್ತಿರುವುದರಿಂದ ಸದ್ಗುರುವಿನ ಉಪದೇಶವು ಅವಶ್ಯವಾಗಿರುತ್ತದೆ. ತಿಳಿಯಿತೇ?

ಸಿ.—ಸ್ವಾಮಿ, ಚೆನ್ನಾಗಿ ಮನವರಿಕೆಯಾಯಿತು. ಇಂತಹ ಗಹನ **ವಿಷಯವನ್ನು** ಈ ತರದ ದೃಷ್ಟಾಂತದಿಂದ ಇಷ್ಟು ಸುಲಭವಾಗಿ ನನ್ನಂತಹ ಮಡ್ಡನಿಗೆ ತಿಳಿಸಿ ಕೊಟ್ಟುದಕ್ಕೋಸ್ಕರ ನಾನು ತಮಗೆ ಅತ್ಯಂತವಾಗಿ ಋಣಿಯಾಗಿದ್ದೇನೆ, (ಎಂದು ಅವರಿಗೆ ಸಾಷ್ಟಾಂಗವಾಗಿ ನಮಸ್ಕರಿಸಿ,) ಸ್ವಾಮಿ, ನನ್ನದೊಂದು ಅರಿಕೆಯುಂಟು ಅದನ್ನು ಪೂರೈಸಿ ಬಡಶಿಷ್ಯ ನನ್ನ ಅನುಗ್ರಹಿಸಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ನನ್ನನ್ನು

ಅಪಾತ್ರನೆಂದೆಣಿಸಿ ನನ್ನ ಬಿನ್ನಹವನ್ನು ಅಲ್ಲಗಳೆಯಬಾರದೆಂದು ದೈನಾಸೆ ಬಟ್ಟು ಪ್ರಾರ್ಥಿಸುತ್ತೇನೆ.

ಸ.—ಸಿವರಾಯ, ಅದೇನು ಹೇಳು. ಮುಚ್ಚಿಡಬೇಡ.

ಸಿ.—ಮಹಾರಾಜ, ಮತ್ತೇನು ಇಲ್ಲ. ಹಿಂದಕ್ಕೊಮ್ಮೆ ತಮ್ಮ ಸೇವೆಯನ್ನು ಮಾಡಿಕೊಂಡು ತಮ್ಮ ಬಳಿಯಲ್ಲೇ ಇರಬೇಕೆಂದು ಬಿನ್ನಹಿಸಲು, ಕ್ಷಾತ್ರಧರ್ಮವನ್ನೇ ಅನುಸರಿಸಬೇಕೆಂದು ಅಪ್ಪಣೆ ದಯಪಾಲಿಸೋಣವಾಯಿತು. ನಾನು ಮುಕ್ತಿಗೋಸ್ಕರ ಏನು ಮಾಡಬೇಕೆಂಬುದನ್ನು ದಯವಿಟ್ಟು ತಿಳಿಸಿದರೆ, ಅದರಂತೆ ಮಾಡಿ ನನ್ನ ಜನ್ಮಸಾರ್ಥಕ್ಯವನ್ನು ಮಾಡಿಕೊಳ್ಳುವೆನು. ಇದೇ ನನ್ನ ಬೇಡಿಕೆ.

ಸ.—ಸಿವರಾಯಾ, ನಿನ್ನ ಪಾರಮಾರ್ಥಿಕವಾದ ಲವಲವಿಕೆಯನ್ನು ನೋಡಿ ನನಗೆ ಬಹಳ ಸಂತೋಷವಾಯಿತು. ಕರ್ಮದ ಸಾಹಾಯ್ಯವಿಲ್ಲದೆ ಜ್ಞಾನವು ಫಲಕಾರಿಯಾಗಲಾರದು. ಆದ್ದರಿಂದ ಅನಾಚಾರಿಗಳಾದ ಎಷ್ಟೋ ಮಂದಿ ತತ್ವಜ್ಞರೂ ಪಂಡಿತರೂ ನಮ್ಮ ಕಣ್ಣಿಗೆ ಬೀಳುತ್ತಾರೆ. ಈ ಮ್ಲೇಂಛಮಯವಾದ ಪುಣ್ಯಭೂಮಿಯಲ್ಲಿ ನೀನು ಮಾಡತಕ್ಕ ರಾಜಕಾರ್ಯವು ಅಪರಿಮಿತವಾಗಿರುತ್ತದೆ. ಆದಕಾರಣ ನಿನಗೆ ಅನುವಾದ ಕರ್ಮವನ್ನು ಹೇಳುತ್ತೇನೆ ಕೇಳು. ಸದ್ಯಕ್ಕೆ ನೀನು ೩ ಕೆಲಸಗಳನ್ನು ಮಾತ್ರ ಮಾಡು. ೧. ಪ್ರತಿ ವರ್ಷ ಶ್ರಾವಣಮಾಸದಲ್ಲಿ ಒಂದು ಕೋಟಿ ಪಾರ್ಥಿವ ಲಿಂಗಾರ್ಚನೆಯನ್ನು ಮಾಡು ಅಥವಾ ಮಾಡಿಸು. ೨. ಅದೇ ತಿಂಗಳಲ್ಲಿ ಯೋಗ್ಯರಾದ ಕಲಿತ ಬ್ರಾಹ್ಮಣರಿಗೆ ಭೂರಿದಕ್ಷಿಣೆಯನ್ನೂ ಸಂಭಾವನೆಯನ್ನೂ ಕೊಡಿಸುವುದಲ್ಲದೆ ಹೆಸರುವಾಸಿಯಾದ ದೊಡ್ಡ ಬ್ರಾಹ್ಮಣರಿಗೆ ಉಂಬಳಿಯನ್ನು ಹಾಕಿಕೊಡು; ೩. ಬ್ರಾಹ್ಮಣೇತರರು ತಮ್ಮ ತಮ್ಮೊಳಗಾಗಲಿ ತಮಗಿಂತ ಹೆಚ್ಚಿನವರಿಗಾಗಲಿ ನಮಸ್ಕಾರ ಮಾಡುವಾಗ ಮುಸಲ್ಮಾನರಂತೆ ಸಲಾಮು ಎನ್ನದೆ, ನಿನ್ನರಾಜ್ಯದಲ್ಲೆಲ್ಲ **ರಾಮು ರಾಮು,** ಎನ್ನುವಂತೆ ಏರ್ಪಾಡು ಮಾಡು.

ಸಿ.—ಮಹದಾಜ್ಞಾ, ತಮ್ಮ ಅಪ್ಪಣೆಯನ್ನು ಶಿರಸಾವಹಿಸಿದೆನು. ತಾವು ಹೇಳಿದಂತೆ ಅಕ್ಷರಶಃ ಮನಮುಟ್ಟಿಮಾಡುವೆನು. ಮಹಾಸ್ವಾಮಿ

ಗಳು ನನ್ನನ್ನು ಹರಸಿ, ತಿರುಗಿ ಹೋಗಲಿಕ್ಕೆ ಅಪ್ಪಣೆಯನ್ನು ದಯಪಾಲಿಸ ಬೇಕು (ಎಂದು ಬೀಳ್ಕೊಂಡು ಹೊರಟು ಹೋದನು.)



ರಾಮದಾಸರೂ ಶಿವಾಜಿಯೂ.

೫. ಒಮ್ಮೆ ಸಿವಾಜಿಯು ಸಾತಾರೆಯಲ್ಲಿರುವಾಗಲೇ ಸಮರ್ಥರ ಸ್ವಾರಿಯು ಅಕಸ್ಮಾತ್ತಾಗಿ ಅಲ್ಲಿಗೆ ಬಂತು. ಅವರು ನಿತ್ಯಕ್ರಮದಂತೆ ಭಿಕ್ಷಾಟನಕ್ಕೆ ಹೊರಟ ಸುದ್ದಿಯು ಬಂದಕೂಡಲೆ ಸಿವಾಜಿಯು ತನ್ನ ಕಾರಕೂನನಾದ ಬಾಳಾಜಿ ಅಬಾಜಿಯಿಂದ ತನ್ನ ಇಡಿ ರಾಜ್ಯವನ್ನು ಸಮರ್ಥರಿಗೆ ದಾನವಾಗಿ ಕೊಟ್ಟ ಒಂದು ದಾನಪತ್ರವನ್ನು ಬರಿಸಿ, ಅದರ ಮೇಲೆ ತನ್ನ ಮೊಹರನ್ನು ಒತ್ತಿ ಅಣಿಮಾಡಿಟ್ಟುಕೊಂಡನು. ಬಳಿಕ ಸಮರ್ಥರು ಬಂದ ಕೂಡಲೆ ಅವರಿಗೆ ಸಾಷ್ಟಾಂಗ ನಮಸ್ಕರಿಸಿ ಆ ದಾನಪತ್ರವನ್ನು ಅವರ ಜೋಳಿಗೆಯಲ್ಲಿ ಹಾಕಿದನು.

ಸಮರ್ಥರು—ಸಿವರಾಯಾ, ಇದೇನು? ನಮ್ಮ ಭಿಕ್ಷೆಯು ಕಾಗದದ ತುಣಕಿಗೆ ಬಂತಲ್ಲ! ಒಂದು ಕಟಗಿಯ ತುಂಡನ್ನಾದರೂ ಕೊಟ್ಟಿದ್ದರೆ ಉರಿ ಹಚ್ಚಲಿಕ್ಕಾದರೂ ಉಪಯೋಗಿಸಬಹುದಾಗಿತ್ತು.

ಸಿವಾಜಿ—ಸ್ವಾಮಿ, ಅದು ಕಾಗದದ ತುಂಡಲ್ಲ. ಅದರಲ್ಲಿ ನನ್ನ ಸರ್ವಸ್ವವೆಲ್ಲ ಇರುತ್ತದೆ.

ಸ.—ಹೀಗೋ? ಕಲ್ಯಾಣ (ಶಿಷ್ಯನ ಹೆಸರು) ನೋಡಪ್ಪಾ, ಆ ಕಾಗದದಲ್ಲಿ ಏನು ಬರೆದಿದೆ? (ಕಲ್ಯಾಣಸ್ವಾಮಿಯು ದಾನಪತ್ರವನ್ನು ಓದಿ ಹೇಳಿದನು.) ಸಿವರಾಯಾ, ಈ ರಾಜ್ಯದ ಗುದ್ದಿಯನ್ನು ನನ್ನ ಕೊರಳೊಳಗೆ ಕಟ್ಟಿ ನನ್ನ ಸಂಚಾರವನ್ನು ಬಂದುಮಾಡಲೆಳಸುತ್ತೀಯಾ?

ಸಿ.—ಅದು ಹೇಗೆ? ತಮ್ಮ ಸಂಚಾರವು ಬಂದು ಏಕೆ ಆಗಬೇಕು? ಈ ಹೊತ್ತಿನಿಂದ ತಾವು ಈ ರಾಜ್ಯದ ಒಡೆಯರಾದ್ದರಿಂದ ತಾವು ಬೇಕಾದಲ್ಲಿ ವೈಭವದಿಂದ ಸಂಚಾರಮಾಡಬಹುದು. ತಮಗೆ ಅಡ್ಡಿಮಾಡುವವರಾರು?

ಸ.—ಅಪ್ಪಾ, ಸನ್ಯಾಸಿಯಾದ ನನಗೆ ಈ ವೈಭವವೇಕೆ? ಈ ರಾಜ್ಯದಿಂದ ನನಗೆ ಪ್ರಯೋಜನವೇನು? ತಪಸ್ಸೇ ನನ್ನ ಧನವು. ಶ್ರೀರಾಮ ಧ್ಯಾನವೇ ನನ್ನ ಆಯುಷ್ಯಕ್ರಮವು. ನಾವು ಯೋದ್ಧರಲ್ಲ, ಶೂರರಲ್ಲ, ಮುತ್ಸದ್ದಿಗಳಲ್ಲ. ಈ ರಾಜ್ಯವನ್ನು ಕಟ್ಟಿಕೊಂಡು ನಾನೆಲ್ಲಿ ಗೋಳಾಡಲಿ?

ಈ ದಾನಪತ್ರವನ್ನು ತಿರುಗಿ ತೆಗೆದುಕೊ. ನಿನ್ನ ರಾಜ್ಯವು ನನಗೆ ಬೇಡ. ನೀನೇ ಅದನ್ನು ಕಾಪಾಡು. ಮ್ಲೇಂಛರನ್ನು ಹಣಿದು ಓಡಿಸು.

ಸಿ.—ಸ್ವಾಮಿ ಕ್ಷಮಿಸಿರಿ. ವಿಶಿಷ್ಟರಿಗೆ ಕೊಟ್ಟ ದಾನವನ್ನು ತಿರುಗಿ ತೆಗೆದುಕೊಳ್ಳುವುದು ಮಹಾಪಾತಕವೆಂದು ಬಲ್ಲವರು ಹೇಳುತ್ತಾರೆ. ಅಂತಹ ಪಾತಕಕ್ಕೆ ನಾನು ಎಂದೂ ಗುರಿಯಾಗಲಾರೆನು. ಈ ರಾಜ್ಯವು ತಮ್ಮ ದಿರುತ್ತದೆ. ಅದರ ಆಡಳಿತದ ಏರ್ಪಾಡನ್ನು ತಮ್ಮ ಇಚ್ಛೆಯಂತೆ ಮಾಡಬಹುದು. ತಾವು ಸರ್ವತಂತ್ರಸ್ವತಂತ್ರರಾಗಿರುತ್ತೀರಿ. ಬೇಕಾದ ಕೆಲಸಕ್ಕೆ ತಕ್ಕವರಾದ ಅಧಿಕಾರಿಗಳನ್ನು ನಿಯಮಿಸಿ. ಪ್ರಜಾರಕ್ಷಣರಂಜನ ಗಳನ್ನು ತಮ್ಮ ಮನಸ್ಸಿಗೆ ಬಂದಂತೆ ಮಾಡಿಸಬಹುದು. ತಮ್ಮಂತಹ ನಿರಿಚ್ಛರಾದ ಮಹಾತ್ಮರು ರಾಜಸೂತ್ರವನ್ನು ಕಯ್ಕೊಂಡರೆ, ಈ ನಾಡು ರಾಮರಾಜ್ಯವಾಗಿ ಪರಿಣಮಿಸುವುದೆಂಬುದರಲ್ಲಿ ಸಂದೇಹವಿಲ್ಲ.

ಸ.—ಸಿವರಾಯಾ, ನಿನ್ನ ಅತ್ಯದ್ಭುತವಾದ ಸ್ವಾರ್ಥತ್ಯಾಗವನ್ನು ನೋಡಿ ನನಗೆ ಅತ್ಯಾನಂದವಾಯಿತು. ವಿರಕ್ತನಾದ ನನಗೆ ಈ ರಾಜ್ಯದ ಕೊಳೆಪಾಟವು ಸರ್ವಥಾ ಬೇಡ. ಶ್ರೀರಾಮನೇ ನೆಲಕೆಲ್ಲ ಒಡೆಯನು. ಅವನ ಪ್ರತಿನಿಧಿಯಾಗಿ ರಾಜ್ಯವನ್ನಾಳು; ಮ್ಲೇಂಛರನ್ನು ಹೊಡೆದೋಡಿಸಿ ಪ್ರಜೆಗಳನ್ನು ಧರ್ಮದಿಂದ ಪಾಲಿಸು. ಇದೇ ಕ್ಷಾತ್ರಧರ್ಮ; ಇದೇ ನಿನ್ನ ಜನ್ಮಸಾರ್ಥಕ್ಯಕ್ಕೆ ಮುಖ್ಯಸಾಧನ. ಈ ಕೆಲಸಕ್ಕೆ ನಿನಗಿಂತ ಯೋಗ್ಯ ರಾದವರನ್ನು ನಾನರಿಯೆನು.

ಸಿ.—ಸ್ವಾಮಿ, ನಾನೇನು ಶಾಸ್ತ್ರಜ್ಞನಲ್ಲ. ಆದರೆ ಅಭಿಷಿಕ್ತರಾದ ಅರಸರು ಮಾತ್ರ ದೇವರ ಪ್ರತಿನಿಧಿಗಳಾಗುತ್ತಾರೆಂದು ಬಲ್ಲವರು ಹೇಳು ವುದನ್ನು ಕೇಳಿದ್ದೇನೆ. ನಾನು ಅಭಿಷಕ್ತರಾಜನಲ್ಲ. ನಾನು ಕ್ಷತ್ರಿಯ ನಾದರೂ ಕ್ಷತ್ರಿಯರಿಗೆ ಉಚಿತವಾದ ಬಾಲ್ಯಸಂಸ್ಕಾರಗಳನ್ನು ಹೊಂದಿಲ್ಲ. ಈಯೆಲ್ಲ ತೊಂದರೆಗಳನ್ನು ದೂರ ಮಾಡಿ, ನನಗೆ ರಾಜ್ಯಾಭಿಷೇಕವನ್ನು ಮಾಡಿಸುವ ಭಾರವು ತಮ್ಮನ್ನೇ ಕೂಡಿದೆ.

ಸ.—ಸಿವರಾಯಾ, ಇದಕೇಕಿಷ್ಟೊಂದು ಚಿಂತೆ? ಲೋಪಗಳಿಗೆ ಪ್ರಾಯಶ್ಚಿತ್ತಗಳು ಶಾಸ್ತ್ರದಲ್ಲಿ ಇದ್ದೇ ಇರುತ್ತವೆ. ಒಬ್ಬ ಚೆಲೊ ಪಂಡಿತ

ನನ್ನು ಕರಿಸಿ, ಅವನೊಡನೆ ಆಲೋಚಿಸಿ, ರಾಜ್ಯಾಭಿಷೇಕದ ಸಿದ್ಧತೆಯನ್ನು ಮಾಡಿಸು.

ಸಿ.—ಸ್ವಾಮಿ, ಇಂತಹ ದೊಡ್ಡ ಪಂಡಿತರು ಯಾರು ಎಲ್ಲಿರುವರೆಂಬುದನ್ನು ದಯವಿಟ್ಟು ತಿಳಿಸಿದರೆ, ನಾನು ಅವರನ್ನು ಕರೆಯಿಸಿಕೊಳ್ಳಲಿಕ್ಕೆ ಎತ್ತುಗಡೆ ಮಾಡುವೆನು. ತಾವು ಅವರಿಗೆ ಹೇಳಿದರೆ ಒಳಿತಾಗುವದು.

ಸ.—ಅಪ್ಪಾ. ಪ್ರತಿಷ್ಠಾನ (ಪೈಠಣ)ದಲ್ಲಿ ಗಾಗಾ (ಗಂಗಾ?) ಭಟ್ಟನೆಂಬೊಬ್ಬ ಘನವಿದ್ವಾಂಸನಿರುವನು. ಅವನು ಷಟ್‌ಶಾಸ್ತ್ರಗಳಲ್ಲಿ ಅತಿನಿಪುಣನು; ಬಲುಜಾಣನು; ಅತಿಚತುರನು; ಬಹುಯುಕ್ತಿವಂತನು. ಅವನನ್ನು ಕರೆಯಿಸಿಕೊಂಡು ನಿನ್ನ ಬಯಕೆಯನ್ನು ಪೂರೈಸಿಕೊ. ನನ್ನೊಬ್ಬ ಶಿಷ್ಯನನ್ನು ಅವನ ಬಳಿಗೆ ಕಳುಹುವೆನು.

ಸಿ.—ಮಹಾಸ್ವಾಮಿ, ನಾನು ಕೃತಕೃತ್ಯನಾದೆನು. ನನ್ನ ಮೇಲೆ ಗುಡ್ಡದಷ್ಟು ಉಪಕಾರವಾಯಿತು. ಅದನ್ನು ನಾನು ಪ್ರಾಣವಿರುವ ವರೆಗೆ ಮರೆಯಲಾರೆನು. ಅಭಿಷಿಕ್ತನಾಗಿ ತಮ್ಮ ಆಜ್ಞೆಯಂತೆ ಈ ರಾಜ್ಯವನ್ನಾಳುವೆನು. ದಯವಿಟ್ಟು ನನಗೊಂದು ತಮ್ಮ ಶಾಟಿಯನ್ನು ದಯಪಾಲಿಸಿರಿ. ಇನ್ನು ಮುಂದೆ ಅದೇ ಈ ರಾಜ್ಯದ ನಿಶಾನೆಯಾಗುವದು. ಅದಕ್ಕೆ ಭಗವಾ (ಕೆಂಪು) ಝೇಂಡಾ (ನಿಶಾನೆ) ಎಂದು ತಮ್ಮ ಆಡತಳದ ಸೂಚಕವಾದ ಹೆಸರನ್ನಿಡುವೆನು.

ಸ.—ಕಲ್ಯಾಣ, (ಶಿಷ್ಯನ ಹೆಸರು) ಈ ಸಿವರಾಯನಿಗೊಂದು ಶಾಟಿಯನ್ನು ಕೊಡಪ್ಪಾ.

ನಮ್ಮ ಚರಿತ್ರನಾಯಕನು ಸಮರ್ಥರ ಶಾಟಿಯೊಂದನ್ನು ಇಸಕೊಂಡು ನಮಸ್ಕರಿಸಿ ಬೀಳ್ಕೊಂಡನು.

೬. ನಮ್ಮ ಚರಿತ್ರನಾಯಕನ ರಾಜ್ಯಾಭಿಷೇಕಮಹೋತ್ಸವವು ಅತಿ ವಿಜೃಂಭಣೆಯಿಂದ ನಡೆಯಿತು. ಅದು ಮುಗಿದ ಬಳಿಕ ಕೆಲವು ದಿವಸ ಗಾಗಾಭಟ್ಟನು ಅವನ ಆಸ್ಥಾನದಲ್ಲೇ ಉಳಿದನು. ಅದೇ ಸಮಯದಲ್ಲಿ ಸದಾಶಿವಶಾಸ್ತ್ರಿ ದೇವನೆಂಬ ಒಬ್ಬ ಘನಪಂಡಿತನು ಗಾಗಾಭಟ್ಟನನ್ನು

ವಾದದಲ್ಲಿ ಸೋಲಿಸಬೇಕೆಂಬ ಕೋರಿಕೆಯಿಂದ ಸಿವಾಜಿಯ ರಾಜಧಾನಿಗೆ ಬಂದು ಉಚಿತವಾದ ಆದರ ಸತ್ಕಾರವನ್ನು ಹೊಂದಿದನು. ಅವನು ಹಗಲುದೀವಟಿಗೆಯನ್ನು ಹಿಡಿಸಿಕೊಳ್ಳುತ್ತಿದ್ದುದಲ್ಲದೆ, ತನ್ನ ಜನಿವಾರ ದಲ್ಲಿ ಒಂದು ಚೂರಿಯನ್ನು ಕಟ್ಟಿಕೊಂಡು, ತಾನು ವಾದದಲ್ಲಿ ಸೋತರೆ ಆ ಚೂರಿಯಿಂದ ತನ್ನ ನಾಲಿಗೆಯನ್ನು ಕೊಯ್ದುಕೊಳ್ಳುವೆನೆಂದು ಪ್ರತಿಜ್ಞೆಯನ್ನು ಮಾಡಿದ್ದನು. ಇಂತಹ ದಿವಸ ಇಷ್ಟು ಹೊತ್ತಿಗೆ ಗಾಗಾ ಭಟ್ಟ ಸದಾಶಿವಶಾಸ್ತ್ರಿಗಳ ನಡುವೆ ವಾದವಿವಾದವು ಎಲ್ಲ ರಾಜಸಭಾಸದರ ಮುಂದೆ ನಡೆಯಬೇಕೆಂದು ಗೊತ್ತಾಯಿತು. ಎಷ್ಟೋ ಪ್ರಖ್ಯಾತರಾದ ಪಂಡಿತರಿಂದ ಸದಾಸಿವಶಾಸ್ತ್ರಿಯು ಜಯಪತ್ರದೊರಕಿಸಿದ್ದರಿಂದ ಗಾಗಾ ಭಟ್ಟನು ಹೆದರಿ, ಗುಪ್ತರೀತಿಯಿಂದ ಸದಾಶಿವಶಾಸ್ತ್ರಿಗೆ ಶರಣು ಹೋಗಿ, ತನ್ನಲ್ಲಿ ವಾದಮಾಡುವಷ್ಟು ಯೋಗ್ಯತೆ ಇಲ್ಲೆಂತಲೂ ಸಿವಾಜಿಯ ಗುರು ಗಳಾದ ರಾಮದಾಸಸ್ವಾಮಿಗಳೊಡನೆ ವಾದಮಾಡಿ ಗೆದ್ದರೆ, ಅಪರಿಮಿತ ಕೀರ್ತಿಯುಂಟಾಗುವುದೆಂತಲೂ ದೈನಾಸೆಬಟ್ಟು ಹೇಳಿಕೊಂಡನು. ಅದಕ್ಕೆ ಅವನು ಹಾಗೆ ಮಾಡುವೆನೆಂದು ಮಾತುಕೊಟ್ಟು ಕಳುಹಿಸಿದನು. ಗೊತ್ತಾದ ದಿವಸ ಗಾಗಾಭಟ್ಟನು ತನಗೆ ಹಾಕಿದ ಸ್ಥಳವನ್ನು ರಾಮದಾಸ ರಿಗೆ ಬಿಟ್ಟು, ತಾನು ಕೆಳಗೆ ಮತ್ತೊಂದು ಸ್ಥಳದಲ್ಲಿ ಕುಳಿತನು. ಸಭೆಯು ನೆರೆದ ಬಳಿಕ ಹೆಮ್ಮೆಗಾರನಾದ ಸದಾಶಿವಶಾಸ್ತ್ರಿಯು ತಾನು ರಾಜಗುರು ಗಳಾದ ರಾಮದಾಸರೊಡನೆ ವಾದಮಾಡುವೆನೆಂತಲೂ ಗಾಗಾಭಟ್ಟನು ತನ್ನ ಸರಿಕನಲ್ಲವೆಂತಲೂ ಗರ್ವದಿಂದ ಹೇಳಿದನು. ಈ ಹೆಮ್ಮೆಗಾರಿಕೆ ಯನ್ನು ನೋಡಿ ಎಲ್ಲರು ಚಕಿತರಾದರು. ಸಿವಾಜಿಯು "ಶಾಸ್ತ್ರಿಗಳೇ, ಸಮರ್ಥರು ಗೃಹಸ್ಥಾಶ್ರಮಿಗಳಲ್ಲ! ಅವರು ವಿರಕ್ತರು, ಗುಡ್ಡಗಾಡಿನಲ್ಲಿ ತಿರುಗಾಡುವವರು. ಆದ್ದರಿಂದ ಅವರು ಇಂತಹ ಸಭೆಗೆ ಬರುವ ಸಂಭವ ವಿಲ್ಲ ಎಂದು ಬಿನ್ನವಿಸಲು, ಸದಾಶಿವಶಾಸ್ತ್ರಿ ಗಾಗಾಭಟ್ಟರು ಏಕ ಕಾಲಕ್ಕೆ "ಹಾಗೇ ಆಗಲಿ, ನಾವೇ ಅಲ್ಲಿಗೆ ಹೋಗೋಣ; ತಾವು ಅವಶ್ಯ ವಾಗಿ ನಮ್ಮ ಸಂಗಡ ದಯಮಾಡಿಸಬೇಕು" ಎಂದು ಆಗ್ರಹಪೂರ್ವಕ ವಾಗಿ ಬಿನ್ನವಿಸಿದರು. ಸಮರ್ಥರ ದರ್ಶನಾಪೇಕ್ಷೆಯಿಂದ ಸಿವಾಜಿಯೂ ಅಲ್ಲಿ ಏನಾದರು ಚಮತ್ಕಾರವು ನಡೆಯಬಹುದೆಂಬ ಕುತೂಹಲದಿಂದ

ಕೆಲ ಸಭಿಕರೂ ಅವರೊಡನೆ ಆ ಕಾಲಕ್ಕೆ ಸಮರ್ಥರಿದ್ದ ಚಾಫಳಕ್ಕೆ ಹೊರಟರು. ಅವರು ಬಂದಾಗ ಸಮರ್ಥರು ಬಯಲಲ್ಲಿ ದಂಡಕಾಷ್ಟ ಹಿಡಿಕೊಂಡು ಒಂದು ಕಲ್ಲಿನ ಮೇಲೆ ಕುಳಿತಿದ್ದರು. ಸಿವಾಜಿ ಗಾಗಾಭಟ್ಟ ಮುಂತಾದವರು ಸಾಷ್ಟಾಂಗನಮಸ್ಕರಿಸಿ ಕೈಜೋಡಿಸಿಕೊಂಡು ನಿಂತರು. ಸದಾಶಿವಶಾಸ್ತ್ರಿಯು ಮಾತ್ರ ಸೆಡವಿನಿಂದ ನಮಸ್ಕರಿಸದೆ,

ರಾಮದಾಸರೇ, ನಾನೊಬ್ಬ ಪಂಡಿತನು. ಎಲ್ಲ ಹೆಸರುವಾಸಿಗಳಾದ ಪಂಡಿತರಿಂದ ಜಯಪತ್ರಗಳನ್ನು ದೊರಕಿಸಿರುತ್ತೇನೆ. ತಾವು ರಾಜಗುರುಗಳಾದ್ದರಿಂದ ತಮ್ಮೊಡನೆ ವಾದಮಾಡಿ ಜಯಪತ್ರವನ್ನು ಗಳಿಸಲಿಳಸುತ್ತೇನೆ. ನಾನು ಗೆದ್ದರೆ ತಮ್ಮನ್ನು ಹರಿಸುವೆನು, ಸೋತರೆ ನಮಸ್ಕರಿಸುವೆನು.

ಸಮರ್ಥರು—ಶಾಸ್ತ್ರಿಗಳೇ, ನಾನು ಸನ್ಯಾಸಿಯು, ಶಾಸ್ತ್ರಗಳನ್ನು ಓದಿಕೊಂಡವನಲ್ಲ. ತಮ್ಮಂತಹ ಪಂಡಿತರೊಡನೆ ವಾದಹಾಕುವ ಯೋಗ್ಯತೆಯು ನನಗೆಲ್ಲಿ?

ಸದಾಶಿವಶಾಸ್ತ್ರಿ—ನನ್ನೊಡನೆ ವಿವಾದಿಸುವುದಕ್ಕೆ ತಾವು ಹಿಂಜರಿಯುತ್ತಿದ್ದರೆ, ಪಂಡಿತನಾದ ತಮ್ಮ ಶಿಷ್ಯನೊಬ್ಬನಿಗೆ ನನ್ನಕೂಡ ವಾದ ಮಾಡಲಿಕ್ಕೆ ಹೇಳಿರಿ. ಅವನು ಸೋತರೆ ತಾವೇ ಸೋತಂತಾಯಿತೆಂಬುದನ್ನು ಮರೆಯುಕೂಡದು.

ಸ.—ಹಾಗೋ? ಇದು ಮಾತ್ರ ಬಲುಬಿರಿ!! ಒಳ್ಳೆಯದು. ಶ್ರೀರಘುವೀರನು ಸಮರ್ಥನಿದ್ದಾನೆ. ಅವನು ಮಾಡಿಸಿದ್ದಾಗಲಿ. ಕಲ್ಯಾಣ, ಅವ ಯಾವ ಅಲ್ಲಿ ಹೋಗುತ್ತಾನೆ, ಕರೆಯಪ್ಪಾ. (ಕಟ್ಟಿಗೆಹೊರೆ ಮಾರುವ ಮಾದಿಗನೊಬ್ಬನು ಬಂದು ನಿಂತ ಬಳಿಕ) ನೀನಾರು?

ಮಾದಿಗ—ಸ್ವಾಮಿ, ನಾನು ಜಾತಿಯಿಂದ ಅಂತ್ಯಜನು. ತಮ್ಮ ಮಠಕ್ಕೆ ಕಟ್ಟಿಗೆಹೊರೆ ಹಾಕಿ ಹೊಟ್ಟೆ ಹೊರಕೊಳ್ಳುತ್ತೇನೆ.

ಸ.—ಕಲ್ಯಾಣ, ಈ ದಂಡಕಾಷ್ಟದಿಂದ ಅವನ ಮುಂದೆ ನೆಲದ ಮೇಲೆ ಒಂದು ಗೆರೆಯನ್ನು ಎಳೆದು ಅದರ ಮೇಲೆ ಅವನಿಗೆ ನಿಲ್ಲಲಿಕ್ಕೆ ಹೇಳು. (ಹಾಗೆ ನಿಂತಬಳಿಕ), ನೀನಾರಪ್ಪಾ?

ಮಾದಿಗ—ಸ್ವಾಮಿ, ನಾನು ಈಗ ಶೂದ್ರನಿರುತ್ತೇನೆ.

ಸ.—ಕಲ್ಯಾಣ, ಇತ್ತುತ್ತ ೨ ನೆಯ ಗೆರೆಯನ್ನು ಕೊರೆದು, ಅದರ ಮೇಲೆ ಅವನನ್ನು ನಿಲ್ಲಿಸು. (ಅವನು ಅಲ್ಲಿ ನಿಂತ ಬಳಿಕ), ನೀನಾರಯ್ಯಾ?

ಮಾದಿಗ—ಸ್ವಾಮಿ, ನಾನು ಈಗ ಬ್ರಾಹ್ಮಣನಾಗಿರುತ್ತೇನೆ.

ಸ.—ಕಲ್ಯಾಣ, ಇಲ್ಲಿ ನಮ್ಮ ಹತ್ತರ ಇನ್ನೊಂದು ಗೆರೆಯನ್ನು ಕೊರೆದು ಅದರ ಮೇಲೆ ಅವನನ್ನು ನಿಲ್ಲಿಸು. (ಹಾಗೆ ಅವನು ನಿಲ್ಲಲು), ನೀನಾರಯ್ಯಾ?

ಮಾದಿಗ—ಸ್ವಾಮಿ, ನಾನು ಈಗ ದಶಗ್ರಂಥಿ ಬ್ರಾಹ್ಮಣನಾಗಿರುತ್ತೇನೆ. ನನಗೆ ಆರುಶಾಸ್ತ್ರ ೧೮ ಪುರಾಣಗಳಲ್ಲಿ ಉತ್ತಮಗತಿಯುಂಟು? ಅಪ್ಪಣೆಯಾದರೆ, ಯಾರ ಸಂಗಡಲಾದರೂ ವಾದಮಾಡುವೆನು.

ಸ.—ಶ್ರೀರಘುವೀರ ಸಮರ್ಥ!!! ಬಹಳ ಒಳ್ಳೆಯದಾಯಿತು. ತೂಕಡಿಸುವವರಿಗೆ ಹಾಸಿಗೆ ಹಾಸಿಕೊಟ್ಟಂತಾಯಿತು. ಶಾಸ್ತ್ರಿಗಳೇ ತಾವು ಹೊರಟ ಹೊತ್ತು ಬಹಳ ಚೆಲೋದು. ತಾವು ಹಂಗವನ್ನು ಎಡಕ್ಕೆ ಹಾಕಿಕೊಂಡು ಬಂದಂತೆ ತೋರುತ್ತದೆ. ತಮ್ಮ ಬಯಕೆಯು ಅನಾಯಾಸವಾಗಿ ಕಯ್ಗೂಡುವಂತೆ ತೋರುತ್ತದೆ. ಇನ್ನು ತಮ್ಮ ವಾದವು ನಡೆಯಲಿ. ಪೂರ್ವಪಕ್ಷಮಾಡಿರಿ. ನಾವು ಸ್ವಸ್ಥಚಿತ್ತದಿಂದ ಕೇಳುತ್ತೇವೆ.

ಅಂತ್ಯಜನು ತನ್ನ ಕಣ್ಣುಮುಂದೇ ಅರಕ್ಷಣದಲ್ಲಿ ಷಟ್‌ಶಾಸ್ತ್ರ ಪಂಡಿತನಾದ ಅತ್ಯದ್ಭುತವನ್ನು ನೋಡಿ ಬೆರಗಾಗಿ ಸದಾಶಿವಶಾಸ್ತ್ರಿಯು ಎದೆಗುಂದಿದನು; ತನಗಿನ್ನು ಸೋಲು ಬರುವುದೇ ನಿಶ್ಚಯವೆಂದು ಮನಗಂಡನು; ಅವನ ಬುದ್ಧಿಯು ಭ್ರಮಿಸಿತು; ನಾಲಿಗೆ ಒಣಗಿತು; ಮೋರೆ ಕಪ್ಪಾಯಿತು; ಬಾಯಿಂದ ಮಾತು ಹೊರಡದ್ದರಿಂದ ಅವನು ಪಟಪಟ ಕಣ್ಣುರೆಪ್ಪೆ ಬಡಿಯುತ್ತ ಕುಳಿತನು. ನೆರೆದವರೆಲ್ಲ ಅವನ ಒಣಗಿದ ಮುಖವನ್ನೇ ನೋಡತೊಡಗಿದರು.

ಮಾದಿಗ—ಶಾಸ್ತ್ರಿಗಳೇ, ತಡವೇಕೆ? ಬೇಗನೆ ಪೂರ್ವಪಕ್ಷಮಾಡಿರಿ. ಇಷ್ಟು ದಿವಸ ಸ್ವಾಮಿಗಳ ಅನ್ನ ಉಂಡ ನನಗೆ ಈಗ ಮಾತ್ರ ಅವರ ಸೇವೆಯನ್ನು ಮಾಡುವ ಅಪರೂಪವಾದ ಉತ್ತಮ ಸಂಧಿಯು ದೊರೆತಿರು

ತ್ತದೆ. ಈ ಸುಸಮಯವನ್ನು ನಾನು ವ್ಯರ್ಥವಾಗಿ ಕಳೆಕೊಳ್ಳಲಾರೆನು. ಈಗಿನ ಒಂದು ಕ್ಷಣವು ನನಗೆ ಒಂದು ವರ್ಷದಷ್ಟು ಬೆಲೆಯುಳ್ಳದ್ದಾಗಿರುತ್ತದೆ. ಬೇಗನೆ ವಾದ ಆರಂಭಿಸಿರಿ. ಏಕೆ ಸುಮ್ಮನಿರುವಿರಿ.

ಮಾದಿಗನ ಈ ಬಿರುನುಡಿಯಿಂದ ಸದಾಶಿವಶಾಸ್ತ್ರಿಯು ರೇಗಿದನು. ಅವನು ಹಾಗೂ ಹೀಗೂ ಧೈರ್ಯವಮಾಡಿ, ಎಡಗಯ್ಯಲ್ಲಿ ಜೀವ ಹಿಡಿದುಕೊಂಡು ಪೂರ್ವಪಕ್ಷವನ್ನು ಮಾಡಿದನು. ಕೂಡಲೆ ಆ ಮಾದಿಗಬ್ರಾಹ್ಮಣನು ಅವನ ಕವಡಕಂಟಕವಾದ ಪ್ರಶ್ನವನ್ನು ಶೃತಿಸ್ಮೃತಿಗಳ ಆಧಾರಗಳನ್ನು ಕೊಟ್ಟು, ಸಭಿಕರು ತಲೆದೂಗುವಂತೆ ಅಕ್ಷರಶಃ ಖಂಡಿಸಿದನು. ಸದಾಶಿವಶಾಸ್ತ್ರಿಯ ಮೈಯಲ್ಲಿ ಬೆವರೊಡೆಯಿತು; ಅವನ ಕಣ್ಣು ಬೆಳ್ಳಗಾದವು; ಅವನ ಎದೆ ಒಡೆದು ನೀರಾಯಿತು. ಮುಂದೆ ಏನು ಮಾಡಬೇಕೆಂದು ಎಣಿಕೆ ಹಾಕುತ್ತಿರುವಾಗ,

ಮಾದಿಗ--ಶಾಸ್ತ್ರಿಗಳೇ ತಮ್ಮ ಪೂರ್ವಪಕ್ಷದ ಖಂಡನವು ಪೂರ್ಣವಾಗಿ ಆಯಿತು. ಇನ್ನು ನಾನೊಂದು ಪೂರ್ವಪಕ್ಷವನ್ನು ಮಾಡುತ್ತೇನೆ. ಅದರ ಖಂಡನವು ತಮ್ಮಿಂದಾಗದಿದ್ದರೆ, ತಾವು ವಾದದಲ್ಲಿ ಪೂರ್ಣವಾಗಿ ಸೋತಂತಾಯಿತು.

ಸದಾಶಿವಶಾಸ್ತ್ರಿ—ಅಪ್ಪಾ, ನಿನ್ನ ಪೂರ್ವಪಕ್ಷ ಬೇಡ; ಏನೂ ಬೇಡ. ನಾನು ಪೂರ್ಣವಾಗಿ ಸೋತೆನು. ಈ ಜಯಪತ್ರಗಳನ್ನು ತೆಗೆದುಕೊ. ಅವು ನಿನ್ನವು; ನನ್ನವಲ್ಲ.

ಎಂದು ಸದಾಶಿವಶಾಸ್ತ್ರಿಯು ತನ್ನ ಜಯಪತ್ರಗಳ ಪುಡಕಿಯನ್ನು ಸಮರ್ಥರ ಮುಂದೆ ಚೆಲ್ಲಿ, ತನ್ನ ಹಗಲುದೀವಟಿಗೆಯನ್ನು ತಾನೇ ಊದಿ ನಂದಿಸಿ, ತನ್ನ ಜನಿವಾರದಲ್ಲಿದ್ದ ಚೂರಿಯನ್ನು ಬಿಚ್ಚತೊಡಗಿದನು.

ಸಮರ್ಥ—(ಚೂರಿಬಿಚ್ಚುವುದನ್ನು ನೋಡಿ) ಕಲ್ಯಾಣ, ಏನು ನೋಡುತಿ? ಆ ಚೂರಿಯನ್ನು ಕಸಕೊ. ಪಾಪ, ಬ್ರಾಹ್ಮಣನು ವ್ಯರ್ಥವಾಗಿ ಸಾಯುವನು!!!

ಕಲ್ಯಾಣನು ಚೂರಿಯನ್ನು ಕಸಿಕೊಂಡನು. ನಿರುಪಾಯನಾಗಿ ಸದಾಶಿವಶಾಸ್ತ್ರಿಯು ಸಮರ್ಥರ ಮುಂದೆ ಅಡ್ಡಬಿದ್ದು ನೆಲದ ಮೇಲೆ

ಉರುಳಾಡತೊಡಗಿದನು. ಅವನ ಕಣ್ಣಿಂದ ನೀರು ಸುರಿಯುತ್ತಿದ್ದವು. ಅವನಿಗೆ ಅಖಂಡ ಪಶ್ಚಾತ್ತಾಪವಾಯಿತು.

ಸದಾಶಿವಶಾಸ್ತ್ರಿ—(ಎದ್ದು ಕೈಜೋಡಿಸಿಕೊಂಡು ಕುಳಿತು), ಸ್ವಾಮಿ, ನಾನು ಸರ್ವಾಪರಾಧಿಯು, ನನ್ನನ್ನು ಕ್ಷಮಿಸಿ ಉದ್ಧರಿಸುವುದಕ್ಕೆ ತಾವೇ ಸಮರ್ಥರು. ಇಷ್ಟು ದಿವಸ ನನ್ನ ವಿದ್ವತ್ತೆಯ ಹೆಮ್ಮೆಯಿಂದ ಎಷ್ಟೋ ಮಂದಿ ಉತ್ತಮ ಬ್ರಾಹ್ಮಣರನ್ನು ಚಳಿಸಿದೆನು. ತಮಗೆ ನಾನು ನಮಸ್ಕಾರವನ್ನಾದರೂ ಮಾಡಲಿಲ್ಲ. ನನ್ನ ದುರಹಂಕಾರವೇ ಈಗ ನನಗೆ ಈ ಮಾದಿಗನಿಂದ ಪರಾಜಯವನ್ನು ತಂತು. ಮಾಡಿದ್ದನ್ನು ಉಣ್ಣಲಿಕ್ಕೇ ಬೇಕು. ನಾನು ಇನ್ನು ಈ ಪ್ರಾಣವನ್ನಿಟ್ಟುಕೊಳ್ಳಲಾರೆನು. ಪ್ರಾಣತ್ಯಾಗವೇ ನಾನು ಮಾಡಿದ ತಪ್ಪಿಗೆ ತಕ್ಕ ಪ್ರಾಯಶ್ಚಿತ್ತವು. ನನ್ನನ್ನು ಅನುಗ್ರಹಿಸಿ ಆ ಚೂರಿಯನ್ನು ಕೊಡಿಸಿರಿ. ನಾನು ಅಸುವನ್ನು ನೀಗುವೆನು. ಇನ್ನುಮುಂದೆ ನಾನು ಉಸಿರಾಡಿಸಲಾರೆನು.

ಸ.—ಶಾಸ್ತ್ರಿಗಳೇ, ತಾವು ಬಲ್ಲವರು, ವಿದ್ವಾಂಸರು, ಅನುಭವಿಕರು; ಜೀವದ ಇಂಗಿತವನ್ನು ಅರಿತವರು. ತಾವು ಹೀಗೆ ಮಾತಾಡುವುದು ಸೋಜಿಗವಾಗಿ ತೋರುತ್ತದೆ. ತಾವು ಯಾರು? ಮಾದಿಗನಾರು? ಚೂರಿ ಯಾರದು? ಸೋತವರಾರು? ಗೆದ್ದವರಾರು? ವಿದ್ವತ್ತು ಯಾರದು? ಇವೆಲ್ಲ ಶ್ರೀರಘುವೀರನವಲ್ಲವೆ? ಅವನ ಭಾಂಡಾರದಲ್ಲಿ ಎಷ್ಟೋ ವಿಭೂತಿಗಳಿರುವುದಿಲ್ಲವೇ? ಹೆಮ್ಮೆಗಾರರಾದ ವಿದ್ವಾಂಸರನ್ನು ದಂಡಿಸುವುದಕ್ಕೆ ಅವರಲ್ಲಿ ದೇವರು ದುರಹಂಕಾರವನ್ನು ಹುಟ್ಟಿಸುವುದಿಲ್ಲವೇ? ಆದಕಾರಣ ತಾವು ಹೀಗೆ ದುಃಖಿಸಕೂಡದು. ಆತ್ಮಹತ್ಯವು ಭಯಂಕರವಾದ ಪಾಪವೇ ಸರಿ. ತಮ್ಮಂತಹ ಪಂಡಿತರು ಅದನ್ನು ನೆನಿಸಕೂಡದು. ಸೋಲುಗೆಲವುಗಳು ಪರಮೇಶ್ವರನ ಆಟಗಳೇ ಸರಿ. ತುಸು ಸಮಾಧಾನ ಮಾಡಿಕೊಳ್ಳಿರಿ. ಮನಸ್ಸನ್ನು ಶಾಂತಗೊಳಿಸಿರಿ; ನೊಂದುಕೊಳ್ಳಬೇಡರಿ; ಧೈರ್ಯತಾಳಿರಿ.

ಸಮರ್ಥರು ಹೇಳಿದ ಈ ಪರಿಯ ಬುದ್ಧಿವಾದದಿಂದ ಸದಾಶಿವಶಾಸ್ತ್ರಿಗೆ ತುಸು ಅರಿವು ಬಂತು. ತಾನು ಮಾಡಿದ ಪ್ರತಿಜ್ಞೆಯು ದುರಹಂಕಾರ ಮೂಲಕವಾದ್ದೆಂದು ಅವನಿಗೆ ಹೊಳೆಯಿತು. ಆತ್ಮಹತ್ಯ ಮಾಡಿಕೊಳ್ಳ

ವುದು ಮಹಾಪಾಪವೆಂಬ ತಿಳಿವಳಿಕೆಯು ಅವನಲ್ಲಿ ಹುಟ್ಟಿತು. ತಾನು ಇಷ್ಟು ದಿವಸ ದುರಹಂಕಾರದಿಂದ ಮಾಡಿದ ಬ್ರಹ್ಮದ್ರೋಹಪಾತಕದ ಕ್ಷಾಲನಾರ್ಥವಾಗಿ ತಾನು ಉಳಿದ ಆಯುಷ್ಯವನ್ನೆಲ್ಲ ಶ್ರೀರಾಮದಾಸ ರಂತಹ ಭಗವದ್ಭಕ್ತರ ಸೇವೆಯಲ್ಲಿ ಕಳೆದ ಹೊರತು ತನಗೆ ಸದ್ಗತಿಯಾಗ ಲಾರದೆಂದು ಭಾವಿಸಿದನು. ಈ ತರದ ವಿಚಾರತರಂಗಗಳು ಸದಾಶಿವ ಶಾಸ್ತ್ರಿಯ ಮನಸ್ಸನ್ನು ಅಲ್ಲೋಲಕಲ್ಲೋಲವಾಗಿ ಮಾಡುತ್ತಿರುವಾಗ, ಸಮ ರ್ಥರು ಆ ಮಾದಿಗಬ್ರಾಹ್ಮಣನೊಡನೆ ಮಾತಾಡತೊಡಗಿದರು.

ಸಮರ್ಥರು—ಅಪ್ಪಾ ಮಗನೇ, ಈ ಹೊತ್ತು ನೀನು ನಮ್ಮ ಸೇವೆ ಯನ್ನು ಉತ್ತಮ ರೀತಿಯಿಂದ ಮಾಡಿದೆ. ಶ್ರೀರಾಮನು ಸಂತುಷ್ಟನಾದನು. ನಿನಗೆ ದೇವರು ಕಲ್ಯಾಣಮಾಡಲಿ. ಇನ್ನು ನೀನು ಮನೆಗೆ ಹೋಗ ಬಹುದು. ನಿನ್ನ ಹೆಂಡತಿ ಮಕ್ಕಳು ದಾರಿನೋಡುತ್ತಿರಬಹುದು.

ಮಾದಿಗಬ್ರಾಹ್ಮಣ—ಸ್ವಾಮಿ, ತಮ್ಮ ದಂಡಕಾಷ್ಟದ ಮಹಾತ್ಮೆ ಯನ್ನು ಎಷ್ಟೆಂದು ವರ್ಣಿಸಲಿ!!! ಆದರಿಂದ ನಾನು ಪಂಡಿತ ಬ್ರಾಹ್ಮಣ ನಾದೆನಿಷ್ಟೇ ಅಲ್ಲ; ನನಗೆ ಹಿಂದಿನ ಜನ್ಮಗಳ ಜ್ಞಾನವುಂಟಾಯಿತು. ಈ ಮೃತ್ಯುಲೋಕವು ನನ್ನ ಸ್ಥಳವಲ್ಲ; ಇಲ್ಲಿಯ ಮನೆಯು ನನ್ನ ಮನೆ ಯಲ್ಲ; ಈಗಿನ ಹೆಂಡತಿಮಕ್ಕಳು ನನ್ನವರಲ್ಲ.

ಸ.—ಇದೇನಪ್ಪಾ, ದೊಡ್ಡರಗಳೇ ಬಂದಂತಾಯಿತು!! ನಿನ್ನ ಹೆಂಡತಿಮಕ್ಕಳು ನಮ್ಮ ಹೆಸರಲ್ಲಿ ಗೋಳಿಡುವರಲ್ಲ!!! ಒಳ್ಳೆಯದು, ನಿನ್ನ ಪೂರ್ವಜನ್ಮದ ವೃತ್ತಾಂತವಾದರೂ ಏನು?

ಮಾ. ಬ್ರಾ.—ಸ್ವಾಮಿ, ನಾನು ಚಿತ್ರಸೇನನೆಂಬ ಗಂಧರ್ವನು. ನನ್ನ ಸ್ತ್ರೀಯರೊಡನೆ ಕ್ರೀಡಾಸಕ್ತನಾಗಿರುವಾಗ ನಾರದಮಹರ್ಷಿಗಳು ನನ್ನ ಬಳಿಗೆ ಬಂದರು. ಅವರಿಗೆ ಅವಮಾನಮಾಡಿದ್ದರಿಂದ ಅವರು ನನಗೆ ಶಾಪಕೊಟ್ಟರು. ಮೊದಲನೆಯ ಜನ್ಮದಲ್ಲಿ ನಾನು ಜಯಪಾಲರಾಜನ ಕುದುರೆಯಾಗಿ ಹುಟ್ಟಿದೆನು. ಆಗ ಶ್ರೀಶಂಕರನು ಮುಕುಂದರಾಜನಾಗಿ ಬಂದು ನನ್ನನ್ನು ಉದ್ಧರಿಸಿದನು. ೨ ನೆಯ ಜನ್ಮದಲ್ಲಿ ನಾನು ಪೈಠಣ ಪಟ್ಟಣದೊಳಗೆ ಕೋಣವಾಗಿ ಹುಟ್ಟಿದೆನು. ಆಗ ದೀನೋದ್ಧಾರಕನಾದ

ಶ್ರೀವಿಷ್ಣುವು ಜ್ಞಾನೇಶ್ವರನ ಅವತಾರವನ್ನು ತಾಳಿ, ನನ್ನಿಂದ ವೇದ ಗಳನ್ನು ನುಡಿಸಿ ಉದ್ಧಾರಮಾಡಿದನು. ಇದೇ ನನ್ನ ೩ನೆಯ ಜನ್ಮವು. ಈಗ ನಾನು ಚಂಪಕಕುಲದಲ್ಲಿ ಅಂತ್ಯಜನಾಗಿ ಹುಟ್ಟಿರುತ್ತೇನೆ. ನಾರದರ ಶಾಪದಂತೆ ಇದೇ ನನ್ನ ಕಡೆಯ ಜನ್ಮವು. ತಮ್ಮಿಂದಲೇ ಉದ್ಧಾರಹೊಂದು ವೆನೆಂದು ನಾರದರು ಮೊದಲೇ ಹೇಳಿದ್ದರು. ಸ್ವಾಮಿ, ತಾವು ಮಹಾತ್ಮರು, ನನ್ನ ಪಾಪವಿಮೋಚನೆಯನ್ನು ಮಾಡಿದ್ದಕ್ಕಾಗಿ ನಾನು ತಮಗೆ ಅತ್ಯಂತ ವಾಗಿ ಕೃತಜ್ಞನಾಗಿರುತ್ತೇನೆ. ಇನ್ನು ನನಗೆ ಗಂಧರ್ವಲೋಕಕ್ಕೆ ಹೋಗು ವುದಕ್ಕೆ ಅಪ್ಪಣೆಯನ್ನು ಕೊಟ್ಟು ಅನುಗ್ರಹಿಸಬೇಕಲ್ಲದೆ, ನನ್ನ ಜಾತಿಯ ವರಿಗೆ ರಥೋತ್ಸವದ ಕಾಲಕ್ಕೆ ಬಹುಮಾನಾರ್ಥವಾಗಿ ಒಂದು ಕಾಯಿ ಯನ್ನು ದಯಪಾಲಿಸಬೇಕು.

ಹೀಗೆ ಮಾತಾಡಿ ಮಾದಿಗನು ಭಕ್ತಿಪೂರ್ವಕವಾಗಿ ಸಾಷ್ಟಾಂಗವೆರಗಿ, ಅಲ್ಲೇ ಪ್ರಾಣಬಿಟ್ಟನು. ಈ ಸೋಜಿಗವನ್ನು ನೋಡಿ ಎಲ್ಲ ಸಭಿಕರು ಚಕಿತರಾದರು. 'ಶ್ರೀರಘುವೀರ ಸಮರ್ಥ' ಎಂಬ ಜಯಘೋಷದಿಂದ ಆ ಪ್ರದೇಶವೆಲ್ಲ ಗದ್ದರಿಸಿತು ಈ ಅತ್ಯದ್ಭುತವಾದ ಕೌತುಕವನ್ನು ನೋಡಿ ಸಮರ್ಥರ ವಿಷಯದಲ್ಲಿದ್ದ ಎಲ್ಲ ಜನರ ಭಕ್ತಿಯು ಉಕ್ಕೇರಿತು. ಸಮರ್ಥ ರಿಗೆ ಜಯವಾಗಲಿ ಎಂದು ಎಲ್ಲರು ಮುಕ್ತಕಂಠದಿಂದ ಕೂಗಿದರು. ಬಳಿಕ ಸಮರ್ಥರು ತಾವು ಕುಳಿತ ಸ್ಥಳದಿಂದೆದ್ದು, ತಾವು ಕುಳಿತುಕೊಂಡಿದ್ದ ಹಾಸುಗಲ್ಲನ್ನೆತ್ತಿ ಆ ಮಾದಿಗ ಬ್ರಾಹ್ಮಣನ ಹೆಣದ ಮೇಲಿಟ್ಟು, "ಶ್ರೀರಘು ವೀರಸಮರ್ಥ" ಎಂದು ಜಯಜಯಕಾರ ಮಾಡಿದರು. ಈ ಜಯಜಯ ಕಾರದ ಕೋಲಾಹಲವು ಎಂಟೂ ದಿಕ್ಕುಗಳನ್ನು ತುಂಬಿ ಹೊರಚಲ್ಲಿತು. ತರುವಾಯ ಎಲ್ಲರು ಮಠಕ್ಕೆ ತೆರಳಿದರು.

ಈ ಅತ್ಯದ್ಭುತವಾದ ಚಮತ್ಕಾರವು ನಡೆಯುತ್ತಿರುವಾಗ ಸದಾಶಿವ ಶಾಸ್ತ್ರಿಯು ಒಮ್ಮನಸ್ಸಿನಿಂದ ಕಣ್ಣೆವೆಯಿಕ್ಕದೆ ಅದನ್ನು ನೋಡುತ್ತಿದ್ದನು. ಆಗ ಅವನ ಅಹಂಕಾರವು ಬುಡಸಹಿತ ಕಿತ್ತಿ ಬಿದ್ದಿತು. ಅವನಿಗೆ ಹೇಳ ಕೂಡದಷ್ಟು ಪಶ್ಚಾತ್ತಾಪವಾಯಿತು. ಅವನ ಮನಸ್ಸಿನಲ್ಲಿ ನಾನಾತರದ ವಿಚಾರಗಳು ಒಂದರ ಹಿಂದೊಂದು ಎಡೆಬಿಡದೆ ಒತ್ತರದಿಂದ ಬರತೊಡ

ಗಿದವು. ಆ ಮಾದಿಗನಂತೆ ತನ್ನ ಪ್ರಾಣಗಳಾದರೂ ಆ ಕ್ಷಣವೇ ದೇಹ ಬಿಟ್ಟು ಹೋದರೆ ತಾನು ಧನ್ಯನಾಗುವೆನೆಂಬ ಬಯಲಾಶೆಯು ಅವನಲ್ಲಿ ಹುಟ್ಟಿತು. ಆದರೆ ಅವು ತೊಲಗುವ ಬಗೆ ಹೇಗೆ? ತಾನು ಜನ್ಮಾಂತರ ದಲ್ಲಿಯೂ ಈ ಜನ್ಮದಲ್ಲಿಯೂ ಮಾಡಿದ ಕರ್ಮಗಳ ಫಲವನ್ನು ಅನು ಭೋಗಿಸೇ ತೀರಬೇಕಲ್ಲವೇ? * ಆತ್ಮಹತ್ಯವಂತೂ ಪಂಚಮಹಾಪಾತಕ ಗಳಲ್ಲಿ ಒಂದಾಗಿರುವುದು. ಸಮರ್ಥರು ಹೇಳಿದಂತೆ ಆತ್ಮಹತ್ಯವನ್ನು ಮಾಡಿ ಕೊಳ್ಳುವುದು ಎಂದಿಗೂ ಸರಿಯಾಗಲಾರದು. ನಾನು ಮದಾಂಧನಾಗಿ, ಸೋತರೆ ನಾಲಿಗೆಯನ್ನು ಕೊಯ್ದುಕೊಳ್ಳುವೆನೆಂದು ಅತಿಮೂರ್ಖತನದ ಪ್ರತಿಜ್ಞೆಯನ್ನು ಮಾಡಿದೆನು. ಮನುಷ್ಯನ ವಿಚಾರಗಳು ಎರಡು ಬಗೆಯ ವಿರುತ್ತವೆ:—೧ ಆಮುಷ್ಮಿಕ ಅಥವಾ ಪಾರಮಾರ್ಥಿಕ, ೨ ಲೌಕಿಕ ಅಥವಾ ವ್ಯವಹಾರಿಕ. ಈ ಎರಡೂ ತರದಿಂದ ವಿಚಾರಮಾಡಿ ನೋಡಿದರೂ ಆತ್ಮಹತ್ಯವು ಅತಿಗರ್ಹಣೀಯವಾದುದು. ಲೌಕಿಕದೃಷ್ಟಿಯಿಂದ ನನ್ನ ಕುಟುಂಬದ ಘಾತವಾಗುವದು; ನಾನು ಇಷ್ಟು ಶ್ರಮಪಟ್ಟು ದೊರಕಿಸಿದ ಪಾಂಡಿತ್ಯವೂ ಕೀರ್ತಿಯೂ ನಷ್ಟವಾಗುವುವು; ನನ್ನ ಹೆಸರಿಗೆ ಕುಂದು ಬರುವದು. ಆಮುಷ್ಮಿಕದೃಷ್ಟಿಯಿಂದ ನೋಡಿದರೆ, ಆತ್ಮಕ್ಕೆ ಸಾವಿಲ್ಲ; ಅದನ್ನು ಕೊಲ್ಲುವುದು ಯಾರಿಂದಲೂ ಆಗುವುದಿಲ್ಲ; ಅದು ಅನಾದಿಯೂ ನಿತ್ಯವೂ ಆಗಿರುತ್ತದೆ. † ಇದಲ್ಲದೆ ಆತ್ಮಹತ್ಯವೇ ತಪ್ಪೆಸರಾಗಿರುತ್ತದೆ. ಈ ಸಾಮಾಸಿಕ ಶಬ್ದದಲ್ಲಿ ಆತ್ಮವೆಂದರೆ ದೇಹವೇ ಹೊರತು ಆತ್ಮವಲ್ಲ. ಈ ದೇಹವನ್ನು ಕಳೆದುಕೊಳ್ಳುವುದಾದರೂ ಸುಲಭವಾದ ಕೆಲಸವಲ್ಲ. ಪ್ರಾಣೋತ್ಕ್ರಮಣಕಾಲದಲ್ಲಿ ದೇಹದ ಬಲವಾದ ರಜ್ಜುಗಳಿಂದ ಬಿಗಿಯ ಲ್ಪಟ್ಟ ಆತ್ಮನು "ಒಲ್ಲೋ, ಈ ತನುವನ್ನು ಬಿಡಲಾರೆನೆಂದು" ಕೊರಗುವ ದುಂಟು. ಸಂಸಾರದ ಅನುವಿಲ್ಲೆಗೆ ಬೇಸತ್ತು ಬೇಜಾರಾಗಿ ಆತ್ಮಹತ್ಯ ಮಾಡಿಕೊಳ್ಳಲಿಕ್ಕೆ ಪ್ರಯತ್ನಿಸಿದ ಎಷ್ಟೋಮಂದಿ ಹೆಂಗಸರೂ ಗಂಡಸರೂ

---

* ಅವಶ್ಯಮ್ ಅನುಭೋಕ್ತವ್ಯಮ್ ಕೃತಮ್ ಕರ್ಮ ಶುಭಾಶುಭಮ್॥

† ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ।
ನಚೈನಂ ಕ್ಲೇದಯಂತ್ಯಾಪೋ ನಶೋಷಯತಿ ಮಾರುತಃ॥ ಭಗವದ್ಗೀತಾ.

ಅಂತ್ಯಸಮಯದಲ್ಲಿ "ನಾನು ಸಾಯಲಾರೆನು, ಹೇಗಾದರೂ ಮಾಡಿ ಉಳಿಸಿಕೊಳ್ಳಿರಿ" ಎಂದು ಭೋರಿಟ್ಟು ಮೊರೆಯಿಡುವುದನ್ನು ನಾನು ಕಿವಿಯಾರ ಕೇಳಿದ್ದೇನೆ ಮತ್ತು ಕಣ್ಣಾರ ನೋಡಿದ್ದೇನೆ. ಈ ಚೂರಿಯಿಂದ ಕುತ್ತಿಗೆಯನ್ನು ಕೊಯ್ದುಕೊಳ್ಳುವಷ್ಟು ಮನಸ್ಸಿನ ದಾರ್ಢ್ಯವು ನನಗೆಲ್ಲಿ? ಹಳ್ಳು ತುಸು ನೆಟ್ಟರೆ ಹೈ ಎಂದು ಹಲಬುತ್ತೇನೆ. ಆದ್ದರಿಂದ ಪ್ರಾಣವನ್ನು ಬಿಡುವ ವಿಚಾರವು ಸರಿಯಲ್ಲೆಂದು ನಿಶ್ಚಯವಾಗಿ ನಂಬುತ್ತೇನೆ.

ಇನ್ನೊಂದು ಮಹತ್ವದ ಸಂಗತಿಯನ್ನು ಮರತೇ ಬಿಟ್ಟಿನಲ್ಲ!!! ಈಗ ನಾನು ಹಿಂದಿನ ಜನ್ಮದಲ್ಲಿಯೂ ಈ ಜನ್ಮದಲ್ಲಿಯೂ ಮಾಡಿದ ಪಾಪದ ಫಲವನ್ನುಣ್ಣಬೇಕಾಗಿದೆ. ಇನ್ನು ನಾನು ಆತ್ಮಹತ್ಯವನ್ನು ಮಾಡಿಕೊಂಡರೆ, ಅದು ಮಹಾಪಾತಕವಾದ್ದರಿಂದ ಅದರ ಫಲವನ್ನುಣ್ಣಬೇಕಾದರೆ ಮುಂದೆ ಎಷ್ಟು ಜನ್ಮ ತಾಳಬೇಕಾಗುವದೋ ಗೊತ್ತಾಗುವುದಿಲ್ಲ. ಆದ್ದರಿಂದ ಪಾಪವನ್ನು ಹೆಚ್ಚಿಸಿಕೊಳ್ಳದೆ ಇದ್ದುದನ್ನು ಕುಗ್ಗಿಸಿಕೊಳ್ಳಲಿಕ್ಕೆ ಯತ್ನಿಸುವೆನು. ಪೂರ್ವಜನ್ಮದ ಪುಣ್ಯದಿಂದ ನನಗೆ ಸಮರ್ಥರಂತಹ ದೇವಾಂಶಸಂಭೂತರ ಸನ್ನಿಧಾನವು ದೊರೆತಿರುತ್ತದೆ. ಈ ಮಹಾತ್ಮರ ಸಾಮರ್ಥ್ಯವೆಷ್ಟು? ಆ ಮಾದಿಗನೆಂದರೇನು? ಅವನು ಬ್ರಾಹ್ಮಣನಾಗುವುದೆಂದರೇನು? ನನ್ನಂತಹ ಹೆಸರುವಾಸಿಯಾದ ಪಂಡಿತನನ್ನು ವಾದದಲ್ಲಿ ಸೋಲಿಸುವುದೆಂದರೇನು? ಶಾಪದಿಂದ ಮಾದಿಗನಾದ ಗಂಧರ್ವನು ಸಮರ್ಥರ ಸೇವೆಯಿಂದ ಮುಕ್ತನಾಗುವುದೆಂದರೇನು? ಇವರು ದೇವತಾಂಶರಾಗದಿದ್ದರೆ ಇಂತಹ ಅದ್ಭುತವಾದ ಕೌತುಕಗಳು ಎಂದೂ ಸಂಭವಿಸುತ್ತಿದ್ದಿಲ್ಲ. ಆದ್ದರಿಂದ ನಾನು ಮಹಾಪಂಡಿತನೆಂಬ ಒಣಹೆಮ್ಮೆಯನ್ನು ತೊರೆದು, ಇವರ ಶಿಷ್ಯನಾಗಿ ಗಟ್ಟಿಮನಸ್ಸಿನಿಂದ ಮನಮುಟ್ಟಿ ಇವರ ಊಳಿಗವನ್ನು ಮಾಡಿ, ಇವರ ಮನಸ್ಸನ್ನು ಮೆಚ್ಚಿಸಿ, ಅನುಗ್ರಹವನ್ನು ಪಡೆದು, ಹಿಂದಿನ ಪಾಪವನ್ನೆಲ್ಲ ತೊಳೆದುಕೊಂಡು. ಮುಕ್ತಿಯನ್ನು ಹೊಂದಲೆತ್ನಗಡೆ ಮಾಡುವುದೇ ನನ್ನ ಸದ್ಯದ ಕರ್ತವ್ಯವಾಗಿರುತ್ತದೆ. ಇಂದ್ರಿಯಗಳನ್ನು ಹಿಡಿತದಲ್ಲಿಟ್ಟುಕೊಳ್ಳುವುದೂ ಅರಿಷಡ್ವರ್ಗಗಳನ್ನು ಗೆಲ್ಲುವುದೂ ಪರಮ ಪ್ರಯಾಸವೆಂದು ಬಲ್ಲವರು ಹೇಳುತ್ತಾರಷ್ಟೇ. ಆದರೆ ಸದ್ಗುರುವಿನ ಕೃಪೆಯಿಂದಲೂ

ನನ್ನ ದೃಢನಿಶ್ಚಯದಿಂದಲೂ ಈ ಅಡಚಣೆಯು ದಿಟವಾಗಿ ದೂರಾಗು ವದು. ಬಂದುದೆಲ್ಲ ಬರಲಿ, ಆದುದೆಲ್ಲ ಆಗಲಿ. ಶ್ರೀ ಸಮರ್ಥರಾಮದಾಸರ ಊಳಿಗದಲ್ಲೇ ನನ್ನ ಉಳಿದ ಆಯುಷ್ಯವನ್ನು ಕಳೆಯುವೆನು. ಇದೇ ನನ್ನ ಕೊನೆಯ ಸಂಕಲ್ಪವು.

ಈ ಮೇರೆಗೆ ಬೆಳ್ಳಬೆಳತನಕ ಎಣಿಕೆ ಹಾಕಿ ಸದಾಶಿವಶಾಸ್ತ್ರಿಯು ಮರುದಿವಸ ನಸುಕಿನಲ್ಲೆದ್ದು ಜಳಕಮಾಡಿ ಒದ್ದೆಯನ್ನುಟ್ಟುಕೊಂಡು ಬಂದು ಸಮರ್ಥರ ಮುಂದೆ ಅಡ್ಡಬಿದ್ದನು.

ಸಮರ್ಥರು—ಏನು ಶಾಸ್ತ್ರಿಗಳೇ ಇದೇನು! ತಮ್ಮಂತಹ ಘನ ಪಂಡಿತರು ಹೀಗೆ ಅಡ್ಡಬೀಳುವುದುಂಟೆ? ಏಳಿರಿ, ಬೇಗನೆ ಏಳಿರಿ.

ಸದಾ.—ಸ್ವಾಮಿ, ನನ್ನ ಪಾಂಡಿತ್ಯ ಸುಟ್ಟಿತು. ಆ ದುರಹಂಕಾರ ದಿಂದಲೇ ನಾನು ಈ ಭವಣೆಯನ್ನು ಹೊಂದಿದೆನು. ಸೂರ್ಯನಿಗೂ ಹೊನ್ನೆ ಹುಳಕ್ಕೂ ಇರುವ ಸಾಮ್ಯವೇ ತಮ್ಮ ಮಹಾತ್ಮೆಗೂ ನನ್ನ ಪಾಂಡಿತ್ಯಕ್ಕೂ ಇರುತ್ತದೆ. ಇಷ್ಟುದಿವಸ ತಮ್ಮಂತಹರ ದರ್ಶನಲಾಭವಾಗಲಿಲ್ಲೆಂದು ಬಹಳವಾಗಿ ಹಳಹಳಿಸುತ್ತೇನೆ. ದಯವಿಟ್ಟು ನನ್ನ ಮಹಾಪರಾಧವನ್ನು ಕ್ಷಮಿಸಿ, ನನ್ನನ್ನು ತಮ್ಮ ಶಿಷ್ಯನಾಗಿ ಮಾಡಿಕೊಂಡು, ಉದ್ಧರಿಸಬೇಕೆಂದು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ತಾವು ಅನುಗ್ರಹಿಸಿದ ಬಳಿಕ ನಾನು ಈ ನೆಲಬಿಟ್ಟು ಏಳುವೆನು.

ಸ.—ಶಾಸ್ತ್ರಿಗಳೇ, ತಮಗೆ ನಿಜವಾಗಿ ಪಶ್ಚಾತ್ತಾಪವಾಗಿದ್ದರೆ ಮತ್ತು ತಾವು ಆಶ್ರಮಧರ್ಮವನ್ನು ಪಾಲಿಸುವುದಕ್ಕೆ ಸಿದ್ಧರಾಗಿದ್ದರೆ, ನಾನು ಸಂತೋಷದಿಂದ ತಮಗೆ ಉಪದೇಶ ಕೊಡುವೆನು. ಏಳಿರಿ, ಒಣದೋತರ ವನ್ನುಟ್ಟುಕೊಂಡು ಬನ್ನಿ, ತಮ್ಮ ಇಷ್ಟಸಿದ್ಧಿಯಾಯಿತಲ್ಲ.

ಸದಾಶಿವಶಾಸ್ತ್ರಿಯು ಹಿಗ್ಗಿದನು; ಎದ್ದು ಒಣಬಟ್ಟೆಯನ್ನುಟ್ಟು ಕೊಂಡು ವಿಭೂತಿಯನ್ನು ಧರಿಸಿ, ಸಂಧ್ಯಾವಂದನೆಯನ್ನು ಮುಗಿಸಿಕೊಂಡು ಸಮರ್ಥರ ಬಳಿಗೆ ಬಂದು, ಅವರನ್ನು ಭಕ್ತಿಪೂರ್ವಕವಾಗಿ ಪೂಜಿಸಿ, ಅವ ರಿಂದ ಉಪದೇಶವನ್ನು ಪಡೆದು, ಸಮರ್ಥರ ಶಿಷ್ಯನಾದನು. ಆಹೊತ್ತಿ ನಿಂದ ಅವನಿಗೆ **ವಾಸುದೇವ ಗೋಸಾವಿ** ಎಂಬ ಹೆಸರು ಬಂತು.

ಮುಂದೆ ಸಮರ್ಥರು ಅವನ ಸದಾಚಾರವನ್ನೂ ಭಕ್ತಿಯನ್ನೂ ಪಾಂಡಿತ್ಯ ವನ್ನೂ ನೋಡಿ ಮೆಚ್ಚಿ ಅವನನ್ನು **ಕಣ್ಹೇರ**ದಲ್ಲಿದ್ದ ತಮ್ಮ ಮತ್ತೊಂದು ಮಠದ ಮುಖ್ಯಸ್ಥನನ್ನಾಗಿ ನೇಮಿಸಿದರು.

ಸಿವಾಜಿಯ ನಾಡಿನಲ್ಲಿ ಸಮರ್ಥರು ಏಳೆಂಟು ಸ್ಥಳಗಳಲ್ಲಿ ತಮ್ಮ ಮಠಗಳನ್ನು ಸ್ಥಾಪಿಸಿದ್ದರು. ಅವುಗಳೊಳಗೆ **ಚಾಫಳದ** ಮಠವೇ ಮುಖ್ಯ ವಾದುದು. ಅಲ್ಲಿಯ ರಾಮನವಮಿಯ ಉತ್ಸವಕ್ಕೆ ಪ್ರತಿವರ್ಷ ಸಮರ್ಥರು ಎಲ್ಲಿದ್ದರೂ ತಪ್ಪದೇ ಬರುತ್ತಿದ್ದರು. ಈ ಮಠಕ್ಕೆ ಸಿವಾಜಿಯು ೩೩ ಹಳ್ಳಿ ಗಳನ್ನು ಇನಾಮು ಹಾಕಿ ಕೊಟ್ಟುದಲ್ಲದೆ, ವರ್ಷಂಪ್ರತಿ ತನ್ನ ಸರಕಾರ ದಿಂದ ೧೨೧ ಹೇರು ಕಾಳುಗಳನ್ನು ಕೊಡಬೇಕೆಂದು ಗೊತ್ತುಮಾಡಿದ್ದನು (೧೬೭೮).* ಉಳಿದ ಎಲ್ಲ ಮಠಗಳಿಗೂ ಅವುಗಳಲ್ಲಿ ನಡೆಯುತ್ತಿದ್ದ ವೆಚ್ಚದ ಪ್ರಮಾಣದಂತೆ ವರ್ಷಾಶನವು ಸರಕಾರದಿಂದ ದೊರೆಯುತ್ತಿತ್ತು. ಸಜ್ಜನ ಗಡದ ಮಠದಲ್ಲಿ ಹೋಗಿಬರುವವರ ಸಂಖ್ಯೆಯು ಹೆಚ್ಚಾಗಿದ್ದುದರಿಂದ ವರ್ಷಾಶನದ ಹೊರತು ಸಾತಾರೆ ಕರ್ಹಾಡಪರಗಣೆಗಳಲ್ಲಿ ಸರಕಾರಕ್ಕೆ ಬರುವ ಗೋದಿಕಡಲೆಯನ್ನು ಆ ಮಠಕ್ಕೇ ಕೊಡಬೇಕೆಂದು ಸಿವಾಜಿಯು ಕಟ್ಟುಮಾಡಿದ್ದನು.

---

## ೧೫ ನೆಯ ಪ್ರಕರಣ

### ಗುಣಾತಿಶಯ.

ಹಿಂದಿನ ೧೪ ಪ್ರಕರಣಗಳನ್ನು ಮನಮುಟ್ಟಿ ಓದಿದ ವಿಚಕ್ಷಣರಾದ ವಾಚಕರಿಗೆ ನಮ್ಮ ಚರಿತ್ರನಾಯಕನಲ್ಲಿದ್ದ ಗುಣದೋಷಗಳೆಲ್ಲ ಗೊತ್ತಾ ಗಿರಬಹುದು. ಆದರೆ ಅವನು ಮಾಡಿದ ದೊಡ್ಡ ದೊಡ್ಡ ಕೆಲಸಗಳನ್ನು ವರ್ಣಿಸುವಾಗ ಗುಣದೋಷಗಳ ವಿವೇಚನೆಯನ್ನು ಮಾಡುವುದಕ್ಕೆ ನಮಗೆ ಸಾಕಷ್ಟು ಅನುವು ದೊರೆಯಲಿಲ್ಲ. ಆದಕಾರಣ ಸಾಮಾನ್ಯ

* ಶ್ರೀರಾಮದಾಸಸ್ವಾಮಿಗಳ ಚರಿತ್ರ ಪುಟ ೧೫೫. ಉಳಿದ ಚರಿತ್ರಗಳಲ್ಲಿ ಈ ಮಾತಿಗೆ ಆಧಾರವು ದೊರೆಯುವುದಿಲ್ಲ.

ವಾಚಕರಿಗೆ ಅವನ ಸ್ವಭಾವವು ತಿಳಿಯಲಿಕ್ಕಿಲ್ಲೆಂಬ ಸಂಶಯದಿಂದಲೂ ಬಲ್ಲವರಾದ ವಾಚಕರಿಗೆ ತಮ್ಮ ಅಭಿಪ್ರಾಯವನ್ನು ನಮ್ಮ ಅಭಿಪ್ರಾಯ ದೊಡನೆ ಹೋಲಿಸಿ ನೋಡಲಿಕ್ಕೆ ಅನುಕೂಲತೆ ಉಂಟಾಗಬೇಕೆಂಬ ಉದ್ದೇಶದಿಂದಲೂ ಈ ಪ್ರಕರಣದಲ್ಲಿ ನಮ್ಮ ಚರಿತ್ರನಾಯಕನ ಗುಣ ದೋಷಗಳನ್ನು ವಿಸ್ತಾರವಾಗಿ ವಿವರಿಸುವೆವು.

'ಅವನು ಒಳ್ಳೆಯವನು' 'ಇವನು ಕೆಡಕನು' ಎಂದು ನಾವು ಹಗಲು ೧೨ ತಾಸು ಹೇಳುತ್ತೇವೆ. ಇದರ ಅರ್ಥವೇನು? ಒಳ್ಳೆಯವ ನೆಂದರೆ ಎಲ್ಲ ಸದ್ಗುಣಗಳುಳ್ಳವನಲ್ಲ ಮತ್ತು ಕೆಡಕನೆಂದರೆ ಎಲ್ಲ ದುರ್ಗುಣ ಗಳುಳ್ಳವನಲ್ಲ. ಚೆಲೊಗುಣಗಳು ಹೆಚ್ಚಾಗುಳ್ಳವನೇ ಒಳ್ಳೆಯವನು; ಕೆಟ್ಟ ಗುಣಗಳು ಬಹಳವಾಗಿದ್ದವನೇ ಕೆಡಕನು. ದೇವರೊಬ್ಬನೇ ಸರ್ವಗುಣ ಪರಿಪೂರ್ಣನು. ನಾವೆಲ್ಲರು ಮಿಶ್ರಗುಣದವರೇ ಸರಿ. ಆದ್ದರಿಂದ ಕೆಲವು ಮುಸಲ್ಮಾನ ಮತ್ತು ಇಂಗ್ಲಿಷ್ ಚರಿತ್ರಕಾರರು ನಮ್ಮ ಚರಿತ್ರನಾಯಕನು ಎಲ್ಲ ದುರ್ಗುಣಗಳ ಮೂರ್ತಿಯೇ ಆಗಿದ್ದನೆಂದು ವರ್ಣಿಸಿದುದು ವಸ್ತು ಸ್ಥಿತಿಗೆ ವಿರುದ್ಧವಾದ ಬರಹವೇ ಸರಿ. ಅದರಂತೆಯೇ ಇತ್ತಲಾಗಿನ ಕೆಲವು ಮರಾಟಿಚರಿತ್ರಕಾರರು, ಸಿವಾಜಿಯಲ್ಲಿ ಇಲ್ಲದ ಗುಣಗಳನ್ನು ಕಂಡುಹಿಡಿ ಯುವುದಾದರೂ ಇತಿಹಾಸದ ಕೊಲೆಯೆಂದು ಹೇಳಲಿಕ್ಕೆ ಅಡ್ಡಿಯಿಲ್ಲ.

ನಮ್ಮ ಚರಿತ್ರನಾಯಕನನ್ನು ಪುರಡಿಸುವವರೊಳಗೆ ಗ್ರ್ಯಾಂಟ ಡಫನೂ ಕಾಫಿಖಾನನೂ ಪ್ರಮುಖರಾಗಿದ್ದರೆಂದು ಹೇಳಬಹುದು. ಇವರಿ ಬ್ಬರು ತಪ್ಪುತಿಳಿವಳಿಕೆಯಿಂದಲೋ, ದ್ವೇಷಬುದ್ಧಿಯಿಂದಲೋ, ಹೊಟ್ಟೆ ಕಿಚ್ಚಿನಿಂದಲೋ ಮತ್ತಾವಕಾರಣದಿಂದಲೋ ಸಿವಾಜಿಯ ಮೇಲೆ ಅಲ್ಲದ ಸಲ್ಲದ ದೋಷಾರೋಪಣೆಯನ್ನು ಮಾಡುತ್ತಾರೆ. ಆದಕಾರಣ ನಮ್ಮ ಚರಿತ್ರನಾಯಕನ ಗುಣಗಳನ್ನು ಬಣ್ಣಿಸುವುದಕ್ಕಿಂತ ಮೊದಲು ಅವನ ಮೇಲೆ ಹೊರಿಸುವ ಸುಳ್ಳು ದೋಷಗಳನ್ನು ಹೋಗಲಾಡಿಸುವುದು ನಮ್ಮ ಸದ್ಯದ ಕರ್ತವ್ಯವಾಗಿರುತ್ತದೆ. ಕಾಫಿಖಾನ–ಗ್ರ್ಯಾಂಟಡಫರು ಸಿವಾಜಿಯ ಮೇಲೆ ಅನ್ಯಾಯದಿಂದ ಹೊರಿಸಿದ ತಪ್ಪುಗಳಾವವೆಂದರೆ:—೧ ವಿಶ್ವಾಸ

ಘಾತಕತನ, ೨ ಸ್ವಾರ್ಥಪರವಾದ ಮಹತ್ವಾಕಾಂಕ್ಷೆ, ೩ ಕ್ರೌರ್ಯ, ೪ ಹೇಡಿತನ, ೫ ಬಂಡುಗಾರಿಕೆ, ೬ ಸುಲಿಗೆಗಾರಿಕೆ.

**೧. ವಿಶ್ವಾಸಘಾತಕತನ.** ಬೆಟ್ಟಯಲ್ಲಿ ಅಫಜುಲ್ಖಾನನನ್ನು ಕೊಂದುದೂ ಅರಮನೆಯಲ್ಲಿ ಸಾಯಿಸ್ತೆಖಾನನ ಬೆರಳು ಕೊಯ್ದುದೂ ಜಾವಳಿಯ ಅರಮನೆಯಲ್ಲಿ ಸ್ನೇಹಭಾವದಿಂದ ಹೋಗಿ ಮೋರೆ ಚಂದ್ರರಾಯನ ಕೊಲೆ ಮಾಡಿಸಿದ್ದೂ ನಮ್ಮ ಚರಿತ್ರನಾಯಕನ ವಿಶ್ವಾಸಘಾತಕತನದ ಹೆಗ್ಗುರುತುಗಳೆಂದು ಕೆಲವು ಚರಿತ್ರಕಾರರು ಬೊಬ್ಬಿರಿಯುತ್ತಾರೆ. ಅಫಜುಲ್ಖಾನನು ಬಡಿಸಾಹೇಬಿನಿಯ ಮುಂದೆ ಸಿವಾಜಿಯನ್ನು ಹಿಡಿತರುವೆನು ಅಥವಾ ಅವನ ರುಂಡವನ್ನು ತಮ್ಮ ಮುಂದಿರಿಸುವೆನು ಎಂದು ಪ್ರತಿಜ್ಞೆಮಾಡಿ,* ವೀಳೆಯವನ್ನು ತೆಗೆದುಕೊಂಡು ಸಿವಾಜಿಯಮೇಲೆ ದಂಡೆತ್ತಿಬರಲಿಲ್ಲವೆ? ಹೀಗೆ ಕೊಲ್ಲಲಿಕ್ಕೆ ಸನ್ನದ್ಧನಾಗಿ ಮೈಮೇಲೆ ಏರಿ ಬಂದವನ ಸವಿಮಾತುಗಳನ್ನು ನಂಬುವುದು ಮರಳುತನವಲ್ಲವೇ? ನಮ್ಮ ಚರಿತ್ರನಾಯಕನು ಅಷ್ಟು ಎಬಡನಾಗಿದ್ದನೇ? ವಿಶ್ವಪ್ರಯತ್ನಮಾಡಿ ಅಫಜುಲ್ಖಾನನ ಇಂಗಿತವನ್ನು ತಿಳಿದುಕೊಂಡು ಅದಕ್ಕೆ ತಕ್ಕ ಪ್ರತಿಕಾರವನ್ನು ಯೋಚಿಸಿ, ಅತುಲ ಶೌರ್ಯ ಧೈರ್ಯ ಸಾಹಸ ಸಮಯಸೂಚಕತೆ ದೂರದರ್ಶಿತ್ವ ಬುದ್ಧಿ ಚಾತುರ್ಯದಿಂದ ತನ್ನ ಹಗೆಯನ್ನು ಕೊಂದು, ಆತ್ಮಸಂರಕ್ಷಣೆಮಾಡಿಕೊಂಡುದಕ್ಕೋಸ್ಕರ ಅವನು ನಮ್ಮ ಸ್ತುತಿಗೆ ಪಾತ್ರನಲ್ಲವೇ? ಸೊಟ್ಟ ಕುರಿಯಾದರು ಕೊಲೆಗಡಕನಿಂದ ತಪ್ಪಿಸಿಕೊಳ್ಳಲಿಕ್ಕೆ ಎತ್ತುಗಡೆಮಾಡುತ್ತದೆ. ಸಿವಾಜಿಯಂತಹ ವೀರಶಿರೋಮಣಿಯು ತನ್ನ ಕೊಲೆಗಡಕನನ್ನು ಕೊಂದು ತಪ್ಪಿಸಿಕೊಂಡುದರಲ್ಲಿ ದೋಷವೇನು? ನಿಷ್ಕಾರಣವಾಗಿ ತುಳಜಾಪುರದ ಶ್ರೀಭವಾನಿಯ ಮೂರ್ತಿಯನ್ನು ಒಡಿಸಿದ ಅಫಜುಲ್ಖಾನನ ಕೊಲೆಯನ್ನು ಭೂಷಣನೆಂಬ ಸಿವಾಜಿಯ ಆಸ್ಥಾನಕವಿಯು ದ್ರೌಪದಿಯ ಮಾನಭಂಗವನ್ನು ಮಾಡಿದ ಕೀಚಕನ ವಧೆಗೆ ಹೋಲಿಸುತ್ತಾನೆ. ಈ ವಧೆಯಲ್ಲಿ ಎಳ್ಳಷ್ಟಾದರೂ ವಿಶ್ವಾಸಘಾತಕತನವಿಲ್ಲೆಂದು ಎಲ್ಲ ನಿಷ್ಪಕ್ಷಪಾತಕಿಗಳಾದ ಸಜ್ಜನರು ಒಡಂಬಡಬಹುದು.

---

* ಹಿಂದೆ ಪುಟ ೭೮ ನೋಡಿರಿ.

**೨. ಸ್ವಾರ್ಥಪರವಾದ ಮಹತ್ವಾಕಾಂಕ್ಷೆ.** ಮಹತ್ವಾಕಾಂಕ್ಷೆಗೆ ಕನ್ನಡದಲ್ಲಿ ಪೇರ್ಬಯಕೆ ಎಂದು ಹೇಳಬಹುದು. ಈ ಪೇರ್ಬಯಕೆಯು ಎರಡು ಪ್ರಕಾರದ್ದಿರುತ್ತದೆ. ೧ ಶುದ್ಧ, ೨ ಅಶುದ್ಧ. ಶುದ್ಧವಾದ ಪೇರ್ಬಯಕೆಯು ಮನುಷ್ಯನ ಪ್ರಗತಿಗೆ ಮುಖ್ಯವಾದ ಸಾಧನವಾದ್ದರಿಂದ ಅದನ್ನು ಕೆಟ್ಟ ಗುಣಗಳೊಳಗೆ ಎಣಿಸುವುದು ಎಂದೂ ಸರಿಯಾಗಲಾರದು. ಈ ಅಯ್ದಾರು ಸಾವಿರ ವರ್ಷಗಳಿಂದ ಆದ ಶೋಧಗಳಿಗೆಲ್ಲ ಈ ಗುಣವೇ ಮುಖ್ಯಕಾರಣವಾಗಿರುತ್ತದೆ. ಈಗ ಮನುಷ್ಯನಿಗೆ ಗೊತ್ತಿದ್ದ ಎಲ್ಲ ಶಾಸ್ತ್ರಗಳೂ ಅವನು ಮಾಡಿದ ಬಿಡಿಶೋಧಗಳೂ ಈ ಮಹತ್ವಾಕಾಂಕ್ಷೆಯ ಪ್ರತ್ಯಕ್ಷವಾದ ಅಥವಾ ಪರಂಪರೆಯಾದ ಫಲಗಳೇ ಸರಿ ಈ ಗುಣವಿಲ್ಲದಿದ್ದರೆ ನಾವು ಬುನಾದಿಯ ಕಾಡು ಸ್ಥಿತಿಯಲ್ಲೇ ಇರುತ್ತಿದ್ದೆವು. ಉಗೆಬಂಡಿ, ಉಗೆಹಡಗು, ವಿಮಾನ, ತಂತಿಟಪಾಲು, ಮಿಂಚಿನದೀಪ, ಆಯುರ್ವೇದ, ಯಂತ್ರಶಾಸ್ತ್ರ, ರಸಾಯನಶಾಸ್ತ್ರ, ಅಧ್ಯಾತ್ಮವಿಚಾರ, ಸಾಮಾಜಿಕಶಾಸ್ತ್ರ, ರಾಜಕೀಯಶಾಸ್ತ್ರ ಮುಂತಾದ ಎಲ್ಲ ವಿದ್ಯೆಗಳೂ ಕಲೆಗಳೂ ಶಾಸ್ತ್ರಗಳೂ ಈ ಪೇರ್ಬಯಕೆಯಿಂದ ಹುಟ್ಟಿರುತ್ತವೆ. ಆದ್ದರಿಂದ ಶುದ್ಧವಾದ ಪೇರ್ಬಯಕೆಯು ಉತ್ತಮವಾದ ಗುಣವೆಂದು ಹೇಳಲಿಕ್ಕೆ ಅಡ್ಡಿಯಿಲ್ಲ.

ಅಶುದ್ಧವಾದ ಪೇರ್ಬಯಕೆಯು ದುರ್ಗುಣಗಳಲ್ಲಿ ಎಣಿಸಲ್ಪಡುವದು. ಪೇರ್ಬಯಕೆಯನ್ನು ಚೂರಿಗೆ ಹೋಲಿಸಬಹುದು. ಚಲೊ ಮನುಷ್ಯನು ಚೂರಿಯಿಂದ ಲೆಕ್ಕಣಿಕೆಗಳನ್ನು ಕೆತ್ತುತ್ತಾನೆ, ಮತ್ತು ಕೆಟ್ಟಮನುಷ್ಯನು ಅದರಿಂದಲೇ ಕುತ್ತಿಗೆಯನ್ನು ಕೊಯ್ಯುತ್ತಾನೆ. ಸ್ವಾರ್ಥಪರನಾದ ಮನುಷ್ಯನ ಮಹತ್ವಾಕಾಂಕ್ಷೆಯು ಅಥವಾ ಅಶುದ್ಧವಾದ ಮಹತ್ವಾಕಾಂಕ್ಷೆಯು ಉಳಿದೆಲ್ಲ ಜನರಿಗೆ ಕೇಡು ತಂದು, ಅವನೊಬ್ಬನಿಗೆ ಕಿಂಚಿತ್ಕಾಲ ಒಳಿತು ಮಾಡುತ್ತದೆ. ಆದರೆ ಪರಾರ್ಥಪರವಾದ ಅಥವಾ ಶುದ್ಧವಾದ ಮಹತ್ವಾಕಾಂಕ್ಷೆಯು ಅವನನ್ನೊಡಗೊಂಡ ಎಲ್ಲ ಜನರಿಗೂ ಹಿತವನ್ನುಂಟುಮಾಡುವುದು.

ಇನ್ನು ನಮ್ಮ ಚರಿತ್ರನಾಯಕನ ಪೇರ್ಬಯಕೆಯು ಶುದ್ಧವಾದುದೋ ಅಶುದ್ಧವಾದುದೋ ಎಂಬುದನ್ನು ನಿರ್ಣಯಿಸಬೇಕಾಯಿತು. ಸ್ವಾರ್ಥ

ಮೂಲವಾದ ಪೇರ್ಬಯಕೆಯು ಅಶುದ್ಧವಾದ್ದೆಂದು ಮೇಲೆ ಹೇಳಿರುತ್ತೇವಷ್ಟೇ. ಸ್ವಾರ್ಥವೆಂದರೆ ಮಮತ್ವವು. ಈ ಮಮತ್ವಕ್ಕೆ ಸರಿಯಾದ ಕನ್ನಡ ಶಬ್ದವು **ತನ್ನತೆ** ಎಂದು ಹೇಳಬಹುದು. ಈ ತನ್ನತೆಯು ನಮ್ಮ ದೇಹಕ್ಕೆ ಅತಿನಿಕಟವಾಗಿ ಸಂಬಂಧಿಸಿದ್ದರಿಂದ ಅದನ್ನು ಬಹು ದುಷ್ಟಗುಣವೆಂದು ಎಣಿಸುವುದಕ್ಕೆ ಅಡ್ಡಿಯಿಲ್ಲ. ಇದು ದೇಶಕ್ಕೆ ಘಾತಕವು, ಸಮಾಜಕ್ಕೆ ನಷ್ಟಕಾರಕವು ಮತ್ತು ಕುಟುಂಬಕ್ಕೆ ಅಹಿತಕಾರಕವು. ಇದು ಅತಿಪ್ರಬಲವಾಗಿದ್ದ ಮನುಷ್ಯನು ದೇಶಕಂಟಕನೇ ಸರಿ. ಅವನ ಆತ್ಮವು ಮೃತಪ್ರಾಯವಾಗಿರುತ್ತದೆ; ಈ ದೇಹವೇ ತಾನೆಂಬ ಭಾವನೆಯು ಅವನಲ್ಲಿ ನೆಲೆಗೊಂಡಿರುತ್ತದೆ. ಅವನಿಗೆ ಬೇರೆಯವರಲ್ಲಿ ಪ್ರೇಮಾದರಗಳೇ ಇರುವುದಿಲ್ಲ. ಅವನಿಗೆ ತನ್ನ ಐಹಿಕಸುಖವೇ ಹೆಗ್ಗುರಿಯು; ಅವನಿಗೆ ಸ್ವರ್ಗನರಕಗಳ ಅಪೇಕ್ಷಾಭೀತಿಗಳೇ ಇಲ್ಲ. ಅವನು ದೇವರನ್ನು ಸಡ್ಡೆಮಾಡುವುದಿಲ್ಲ. ಇಡಿ ಜಗತ್ತು ತನ್ನ ಸುಖಕ್ಕೋಸ್ಕರವೇ ಇರುತ್ತದೆಂದು ನಂಬುತ್ತಾನೆ. ಇಂತಹ ನರಾಧಮನು, ಇಂತಹ ಧನಪಿಶಾಚಿಯು, ಇಂತಹ ದೇವಲಂಡ–ಪಿತೃಲಂಡನು, ಇಂತಹ ಅತಿಕೃತಘ್ನನು, ಇಂತಹ ಅತಿನೀಚನು, ಇಂತಹ ಅತಿದುಷ್ಟನು ಭೂಭಾರನೇ ಸರಿ.

ನಮ್ಮ ಚರಿತ್ರನಾಯಕನು ಇಷ್ಟು ಕೆಟ್ಟ ಮನುಷ್ಯನಾಗಿದ್ದನೆಂಬ ವಿಚಾರವು ಹಿಂದೆ ಬರೆದ ಚರಿತ್ರವನ್ನು ಓದಿದ ಯಾವ ಗೃಹಸ್ಥನ ಕನಸು ಮನಸ್ಸಿನಲ್ಲಿಯಾದರೂ ಬರಲಾರದು. ಅವನ ಮಾತೃ ಪ್ರೇಮವೆಷ್ಟು? ದೇವಬ್ರಾಹ್ಮಣರಲ್ಲಿ ಭಕ್ತಿವಿಶ್ವಾಸವೆಷ್ಟು? ಸಾಧುಸಂತರಲ್ಲಿ ಪೂಜ್ಯಬುದ್ಧಿಯೆಷ್ಟು? ಪಂಡಿತರಲ್ಲಿ ಆದರವೆಷ್ಟು? ಕಯ್ಕೆಳಗಿನ ಜನರಲ್ಲಿ ಪ್ರೀತಿಯೆಷ್ಟು? ಆಪ್ತೇಷ್ಟರಲ್ಲಿ ಪ್ರೇಮವೆಷ್ಟು? ಪರಸ್ತ್ರೀಯರಲ್ಲಿ ಆದರವೆಷ್ಟು? ಬ್ರಾಹ್ಮಣ ಫಕೀರಗುಡಿಗುಂಡಾರಗಳಲ್ಲಿ ಉದಾರತನವೆಷ್ಟು? ತನ್ನ ಪ್ರಜೆಗಳ ಕ್ಷೇಮ ಚಿಂತನದಲ್ಲಿ ಅವನ ಆಸಕ್ತಿಯೆಷ್ಟು? ಅವನು ಚಿಕ್ಕಂದಿನಿಂದ ಶುದ್ಧಾಂತಃಕರಣವುಳ್ಳ ತನ್ನತಾಯಿಯಾದ ಜೀಜಾಬಾಯಿಯ ಜತೆಯಲ್ಲಿ ಮನಸ್ಸು ಕೊಟ್ಟು ಕೇಳಿದ ಪುರಾಣ ಪುಣ್ಯಕಥೆಗಳು ಅವನ ಮನಸ್ಸಿನಲ್ಲಿ ಬಿಂಬಿಸಲಿಲ್ಲವೇನು ! ಸ್ವಾರ್ಥತ್ಯಾಗಿಯಾದ ಜೀಜಾಬಾಯಿಯು ಮತ್ತು ಪಾಪಭೀರುವಾದ ದಾದೋಜಿಕೋಂಡದೇವನ ಪ್ರತ್ಯಕ್ಷವಾದ ಉದಾಹರಣೆಗಳು

ಅವನ ಶೀಲವನ್ನು ಸಂಸ್ಕರಿಸಲಿಲ್ಲವೇನು ? ಅವನು ವಿಷಯೋಪಭೋಗೇಚ್ಛೆ ಯನ್ನೂ ರಾಜ್ಯಲೋಭವನ್ನೂ ತೊರೆದು ತುಕಾರಾಮಬಾವಾನ ಮತ್ತು ಸಮರ್ಥರ ಶಿಷ್ಯನಾಗಲಿಕ್ಕೆ ಹಾತೊರೆಯಲಿಲ್ಲವೇನು? ಶ್ರೀಶೈಲದಲ್ಲಿ ಶ್ರೀ ಮಲ್ಲಿಕಾರ್ಜುನನ ಎದುರಿಗೆ ತನ್ನ ಕುತ್ತಿಗೆಯನ್ನು ಕೊಯ್ದು ಅರ್ಪಿಸಲಿಕ್ಕೆ ಯತ್ನಿಸಲಿಲ್ಲವೇನು? ತನ್ನ ತಮ್ಮನಾದ ವೆಂಕೋಜಿಯಿಂದ ಹಿಡಿದುಕೊಂಡ ರಾಜ್ಯವನ್ನು ಅವನು ಉದಾರಬುದ್ಧಿಯಿಂದ ಅವನಿಗೆ ತಿರುಗಿ ಕೊಡಲಿಲ್ಲ ವೇನು? ಆರ್ಯಧರ್ಮದವರನ್ನು ತಲೆತಿರುಕನಾದ ಅವರಂಗಜೇಬ ಬಾದ ಶಹನ ಮತ್ತು ಉಳಿದ ಕೆಟ್ಟ ಮುಸಲ್ಮಾನರ ಹಾವಳಿಯಿಂದ ಕಾಪಾಡಲಿಕ್ಕೆ ಅವನು ಮನಃಪೂರ್ವಕವಾಗಿ ಎತ್ತುಗಡೆ ಮಾಡಲಿಲ್ಲವೇ? ಹಿಂದುಗಳಿಂದ ಎತ್ತುತ್ತಿದ್ದ **ಜೀಜಿಯಾ** ಎಂಬ ತಲೆಪಟ್ಟಿಯು ಸರ್ವಥಾ ಅನ್ಯಾಯ ವಾದ್ದೆಂದು ನಿರ್ದಾಕ್ಷಿಣ್ಯದಿಂದ ಅವರಂಗಜೇಬನಿಗೆ ಪತ್ರ ಬರೆಯಲಿಲ್ಲವೇ? ಪರಕೀಯರಾದ ಮುಸಲ್ಮಾನರನ್ನು ಶೌರ್ಯ ಧೈರ್ಯ ಸಾಹಸಗಳಿಂದ ಸೋಲಿಸಿ, ಸಾಮದಾನಭೇದೋಪಾಯಗಳಿಂದ ಅವರನ್ನು ಮರಳುಮಾಡಿ, ಸ್ವರಾಜ್ಯವನ್ನು ಸ್ಥಾಪಿಸುವುದಕ್ಕೆ ಸಾವಿಗಂಜದೆ ಭಗೀರಥಪ್ರಯತ್ನವನ್ನು ಎಡೆಬಿಡದೆ ಮಾಡಲಿಲ್ಲವೇ ? ಇಂತಹ ಮಾತೃಭಕ್ತನ, ಇಂತಹ ಭಾವಿಕನ, ಇಂತಹ ಉದಾರನ, ಇಂತಹ ಸ್ವಧರ್ಮಾಭಿಮಾನಿಯ, ಇಂತಹ ಸ್ವಜ ನಾಭಿಮಾನಿಯ, ಇಂತಹ ಶೂರಸಾಹಸಿಯ, ಇಂತಹ ಬುದ್ಧಿಶಾಲಿಯ, ಇಂತಹ ಸ್ವಾರ್ಥತ್ಯಾಗಿಯ, ಇಂತಹ ಪರಮದ್ವೇಷರಹಿತನ, ಇಂತಹ ವಿಷಯಾಸಕ್ತಿಪರಾಙ್ಮುಖನ, ಇಂತಹ ಪರಸ್ತ್ರೀಮಾನಸಂರಕ್ಷಕನ ಪೇರ್ಬ ಯಕೆ ಅಥವಾ ಮಹತ್ವಾಕಾಂಕ್ಷೆಯು ಸ್ವಾರ್ಥಪರವಾಗಿತ್ತೆಂದು ಹೇಳು ವುದು ಶಬ್ದಗಳ ದುರುಪಯೋಗವೋ ಹೊಟ್ಟೆಕಿಚ್ಚಿನ ಪರಿಣಾಮವೋ ಕಡು ಹಗೆತನದ ಫಲವೋ ನಮಗಂತೂ ತಿಳಿಯುವುದಿಲ್ಲ.

ನಮ್ಮ ಚರಿತ್ರನಾಯಕನ ಮಹತ್ವಾಕಾಂಕ್ಷೆಯು ಸ್ವಾರ್ಥಪರವಾಗ ದಿದ್ದರೂ ಅವನಲ್ಲಿ ಸ್ವಾರ್ಥವಿತ್ತೆಂದು ಕೆಲವರು ಹೇಳಬಹುದು. ಇದು ದೋಷಾರೋಪಣವೇ ಅಲ್ಲ. ಪ್ರತಿಯೊಬ್ಬ ಮನುಷ್ಯನಲ್ಲಿ ಅಲ್ಪಸ್ವಲ್ಪ ಸ್ವಾರ್ಥವು ಇದ್ದಿರಲಿಕ್ಕೇಬೇಕು. ಅದು ಅತ್ಯಲ್ಪ ಪ್ರಮಾಣದಲ್ಲಿದ್ದವರೇ

ಸನ್ಯಾಸಿಗಳು, ವಿರಕ್ತರು, ವೈರಾಗ್ಯಚಕ್ರವರ್ತಿಗಳು. ಗೌತಮಬುದ್ಧ, ಶಂಕರಾಚಾರ್ಯ, ಏಸುಕ್ರಿಸ್ತ ಮುಂತಾದ ದೇವಾಂಶಸಂಭೂತರಲ್ಲಿ ಅದು ಇದ್ದಿಲ್ಲೆಂದರೂ ಸಲ್ಲುವದು. ಉಳಿದ ಎಷ್ಟೋ ಮಹನೀಯರಲ್ಲಿ ಅದಃ ತೀರ ಕಡಮೆ ಪ್ರಮಾಣದಲ್ಲಿತ್ತೆಂದು ಧಾರಾಳವಾಗಿ ಹೇಳಬಹುದು. ತನ್ನತಿ ಅಥವಾ ಸ್ವಾರ್ಥವು ಅಲ್ಪಪ್ರಮಾಣದಲ್ಲಿದ್ದು ಪರಾರ್ಥವು ಅಧಿಕಪ್ರಮಾಣದ ಲ್ಲಿದ್ದವರೇ ಸತ್ಪುರುಷರು ಅಥವಾ ಸಜ್ಜನರು. ಸ್ವಾರ್ಥಪರಾರ್ಥಗಳು ಸಮ ಪ್ರಮಾಣದಲ್ಲಿದ್ದವರೇ ಮಧ್ಯಮರು ಅಥವಾ ಸಾಮಾನ್ಯರು. ಪರಾರ್ಥ ಕ್ಕಿಂತ ಹೆಚ್ಚು ಸ್ವಾರ್ಥವುಳ್ಳವರೇ ಮಾನವರಾಕ್ಷಸರು ಅಥವಾ ನರಾಧ ಮರು. ಪರಾರ್ಥಬುದ್ಧಿಯು ಎಷ್ಟುಮಾತ್ರವು ಇಲ್ಲದೆ ಸ್ವಾರ್ಥದಿಂದ ತುಂಬಿದವರು ಭೂಭಾರಕರಾದ ಅತಿ ನೀಚರು.* ಈ ನಾಲ್ಕು ವರ್ಗದ ಜನರೊಳಗೆ ನಮ್ಮ ಚರಿತ್ರನಾಯಕನು ೨ ನೆಯ ವರ್ಗದ ಮಧ್ಯಮ ಪುರುಷನಾಗಿದ್ದನೆಂದು ನಾವು ನಿಸ್ಸಂದೇಹವಾಗಿ ಹೇಳುತ್ತೇವೆ.

**೩. ಕ್ರೌರ್ಯ.** ನಮ್ಮ ಚರಿತ್ರನಾಯಕನು ಸ್ವಭಾವದಿಂದ ಕ್ರೂರ ನಾಗಿದ್ದನೆಂಬ ಆರೋಪವು ನೀಲಿಕೆಟ್ಟ ಸುದ್ದಿಯಾಗಿರಬಹುದೆಂದು ನಮ ಗಂತೂ ತೋರುತ್ತದೆ. ಅವನ ಸಮಕಾಲೀನರಾದ ಮೊಗಲರ ಅದಿಲ್ಶಾಹಿ ಯವರ ಮತ್ತು ಹಬಸಿಯವರ ಕ್ರೂರತೆಯನ್ನು ನೋಡಿದರೆ, ಅವನು ಬಹಳ ಅಂತಃಕರಣಿಯಾಗಿದ್ದನೆಂದು ಧಾರಾಳವಾಗಿ ಹೇಳಬಹುದು. ಮತ ದ್ವೇಷವು ಅವನಲ್ಲಿದ್ದಿಲ್ಲ. ಹೆಂಗಸರು ಹುಡುಗರನ್ನೂ, ಬ್ರಾಹ್ಮಣ ಫಕೀರ ರನ್ನೂ ತಡವಕೂಡದೆಂದು ಅವನು ಕಟ್ಟುಮಾಡಿದ್ದನು. ಸೆರೆಸಿಕ್ಕವರನ್ನು ಅವನು ಗೋಳಾಡಿಸುತ್ತಿದ್ದಿಲ್ಲೆಂಬ ವಿಷಯದಲ್ಲಿ ಇಂಗ್ಲಿಷ ಸೆರೆಯಾಳುಗಳ ಅನುಭವವೇ ಸಾಕ್ಷಿಯಾಗಿರುತ್ತದೆ. ಬಾಜಿ ಘೋರಪಡೆಯ ತಪ್ಪಿಗಾಗಿ ಅವನ ಎಲ್ಲ ಗಂಡುಸಂತತಿಯವರನ್ನೂ ಅವನ ಆಪ್ತೇಷ್ಟರನ್ನೂ ಸಿವಾಜಿ

---

* ಏತೇ ಸತ್ಪುರುಷಾಃ ಪರಾರ್ಥಘಟಕಾಃ ಸ್ವಾರ್ಥಾನ್ಪರಿತ್ಯಜ್ಯಯೇ।
ಸಾಮಾನ್ಯಾಸ್ತು ಪರಾರ್ಥಮುದ್ಯಮಭೃತಃ ಸ್ವಾರ್ಥಾವಿರೋಧೇನ ಯೇ॥
ತೇ ಮೀ ಮಾನವರಾಕ್ಷಸಾಃ ಪರಹಿತಮ್ ಸ್ವಾರ್ಥಾಯ ನಿಘ್ನಂತಿ ಯೇ।
ಯೇ ತು ಘ್ನಂತಿ ನಿರರ್ಥಕಮ್ ಪರಹಿತಮ್ ತೇ ಕೇ ನ ಜಾನೀಮಹೇ॥

ಯು ಕೊಲ್ಲಿಸಲಿಲ್ಲವೇ? ಇದು ಕ್ರೌರ್ಯವಲ್ಲವೇ? ಎಂದು ಕೆಲವರು ಕೇಳಬಹುದು. ಆದರೆ ಬಾಜಿಯು ಮಾಡಿದ ಅಪರಾಧವು ಎಷ್ಟು ಘೋರತರವಾಗಿತ್ತು, ಅವನು ಸ್ವೋತ್ಕರ್ಷಕ್ಕೋಸ್ಕರ ತೋರಿಸಿದ ನೀಚತನವು ಎಷ್ಟು ಅಕ್ಷಮ್ಯವಾಗಿತ್ತು, ಆವನ ಮೋಸದಿಂದ ಸಿವಾಜಿಯ ತಂದೆಯಾದ ಶಹಾಜಿಯ ಜೀವವು ಎಂತಹ ದೊಡ್ಡ ಗಂಡಾಂತರಕ್ಕೆ ಒಳಗಾಯಿತು, ಅವನ ಬಿಡುಗಡೆ ಆಗುವ ವರೆಗೆ ೩-೪ ವರುಷ ಜೀಜಾಬಾಯಿ ಸಿವಾಜಿಯರು ಅಹೋರಾತ್ರ ಎಷ್ಟು ತಳಮಳಿಸ ಬೇಕಾಯಿತು, ಈ ಎಲ್ಲ ಸಂಗತಿಗಳನ್ನು ಲಕ್ಷ್ಯದಲ್ಲಿ ತಂದರೆ ಸಿವಾಜಿಯು ಬಾಜಿಗೆ ಕೊಟ್ಟ ಶಿಕ್ಷೆಯಲ್ಲಿ ಹೆಚ್ಚಿನ ಕ್ರೂರತನವಿದ್ದಿಲ್ಲೆಂದು ಹೇಳಬಹುದು. ಇದಲ್ಲದೆ, ಅಪ್ಪಿತಪ್ಪಿ ಎಂದಾದರೂ ಒಂದು ಅಚಾತುರ್ಯವಾದರೆ ಅದಕ್ಕೆ ಸ್ವಭಾವದೋಷವೆಂದು ಹೇಳುವುದು ಎಷ್ಟು ಮಾತ್ರವೂ ಸರಿಯಾಗಲಾರದು.

**೪. ಹೇಡಿತನ.** ಇದು ನಮ್ಮ ಚರಿತ್ರನಾಯಕನ ಮೇಲೆ ಏನೂ ಆಧಾರವಿಲ್ಲದೆ ಹೊರಿಸಿದ ಆರೋಪವೆಂದು ನಿಸ್ಸಂದೇಹವಾಗಿ ಹೇಳಬಹುದು. ಕಯ್ಯಲಾಗದ್ದು ವೈಯೆಲ್ಲ ಹರಿಕೊಂಡಿತು ಎಂಬಗಾದೆಯಂತೆ ಏನಾದರೊಂದು ಕಲ್ಪಿತದೋಷವನ್ನು ಮುಸಲ್ಮಾನ ಚರಿತ್ರಕಾರರು ಹುಟ್ಟಿಸಿರುತ್ತಾರೆಂದು ತೋರುತ್ತದೆ. ಬಲಾಢ್ಯರಾದ ಅದಿಲ್ಶಹ ದಿಲ್ಲಿಬಾದಶಹರೊಡನೆ ಎದುರುನಿಂತು ಕಾದಾಡುವಷ್ಟು ಕಸುವು ಚಿಕ್ಕಜಹಗೀರದಾರನಾದ ನಮ್ಮ ಚರಿತ್ರನಾಯಕನಲ್ಲಿ ಹೇಗೆ ಬರಬೇಕು? ಅತಿಬಲಿಷ್ಟರೊಡನೆ ಬಡಿದಾಡುವಾಗ ಸಾಮದಾನ ಭೇಧಗಳೇ ಕಸುವಿಲ್ಲದವರ ಮುಖ್ಯ ಸಾಧನಗಳು. ಆದಕಾರಣ ನಮ್ಮ ಚರಿತ್ರನಾಯಕನು ತನ್ನ ಮುನ್ನೋಟದಿಂದಲೂ ಎಚ್ಚರಿಕೆಯಿಂದಲೂ,* ಸಮಯಸೂಚಕತೆಯಿಂದಲೂ ಪಾರಿತೋಷಕಗಳಿಂದಲೂ ಒಡಂಬಡಿಕೆಯ ಮಾತುಗಳಿಂದಲೂ ಪಲಾಯನದಿಂದಲೂ ತನ್ನ ಚಿಕ್ಕದಂಡನ್ನೂ ಸಣ್ಣ ಬಂಡಾರವನ್ನೂ ಉಳಿಸಿಕೊಳ್ಳುವುದಕ್ಕೆ ಎತ್ತುಗಡೆಮಾಡಿದ್ದು ಅವನ ಜಾಣತನವೋ ಹೇಡಿತನವೋ ಎಂಬುದನ್ನು ನಮ್ಮ

---

* ಸಪ್ರಮಾದೇನ ಬಲಿನಾ ದುರ್ಬಲಸ್ಯಾಪ್ರಮಾದಿನಃ ।
ಯುದ್ಧೇ ಬಲವತೋ ನಾಶಃ ಭವೇತ್ತಸ್ಯ ಪ್ರಮಾದತಃ ॥

ಪ್ರಿಯವಾಚಕರೇ ನಿರ್ಣಯಿಸಲಿ. ನಮ್ಮ ಚರಿತ್ರನಾಯಕನ ಈ ಬುದ್ಧಿ ಚಾತುರ್ಯವನ್ನು ಕಂಡು ಬೆರಗಾಗಿ ಹೊಟ್ಟೆಕಿಚ್ಚಿನಿಂದ "ಶೇಷವಮ್ ಕೋಪೇನ ಪೂರಯೇತ್" ಎಂಬ ಗಾದೆಯಂತೆ ಮುಹಮ್ಮದೀಯ ಚರಿತ್ರಕಾರರು ಅವನು ಹೇಡಿಯಾಗಿದ್ದನೆಂದು ಬರೆದಿರಬಹುದೆಂಬುದರಲ್ಲಿ ಸಂಶಯವಿಲ್ಲ.

**೩. ಬಂಡುಗಾರಿಕೆ.** ಪೃಥ್ವಿಯು ಹುಟ್ಟಿದಂದಿನಿಂದ ಎಷ್ಟೋ ಅರಸು ಮನೆತನಗಳು ಆಗಿ ಹೋದವು. ಅವುಗಳ ಸ್ಥಾಪಕರೆಲ್ಲ ಬಹುಶಃ ಬಂಡುಗಾರರಿದ್ದರೆಂದು ಸಾಮಾನ್ಯವಾಗಿ ಹೇಳಬಹುದು. ಯಶಸ್ವಿಯಾದ ಬಂಡುಗಾರನೇ ಅರಸನು; ಸೋತಬಂಡುಗಾರನೇ ಸೆರೆಯಾಳು. ಇದು ತ್ರಿಕಾಲಕ್ಕೂ ಸರಿಯಾದ ರಾಜಕೀಯ ನೇಮವಿದ್ದು, ಯಶಸ್ವಿಯಾದ ನಮ್ಮ ಚರಿತ್ರನಾಯಕನನ್ನು ಬಂಡುಗಾರ, ರಾಜದ್ರೋಹಿ, ಕೃತಘ್ನ ಎಂಬ ಹಳಿವಿಗೆ ಗುರಿಮಾಡುವುದು ವಿಹಿತವೇ? ಎಂದೂ ಆಗಲಾರದು. ಹೀಗಿದ್ದು, ಮುಸಲ್ಮಾನಯುರೋಪೀಯ ಗ್ರಂಥಕಾರರು ನಮ್ಮ ಚರಿತ್ರನಾಯಕನನ್ನು ಬಂಡುಗಾರ, ರಾಜದ್ರೋಹಿ, ಕೃತಘ್ನ ಎಂದು ದೂಷಿಸುವುದು ಸೋಜಿಗವಲ್ಲವೇ? ದಿಲ್ಲಿಯ ಶಹಾಜಿಹಾನ ಬಾದಶಹನು ನಿಜಾಮಶಾಹಿಯನ್ನು ನಿರ್ಮೂಲ ಮಾಡಿದಾಗ (೧೬೩೭), ದಿಕ್ಕಿಲ್ಲದ ಶಹಾಜಿಯು ಅದಿಲ್ಶಹನಿಗೆ ಶರಣುಹೋಗಿ. ಅವನ ಆಶ್ರಯವನ್ನು ಹೊಂದಿದು ನಿಜವೇ ಸರಿ. ಆದರೆ ಅದಿಲ್ಶಹನು ಶಹಾಜಿಗೆ ಹೊಸತಾಗಿ ಕೊಟ್ಟ ಜಹಗೀರಾಗಲಿ ಅವನು ಅನಂತರ ಗಳಿಸಿದ ಸಂಪತ್ತಾಗಲಿ ನಮ್ಮ ಚರಿತ್ರನಾಯಕನಿಗೆ ಬರಲಿಲ್ಲ. ನಿಜಾಮಶಹನು ಮೊದಲು ಕೊಟ್ಟ ಪುಣೆಸುಪೆಗಳ ಜಹಗೀರು ಮಾತ್ರ ಅವನ ವಶದಲ್ಲಿತ್ತು. ಆದ್ದರಿಂದ ಸಿವಾಜಿಯು ಅದಿಲ್ಶಹನಿಗೆ ಹೆಚ್ಚು ಕೃತಜ್ಞನಾಗಲಿಕ್ಕೆ ವಿಶೇಷಕಾರಣಗಳಾವವೂ ಇದ್ದಿಲ್ಲೆಂದು ಹೇಳಬಹುದು. ಶಹಾಜಿಯು ಅದಿಲ್ಶಹನ ಹಂಗಿನಲ್ಲಿದ್ದರೂ ಸಿವಾಜಿಯು ಅವನ ಹಂಗಿನಲ್ಲಿರಲಿಲ್ಲ.

ಇನ್ನು ರಾಜದ್ರೋಹದ ಅಥವಾ ಬಂಡುಗಾರಿಕೆಯ ದೋಷದ ವಿಷಯವಾಗಿ ವಿಚಾರಮಾಡಬೇಕಾಗಿದೆ. ಬಂಡುಗಾರಿಕೆಯು ರಾಜದ್ರೋಹದ ಒಂದು ಪ್ರಕಾರವಾದ್ದರಿಂದ ಇವೆರಡೂ ಕೂಡಿ ಒಂದೇ ದೋಷವೆಂದು

ಎಣಿಸಬಹುದು. ಮೇಲೆ ಹೇಳಿದಂತೆ ಬಂಡುಗಾರರು ಅರಸುಮನೆತನಗಳ ಸ್ಥಾಪಕರಾದ್ದರಿಂದ ಅವರ ಮೇಲೆ ಇತಿಹಾಸಕಾರರು ವಾಡಿಕೆಯಾಗಿ ರಾಜದ್ರೋಹದ ಆರೋಪವನ್ನು ಹೊರಿಸುವುದಿಲ್ಲ. ಆದರೆ ನಮ್ಮ ಚರಿತ್ರನಾಯಕನು ಯಶಸ್ವಿಯಾಗಿ ತನ್ನ ಅರಸುಮನೆತನವನ್ನು ಸ್ಥಾಪಿಸಿದರೂ ಅವನ ಮೇಲೆ ಈ ದೋಷವನ್ನು ಹೊರಿಸುವ ಕಾರಣವೇನು? ಅವನ ದುರ್ದೈವವೋ ನಮ್ಮ ದುರ್ಭಾಗ್ಯವೋ? ಇದು ನಮ್ಮ ದುರದೃಷ್ಟದ ಪರಿಣಾಮವೆಂದು ನನಗಂತೂ ತೋರುತ್ತದೆ. ಸಿವಾಜಿಯ ಮನೆತನವು ಹೆಚ್ಚು ಕಾಲ ರಾಜ್ಯವಾಳಿದ್ದರೆ ಅಥವಾ ಭಾರತೀಯರು ತಮ್ಮ ನಾಡಿನ ಸ್ವಾತಂತ್ರ್ಯವನ್ನು ಕಳೆದುಕೊಳ್ಳದಿದ್ದರೆ, ಈ ತರದ ಆರೋಪವು ಅವನ ಮೇಲೆ ಎಂದಿಗೂ ಬರುತ್ತಿದ್ದಿಲ್ಲ. ಪಾರತಂತ್ರ್ಯದಲ್ಲಿದ್ದ ಜನರು ಅಡಿಗಡಿಗೆ ಅಪಮಾನವನ್ನು ಹೊಂದುವಂತೆ ಅವರೊಳಗೆ ಆಗಿಹೋದ ಮಹಾಪುರುಷರಾದರೂ ಅವಮಾನಕ್ಕೆ ಗುರಿಯಾಗಬೇಕಾಗುವದು. ಈ ರಾಜಕೀಯ ತತ್ವದಂತೆ ಅಥವಾ "ಗೂಳಿ ಬಿದ್ದರೆ ಆಳಿಗೊಂದು ಕಲ್ಲೆಂಬ ಗಾದೆ"ಯಂತೆ ಮುಸಲ್ಮಾನ ಮತ್ತು ಯುರೋಪೀಯ ಗ್ರಂಥಕಾರರು ನಮ್ಮ ಚರಿತ್ರನಾಯಕನನ್ನು ಬಂಡುಗಾರನೆಂದು ಜರೆಯುತ್ತಿರಬಹುದು.

ನಮ್ಮ ಚರಿತ್ರನಾಯಕನನ್ನು ರಾಜದ್ರೋಹದ ಅಪರಾಧಕ್ಕೆ ಗುರಿಮಾಡುವುದು ಸರಿಯೋ ಅಲ್ಲವೋ ಎಂಬುದನ್ನು ಮತ್ತೊಂದು ಬಗೆಯಿಂದ ವಿಚಾರಿಸೋಣ. ನೀತಿಶಾಸ್ತ್ರವು ನ್ಯಾಯಶಾಸ್ತ್ರದಷ್ಟೇ ಅಥವಾ ಅದಕ್ಕೂ ಹೆಚ್ಚು ಬಿಗಿಯಾದ್ದೆಂದು ಹೇಳಬಹುದು. ಏಕೆಂದರೆ ಅದರ ನೇಮಗಳು ವ್ಯವಹಾರದಲ್ಲಿ ಒಂದಕ್ಕೊಂದು ವಿರುದ್ಧವಾಗಿ ಕಾಣುವುದರಿಂದ ಕೊನೆಯ ನಿರ್ಣಯವನ್ನು ಮಾಡುವುದು ಅತಿ ಕಷ್ಟತಮವಾಗುತ್ತದೆ. ಮನುಷ್ಯನು ಇಹಲೋಕದಲ್ಲಿ ಮಾಡತಕ್ಕ ಕರ್ತವ್ಯಗಳು ಅನೇಕವಾಗಿರುತ್ತವೆ. ಒಂದು ಕರ್ತವ್ಯವು ಮತ್ತೊಂದು ಕರ್ತವ್ಯಕ್ಕೆ ಅಥವಾ ಬೇರೆ ಅನೇಕ ಕರ್ತವ್ಯಗಳಿಗೆ ವಿರುದ್ಧವಾದರೆ, ಆ ಮನುಷ್ಯನ ಮನಸ್ಸು ಗುಂಗಾಗುತ್ತದೆ, ಅವನ ವಿಚಾರಶಕ್ತಿಯು ಕುಗ್ಗುತ್ತದೆ, ಅವನ ಬುದ್ಧಿಯು ಭ್ರಮಿಸುತ್ತದೆ, ಅವನಲ್ಲಿ ಕರ್ತವ್ಯವಿಮೂಢತೆಯು ಉಂಟಾಗುತ್ತದೆ. ದೊಡ್ಡ ದೊಡ್ಡ ಪಂಡಿತರಾದರೂ ಕೆಲಸಂದರ್ಭಗಳಲ್ಲಿ ಭಿನ್ನಾಭಿಪ್ರಾಯವುಳ್ಳವರಾಗುತ್ತಾರೆ. ಆದ

ಕಾರಣ ಹಿಂದೆ ಆಗಿ ಹೋದ ಎಷ್ಟೋ ಸಂಗತಿಗಳು ಈಗಲಾದರೂ ವಾದ ಗ್ರಸ್ತವಿಷಯಗಳಾಗಿವೆ. ಒಬ್ಬನು ಒಂದು ಕರ್ತವ್ಯಕ್ಕೆ ಮಹತ್ವಕೊಟ್ಟರೆ ಮತ್ತೊಬ್ಬನು ಮತ್ತೊಂದು ಕರ್ತವ್ಯವು ಅದಕ್ಕೂ ಹೆಚ್ಚಿನದೆಂದು ಪ್ರತಿ ಪಾದಿಸುತ್ತಾನೆ. ಪಂಡಿತರೇ ಹೀಗೆ ಗೊಂದಲದಲ್ಲಿ ಬೀಳುವಾಗ ಸಾಮಾನ್ಯ ಜನರ ಪಾಡೇನು?

ಸಂಸಾರದಲ್ಲಿ ಇಂತಹ ಕರ್ತವ್ಯವಿರೋಧತೆಯ ಸಂದರ್ಭಗಳು ಪ್ರತಿ ಯೊಬ್ಬ ಮನುಷ್ಯನಿಗೆ ಆಗಿಂದಾಗ ಬರಬಹುದು. ಈ ತರದ ಸಂದುಕಟ್ಟಿ ನಲ್ಲಿ ನಮ್ಮನ್ನು ಪಾರಮಾಡುವುದಕ್ಕೆ ಅಥವಾ ನಮಗೆ ಮುಂದಿನ ದಾರಿ ಯನ್ನು ತೋರಿಸುವುದಕ್ಕೆ ಪಾಶ್ಚಿಮಾತ್ಯರೂ ಪೌರ್ವಾತ್ಯರೂ ಒಪ್ಪಿಕೊಳ್ಳುವ ಸಾರ್ವತ್ರಿಕವಾದ ಒಂದು ನಿಯಮ ಉಂಟು. ಆ ನಿಯಮವು ಯಾವ ದೆಂದರೆ:—**ಪ್ರತ್ಯಕ್ಷವಾಗಲಿ ಪರಂಪರೆಯಿಂದಾಗಲಿ ಬಹುಜನರಿ (ಸಜ್ಜನರಿ) ಗೆ ಉಪಕಾರ ಮಾಡುವುದೇ ಒಳ್ಳೆಯದು, ಅಪಕಾರ ಮಾಡುವುದೇ ಕೆಟ್ಟದು.** * ಕುಡುಕನಿಗೆ ತಲಬು ಆದಾಗ ಸೆರೆ ಕುಡಿಸು ವುದಾಗಲಿ, ಕಳ್ಳನಿಗೆ ಕಳವು ಮಾಡಿದಾಗ ತಪ್ಪಿಸಿಕೊಳ್ಳುವುದಕ್ಕೆ ದಾರಿ ತೋರಿಸುವುದಾಗಲಿ, ಮಾಡಿದ ಉಪಕಾರವು ಉಪಕಾರವಲ್ಲ; ಅಪಕಾರವೇ ಸರಿ. ಆದ್ದರಿಂದ ಮನುಷ್ಯನಿಗೆ ಐಹಿಕ ಮತ್ತು ಪಾರಮಾರ್ಥಿಕ ಸುಖವಾಗು ವಂತೆ ನೆರವಾಗುವುದೇ ಉಪಕಾರವು. ಅವನಿಗೆ ಐಹಿಕ ಮತ್ತು ಪಾರ ಮಾರ್ಥಿಕ ದುಃಖವಾಗುವಂತಾಗಲಿ, ಅಥವಾ ಐಹಿಕ ಸುಖದಂತೆ ತೋರಿ ಪಾರಮಾರ್ಥಿಕ ದುಃಖವನ್ನುಂಟುಮಾಡುವಂತಾಗಲಿ ಸಾಹಾಯ ಮಾಡು ವುದೇ ಅಪಕಾರವು. ನಮ್ಮ ಚರಿತ್ರನಾಯಕನ ಮೇಲೆ ಅನ್ಯಾಯವಾಗಿ ಹೊರಿಸಲ್ಪಟ್ಟ ಬಂಡುಗಾರಿಕೆಯ, ರಾಜದ್ರೋಹದ ಮತ್ತು ಕೃತಘ್ನತೆಯ ದೋಷವನ್ನು ಈ ಮಹಾತತ್ವದ ಒರೆಗೆ ಹಚ್ಚಿನೋಡೋಣ.

ನಮ್ಮ ಚರಿತ್ರನಾಯಕನ ಗುರುವಾದ ದಾದೋಜಿಕೋಂಡದೇವನು ಸ್ವಾಮಿಭಕ್ತನೂ ರಾಜಭಕ್ತನೂ ಎಂದು ಹೆಸರುವಾಸಿಯಾಗಿದ್ದನಷ್ಟೇ.

---

* ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಮ್ ಗ್ರಂಥಕೋಟಿಭಿಃ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್॥

ಸಿವಾಜಿಯು ಅದಿಲ್ಶಾಹಿಯ ರಾಜ್ಯದಲ್ಲಿ ಪುಂಡಾಟಿಗೆಯನ್ನು ಎಬ್ಬಿಸುವ ಆಲೋಚನೆಯನ್ನು ಮಾಡತೊಡಗಿದ ಕೂಡಲೆ ಅವನು ಹಾಗೆ ಸರ್ವಥಾ ಮಾಡಕೂಡದೆಂದು ತನ್ನ ಶಿಷ್ಯನಿಗೆ ಪರಿಪರಿಯಿಂದ ಉಪದೇಶಮಾಡಿದನೆಂದು ಹಿಂದೆ ಬರೆದಿರುತ್ತೇವೆ.* ಆ ಗುರುಶಿಷ್ಯಸಂವಾದದಲ್ಲಿ ಅದಿಲ್ಶಾಹಿ ಸರಕಾರವು ಜನರಿಗೆ ಹಿತಕರವಾದ್ದಲ್ಲೆಂತಲೂ ಆದರಿಂದ ಪ್ರಜಾಪೀಡೆಯು ಹಲವು ಬಗೆಯಿಂದ ಆಗುತ್ತಿತ್ತೆಂತಲೂ ಸಿವಾಜಿಯು ದಾದೋಜಿಯನ್ನು ಒಡಂಬಡಿಸಿದ್ದನು. ದಾದೋಜಿಯು ಪ್ರಮಾಣಿಕನೂ, ನೀತಿವಂತನೂ, ಸ್ವಾಮಿಭಕ್ತನೂ, ರಾಜನಿಷ್ಠನೂ ಆಗಿದ್ದರೂ ಅವನಲ್ಲಿ ಬಂಧುಪ್ರೀತಿಯೂ ಸ್ವಾರ್ಥತ್ಯಾಗವೂ ದೇಶಭಕ್ತಿಯೂ ಸ್ವಾತಂತ್ರ್ಯಪ್ರೀತಿಯೂ ಕಷ್ಟಸಹಿಷ್ಣುತೆಯೂ ದೇವತಾಭಕ್ತಿಯೂ ಧೈರ್ಯಶೌರ್ಯಾದಿ ಗುಣಗಳೂ ಸಾಕಷ್ಟು ಇರಲಿಲ್ಲ. ಆದ್ದರಿಂದ ಅವನಿಗೆ ನಮ್ಮ ಚರಿತ್ರನಾಯಕನು ನಡಿಸಿದ ಪುಂಡಾಟಿಗೆಯು ಸ್ವಾಭಾವಿಕವಾಗಿ ಸೇರಲಿಲ್ಲ. ಆದರೆ ಅವನ ಪೂರ್ವಪುಣ್ಯದಿಂದಲೋ ಸಾಧುಸಂತರ ಅನುಗ್ರಹದಿಂದಲೋ ಭಾರತಮಾತೆಯ ಸುದೈವದಿಂದಲೋ ಅಥವಾ ಈ ಎಲ್ಲ ಕಾರಣಗಳು ಒಟ್ಟುಗೂಡಿದ್ದರಿಂದಲೊ ನಮ್ಮ ಚರಿತ್ರನಾಯಕನಲ್ಲಿ ದಾದೋಜಿಯಲ್ಲಿ ಹೆಚ್ಚಾಗಿಲ್ಲದ ಎಲ್ಲ ಗುಣಗಳು ಉಜ್ವಲವಾಗಿ ಪ್ರಕಾಶಿಸುತ್ತಿದ್ದವು. ಆದಕಾರಣ ಅವನು ರಾಜಭಕ್ತಿ ಪಿತೃಭಕ್ತಿಗಳಿಂದ ಮಾತ್ರ ಸಜ್ಜನಸೇವೆಯು ಹೆಚ್ಚಾಗಿ ಆಗುವುದಿಲ್ಲೆಂದು ಮನಗಂಡು, ಅದನ್ನು ಮನಮುಟ್ಟಿಮಾಡಲಿಕ್ಕೆ ಮುಂದರಿಸಿದ್ದು ಅವನಿಗೆ ಭೂಷಣವೋ ದೂಷಣವೋ ಎಂಬುದನ್ನು ವಾಚಕರೇ ವಿಚಾರಮಾಡಲಿ.

ಮೇಲೆ ಕೊಟ್ಟ ನೀತಿಶಾಸ್ತ್ರದ ಮಹಾತತ್ವದಂತೆ ನಮ್ಮ ಚರಿತ್ರನಾಯಕನು ಹೆಚ್ಚುಮಂದಿ ಸಜ್ಜನರಿಗೆ ಹೆಚ್ಚು ಉಪಕಾರಮಾಡುವುದಕ್ಕೆ ತ್ರಿಕರಣಪೂರ್ವಕವಾಗಿ ಯಥಾಶಕ್ತಿ ಪ್ರಯತ್ನಮಾಡಿದ್ದರಿಂದ ಅವನು ಬಂಡುಗಾರಿಕೆ, ರಾಜದ್ರೋಹ, ಕೃತಘ್ನತೆ ಈ ಮೂರು ದೋಷಗಳಿಂದ ಪೂರ್ಣವಾಗಿ ಮುಕ್ತನಾಗಿದ್ದನೆಂದು ನಮ್ಮ ನಿಶ್ಚಯವಾದ ಅಭಿಪ್ರಾಯವಿರುತ್ತದೆ. ಜನರನ್ನು ಪರಿಪರಿಯಿಂದ ಪೀಡಿಸುವ ಅದಿಲ್ಶಾಹಿಯನ್ನು ಮುರಿದು ಪ್ರಜೆ

* ಹಿಂದೆ ಪುಟ ೩೨ ರಿಂದ ೩೮ರ ವರೆಗೆ ನೋಡಿರಿ.

ಗಳನ್ನು ಬಗೆಬಗೆಯಿಂದ ಗೋಳಾಡಿಸುವ ಮೊಗಲ್ಬಾದಶಾಹಿಯನ್ನು ಕುಗ್ಗಿಸಿದ್ದು ಅವನು **ಮರಾಟರ ಮೇಲೆ** ಮಾಡಿದ ದೊಡ್ಡ ಉಪಕಾರವೇ ಸರಿ. ಹುಳಿತ ಅದಿಲ್ಶಾಹಿಯನ್ನು ನಿರ್ವಿಣ್ಣಮಾಡಿ, ಕೊಳೆಯಲಾರಂಭಿಸಿದ ಮೊಗಲ್ಬಾದಶಾಹಿಯನ್ನು ಹಿಮ್ಮೆಟ್ಟಿಸಿ, ಪ್ರಜೆಗಳಿಗೆ ಸ್ವಾತಂತ್ರ್ಯಾಮೃತವನ್ನು ಕುಡಿಸಿ, ಜನರ ಧರ್ಮೋಪದ್ರವನ್ನು ತಪ್ಪಿಸಿದ್ದರಿಂದ ಮರಾಟರಷ್ಟೇ ಅಲ್ಲ, ಎಲ್ಲ ಭಾರತೀಯರು ಕೃತಜ್ಞತಾಪೂರ್ವಕವಾಗಿ ಅವನನ್ನು ಸ್ಮರಿಸುವುದು ಅವರ ಕರ್ತವ್ಯವೆಂದು ನಾವು ನಿಸ್ಸಂದೇಹವಾಗಿ ಹೇಳುತ್ತೇವೆ. ಅಲ್ಪಸ್ವಲ್ಪ ಜನರಿಗೆ ಅಲ್ಪಸ್ವಲ್ಪ ಪ್ರಮಾಣದಿಂದ ಹಿತವಾಗುವ ಕರ್ತವ್ಯಕ್ಕಿಂತ ಹೆಚ್ಚು ಜನರಿಗೆ ಹೆಚ್ಚು ಪ್ರಮಾಣದಿಂದ ಹಿತವಾಗುವ ಕರ್ತವ್ಯಗಳು ಶ್ರೇಷ್ಠವಾದುವು. ನಮ್ಮ ಚರಿತ್ರನಾಯಕನು ಪರಕೀಯ ರಾಜ್ಯವನ್ನು ಹಾಳುಗೆಡವಿ ಸ್ವರಾಜ್ಯವನ್ನು ಸ್ಥಾಪಿಸಲಿಕ್ಕೆ ಮನಃಪೂರ್ವಕವಾಗಿ ಎತ್ತುಗಡೆಮಾಡಿದ್ದರಿಂದ ಅವನು ನಮ್ಮ ಕೃತಜ್ಞತೆಗೂ ಸ್ತುತಿಗೂ ಪಾತ್ರನೇ ಸರಿ.

**೬. ಸುಲಿಗೆಕಾರಿಕೆ.** ಬಂಡುಗಾರಿಕೆಯ ಅಥವಾ ರಾಜದ್ರೋಹದ ದೋಷವು ನಿರಾಧಾರವಾಗಿದ್ದಂತೆ ಇದಾದರೂ ನಿರಾಧಾರವಾಗಿರುತ್ತದೆ. ಹೆಚ್ಚು ಜನರಿಗೆ ಹೆಚ್ಚು ಸುಖವನ್ನುಂಟುಮಾಡುವುದಕ್ಕೋಸ್ಕರ ನಮ್ಮ ಚರಿತ್ರನಾಯಕನು ಸ್ವರಾಜ್ಯವನ್ನು ಸ್ಥಾಪಿಸಲಿಕ್ಕೆ ಹೆಣಗಾಡುತ್ತಿದ್ದನೆಂದು ಮನಃಪೂರ್ವಕವಾಗಿ ಒಪ್ಪಿಕೊಳ್ಳುವವರು ಆ ಸಾಹಸಕ್ಕೆ ಅವಶ್ಯವಾಗಿ ಬೇಕಾದ ಸಾಧನಗಳನ್ನು ಕಯ್ಕೊಳ್ಳುವುದು ಅವನ ನ್ಯಾಯವಾದ ಕರ್ತವ್ಯವೆಂದು ಒಡಂಬಡಲಿಕ್ಕೇ ಬೇಕು. ಅವನನ್ನು ನಿರ್ನಾಮಮಾಡಬೇಕೆಂದು ಹವಣಿಸುತ್ತಿದ್ದ ಮತ್ತು ಬಲಾಢ್ಯವಾದ ದಿಲ್ಲಿ–ವಿಜಾಪುರ ರಾಜ್ಯಗಳೊಡನೆ ಕುಸ್ತಿಹಿಡಿದು ಕಾದಲಿಕ್ಕೆ ಅವನಿಗೆ ದೊಡ್ಡ ದಂಡು ಬೇಡವೇ? ಆ ದಂಡಿನವರಿಗೆ ಕೊಡುವುದಕ್ಕೆ ಬಹಳ ಹಣ ಬೇಡವೇ? ಈ ಹಣವನ್ನು ಅವನು ಎಲ್ಲಿಂದ ತರಬೇಕು? ಅವನ ಬಡ ಸಂಸ್ಥಾನದ ಹುಟ್ಟುವಳಿಯೆಲ್ಲ ದಂಡಿನ ಒಂದು ತಿಂಗಳ ಸಂಬಳಕ್ಕಾದರೂ ಸಾಲುವಷ್ಟಿದ್ದಿಲ್ಲ. ಈ ಸ್ವರಾಜ್ಯಸ್ಥಾಪನೆಗೆ ಅವಶ್ಯವಾಗಿದ್ದ ಹಣವನ್ನು ಅವನು ಹೇಗೆ ದೊರಕಿಸಬೇಕು? ತನ್ನ ಪ್ರಜೆಗಳನ್ನೇ ಸುಲಿಯಬೇಕೇ? ಹಾಗೆ ಮಾಡುವುದು ರಾಜ

ಧರ್ಮವೇ? ಹೀಗೆ ಸುಲಿದರಾದರೂ ಬರುವುದೇನು? ರಾವಣನ ಹೊಟ್ಟೆಗೆ ಕಾಸಿನ ಸುಂಟಿಯೇ? ಆ ಕಾಲದಲ್ಲಿ ಈಗಿನಂತೆ ರಾಷ್ಟ್ರೀಯ ಸಾಲವನ್ನು ತೆಗೆದು ಬಡ್ಡಿ ತೆರೆದು ತೆರೆದು ದಣಿಯುವಂತೆ ಮುಂದಿನ ತಲೆಯವರನ್ನು ಮಾಡುವ ಪರಿಪಾಠವಿತ್ತೇ? ಅದೂ ಇದ್ದಿಲ್ಲ. ಇಂತಹ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ನಮ್ಮ ಚರಿತ್ರನಾಯಕನು ಸುಲಿಗೆಯ ಹೊರತು ಬೇರೆಯಾವ ಉಪಾಯದಿಂದ ತನ್ನ ಮಹಾಕೃತ್ಯಕ್ಕೆ ಬೇಕಾದ ಹಣವನ್ನು ಒದಗಿಸಿಕೊಳ್ಳಬೇಕಾಗಿತ್ತೆಂಬುದನ್ನು ಅವನ ಮೇಲೆ ಸುಳ್ಳುಸುಳ್ಳೇ ತಪ್ಪುಹೊರಿಸುವವರೇ ಸೂಚಿಸಲಿ.

೧೯ ನೆಯ ಶತಮಾನದಲ್ಲಿ ಯೂರೋಪಖಂಡದೊಳಗೆ ದೊಡ್ಡ ಜಯಶಾಲಿಯೆಂದು ಹೆಸರುಪಡೆದ ನೆಪೋಲಿಯನ್ ಬೊನಾಪಾರ್ಟನು "ಯುದ್ಧವೇ ಯುದ್ಧದ ಖರ್ಚನ್ನು ಸಾಗಿಸಬೇಕು," ಎಂದು ಬಾಯಿಂದ ಹೇಳುತ್ತಿದ್ದುದಲ್ಲದೆ, ನೆರೆಹೊರೆಯ ನಾಡುಗಳನ್ನು ಸುಲಿದು ದಂಡುಕಟ್ಟಿಕೊಂಡು ಗ್ರೇಟಬ್ರಿಟನ-ರಸಿಯಾ ಈಯೆರಡು ದೇಶಗಳನ್ನುಳಿದು ಇಡಿ ಯೂರೋಪಖಂಡವನ್ನು ಗೆದ್ದನು. ಮೊನ್ನೆಮೊನ್ನೆ ಜರ್ಮನಿಯ ಬಾದಶಹನಾದ ೨ ನೆಯ ಉಯಿಲಮ್ಮನು ಬೆಲಜಿಯಮ್, ಫ್ರಾನ್ಸ್ ಮುಂತಾದ ದೇಶಗಳನ್ನು ಸುಲಿದು ೪ ವರ್ಷಗಳ ವರೆಗೆ ಯೂರೋಪಖಂಡವನ್ನೆಲ್ಲ ಗದಗಮಿಸಿಬಿಟ್ಟನು. ಆದರೆ ನೆಪೋಲಿಯನ್ನನ ಚರಿತ್ರಕಾರರಾಗಲಿ ೨ನೆಯ ಉಯಿಲಮ್ಮನ ಚರಿತ್ರಕಾರರಾಗಲಿ ಅವರಿಬ್ಬರ ಮೇಲೆ ಸುಲಿಗೆಗಾರರೆಂಬ ಆರೋಪವನ್ನು ಹೊರಿಸಿದಂತೆ ಕಂಡುಬರುವುದಿಲ್ಲ. ನಮ್ಮ ಚರಿತ್ರನಾಯಕನು ನೆಪೋಲಿಯನ್ನನಿಗಿಂತ ೨೦೦ ವರ್ಷ ಮೊದಲೇ ಆಗಿ ಹೋದನೆಂತಲೋ, ಭಾರತೀಯರನ್ನು ಪರದೇಶದವರ ಆಳಿಕೆಯಿಂದ ಮುಕ್ತಮಾಡಿ, ಸ್ವತಂತ್ರವಾದ ಸ್ವರಾಜ್ಯದಲ್ಲಿರಿಸಬೇಕೆಂಬ ಸ್ತುತ್ಯವಾದ ಉದ್ಯೋಗವನ್ನು ಕಯ್ಕೊಂಡಿದ್ದನೆಂತಲೋ, ಈ ದುರ್ದೈವಿಯಾದ ಭರತಖಂಡದಲ್ಲಿ ಹುಟ್ಟಿದವನೆಂತಲೋ, ಪರಕೀಯ ಇತಿಹಾಸಕಾರರು ಅವನ ಮೇಲೆ ಎಡೆಬಿಡದೆ ನಂಜುಕಾರುವುದು ಸರಿಯೇ?

ಈ ಸುಲಿಗೆಯ ವಿಷಯವಾಗಿ ನಾವು ತರ್ಕವಿತರ್ಕ ಮಾಡುತ್ತ ಕೂಡ್ರುವ ಕಾರಣವಿಲ್ಲ. ಏಕೆಂದರೆ ನಮ್ಮ ಚರಿತ್ರನಾಯಕನೇ ಈ

ಸುಲಿಗೆಯ ಕಾರಣವನ್ನೂ ಪರಿಣಾಮವನ್ನೂ ವ್ಯಂಗ್ಯಾರ್ಥದಿಂದ ಬರಿಸಿಟ್ಟಿದ್ದಾನೆ. ತಾನು ಸಾಯುವುದಕ್ಕಿಂತ ಒಂದು ವರ್ಷ ಮೊದಲು ಅವನು ಅವರಂಗಜೀಬ ಬಾದಶಹನಿಗೆ ಒಂದು ಪತ್ರಬರಿಸಿದನೆಂದು ಹಿಂದೆ ಹೇಳಿರುತ್ತೇವಷ್ಟೇ. ಅದರಲ್ಲಿ ತಾನು ಬಾದಶಹನ ಕೆಲ ಪಟ್ಟಣಕೋಟೆಗಳನ್ನು ಹಿಡಿಮುಕೊಂಡು ಉಳಿದವುಗಳನ್ನು ಸೂರೆಗೊಂಡುದರಿಂದ ಅವನ ಬೊಕ್ಕಸವು ಬರಿದಾಗಿ ಬಡತನವು ಹೆಚ್ಚಾಯಿತೆಂತಲೂ ಆದಕಾರಣ ಅವನು ಜೀಜಿಯಾ ತೆರಿಗೆಯನ್ನು ಕೂಡ್ರಿಸಿ ರಾಣಾಪ್ರತಾಪಸಿಂಗನನ್ನೂ ತನ್ನನ್ನೂ ಕೆಣಕದೆ, ಕೂಳಿಲ್ಲದ ತಿರುಕರ ಮೇಲೆ ತನ್ನ ಶೌರ್ಯವನ್ನು ತೋರಿಸ ತೊಡಗಿದ್ದಾನೆಂತಲೂ ಸ್ಪಷ್ಟವಾಗಿ ಬರೆಯಿಸಿರುತ್ತಾನೆ.* ಈ ಲೇಖದಿಂದ ೨ ಅನುಮಾನಗಳು ಹೊರಡುವವು:—೧. ಮೊಗಲ್ಬಾದಶಹನ ನಾಡಿನ ಸುಲಿಗೆಯಿಂದ ಹೇರಳ ಹಣದೊರೆದುದರಿಂದ ದೊಡ್ಡದಂಡುಕಟ್ಟಿಕೊಂಡು ಅವನ ಕೋಟೆಪಟ್ಟಣಗಳನ್ನು ಹಿಡಿಕೊಳ್ಳಲಿಕ್ಕೂ ಅವನ ನಾಡನ್ನು ಸುಲಿಯಲಿಕ್ಕೂ ಸಿವಾಜಿಗೆ ಸಾಮರ್ಥ್ಯವು ಬಂತು. ೨. ಸಿವಾಜಿಯ ಕೊಳ್ಳೆಸುಲಿಗೆಗಳಿಂದ ಮೊಗಲ್ಬಾದಶಹನು ಬಡವಾದನು. ಒಂದೇ ಕ್ರಿಯೆಯಿಂದ ಎರಡು ಇಷ್ಟಸಾಧನಗಳನ್ನು ಮಾಡಿಕೊಳ್ಳುವ ಉಪಾಯವನ್ನು ಹುಡುಕಿತೆಗೆದ ನಮ್ಮ ಚರಿತ್ರನಾಯಕನ ಬುದ್ಧಿಚಾತುರ್ಯವನ್ನೂ ಧೈರ್ಯ ಸಾಹಸಗಳನ್ನೂ ಎಷ್ಟು ಹೊಗಳಿದರೂ ಸಾಲದು.

ಈವರೆಗೆ ಮುಸಲ್ಮಾನ ಮತ್ತು ಪಾಶ್ಚಿಮಾತ್ಯ ಗ್ರಂಥಕಾರರು ನಮ್ಮ ಚರಿತ್ರನಾಯಕನ ಮೇಲೆ ಹೊರಿಸಿದ ಅಲ್ಲದ ಸಲ್ಲದ ತಪ್ಪುಗಳ ವಿಚಾರವಾಯಿತು. ಅವು ನಿರಾಧಾರವಾದುವುಗಳೆಂತಲೂ ಹುಟ್ಟಿಸಿಕೊಂಡು ಹೇಳಿದವೆಂತಲೂ ಸಿದ್ಧಮಾಡಲಿಕ್ಕೆ ನಾವು ಕೈಲಾದಮಟ್ಟಿಗೆ ಯತ್ನಿಸಿದ್ದೇವೆ. ಈ ನಮ್ಮ ಪ್ರಯತ್ನವು ಎಷ್ಟು ಮಟ್ಟಿಗೆ ಸಫಲವಾಗಿರುತ್ತದೆಂಬುದನ್ನು ನಮ್ಮ ಪ್ರೀಯವಾಚಕರೇ ನಿರ್ಣಯಿಸಬಹುದು. ಇನ್ನೂ ಏನಾದರೂ ದೋಷವು ಉಳಿದರೆ, ಚಂದ್ರನ ಪ್ರಕಾಶದೊಳಗೆ ಅವನಲ್ಲಿದ್ದ ಕಪ್ಪು ಅಡಗಿಹೋಗುವಂತೆ, ಆ ಸಣ್ಣಪುಟ್ಟ ದೋಷವು ಮುಂದೆ ವಿವರಿಸುವ ಅವನ ಸದ್ಗುಣ

---

* ಹಿಂದೆ ೧೧ ನೆಯ ಪ್ರಕರಣ, ಪುಟ ೨೭೮—೨೮೩.

ಗಳ ಸಮೂಹದಲ್ಲಿ ಮರೆಯಾಗುವದೆಂದು ನಾವು ದೃಢವಾಗಿ ನಂಬು ತ್ತೇವೆ. *

ಸತ್ತ ಎಮ್ಮೆಗೆ ಸೇರು ತುಪ್ಪ ಎಂಬ ಕನ್ನಡ ನಾಣ್ನುಡಿಯನ್ನು ನಮ್ಮ ವಾಚಕರು ಕೇಳಿರಬಹುದು. ಸತ್ತವರ ದೋಷಗಳನ್ನು ಒತ್ತಿಹೇಳದೆ ಅವರ ಗುಣಗಳನ್ನೇ ಉಪ್ಪುಕಾರಹಚ್ಚಿ ಬಣ್ಣಿಸಬೇಕೆಂಬುದೇ ಇದರ ಅರ್ಥವು. ಸತ್ತವರ ವಿಷಯವಾಗಿ ಎಂದೂ ಕೆಡಕುಮಾತಾಡಬೇಡ ಎಂಬ ಇಂಗ್ಲಿಷನುಡಿಯ ಗಾದೆಯಾದರೂ ಇದೇ ಮಾತನ್ನು ನಿಷೇಧರೂಪದಿಂದ ತಿಳಿಸುತ್ತದೆ. ಸತ್ತವರ ದುರ್ಗುಣಗಳನ್ನು ಬುದ್ಧಿಪುರಸ್ಸರವಾಗಿ ಬಚ್ಚಿಡ ಬೇಕೆಂಬುದು ಈ ಗಾದೆಗಳ ಮಥಿತಾರ್ಥವಲ್ಲ; ಅವುಗಳ ವಿಷಯದಲ್ಲಿ ಅತಿಶಯೋಕ್ತಿಮಾಡದೆ ಆದಷ್ಟು ಸಂಕ್ಷಿಪ್ತವಾಗಿ ಅವುಗಳನ್ನು ಹೇಳಿ ಸದ್ಗುಣಗಳನ್ನು ಯಥಾರ್ಥವಾಗಿ ವರ್ಣಿಸಬೇಕೆಂಬುದೇ ಅವುಗಳ ನಿಜ ವಾದ ಅರ್ಥವು. ಚರಿತ್ರಕಾರರು ಈ ನಿಯಮವನ್ನು ಅನುಸರಿಸದೆ ಸತ್ತವರ ಮೇಲೆ ಸುಳ್ಳುತಪ್ಪುಹೊರಿಸುವುದು ಮಹಾಪಾಪವಲ್ಲವೇ?

ಈ ಪ್ರಪಂಚದಲ್ಲಿ ಮನುಷ್ಯನ ಅವಸ್ಥೆಗೆ ಮಾತ್ರ ಮಾನ ಅಥವಾ ಪೂಜ್ಯತೆ ಇರುತ್ತದೆ ಹೊರತು ಅವನ ದೇಹಕ್ಕಿರುವುದಿಲ್ಲ.† ಪ್ರತಿಯೊಬ್ಬ ಮನುಷ್ಯನಿಗೆ ಸಾಮಾನ್ಯವಾಗಿ ೨ ಅವಸ್ಥೆಗಳಿರುತ್ತವೆ:—೧. ಗೃಹಾವಸ್ಥೆ. ೨. ಬಾಹ್ಯಾವಸ್ಥೆ. ತಂದೆತಾಯಿ, ಹೆಂಡರುಮಕ್ಕಳು, ಅಣ್ಣತಮ್ಮಂದಿರು, ಅಕ್ಕತಂಗಿಯರು, ನೆಂಟರಿಷ್ಟರು, ಆಳುಹೋಳುಗಳು ಇವರೊಡನೆ ಇದ್ದ ನಡತೆಯೇ ಗೃಹಾವಸ್ಥೆಯು; ನೆರೆಹೊರೆಯವರು, ಊರಿನವರು, ನಾಡಿ ನವರು ಇವರ ಸಂಬಂಧದ ನಡತೆಯೇ ಬಾಹ್ಯಾವಸ್ಥೆಯು. ಗೃಹಾವಸ್ಥೆಯಲ್ಲಿ ಕೆಡಕನಾಗಿದ್ದವನು ಬಾಹ್ಯಾವಸ್ಥೆಯಲ್ಲಿ ಕೆಟ್ಟವನಾಗಲಿಕ್ಕೇ ಬೇಕು. ಆದರೆ ಗೃಹಾವಸ್ಥೆಯಲ್ಲಿ ಒಳ್ಳೆಯವನಾಗಿದ್ದವನು ಬಾಹ್ಯಾವಸ್ಥೆಯಲ್ಲಿಯೂ ಒಳ್ಳೆ

---

* ಏಕೋ ಹಿ ದೋಷೋ ಗುಣಸನ್ನಿಪಾತೇ ।
ನಿಮಜ್ಜತೀಂದೋಃ ಕವಿರಾಚಚಕ್ಷೇ ॥

† ಅವಸ್ಥಾ ಪೂಜ್ಯತೇ ರಾಮ ಶರೀರಂ ನೈವ ಪೂಜ್ಯತೇ ॥
ವಾಲ್ಮೀಕಿ ರಾಮಾಯಣ.

ಯುವನೆನಿಸಿಕೊಳ್ಳುವನೆಂಬ ನೇಮವಿಲ್ಲ. ಏಕೆಂದರೆ ಸ್ವಾರ್ಥಪರತ್ವವು ಆಸುರೀಗುಣವಾದ್ದರಿಂದ ಅದರ ಕಸುವು ಮಧ್ಯಬಿಂದುವಿನಿಂದ ಪರಿಧಿಯ ಕಡೆಗೆ ಹಬ್ಬದೆ, ಪರಿಧಿಯಿಂದ ಮಧ್ಯಬಿಂದುವಿನ ಕಡೆಗೆ ನುಗ್ಗುತ್ತದೆ. ಆದ್ದರಿಂದ ಇಲ್ಲಿ ನಮ್ಮ ಚರಿತ್ರನಾಯಕನ ಗೃಹಾವಸ್ಥೆಯ ಅಥವಾ ಒಳಗಿನ ಗುಣದೋಷಗಳನ್ನು ಮೊದಲು ವಿವರಿಸಿ, ಬಳಿಕ ಅವನ ಬಾಹ್ಯಾವಸ್ಥೆಯ ಅಥವಾ ಹೊರಗಿನ ಗುಣಗಳನ್ನು ವರ್ಣಿಸುವೆವು.

೧೭ ನೆಯ ಶತಮಾನದಲ್ಲಿ ಇತಿಹಾಸ-ಶಾಸ್ತ್ರವು ಈಗಿನಷ್ಟು ಬೆಳೆದಿದ್ದಿಲ್ಲ. ಆದಕಾರಣ ಆ ಕಾಲದ ಬಖೈರುಗಳಲ್ಲಿ ನಮ್ಮ ಚರಿತ್ರನಾಯಕನ ಗೃಹಾವಸ್ಥೆಯ ಅಥವಾ ಒಳಗುಣಗಳ ವಿಷಯವಾಗಿ ಉಲ್ಲೇಖಗಳೇನೂ ಸಿಕ್ಕುವುದಿಲ್ಲ. ಪ್ರತ್ಯಕ್ಷಶಾಬ್ದಪ್ರಮಾಣಗಳು ದೊರೆಯದಿದ್ದಾಗ ಚರಿತ್ರಕಾರರಿಗೆ ಅನುಮಾನದ ಹೊರತು ಬೇರೆ ಮಾರ್ಗವಿಲ್ಲ. ಈ ಅನುಮಾನದಂತೆ ೧. ದೇವತಾಭಕ್ತಿ, ೨. ಬ್ರಾಹ್ಮಣರಲ್ಲಿ ವಿಶ್ವಾಸ, ೩. ಪಿತೃಭಕ್ತಿ, ೪. ಅಂತಃಕರಣ ಅಥವಾ ಮಮತಾ, ೫. ಪರಸ್ತ್ರೀ ಸಹೋದರತೆ, ೬. ದಯಾ, ೭. ಉದಾರತನ, ೮. ಸೈರಣೆ ಅಥವಾ ಸಹನಶೀಲತಾ, ೯. ಆತಿಥ್ಯ ಈ ಒಂಬತ್ತು ಒಳಗುಣಗಳು ನಮ್ಮ ಚರಿತ್ರನಾಯಕನಲ್ಲಿ ನೆಲೆಗೊಂಡಿದ್ದವೆಂದು ಹೇಳಬಹುದು. ಈ ನವಗುಣಗಳನ್ನು ಸಿಕ್ಕಷ್ಟು ಉದಾಹರಣೆಗಳೊಡನೆ ಇಲ್ಲಿ ವಿವರಿಸುವೆವು.

**೧. ದೇವರಲ್ಲಿ ಭಕ್ತಿ.** ಹಿರಿಯಕ್ಕನ ಚಾಳಿ ಮನೆಯವರಿಗೆಲ್ಲ ಎಂಬ ಗಾದೆಯನ್ನು ವಾಚಕರು ಕೇಳಿರಬಹುದು. ಚಿಕ್ಕ ಹುಡುಗರು ಅನುಕರಣಶೀಲರಾದ್ದರಿಂದ ಹಿರಿಯರ ಶೀಲವನ್ನು ಅನುಸರಿಸುತ್ತಾರೆ. ನಮ್ಮ ಚರಿತ್ರನಾಯಕನ ಮನೆಯಲ್ಲಿ ಹಿರಿಯರೆಂದರೆ ಅವನ ತಾಯಿಯಾದ ಜೀಜಾಬಾಯಿಯೂ ಅವನ ಗುರುಪಾಲಕನಾದ ದಾದೋಜಿಕೋಂಡದೇವನೂ. ಇವರಿಬ್ಬರು ದೇವರಲ್ಲಿ ಅಪ್ರತಿಮಭಕ್ತಿಯುಳ್ಳವರೂ ಬ್ರಾಹ್ಮಣರಲ್ಲಿ ಪೂರ್ಣವಿಶ್ವಾಸವುಳ್ಳವರೂ ಆಗಿದ್ದರು. ದಿನಾಲು ದೇವತಾಪೂಜೆಯೂ ಪುರಾಣಪುಣ್ಯಕಥಾಶ್ರವಣವೂ ನಡೆದಿದ್ದವು. ಆಗಿಂದಾಗ ಬ್ರಾಹ್ಮಣ ಭೋಜನವೂ ಕೀರ್ತನಗಳೂ ಆಗುತ್ತಿದ್ದವು. ಇಂತಹ ಧಾರ್ಮಿಕ ಪರಿಸ್ಥಿತಿಯಲ್ಲಿ

ನಮ್ಮ ಚರಿತ್ರನಾಯಕನು ಬೆಳೆದು ದೊಡ್ಡವನಾದ್ದರಿಂದ ಅವನಲ್ಲಿ ಸ್ವಾಭಾವಿಕವಾಗಿ ದೇವರಲ್ಲಿ ನಿಷ್ಕಳಂಕ ಭಕ್ತಿಯೂ ಬ್ರಾಹ್ಮಣರಲ್ಲಿ ಅಕೃತ್ರಿಮ ಪೂಜ್ಯಬುದ್ಧಿವಿಶ್ವಾಸಗಳೂ ಬೇರು ಬಿಟ್ಟಿದ್ದವು. ಶ್ರೀಭವಾನಿಯು ಭೋಸಲೆಮನೆತನದ ಕುಲದೇವತೆಯಾದ್ದರಿಂದ ಆಕೆಯನ್ನು ಅವನು ನೆರೆನಂಬಿದ್ದನು. ಭೋಸಲೆಮನೆತನದಲ್ಲಿ ಒಬ್ಬ ಹೆಸರುವಾಸಿಯಾದ ರಾಜಪುರುಷನು ಹುಟ್ಟುವನೆಂದು ಮಾಲೋಜಿಯ ಕನಸಿನಲ್ಲಿ ಶ್ರೀಭವಾನಿಯು ಹೇಳಿದ್ದು ನಿಜವಾದ ಸಂಗತಿಯೆಂದು ಅವನು ದೃಢವಾಗಿ ನಂಬಿದ್ದನು. ಅವನು ಭಾವಿಕನಾದ್ದರಿಂದ ಶ್ರೀಭವಾನಿಯನ್ನು ಕೇಳದೆ, ಯಾವ ದೊಡ್ಡ ಕೆಲಸಕ್ಕೂ ಕಯ್ಹಾಕುತ್ತಿದ್ದಿಲ್ಲ. ಅಫಜುಲ್ಖಾನನು ದಂಡೆತ್ತಿ ಬಂದಾಗ, ಶಹಾಜಿಯನ್ನು ಅದಿಲ್ಶಹನು ಗೋಡೆಯಲ್ಲಿ ಅರೆವಾಸಿಯಾಗಿ ಹುಗಿಸಿದಾಗ, ಶಿವಾಜಿಯು ಬಾದಶಹನ ಬೆಟ್ಟಿಗೆ ದಿಲ್ಲಿಗೆ ಹೋಗುವಾಗ, ಶ್ರೀಭವಾನಿಯು ಅವನ ಮೆಯ್ಯಲ್ಲಿ ಬಂದು ಮುಂದೆ ಅವನು ಏನು ಮಾಡಬೇಕೆಂಬುದನ್ನೂ ಭಾವೀಪರಿಣಾಮವನ್ನೂ ಅವನ ಬಾಯಿಂದ ಒಡನುಡಿಸುತ್ತಿದ್ದಳೆಂತಲೂ ಕಾರಕೂನರು ಆಗ ಅವನು ಮಾತಾಡಿದ್ದನ್ನೆಲ್ಲ ಅಕ್ಷರಶಃ ಬರೆಕೊಂಡು ಹಿಂದುಗಡೆ ಅದನ್ನೆಲ್ಲ ಅವನಮುಂದೆ ಓದಿ ಹೇಳುತ್ತಿದ್ದರೆಂತಲೂ ಬಖೈರಗಳಲ್ಲಿ ಬರೆದಿರುತ್ತದೆ.

**೨. ಬ್ರಾಹ್ಮಣರಲ್ಲಿ ವಿಶ್ವಾಸ.** ಇತ್ತಲಾಗಿನ ಕೆಲಚರಿತ್ರಗಾರರು ನಮ್ಮ ಚರಿತ್ರನಾಯಕನಿಗೆ ಬ್ರಾಹ್ಮಣರಲ್ಲಿ ವಿಶ್ವಾಸವು ಕಡಮೆಯಾಗಿತ್ತೆಂದು ತೋರಿಸುವುದಕ್ಕೆ ಯತ್ನಿಸಲಾರಂಭಿಸಿದ್ದಾರೆ. ಈ ವಿಚಾರವು ಈಚಿಗೆ ಪ್ರೋತ್ಸಾಹಿಸಲ್ಪಡುತ್ತಿದ್ದ ಜಾತಿಮತ್ಸರದ ಪರಿಣಾಮವೇ ಹೊರತು ವಸ್ತುಸ್ಥಿತಿಯ ವರ್ಣನೆಯಲ್ಲೆಂದು ಧಾರಾಳವಾಗಿ ಹೇಳಬಹುದು. ಏಕೆಂದರೆ ಈಗಿನ ಬ್ರಾಹ್ಮಣರು ಸರ್ಕಾರದವರು ಕೊಡುವ ದೊಡ್ಡದೊಡ್ಡ ಸಂಬಳಗಳಿಗೆ ಮೆಚ್ಚಿ ಮರುಳಾಗಿ ತಮ್ಮ ಮಹತ್ವವನ್ನೂ ಬ್ರಾಹ್ಮಣ್ಯವನ್ನೂ ಕಳೆದುಕೊಂಡಂತೆ ಆಗಿನ ಬ್ರಾಹ್ಮಣರು ಕಳೆದುಕೊಂಡಿದ್ದಿಲ್ಲ. ಅವರು ಪುರಾಣೇತಿಹಾಸಗಳಲ್ಲಿ ಬಣ್ಣಿಸಿದಂತೆ ಭೂಸುರರೂ ಬ್ರಹ್ಮತೇಜಯುಕ್ತರೂ ಆಗದಿದ್ದರೂ ಉಳಿದ ಜಾತಿಯವರಿಗಿಂತ ಬಹಳ ಮಿಗಿಲಾದ ಯೋಗ್ಯತೆಯುಳ್ಳವರಾಗಿ

ದ್ದರು. ಶಿವಾಜಿಯು ಪ್ರತಾಪಗಡದಲ್ಲಿ ಕಟ್ಟಿಸಿದ ಗುಡಿಯಲ್ಲಿ ಶ್ರೀಭವಾನಿಯ ತ್ರಿಕಾಲ ಪೂಜಾರ್ಚನ–ನೈವೇದ್ಯಗಳೂ ಅಭಿಷೇಕೋತ್ಸವ ಸಮಾರಾಧನೆಗಳೂ ಯೋಗ್ಯರಾದ ಬ್ರಾಹ್ಮಣರಿಂದ ವಿಧಿಪೂರ್ವಕವಾಗಿ ನಡಿಸಲ್ಪಡುತ್ತಿದ್ದವು. ಅರಮನೆಯಲ್ಲಿ ಪುರೋಹಿತನು ದಿನಾಲು ಸಕಾಲಕ್ಕೆ ದೇವರಪೂಜಾ ನೈವೇದ್ಯಮಾಡಿ, ಅವನಿಗೂ ರಾಣಿವಾಸದವರಿಗೂ ತೀರ್ಥಪ್ರಸಾದಗಳನ್ನು ಕೊಡುತ್ತಿದ್ದನು. ಸಮರ್ಥರ ಮೊದಲನೆಯ ಬೆಟ್ಟಿಯ ದಿವಸ ಅವರ ದರ್ಶನ ಆದ ಹೊರತು ಊಟಮಾಡುವುದಿಲ್ಲೆಂದು ಅವನು ಹೇಳಿದ್ದು ಓದುವವರ ನೆನಪಿನಲ್ಲಿರಬಹುದು. ಸಮರ್ಥರಾಮದಾಸಸ್ವಾಮಿಗಳಲ್ಲಿ ಅವನ ಭಕ್ತಿವಿಶ್ವಾಸವು ಪೂರ್ಣವಾಗಿತ್ತು. ದೊಡ್ಡದೊಡ್ಡ ಪಂಡಿತರಾದ ಬ್ರಾಹ್ಮಣರಿಗೆ ಬಹಳ ಸಂಭಾವನೆಯನ್ನೂ ಉಂಬಳಿಯನ್ನೂ ಕೊಡುತ್ತಿದ್ದನು. ಸಮರ್ಥರ ಅಪ್ಪಣೆಯಂತೆ ಪ್ರತಿವರ್ಷ ಶ್ರಾವಣಮಾಸದಲ್ಲಿ ವೇದಶಾಸ್ತ್ರಾಧ್ಯಯನ ಮಾಡಿದ ಹೊಸಬ್ರಾಹ್ಮಣಯುವಕರ ಪರೀಕ್ಷೆಯನ್ನುತೆಗೆದುಕೊಂಡು, ಅವರವರ ಯೋಗ್ಯತೆಯಂತೆ ಭೂರಿದಕ್ಷಿಣೆಯನ್ನೂ ವರ್ಷಾಶನವನ್ನೂ ಗೊತ್ತುಮಾಡಿಕೊಡುವುದಕ್ಕೆ ಧರ್ಮಾಧ್ಯಕ್ಷನೆಂಬ ಒಬ್ಬ ಮಂತ್ರಿಯನ್ನೇ ನೇಮಿಸಿದ್ದನು. ಅವನ ಮುಖ್ಯ ಮಂತ್ರಿಯಾದ ಪೇಶ್ವೆಯು ಬ್ರಾಹ್ಮಣನೇ ಆಗಿದ್ದನು. ಲೂಟಿಗೆ ಹೋದಾಗ ಬ್ರಾಹ್ಮಣರನ್ನೂ ಹೆಂಗಸರನ್ನೂ ದೇವಸ್ಥಾನಗಳನ್ನೂ ತಡವಕೂಡದೆಂದು ತನ್ನ ದಂಡಿನವರಿಗೆ ಕಟ್ಟಪ್ಪಣೆಯನ್ನಿತ್ತಿದ್ದನು. ಬ್ರಾಹ್ಮಣರಲ್ಲಿ ಭಕ್ತಿವಿಶ್ವಾಸವುಳ್ಳ ಅರಸನು ಇದಕ್ಕೂ ಹೆಚ್ಚು ಮತ್ತೇನು ಮಾಡಬಹುದು?

೩. **ಪಿತೃಭಕ್ತಿ.** ತಾಯಿಯು ತಂದೆಯ ಅರ್ಧಾಂಗಿಯಾದ್ದರಿಂದ ಪಿತೃಶಬ್ದದಲ್ಲಿ ತಂದೆತಾಯಿಗಳಿಬ್ಬರ ಸಮಾವೇಶವಾಗುತ್ತದೆ.* ಪಂಡಿತ ಜದುನಾಥ ಸರ್ಕಾರರು ಶಿವಾಜಿಯು ಹುಟ್ಟಿದಂದಿನಿಂದ ತಂದೆಯ ಬಳಿಯಲ್ಲಿ ಎಂದೂ ಇರಲಿಲ್ಲೆಂತಲೂ ಶೀರಶಹನಂತೆ ಆಜೀವ ತಂದೆಯಿಂದ ಅಗಲಿದ್ದನೆಂತಲೂ ಬರೆಯುತ್ತಾರೆ. † ಆದರೆ ಕೇಳುಸಕರರ ಬರಹವು

---

* ಜಗತಃ ಪಿತರೌ ವಂದೇ ಪಾರ್ವತೀಪರಮೇಶ್ವರೌ॥ ರಘುವಂಶದ ಮೇಲಿನ ಮಲ್ಲಿನಾಥಟೀಕೆ.

† ಶಿವಾಜಿಯೂ ಅವನ ಕಾಲವೂ ಪುಟ ೨೨.

ಇದಕ್ಕೆ ವಿರುದ್ಧವಾಗಿರುತ್ತದೆ. ೧೬೪೧ ರಲ್ಲಿ ಶಹಾಜಿಯು ಜೀಜಾಬಾಯಿ ಸಿವಾಜಿಯರನ್ನು ವಿಜಾಪುರಕ್ಕೆ ತನ್ನ ಬಳಿಗೆ ಕರಿಸಿಕೊಂಡು ೨/೩ ವರ್ಷ ಇಟ್ಟುಕೊಂಡಿದ್ದನೆಂತಲೂ ಮುಂದೆ ೨೧ ವರ್ಷಗಳಾದ ಬಳಿಕ ಶಹಾಜಿಯು ತನ್ನ ಜಹಗೀರಾದ ಕರ್ನಾಟಕದಿಂದ ಬಂದು ಸಿವಾಜಿಯೊಡನೆ ೨ ತಿಂಗಳು ಪುಣೆಯಲ್ಲಿದ್ದು ಅವನ ಸಂಪತ್ತಿಯನ್ನೂ ದಂಡನ್ನೂ ಕೋಟಿಗಳನ್ನೂ ರಾಜ್ಯವ್ಯವಸ್ಥೆಯನ್ನೂ ನೋಡಿ ಹಿರಿಹಿರಿ ಹಿಗ್ಗಿದನೆಂತಲೂ ಕೇಳುಸಕರರು ಬರೆಯುತ್ತಾರೆ. * ಈ ಎರಡು ಭಿನ್ನಾಭಿಪ್ರಾಯಗಳೊಳಗೆ ಯಾವುದು ನಿಜವಾದ್ದೆಂದು ನಿಶ್ಚಯವಾಗಿ ಹೇಳಲಿಕ್ಕಾಗುವುದಿಲ್ಲ. ಏಕೆಂದರೆ ಇಬ್ಬರ ಅಭಿಪ್ರಾಯಗಳು ನಿರಾಧಾರವಾದ ಅನುಮಾನಗಳಾಗಿದ್ದು ಅವುಗಳಿಗೆ ಶಾಬ್ದಪ್ರಮಾಣವಿಲ್ಲ. ಅದು ಹೇಗೇ ಇರಲಿ. ನಮ್ಮ ಚರಿತ್ರನಾಯಕನಲ್ಲಿ ನಿಸ್ಸೀಮ ಮಾತೃಭಕ್ತಿಯು ಇತ್ತೆಂದು ಎಲ್ಲರೂ ಒಡಂಬಡಬಹುದು. ಜೀಜಾಬಾಯಿಯು ಬಹುಶಃ ರಾಜಕಾರ್ಯದಲ್ಲಿ ಕಯ್ಹಾಕುತ್ತಿದ್ದಿಲ್ಲ. ಪುರಾಣ ಪುಣ್ಯಕಥಾಶ್ರವಣ, ದೇವಬ್ರಾಹ್ಮಣ ಸೇವೆಯಲ್ಲೇ ಆಕೆಯು ತನ್ನ ಎಲ್ಲ ಕಾಲವನ್ನು ಕಳೆಯುತ್ತಿದ್ದಳು. ತನ್ನ ಮಗನು ಯಾವುದಾದರೊಂದು ರಾಜಕಾರ್ಯದ ಪ್ರಸ್ತಾಪವನ್ನು ತೆಗೆದರೆ, ಆಕೆಯು ಹೆದರದೆ ವೀರಮಾತೆಗೆ ಒಪ್ಪುವಂತಹ ಎದೆಗಾರಿಕೆಯ ಸಲಹೆಯನ್ನೇ ಕೊಡುತ್ತಿದ್ದಳು. ಸಿವಾಜಿಯು ಆಕೆಯ ಬಯಕೆಗಳನ್ನೆಲ್ಲ ಮನಮುಟ್ಟಿ ಪೂರೈಸುತ್ತಿದ್ದುದಲ್ಲದೆ, ಮನೆತನದ ಮಾತುಗಳಲ್ಲಿ ಆಕೆ ಉಗಳು ಹಾಕಿದ್ದನ್ನು ದಾಟುತ್ತಿದ್ದಿಲ್ಲ. ಒಮ್ಮೆ ಜೀಜಾಬಾಯಿಯು ಕೊಂಡಾನದ ಕೋಟೆಯನ್ನು ತನಗೆ ಕೊಡಬೇಕೆಂದು ಕೇಳಿದ ಕೂಡಲೆ, ತನ್ನ ಮಗನ ಮದುವೆಗೆ ಹೋದ ತಾನಾಜಿಯನ್ನು ಸಮಾರಂಭವನ್ನು ಬಿಡಿಸಿ ಕರಿಸಿ, ದಂಡಿನೊಡನೆ ಅವನನ್ನು ಕಳುಹಿಸಿ, ಆ ಕೋಟೆಯನ್ನು ಹಿಡಿದುಕೊಂಡು ಸಿವಾಜಿಯು ತನ್ನ ತಾಯಿಗೆ ಕೊಟ್ಟದ್ದು ವಾಚಕರ ನೆನಪಿನಲ್ಲಿರಬಹುದು.† ಸಾರಾಂಶ, ಪಂಢರಪುರದಲ್ಲಿದ್ದ ವಿಠೋಬನ ಪರಮಭಕ್ತನಾದ ಪುಂಡಲೀಕನ ಪಿತೃಭಕ್ತಿಯನ್ನೇ

---

* ಕೇಳುಸಕರ ೩ ನೆಯ ಭಾಗ ಪುಟ ೫೭–೬೪ ಮತ್ತು ೧೪ ನೆಯ ಭಾಗ ಪು. ೨೦೦–೨೦೭.

† ಹಿಂದೆ ೭ ನೆಯ ಪ್ರಕರಣ ಪುಟ ೧೭೭ ಅಡಿ ಟಿಪ್ಪಣಿ ನೋಡಿರಿ.

ನಮ್ಮ ಚರಿತ್ರನಾಯಕನು ತನ್ನ ಹೆಗ್ಗುರಿಯಾಗಿ ಇಟ್ಟುಕೊಂಡಿದ್ದನೆಂದರೆ ಅತಿಶಯೋಕ್ತಿಯಾಗಲಾರದು.

**೪. ಅಂತಃಕರಣ** ಅಥವಾ **ಮಮತೆ.** ಈ ವಿಷಯವಾಗಿ ಹೆಚ್ಚಿನ ಶಾಬ್ದಪ್ರಮಾಣಗಳು ದೊರೆಯುವುದಿಲ್ಲ. ಅವನ ಮೊದಲಿನ ಹೆಂಡತಿಯಾದ ಸಯಿಬಾಯಿಯ ಮೇಲೆ ಅವನ ಪ್ರೇಮವು ಅತಿಶಯವಾಗಿತ್ತೆಂದು ಮಾತ್ರ ಬಖೈರಕಾರರು ಬರೆಯುತ್ತಾರೆ. ಆದ್ದರಿಂದ ನಮ್ಮ ಚರಿತ್ರನಾಯಕನು ತನಗೆ ಹತ್ತಿಹೊಂದಿದವರನ್ನು ಪ್ರೀತಿಸುತ್ತಿದ್ದನೆಂದು ಸಾಮಾನ್ಯವಾಗಿ ಅನುಮಾನ ಮಾಡಬಹುದು. ತಾಯಿತಂದೆಗಳ ವಿಷಯವಾಗಿ ಅವನಲ್ಲಿದ್ದ ಪ್ರೀತಿಯನ್ನು ಮೇಲೆ ವಿವರಿಸಿರುತ್ತೇವೆ. ಅವನು ಹೆಂಡಂದಿರನ್ನು ಪ್ರೀತಿಸುತ್ತಿದ್ದರೂ ಅವರನ್ನು ತನ್ನ ಅಂಕೆಯಲ್ಲಿಟ್ಟುಕೊಂಡಿದ್ದನು. ತನ್ನ ಮಲತಮ್ಮನಾದ ವೆಂಕೋಜಿಯನ್ನು ಎಷ್ಟು ಪ್ರೀತಿಸುತ್ತಿದ್ದನೆಂಬುದು ಅವನಿಗೆ ತಿರುಗಿ ಕೊಟ್ಟ ರಾಜ್ಯದಿಂದಲೇ ಗೊತ್ತಾಗುತ್ತದೆ.* ಅವನು ತನ್ನ ಹಿರಿಮಗನಾದ ಸಂಭಾಜಿಯನ್ನು ಬಹಳ ಅಚ್ಚೆಯಿಂದ ಬೆಳಿಸಿ ಕೆಡಿಸಿದನೆಂದು ಹೇಳಬಹುದು.

**೫. ಪರಸ್ತ್ರೀಸಹೋದರತ್ವ.** ನಮ್ಮ ಚರಿತ್ರನಾಯಕನು ಅಕ್ಬರ ಬಾದಶಹನಂತೆ ಕಚ್ಚೆಹರಕನಾಗಿದ್ದಿಲ್ಲ. ಅವನು ಏಕಪತ್ನೀವ್ರತಸ್ಥನಾಗದಿದ್ದರೂ ಪರಸ್ತ್ರೀಯರೊಡನೆ ಒಡಹುಟ್ಟಿದವನಂತೆ ತಪ್ಪದೆ ನಡೆದುಕೊಳ್ಳುತ್ತಿದ್ದನು. ಅವನು ಇನ್ನೂ ಎಳೆಹರೆಯದಲ್ಲಿದ್ದಾಗ ಅವನ ಒಲುಮೆಯನ್ನು ಸಂಪಾದಿಸುವುದಕ್ಕೋಸ್ಕರ ಅವನ ದಳವಾಯಿಯಾದ ಆಬಾಜಿ ಸೋನದೇವನು ಒಬ್ಬ ಅತಿಸುಂದರಿಯಾದ ಯವನ ಯುವತಿಯನ್ನು ಕಾಣಿಕೆಯಾಗಿ ಅರ್ಪಿಸಲು, ಶಿವಾಜಿಯು ಆಕೆಯನ್ನು ಸ್ವೀಕರಿಸದೆ ಆಕೆಯ ಮಾವನ ಬಳಿಗೆ ಸುರಕ್ಷಿತವಾಗಿ ಕಳುಹಿದ್ದು ನಮ್ಮ ಪ್ರಿಯವಾಚಕರ ನೆನಪಿನಲ್ಲಿರಬಹುದು.† ಪಾತಿವ್ರತ್ಯವನ್ನು ಕೆಡಿಸುವುದು ಮಹಾಪಾತಕವೆಂಬ ಪುರಾಣೋಕ್ತಿಯು ಅವನ ಹೃದಯದಲ್ಲಿ ಆಳವಾಗಿ ನಟ್ಟಿತ್ತು. ಕಡ್ಡಾಯ

---

* ೧೦ ನೆಯ ಪ್ರಕರಣ ಪು. ೨೬೪–೬೭ ನೋಡಿರಿ.

† ೩ ನೆಯ ಪ್ರಕರಣ ಪು. ೪೬–೪೭ ನೋಡಿರಿ.

ದಿಂದ ಕುಲವತಿಯರನ್ನು ಕೆಡಿಸಿದವರಿಗೆ ಅವನು ತಪ್ಪದೆ ಕಠಿಣಶಿಕ್ಷೆಯನ್ನು ಕೊಡುತ್ತಿದ್ದನು. ನಮ್ಮ ಈ ಕರ್ನಾಟಕದ ವೀರವನಿತೆಯಾದ ಸಾವಿತ್ರವ್ವ ನನ್ನು ಅವಮಾನಗೊಳಿಸಿದ ಸಕ್ರೋಜಿ ಗಾಯಕವಾಡನ ಕಣ್ಣುಗಳನ್ನು ಕಿತ್ತಿಸಿ, ಅವನನ್ನು ಸೆರೆಯಲ್ಲಿಡಲಿಲ್ಲವೇ? * ತನ್ನ ಪ್ರೀತಿಯ ಮಗನಾದ ಸಂಬಾಜಿಯನ್ನು ಇದೇ ತರದ ತಪ್ಪಿಗಾಗಿ ಕಾವಲಲ್ಲಿರಿಸಲಿಲ್ಲವೇ? †

**೬-೯. ದಯಾ, ಉದಾರತನ, ಸೈರಣೆ, ಆತಿಥ್ಯ.** ಈ ನಾಲ್ಕು ಸದ್ಗುಣಗಳು ನಮ್ಮ ಚರಿತ್ರನಾಯಕನಲ್ಲಿ ನೆಲೆಗೊಂಡಿದ್ದವೆಂಬುದನ್ನು ಹಿಂದೆ ಕೊಟ್ಟ ಚರಿತ್ರೆಯನ್ನು ಓದಿದವರೆಲ್ಲರೂ ಒಪ್ಪಿಕೊಳ್ಳಬಹುದು. ಕಡು ಹಗೆಗಳಿಗೆ ಕಡುಕ್ರೂರನಾದರೂ ಶರಣಾಗತರಿಗೆ ಅವನು ದಯಾಶೀಲನೂ ಉದಾರನೂ ಆಗಿದ್ದನು. ನಿಜವಾಗಿ ಪಶ್ಚಾತ್ತಾಪಪಟ್ಟು ಮರೆಹೊಕ್ಕ ಎಷ್ಟೋ ಜನರನ್ನು ಅವನು ದಯವಿಟ್ಟು ಕ್ಷಮಿಸಿ, ಉದಾರಬುದ್ಧಿಯಿಂದ ಅವರವರಿಗೆ ಅವರವರ ಜಹಗೀರುಕೆಲಸಗಳನ್ನು ತಿರುಗಿ ಕೊಟ್ಟ ಉದಾ ಹರಣೆಗಳುಂಟು. ನೇತಾಜಿಪಾಲಕರನು ಸಿವಾಜಿಯನ್ನು ಬಿಟ್ಟು ಮೊಗಲ ರನ್ನು ಕೂಡಿ ಜಾತಿಯನ್ನು ಕಳಿಕೊಂಡು ನಾನಾತರದ ಕಷ್ಟಗಳಿಗೆ ಗುರಿ ಯಾಗಿ, ಪಶ್ಚಾತ್ತಾಪಪಟ್ಟು, ಮೊಗಲರನ್ನು ತೊರೆದು, ತಿರುಗಿ ಶರಣು ಬಂದಾಗ ಸಿವಾಜಿಯು ಅವನನ್ನು ಕ್ಷಮಿಸಿ ಮತ್ತೆ ತನ್ನ ಊಳಿಗದಲ್ಲಿಟ್ಟು ಕೊಳ್ಳಲಿಲ್ಲವೇ?

ಇಷ್ಟುಹೊತ್ತಿನ ವರೆಗೆ ನಮ್ಮ ಚರಿತ್ರನಾಯಕನಲ್ಲಿದ್ದ ಒಳಗುಣಗಳ ವರ್ಣನೆಯಾಯಿತು. ಈ ಗುಣಗಳು ಅವನ ಹೊರಗುಣಗಳ ಶಕ್ತಿಯನ್ನು ಬಹಳವಾಗಿ ಬೆಳಿಸಿ ಅವನ ವರ್ಚಸ್ಸನ್ನು ಅತಿಶಯವಾಗಿ ಹೆಚ್ಚಿಸಿದವೆಂಬ ಮಾತನ್ನು ಮರೆಯಕೂಡದು. ಅವನಲ್ಲಿದ್ದ ಹೊರಗುಣಗಳಾವವೆಂದರೆ:—೧ ಸ್ವಾಭಿಮಾನ, ೨ ಸ್ವಾತಂತ್ರ್ಯಪ್ರೀತಿ, ೩ ಬಂಧುಪ್ರೀತಿ, ೪ ದೃಢ ನಿಶ್ಚಯ, ೫ ಧರ್ಮಾಭಿಮಾನ, ೬ ಧೈರ್ಯ, ೭ ಶೌರ್ಯ, ೮ ಸಾಹಸ, ೯ ಕಷ್ಟಸಹಿಷ್ಣುತೆ, ೧೦ ಸಭ್ಯತೆ, ೧೧ ದೊಡ್ಡಮನಸ್ಸು, ೧೨ ಗುಣಗ್ರಹಣ, ೧೩ ನಿಷ್ಪಕ್ಷಪಾತ, ೧೪ ಕೃತಜ್ಞತಾ, ೧೫ ನ್ಯಾಯಬುದ್ಧಿ, ೧೬ ಪರಧರ್ಮ

* ೧೦ ನೆಯ ಪ್ರಕರಣ ಪು. ೨೬೯-೭೦. † ೧೧ ನೆಯ ಪ್ರಕರಣ ಪುಟ ೨೭೪.

ದ್ವೇಷಾಭಾವ, ೧೭ ಪ್ರಜಾವಾತ್ಸಲ್ಯ, ೧೮ ದೇಶಭಕ್ತಿ, ೧೯ ಉದ್ಯೋಗ, ೨೦ ಕಲ್ಪಕತೆ, ೨೧ ಬುದ್ಧಿಚಾತುರ್ಯ. ಈ ನಮ್ಮ ಚರಿತ್ರನಾಯಕನಲ್ಲಿದ್ದ ಹೊರಗುಣಗಳನ್ನು ಕೆಳಗೆ ತೋರಿಸಿದಂತೆ ನಾಲ್ಕು ವರ್ಗಗಳೊಳಗೆ ವಿಭಾಗಿಸಬಹುದು.

೧. ಇದ್ದರಾಜ್ಯವನ್ನು ಕಾಯ್ದುಕೊಂಡು ಹೊಸರಾಜ್ಯವನ್ನು ಗಳಿಸುವುದಕ್ಕೂ ಧರ್ಮಸಂರಕ್ಷಣೆಯನ್ನು ಮಾಡುವುದಕ್ಕೂ ಅವಶ್ಯವಾದ ಗುಣಗಳು–೧ ರಿಂದ ೯.

೨. ಕಯ್ಕೆಳಗಿನವರನ್ನು ಸಂತೋಷಗೊಳಿಸಿ ಅವರಲ್ಲಿ ಭಕ್ತಿವಿಶ್ವಾಸ ಪ್ರೀತಿಗಳನ್ನು ಹುಟ್ಟಿಸಿ, ಅವರಿಂದ ತನ್ನ ಕೆಲಸವನ್ನು ಹುರುಪಿನಿಂದ ಮಾಡಿಸಿಕೊಳ್ಳುವುದಕ್ಕೆ ಬೇಕಾದ ಗುಣಗಳು–೧೦ ರಿಂದ ೧೪.

೩. ಪ್ರಜಾರಂಜನೆಯನ್ನು ಮಾಡುವುದಕ್ಕೆ ಬೇಕಾದ ಗುಣಗಳು—೧೫ ರಿಂದ ೧೭.

೪. ಇವೆಲ್ಲ ಉದ್ದೇಶಗಳಿಗೆ ಅನುಕೂಲವಾದ ಗುಣಗಳು—೧೮ ರಿಂದ ೨೧.

ಈ ವಿಭಾಗವು ಸ್ಥೂಲಮಾನದ್ದೇ ಹೊರತು ಸೂಕ್ಷ್ಮವಾದುದಲ್ಲೆಂಬ ಮಾತನ್ನು ಮರೆಯಕೂಡದು. ಏಕೆಂದರೆ ಎಲ್ಲ ಸದ್ಗುಣಗಳು ಆತ್ಮದ ಸ್ಫುರಣಗಳಾದ್ದರಿಂದ ಅವು ಒಂದರೊಳಗೆ ಮತ್ತೊಂದು ಕಲಿತು ತೊಡಕಾಗಿರುತ್ತವೆ. ಅವುಗಳನ್ನು ಕುರಿತು ನಾವು ಮಾಡುವ ವಿಚಾರವು ಸುಬೋಧವಾಗಬೇಕೆಂಬ ಉದ್ದೇಶದಿಂದ ನಾವು ಅವುಗಳನ್ನು ತೀರ ಭಿನ್ನವಾದವುಗಳೆಂದು ಕಲ್ಪಿಸುತ್ತೇವೆ.

೧. ಸ್ವಾಭಿಮಾನವು* ಪ್ರತಿಯೊಬ್ಬ ಮನುಷ್ಯನ ಹುಟ್ಟುಗುಣವಾಗಿರುತ್ತದೆ ಅದು ಇಲ್ಲದವನು ಅಂದರೆ ಅದು ಅತ್ಯಲ್ಪಪ್ರಮಾಣದಲ್ಲಿಲ್ಲದವನು ಬದುಕಿದ್ದರೂ ಸತ್ತಹಾಗೆಯೇ ಸರಿ. † ಸ್ವಾಭಿಮಾನವು ಹೆಚ್ಚಾಗಿ ಬೆಳೆದು

* ಸ್ವ (=ತನ್ನ, ತನ್ನ ಆತ್ಮದ)+ಅಭಿಮಾನ (=ಪ್ರೀತಿ).

† ಅಭಿಮಾನೋ ಧನಮೇಷಾಂ ಚಿರಂ ಜೀವಂತು ತೇ ನರಾಃ ॥
ಅಭಿಮಾನವಿಹೀನಾನಾಂ ಕಿಂ ಧನೇನ ಕಿಮಾಯುಷಾ ॥ ಸುಭಾಷಿತ.

ಉಜ್ಜ್ವಲಸ್ವರೂಪವನ್ನು ಹೊಂದಿದರೆ, ಅದನ್ನು ಜನರು ದುರಭಿಮಾನ ವೆಂದಾಗಲಿ ಸ್ವಾತಂತ್ರ್ಯಪ್ರೀತಿಯೆಂದಾಗಲಿ ಕರೆಯುತ್ತಾರೆ. ಧೈರ್ಯ ಶೌರ್ಯಸಾಹಸ, ದೃಢನಿಶ್ಚಯ, ಕಷ್ಟಸಹಿಷ್ಣುತೆ, ಬಂಧುಪ್ರೀತಿ, ಧರ್ಮಾಭಿ ಮಾನ, ದೇಶಭಕ್ತಿ, ಬುದ್ಧಿಚಾತುರ್ಯ ಮುಂತಾದ ಗುಣಗಳ ಬೆಂಬಲ ವಿದ್ದ ಸ್ವಾಭಿಮಾನವು ಸ್ವಾತಂತ್ರ್ಯಪ್ರೀತಿಯಾಗಿ ಪರಿಣಮಿಸುತ್ತದೆ. ಈ ಗುಣಗಳೊಳಗೆ ಮುಖ್ಯವಾದ ಅಥವಾ ಬಹಳ ಗುಣಗಳ ನೆರವಿಲ್ಲದ ಒಣ ಸ್ವಾಭಿಮಾನವನ್ನು ಜನರು ದುರಭಿಮಾನವೆಂದು ಹಳಿಯುತ್ತಾರೆ. ಈ ಅವಶ್ಯವಾದ ಗುಣಗಳೆಲ್ಲ ಯಥೇಷ್ಟವಾಗಿ ನಮ್ಮ ಚರಿತ್ರನಾಯಕನಲ್ಲಿ ನೆಲೆಗೊಂಡುದರಿಂದ ಅವನ ಸ್ವಾಭಿಮಾನವು ಬೆಳೆದು ಸ್ವಾತಂತ್ರ್ಯಪ್ರೀತಿ ಯಾಗಿ ಒಪ್ಪಿತು. ಅವನ ತಂದೆಯಾದ ಶಹಾಜಿಯಲ್ಲಿ ಧೈರ್ಯಶೌರ್ಯ ಸಾಹಸಾದಿ ಗುಣಗಳಿದ್ದರೂ ಬಂಧುಪ್ರೀತಿ, ಧರ್ಮಾಭಿಮಾನ, ದೇಶಭಕ್ತಿ, ಕಷ್ಟಸಹಿಷ್ಣುತಾ ಕಲ್ಪಕತೆ ಮುಂತಾದ ಗುಣಗಳು ಇಲ್ಲುದರಿಂದ ಅವನು ಸ್ವರಾಜ್ಯಕ್ಕಾಗಿ ಹೋರಾಡದೆ ಆದಿಲ್ಶಹನ ಆಳಾಗಿ ಐಹಿಕಸುಖೋಪ ಭೋಗಕ್ಕೆ ಮೆಚ್ಚಿ ಮರುಳಾದನು. ಆಕಾಲದಲ್ಲಿದ್ದ ಉಳಿದ ಹಿಂದು ಸರ ದಾರರಾಗಲಿ ಜಹಗೀರದಾರರಾಗಲಿ ದಾಸ್ಯತ್ವದಲ್ಲಿ ಮುಳುಗಿ ಕೆಸರಿನಲ್ಲಿ ಉರುಳಾಡುವ ಕತ್ತೆಯಂತೆ ತಮಗೆ ದೊರೆತ ಸುಖೋಪಭೋಗದಲ್ಲಿ ತಣಿ ಯಾಗಿದ್ದರೇ ಹೊರತು ಸ್ವಾತಂತ್ರ್ಯಕ್ಕೋಸ್ಕರ ಹೆಣಗಿ ಹೋರಾಡುವಷ್ಟು ಕರ್ತೃತ್ವಶಕ್ತಿಯುಳ್ಳವರಾಗಿದ್ದಿಲ್ಲ ಆದ್ದರಿಂದ ಸೂರ್ಯನು ತನ್ನ ಉಜ್ವಲ ಪ್ರಕಾಶದಿಂದ ಎಲ್ಲ ಚಿಕ್ಕಿಗಳ ಬೆಳಕನ್ನು ಅಡಗಿಸುವಂತೆ ನಮ್ಮ ಚರಿತ್ರ ನಾಯಕನು ತನ್ನ ಉಚ್ಚತಮವಾದ ಸ್ವಾತಂತ್ರ್ಯಪ್ರೀತಿಯಿಂದ ಉಳಿದ ಎಲ್ಲ ಪ್ರಮುಖರ ಒಡೆಯನಾಗಿ, ಸ್ವರಾಜ್ಯವನ್ನು ಸ್ಥಾಪಿಸಿ, ಹೆಸರುವಾಸಿ ಯಾದನು. ಮೋಡಗಳು ಸೂರ್ಯನ ಬೆಳಕನ್ನು ಮುಚ್ಚಿಬಿಡುವಂತೆ ಪ್ರತಿಕೂಲ-ಪರಿಸ್ಥಿತಿಯು ಅವನ ಸ್ವಾತಂತ್ರ್ಯಪ್ರೀತಿಯನ್ನು ಕುಗ್ಗಿಸದೆ ಇದ್ದುದು ಅವನ ಪೂರ್ವಜನ್ಮದ ಪುಣ್ಯದ ಫಲವೇ ಸರಿ.

ಸ್ವಾಭಿಮಾನವು ಹುಟ್ಟುಗುಣವಾಗಿದ್ದರೆ ಮತ್ತು ಸ್ವಾತಂತ್ರ್ಯ ಪ್ರೀತಿಯು ಅದರ ಬೆಳೆಗೆಯೇ ಆದರೆ, ಕಳೆದ ೨೪೦ ವರ್ಷಗಳಲ್ಲಿ ಭರತ

ಖಂಡದ ೩೨ ಕೋಟಿ ಪ್ರಜೆಗಳಲ್ಲಿ ಸಿವಾಜಿಯಷ್ಟು ಕರ್ತೃತ್ವಿಯೂ ವರ್ಚ
ಸ್ವಿಯೂ ಆದ ಮಹಾಪುರುಷನು ಒಬ್ಬನಾದರೂ ಏಕೆ ಹುಟ್ಟಲಿಲ್ಲ ಎಂದು
ಕೆಲವರು ಆಕ್ಷೇಪಿಸಬಹುದು. ಈ ಆಕ್ಷೇಪಣೆಗೆ ಉತ್ತರವೇನಂದರೆ:—
ಕಳೆದ ೨೫೦ ವರ್ಷಗಳಲ್ಲಿ ಸಿವಾಜಿಯಲ್ಲಿದ್ದ ಎಲ್ಲ ಗುಣಗಳುಳ್ಳವರು ಎಷ್ಟೋ
ಮಂದಿ ಆಗಿ ಹೋದರು ಮತ್ತು ಈಗಲಾದರೂ ಅಂತಹವರು ಎಷ್ಟೋ
ಮಂದಿ ಇರುತ್ತಾರೆ. ಆದರೆ ನಮ್ಮ ಚರಿತ್ರನಾಯಕನಿಗೆ ಆ ಕಾಲಕ್ಕೆ ಅನು
ಕೂಲವಿದ್ದ ಪೊಲಬು ಅಥವಾ ಪರಿಸ್ಥಿತಿಯು ಈ ಕಾಲಕ್ಕೆ ಅವರಿಗೆ ಅನು
ಕೂಲವಿಲ್ಲ. ಆದ್ದರಿಂದ ಅಂತಹ ಮಹಾಪುರುಷರ ಸ್ವಾಭಿಮಾನವು
ಸ್ವಾತಂತ್ರ್ಯಪ್ರೀತಿಯು ಅವಸ್ಥೆಯನ್ನು ಹೊಂದಿದ ಕೂಡಲೆ ಅವರು ಕರಿ
ನೀರಿನಲ್ಲಾಗಲಿ ಹೊಲಸು ಸೆರೆಮನೆಗಳಲ್ಲಾಗಲಿ ತಮ್ಮ ಉಳಿದ ಆಯು
ಸ್ಸನ್ನು ಕಳೆಯಬೇಕಾಗುತ್ತದೆ ಅಥವಾ ಗಲ್ಲಿಗೇರಿ ತಮ್ಮ ಕುತ್ತಿಗೆಯನ್ನು
ಕೊಯ್ಸಿಕೊಳ್ಳಬೇಕಾಗುತ್ತದೆ. ಗಲ್ಲಿಗೇರಿದವರಾಗಲಿ ಸೆರೆಮನೆ ಸೇರಿದವ
ರಾಗಲಿ ಎಲ್ಲರೂ ಸಿವಾಜಿಯ ಯೋಗ್ಯತೆಯವರೆಂದು ಸರ್ವಥಾ ತಿಳಿಯ
ಕೂಡದು. ಅವರೊಳಗೆ ಅತಿ ಸ್ವಲ್ಪ ಜನರು ಮಾತ್ರ ಅಂತಹ ತಕ್ಕುಮೆ
ಯುಳ್ಳವರಾಗಿರುತ್ತಾರೆಂಬುದೇ ನಮ್ಮ ಅಭಿಪ್ರಾಯವು. ಉಳಿದ ಅಳ್ಳೆದೆ
ಯವರಾದ ಕೆಲವರು ಇಂತಹ ಬಂದುಕಟ್ಟಿನ ಮತ್ತು ಜಾಗರೂಕವಾದ
ಬಲಾಢ್ಯಸರಕಾರದಲ್ಲಿ ಸ್ವಾತಂತ್ರ್ಯವಿಚಾರಕ್ಕೆ ಏನು ಪ್ರತಿಫಲದೊರೆಯುತ್ತ
ದೆಂಬುದನ್ನು ಮುಂಗಂಡು, ಜನರ ಮನಸ್ಸಿನಲ್ಲಿ ತಮ್ಮ ವಿಚಾರಗಳನ್ನು
ಬಿಂಬಿಸುವುದರಲ್ಲಾಗಲಿ ದೇವತಾಪ್ರಾರ್ಥನೆಯಲ್ಲಾಗಲಿ ತಮ್ಮ ಕಾಯಿಕ
ಶಕ್ತಿಬುದ್ಧಿ-ಧನಾಯುಷ್ಯಗಳನ್ನು ಕಳೆಯುತ್ತಾರೆ.

೧೭ ನೆಯ ಶತಮಾನದಲ್ಲಿ ಭರತಖಂಡವೆಂಬ ರಂಗಭೂಮಿಯಲ್ಲಿ
ಅತಿಬಲಾಢ್ಯನೂ ಸ್ವಾರ್ಥಪರನೂ ಸಂಶಯಪಿಶಾಚಿಯೂ ಆದ ಅವ
ರಂಗಜೇಬ ಬಾದಶಹನೂ, ಜೇನೆಕೊಳಕನಾದ ಆದಿಲ್ಶಹನೂ, ಹೇಡಿಯೂ
ಸೋಮಾರಿಯೂ ಆದ ಕುತುಬಶಹನೂ, ಚುಳಕನೂ ಜಾಣನೂ ಆದ
ಟನೂ ಕೆಚ್ಚೆದೆಯವನೂ ಆದ ನಮ್ಮ ಚರಿತ್ರನಾಯಕನೂ ಮುಖ್ಯಪಾತ್ರ
ಗಳಾಗಿದ್ದರು; ಮತ್ತು ಯೂರೋಪೀಯ ವರ್ತಕರೂ ಆಫ್ರಿಕೆಯ ಸಿದ್ಧಿ

ಗಳೂ ಉಪಪಾತ್ರಗಳಾಗಿದ್ದರು. ಸುರತ, ಮುಂಬಯಿ, ರಾಜಾಪುರ ವೊದ
ಲಾದ ಸ್ಥಳಗಳಲ್ಲಿ ತಮ್ಮ ಅಂಗಡಿಗಳನ್ನಿಟ್ಟುಕೊಂಡು ಆಯಾ ಅರಸರ
ಒಲುಮೆಯಂತೆ ನಡೆಕೊಂಡು ದೂರದೃಷ್ಟಿಯಿಂದಲೂ ತಾಳ್ಮೆಯಿಂದಲೂ
ಜಾಣತನದಿಂದಲೂ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಿರುವ ಇಂಗ್ಲಿ
ಷರು ಈ ಪುಣ್ಯಭೂಮಿಯ ಸಾರ್ವಭೌಮರಾಗುವರೆಂದು ಆ ಕಾಲದ
ನಮ್ಮ ಪೂರ್ವಜರ ಕನಸುಮನಸಿನಲ್ಲಾದರೂ ಬಂದಿರಲಿಕ್ಕಿಲ್ಲ!!! ಅದಿ
ರಲಿ, ಅದಿಲ್ಶಾಹಿಯು ಮುರಕಳಿಗೆ ಬಂದುದರಿಂದ ಅದಕ್ಕೆ ಆಧಾರಸ್ತಂಭ
ರಾದ ಸರದಾರರೆಲ್ಲ ತಂತಮ್ಮ ಸ್ವಾರ್ಥವನ್ನೇ ನೋಡುತ್ತಿದ್ದರೇ ಹೊರತು
ಆ ಅರಸುಮನೆತನದ ಹಿತಕ್ಕೋಸ್ಕರ ಮನಮುಟ್ಟಿ ದುಡಿಯುತ್ತಿದ್ದಿಲ್ಲ.
ಆದ್ದರಿಂದ ಕರ್ತೃತ್ವಶಾಲಿಯಾದ ನಮ್ಮ ಚರಿತ್ರನಾಯಕನಿಗೆ ಆ ಅದಿಲ್ಶಾ
ಹಿಯ ಸರದಾರರನ್ನು ತನ್ನ ಕಡೆಗೆ ಒಡೆಕೊಂಡು, ಹೊತ್ತು ಬಂದಾಗ
ಆ ರಾಜ್ಯವನ್ನು ತುಂಡರಿಸಿ, ಅದರ ತುಣಕುಗಳನ್ನು ನುಂಗುವುದಕ್ಕೆ ಅನು
ಕೂಲವಾಯಿತು. ಕುತುಬಶಾಹಿಗೆ ಪ್ರಬಲವಾದ ಸಂಧಿವಾತವಿಕಾರವಾ
ಗಿದ್ದುದರಿಂದ ಅದರ ಚಲನವಲನವು ಬಹಳವಾಗಿ ಕುಗ್ಗಿತ್ತು. ಆದಕಾರಣ
ನಮ್ಮ ಚರಿತ್ರನಾಯಕನು ನಯಭಯದಿಂದ ಅನಾಯಾಸವಾಗಿ ಅದ
ರಿಂದ ವಾರ್ಷಿಕ ಕಪ್ಪುಗಾಣಿಕೆಗಳನ್ನೂ ಕರ್ನಾಟಕದ ದಂಡಯಾತ್ರೆಗೆ
ಬೇಕಾಗಿದ್ದ ತೋಫಖಾನೆಯನ್ನೂ ಹೇರಳ ಹಣವನ್ನೂ ಸುಲಭವಾಗಿ
ಉಚ್ಚಿಕೊಂಡನು. ದಿಲ್ಲಿ ಬಾದಶಹನಿಂದ ಮಾತ್ರ ನಮ್ಮ ಚರಿತ್ರ
ನಾಯಕನು ಎಷ್ಟೋ ಕಷ್ಟನಷ್ಟಗಳನ್ನು ಅನುಭೋಗಿಸಬೇಕಾಯಿತು.
ಅವನ ಸ್ವಾಭಿಮಾನ-ಸ್ವಾತಂತ್ರ್ಯಪ್ರೀತಿಗಳು ಉಜ್ವಲಾವಸ್ಥೆಯಲ್ಲಿದ್ದುದ
ರಿಂದ ಆ ಕಷ್ಟನಷ್ಟಗಳಿಂದ ಅವನ ಹುರಪು ಕುಗ್ಗದೆ ಇಮ್ಮಡಿಸಿತು.
ಅಪ್ರತಿಮವಾದ ಉದ್ಯೋಗಬುದ್ಧಿಸಾಹಸಪರಾಕ್ರಮವುಳ್ಳ ಅವರಂಗಜೇಬ
ಬಾದಶಹನ ತುಂಬಿದ ದರಬಾರಿನಲ್ಲಿ ತನಗೆ ಆದ ಅಪಮಾನಕ್ಕೋಸ್ಕರ
ಗದ್ದಲವನ್ನೆಬ್ಬಿಸಿದ ನಮ್ಮ ಚರಿತ್ರನಾಯಕನ ಸ್ವಾಭಿಮಾನಧೈರ್ಯಗಳಿಗೆ
ಎಣೆಯುಂಟೇ? ಹೆಗ್ಗಾವಲಿನಲ್ಲಿರಿಸಿ ಬಲೆಚ್ಚರಿಕೆಯಿಂದ ಕಾಯುತ್ತಿರು
ವಾಗ ಎಲ್ಲರ ಕಣ್ಣಿಗೂ ಇಂಗುಹಚ್ಚಿ, ತಪ್ಪಿಸಿಕೊಂಡು ಜಾರಿದ ನಮ್ಮ
ಚರಿತ್ರನಾಯಕನ ಬುದ್ಧಿಚಾತುರ್ಯಧೈರ್ಯಸಾಹಸಗಳಿಗೆ ತಲೆದೂಗದವ

ರಾರು? ಬೈರಾಗಿವೇಷದಿಂದ ಓಡಿಹೋಗುತ್ತಿರುವಾಗ ಒಬ್ಬ ಮುಸಲ್ಮಾನ ಅಧಿಕಾರಿಯು ಸಂಶಯದಿಂದ ಅವನನ್ನು ತಡೆಯಲು, ಇರಳಿನಲ್ಲಿ ತಾನೊಬ್ಬನೇ ಆ ಅಧಿಕಾರಿಯ ಬಳಿಗೆ ಹೋಗಿ, ತಾನೇ ಅವನು ಹುಡುಕುವ ಸಿವಾಜಿಯೆಂದು ಹೇಳಿ, ಅವನಿಗೆ ಯಥೇಷ್ಟವಾಗಿ ಲಂಚಕೊಟ್ಟು, ಪಾರಾದವನ ಕೆಚ್ಚೆದೆಯನ್ನು ಯಾರು ತಾನೇ ಹೊಗಳಲಿಕ್ಕಿಲ್ಲ? ಇಂತಹ ಬಲು ಬಂದುಕಟ್ಟಿನ ಬಾದಶಾಹಿಯಲ್ಲಿ ಕೂಡ ಮೆಯ್ತುಂಬ ಕಣ್ಣುಳ್ಳ ಅವರಂಗಜೇಬ ಬಾದಶಹನ ಆಳಿಕೆಯಲ್ಲಿಕೂಡ ನಮ್ಮ ಚರಿತ್ರನಾಯಕನಿಗೆ ಸ್ವಲ್ಪಕಾಲ ಅನುಕೂಲವಾದ ಪರಿಸ್ಥಿತಿಯು ದೊರೆಯಿತೆನ್ನಬಹುದು. ೧೬೫೭,೫೮,೫೯ ಈ ಮೂರು ವರ್ಷಗಳಲ್ಲಿ ಅವರಂಗಜೇಬನು ದಿಲ್ಲಿಯ ಪಟ್ಟದ ಸಲುವಾಗಿ ನಡೆದ ಜಗಳದಲ್ಲಿ ತೊಡಗಿದ್ದರಿಂದ ನಮ್ಮ ಚರಿತ್ರನಾಯಕನಿಗೆ ತನ್ನ ರಾಜ್ಯವನ್ನು ಬೆಳಿಸಿಕೊಳ್ಳಲಿಕ್ಕೆ ಅನುವು ದೊರೆಯಲಿಲ್ಲವೇ? ೧೬೬೪ ರಲ್ಲಿ ದಕ್ಷಿಣದ ಸುಬೇದಾರನಾಗಿ ಬಂದ ಮುಜಮ್ಮಶಹನು ನಮ್ಮ ಚರಿತ್ರನಾಯಕನಿಗೆ ಅನುಕೂಲನಾಗಿರಲಿಲ್ಲವೇ? ನಮ್ಮ ಚರಿತ್ರನಾಯಕನು ಆಗ್ರಾದಿಂದ ನುಸುಳಿದ ಬಳಿಕ ಪರೆಯುಚ್ಚಿದ ಹಾವಿನಂತೆ ನಿರ್ಭೀತನಾಗಲಿಲ್ಲವೇ? ೧೬೬೭ ರಲ್ಲಿ ಮುಜಮ್ಶಹ–ಯಶವಂತ ಸಿಂಗರು ೨ ನೆಯ ಸಾರಿ ದಕ್ಷಿಣಸುಬೆಗೆ ಬರಲು, ಅವನಿಗೆ ಮತ್ತೆ ಚಲ್ಲಾಟವಾಗಲಿಲ್ಲವೇ? ಯಶವಂತಸಿಂಗ–ದಿಲೀರಖಾನರ ಬಡಿದಾಟವು ಅವನಿಗೆ ಲಾಭಕರವಾಗಲಿಲ್ಲವೇ? ಮುಂದೆ ೧೬೭೧ ರಲ್ಲಿ ಮೊಗಲರ ದಳವಾಯಿಗಳಾದ ದಾವುದಖಾನ–ಮುಹಬತ್ಖಾನರು ತಮತಮ್ಮೊಳಗೆ ಜಗಳವಾಡ ತೊಡಗಿದ್ದರಿಂದ ನಮ್ಮ ಚರಿತ್ರನಾಯಕನಿಗೆ ಮೊಗಲರ ರಾಜ್ಯವನ್ನು ಸುಲಿಯಲಿಕ್ಕೆ ಅನುವು ದೊರೆಯಲಿಲ್ಲವೇ? ಮುಂದೆ ನಮ್ಮ ಚರಿತ್ರನಾಯಕನ ಸುದೈವದಿಂದ ಸತ್ನಾಮಿಯವರ ಬಂಡೂ ಅಫಗಾಣಿಸ್ಥಾನದ ಯುದ್ಧವೂ ಆರಂಭವಾದ್ದರಿಂದ ಬಾದಶಹನು ದಕ್ಷಿಣದಲ್ಲಿದ್ದ ಹೆಚ್ಚಿನ ದಂಡನ್ನೂ ದಿಲೀರಖಾನನೆಂಬ ಶೂರದಳವಾಯಿಯನ್ನೂ ಉತ್ತರ ಹಿಂದುಸ್ಥಾನಕ್ಕೆ ಕರಿಸಿಕೊಂಡನು. ಆದಕಾರಣ ದಕ್ಷಿಣದ ಸುಬೇದಾರನು ನಿರುಪಾಯನಾಗಿ ಕಯ್ಮುಚ್ಚಿಕೊಂಡು ಕೂಡ್ರಬೇಕಾದ್ದರಿಂದ ನಮ್ಮ ಚರಿತ್ರನಾಯಕನಿಗೆ ವಿಜೃಂಭಣೆಯಿಂದ ಪಟ್ಟಾಭಿಷೇಕಮಾಡಿಸಿಕೊಳ್ಳಲಿಕ್ಕೆ

ತಕ್ಕ ಬಿಡುವು ದೊರೆಯಲಿಲ್ಲವೇ? ತರುವಾಯ ದಿಲೀರಖಾನನು ಅದಿಲ್ಶಾಹಿ ಯೊಡನೆ ಕಾಲುಕೆದರಿ ಜಗಳತೆಗೆದು ತಿಳಿಗೇಡಿತನದಿಂದ ವಿಜಾಪುರವನ್ನು ಮುತ್ತಿದ್ದರಿಂದ, ನೆಲಕ್ಕೆ ಹಾಕಿದ ಅದಿಲ್ಶಾಹಿಯಿಂದ ಊರು ಹಣ ದಂಡಾಳುಗಳನ್ನು ಹೀರುವುದಕ್ಕೆ ನಮ್ಮ ಚರಿತ್ರನಾಯಕನಿಗೆ ಸಂಧಿ ದೊರೆಯಲಿಲ್ಲವೇ? ಸಾರಾಂಶ, ದೇವರು ನಮ್ಮ ಚರಿತ್ರನಾಯಕನ ಸ್ವಾತಂತ್ರ್ಯಪ್ರೀತಿಯನ್ನು ಆಗಿಂದಾಗ ಪರೀಕ್ಷಿಸಿ, ಅವನ ದೃಢನಿಶ್ಚಯ ವನ್ನು ನೋಡಿ, ಮನಗಂಡು ಮೆಚ್ಚಿ, ಅವನಿಗೆ ರಾಜಕೀಯ ಅನುಕೂಲತೆ ಗಳನ್ನು ಮಾಡಿಕೊಟ್ಟು, ಸ್ವರಾಜ್ಯವನ್ನು ಸ್ಥಾಪಿಸುವುದಕ್ಕೆ ನೆರವಾದನೆಂದು ಧಾರಾಳವಾಗಿ ಹೇಳಬಹುದು.

೧೭ ನೆಯ ಶತಮಾನದಲ್ಲಿ ನಮ್ಮ ಚರಿತ್ರನಾಯಕನ ಸ್ವಾತಂತ್ರ್ಯ ಪ್ರೀತಿಗೆ ಅನುಕೂಲವಾಗಿ ಆ ಕಾಲದ ಪರಿಸ್ಥಿತಿಯು ಅಥವಾ ಪೊಲಬು ಇತ್ತೆಂದು ಹಿಂದೆ ಬರೆದೆವಷ್ಟೆ. ಆ ಪೊಲಬು ನಾಲ್ಕು ಪ್ರಕಾರದ್ದಾಗಿತ್ತು. ೧ ರಾಜಕೀಯ, ೨ ನೈತಿಕ, ೩ ಧಾರ್ಮಿಕ, ೪ ಸಾಮಾಜಿಕ ಈ ಪ್ರಕಾರ ಗಳಲ್ಲಿ ರಾಜಕೀಯ ಪೊಲಬು ನಮ್ಮ ಚರಿತ್ರನಾಯಕನಿಗೆ ಎಷ್ಟುಮಟ್ಟಿಗೆ ಅನುವಾಗಿತ್ತೆಂಬುದನ್ನು ಮೇಲೆ ತಕ್ಕಮಟ್ಟಿಗೆ ವಿವರಿಸಿರುತ್ತೇವೆ. ಇನ್ನು ಉಳಿದ ಮೂರು ಪೊಲಬುಗಳು ಅವನ ಸ್ವಾತಂತ್ರ್ಯಪ್ರೀತಿಯ ಮೂರ್ತ ಸ್ವರೂಪವಾದ ಸ್ವರಾಜ್ಯಸ್ಥಾಪನೆಯ ಹೆಬ್ಬಯಕೆಯನ್ನು ಈಡೇರಿಸುವುದಕ್ಕೆ ಯಾವ ಯಾವ ಬಗೆಯಿಂದ ಎಷ್ಟೆಷ್ಟು ಅನುಕೂಲವಾಗಿದ್ದವೆಂಬುದನ್ನು ವಿಚಾರಿಸುವಾ.

ಇತಿಹಾಸ-ಶಾಸ್ತ್ರವು ೧೯ ನೆಯ ಶತಮಾನದಲ್ಲಿ ಹುಟ್ಟಿದ್ದರಿಂದ ೧೭ನೆಯ ಶತಮಾನದಲ್ಲಿ ಅದು ಗರ್ಭದಲ್ಲೇ ಇತ್ತೆಂದು ಹೇಳಬಹುದು. ಆದ್ದರಿಂದ ಆಕಾಲದ ಬರಹಗಳಲ್ಲಿ ರಾಜಕೀಯ ಸಂಗತಿಗಳು ಮಾತ್ರ ತುಂಬಿರುತ್ತವೆ ಹೊರತು ನೈತಿಕ, ಧಾರ್ಮಿಕ, ಸಾಮಾಜಿಕ ಸಂಗತಿಗಳ ದಿಗ್ದರ್ಶನ ಕೂಡ ಇರುವುದಿಲ್ಲ. ಇಂತಹ ಸಂದುಕಟ್ಟಿನಲ್ಲಿ, ಪ್ರತ್ಯಕ್ಷಶಾಬ್ದ ಪ್ರಮಾಣಗಳ ಅಭಾವವಿದ್ದುದರಿಂದ ಅನುಮಾನ ಪ್ರಮಾಣವೊಂದೇ ನಮಗೆ ಗತಿಯಾಗಿರುತ್ತದೆ. ಆದಕಾರಣ ಈ ಉಪಲಬ್ಧ ಸಾಧನವನ್ನು ಬಲು

ಎಚ್ಚರದಿಂದಲೂ ಪೂರ್ಣವಿಚಾರದಿಂದಲೂ ಉಪಯೋಗಿಸಿಕೊಳ್ಳುವುದು ನಮ್ಮ ಅತಿಪವಿತ್ರ ಕರ್ತವ್ಯವಾಗಿರುತ್ತದೆ. ಈ ಅನುಮಾನಗಳ ವಿಷಯವಾಗಿ ಭಿನ್ನಾಭಿಪ್ರಾಯಗಳು ತಲೆದೋರುವ ಸಂಭವವು ಇರುವುದರಿಂದ ಅವುಗಳೊಳಗೆ ಸರಿಯಾದವು ಯಾವುವೆಂಬುದನ್ನು ವಾಚಕಮಹಾಶಯರೇ ನಿರ್ಣಯಿಸಬಹುದು.

೫೦೦ ವರ್ಷಗಳ (೧೨ ರಿಂದ ೧೭ ನೆಯ ಶತಮಾನದ ವರೆಗೆ) ಮುಸಲ್ಮಾನರ ಆಳಿಕೆಯಿಂದ ನಮ್ಮ ಆರ್ಯಸಂಸ್ಕೃತಿಯು ಮುಕ್ಕಾಯಿತೆ ಹೊರತು ಈಗಿನಂತೆ ಮೃತಪ್ರಾಯವಾಗಿದ್ದಿಲ್ಲ. ಈಗ ನಮ್ಮನ್ನಾಳುವ ಬ್ರಿಟಿಶರಷ್ಟು ಮುಸಲ್ಮಾನರು ಜಾಣರೂ ಯುಕ್ತಿವಂತರೂ ದೀರ್ಘದೃಷ್ಟಿಗಳೂ ಆಗಿರಲಿಲ್ಲ. ಅವರು ಯುಕ್ತಿಗಿಂತ ಶಕ್ತಿಯನ್ನೇ ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಆದ್ದರಿಂದ ಅವರ ಆಳಿಕೆಯಲ್ಲಿ ನಮ್ಮ ಈ ಪ್ರಿಯಮಾತೃಭೂಮಿಯಲ್ಲಿ ಭೌತಿಕಕ್ರಾಂತಿಯಾಗಿತ್ತೇ ಹೊರತು ಮಾನಸಿಕ ಕ್ರಾಂತಿಯುಂಟಾಗಿದ್ದಿಲ್ಲ. ಆ ಕಾಲದಲ್ಲಿದ್ದ ಬ್ರಹ್ಮಕ್ಷತ್ರಿಯವೈಶ್ಯಶೂದ್ರವರ್ಣದವರಾದ ನಮ್ಮ ಪೂರ್ವಜರು ತಂತಮ್ಮ ವರ್ಣಾಶ್ರಮಧರ್ಮಗಳನ್ನು ಬಹು ಮಟ್ಟಿಗೆ ನಿಷ್ಠೆಯಿಂದ ಪಾಲಿಸುತ್ತಿದ್ದರು. ಈಗಿನಂತೆ ಆಗ ಬ್ರಾಹ್ಮಣರು ದುಡ್ಡಿನಾಸೆಗೊಳಗಾಗಿ ಕ್ರೂರಾಧಿಕಾರಕ್ಕೆ ಮೆಚ್ಚಿ ಸರಕಾರದ ಕೆಲಸಗಳಿಗೆ ಮೇಲಾಡಿ ತಮ್ಮ ಬ್ರಾಹ್ಮಣಧರ್ಮವನ್ನು ಬಿಟ್ಟು ಶೂದ್ರಪ್ರಾಯರಾಗಿದ್ದಿಲ್ಲ. ಅವರು ವಾಡಿಕೆಯಾಗಿ ಷಟ್ಕರ್ಮನಿರತರಾಗಿಯೂ * ಲೋಭರಹಿತರಾಗಿಯೂ ಧನನಿಸ್ಪೃಹರಾಗಿಯೂ ಅಧ್ಯಾಪನಾಧ್ಯಯನ ದೇವತಾಸೇವಾತತ್ಪರರಾಗಿಯೂ ಇದ್ದುದರಿಂದ ಉಳಿದ ವರ್ಣದವರ ಪೂಜ್ಯತೆಗೆ ಪಾತ್ರರಾಗಿದ್ದರು. ಬ್ರಾಹ್ಮಣರು ಸರಕಾರದ ಉದ್ಯೋಗದಲ್ಲಿ ಸೇರುವುದು ಅಪವಾದವಾಗಿತ್ತೇ ಹೊರತು ಸಾಮಾನ್ಯ ನೇಮವಾಗಿದ್ದಿಲ್ಲ. ಪೇಶವೆ ಪಂಡಿತರಾವ ದಾನಾಧ್ಯಕ್ಷ ಮುಂತಾದ ಬ್ರಾಹ್ಮಣರು ತಮಗೆ ಅನುಗುಣವಾದ ರಾಜಕೀಯ ಉದ್ಯೋಗದಲ್ಲಿ ತೊಡಗಿದ್ದರೂ ಆ ಕಾಲದ ಬ್ರಾಹ್ಮಣರು ಈಗಿನಂತೆ ೧೫ ಅಥವಾ ೨೫

---

* ಅಧ್ಯಾಪನಮಧ್ಯಯನಮ್ ಯಜನಮ್ ಯಾಜನಮ್ ತಥಾ।
ದಾನಮ್ ಪ್ರತಿಗ್ರಹಶ್ಚೈವ ಷಟ್ಕರ್ಮಾಣ್ಯಗ್ರಜನ್ಮನಃ॥ ಮನುಸ್ಮೃತಿ.

ರೂಪಾಯಿ ಸಂಬಳವುಳ್ಳ ಕಾರಕೂನಿಗೂ ಸಿಂದಿಸರಾಯಿ ಖಾತೆಯ ನೌಕರಿಗೂ ಟಪಾಲ ಸಿಪಾಯಿ ಮುಂತಾದ ಸಿಪಾಯಿಗಿರಿಗೂ ಮೆಚ್ಚಿ ಮರುಳಾಗಿ ಮೇಲಾಡುತ್ತಿದ್ದಿಲ್ಲ. ಪರಶುರಾಮನು ೨೧ ಸಾರಿ ಕ್ಷತ್ರಿಯರನ್ನು ಸಂಹರಿಸಿದ್ದರೂ ಕೆಲಕ್ಷತ್ರಿಯರು ಉಳಿದೇ ಇದ್ದರು. ಈ ಉಳಿದವರ ಪೀಳಿಗೆಯವರಾದ ರಜಪೂತರೂ ಕುರುಬರೂ ಬೇಡರೂ ಮರಾಟರೂ ರಾಮೋಸಿಯರೂ ಹತಾಶರಾಗಿ ಬಯಕೆಗೆಟ್ಟು, ಆಳಲಿ ಭಕ್ತಿಯಂತೆ, ತಮ್ಮ ಕ್ಷಾತ್ರಧರ್ಮವನ್ನು ಯಥಾಶಕ್ತಿ ಮಾಡದೆ, ಸೇವಾವೃತ್ತಿಯನ್ನು ಕಯ್ಕೊಂಡರು. ೩ ನೆಯ ವರ್ಣದವರಾದ ವೈಶ್ಯರಿಗೆ ಈ ಕಾಲಕ್ಕೆ ದೊಡ್ಡ ಕುತ್ತು ಬಂತು. ಮುಸಲ್ಮಾನರು ಈ ನಮ್ಮ ಭರತಭೂಮಿಯಲ್ಲಿ ಕಾಲಿಟ್ಟಂದಿನಿಂದ ನಮ್ಮ ವೈಶ್ಯರ ವ್ಯಾಪಾರವು ಕಳೆಗುಂದತೊಡಗಿತು. ಮಹಮ್ಮದೀಯ ಅರಸರು ಇರಾಣ ತುರ್ಕಸ್ಥಾನ ದೇಶಗಳ ತಮ್ಮ ಜಾತಿಯ ವ್ಯಾಪಾರಿಗಳಿಗೆ ಆಶ್ರಯ ಕೊಡಲಾರಂಭಿಸಿದ್ದರಿಂದ ಪರದೇಶಗಳ ವ್ಯಾಪಾರವು ನಮ್ಮ ವೈಶ್ಯರ ಕೈಬಿಟ್ಟಿತು. ಇದೇ ಕಾಲಾವಧಿಯಲ್ಲಿ (೧೫, ೧೬, ೧೭ ಶತಮಾನಗಳಲ್ಲಿ) ಯುರೋಪಖಂಡದಿಂದ ಪೋರ್ತುಗೀಸರೂ ಡಚ್ಚರೂ ಫ್ರೆಂಚರೂ ಇಂಗ್ಲಿಷರೂ ವ್ಯಾಪಾರದ ಸಲುವಾಗಿ ನಮ್ಮ ಮಾತೃಖಂಡಕ್ಕೆ ಬಂದುದರಿಂದ, ನಮ್ಮ ವೈಶ್ಯರ ವ್ಯಾಪಾರವೆಲ್ಲ ಮುಳಗಿಹೋಯಿತು. ಆಕಾಲದಿಂದ ವೈಶ್ಯರು ತಮ್ಮ ಮುಖ್ಯಧರ್ಮವಾದ ವ್ಯಾಪಾರಕ್ಕೆ ಶರಣುಹೊಡೆದು ಒಕ್ಕಲತನವನ್ನಾಗಲಿ ಕಯ್ಗಾರಿಕೆಯನ್ನಾಗಲಿ ಸೇವಾವೃತ್ತಿಯನ್ನಾಗಲಿ ಅವಲಂಬಿಸಿ, ತಮ್ಮ ಹೊಟ್ಟೆಯನ್ನು ಹೊರಕೊಳ್ಳಲಾರಂಭಿಸಿದರು. ಈ ಮೇರೆಗೆ ಮುಸಲ್ಮಾನರು ಭರತಖಂಡವನ್ನು ಆಳತೊಡಗಿದಂದಿನಿಂದ ನಮ್ಮ ಮೇಲಿನ ಮೂರು ವರ್ಣದವರಿಗೆ ಹೊಟ್ಟೆಹೊರಕೊಳ್ಳುವುದು ದಿನದಿನಕ್ಕೆ ಹೆಚ್ಚೆಚ್ಚು ಕಠಿನವಾಗತೊಡಗಿತು. ಆದಕಾರಣ ೧೭ ನೆಯ ಶತಮಾನದಲ್ಲಿ ತುಸುಮಂದಿ ಬ್ರಾಹ್ಮಣರೂ ಎಲ್ಲ ಕ್ಷತ್ರಿಯರೂ ಅರ್ಧಮುರ್ಧ ವೈಶ್ಯರೂ ತಮ್ಮ ಧರ್ಮಕ್ಕೆ ತಿಲಾಂಜಲಿಯನ್ನು ಕೊಟ್ಟು ಶೂದ್ರವೃತ್ತಿಯನ್ನು ಅಂದರೆ ಸೇವಾವೃತ್ತಿಯನ್ನು ಕಯ್ಕೊಂಡರು. ಎಲ್ಲರೂ ಪಲ್ಲಕ್ಕಿ ಹೊರುವವರಾದರೆ ಪಲ್ಲಕ್ಕಿಯಲ್ಲಿ ಕೂಡ್ರುವವರಾರು? ಎಂಬ ಗಾದೆಯಂತೆ, ಇಷ್ಟು ಮಂದಿಗೆ

ಕೆಲಸ ಕೊಡುವ ಧನಿಕ ಭಾರತೀಯರೆಲ್ಲಿ? ಇಂತಹ ಸಂದುಕಟ್ಟಿನ ಸಂದರ್ಭದಲ್ಲಿ ಹೊಟ್ಟೆ ಮಾಡಿತು ಮೂರಾಬಟ್ಟೆಯೆಂಬ ನಾಣ್ಣುಡಿಯಂತೆ ಸೇವಾವೃತ್ತಿಯನ್ನು ಕಯ್ಕೊಂಡ ಈ ಹೊಸ ಶೂದ್ರರು ಮುಂದುಗಾಣದೆ ತಮ್ಮ ಧರ್ಮವನ್ನೂ ದೇಶಾಭಿಮಾನವನ್ನೂ ತೊರೆದು ಪರಕೀಯರಾದ ಮುಸಲ್ಮಾನರ ಊಳಿಗವನ್ನು ಚಡಪಡಿಸುತ್ತ ಸೇರಲಾರಂಭಿಸಿದರು. ಆ ಹೊತ್ತಿನಿಂದಲೇ ನಮ್ಮ ದಾಸ್ಯತ್ವವು ಅಥವಾ ಗುಲಾಮಗಿರಿಯು ಸುರು ವಾಯಿತೆಂದು ನಿಸ್ಸಂದೇಹವಾಗಿ ಹೇಳಬಹುದು.

ತೊಗರಿಕಟ್ಟಿಗೆಯಿಂದ ತೊಗರಿ ಜಾಡಿಸಿ ವರವಪಡಕೊಳ್ಳುವುದು ಜಾಣತನವೆಂದು ಹಿರಿಯರು ಹೇಳುತ್ತಾರಷ್ಟೆ. ಸತ್ಯಭಾಮೆಯು ಕೃಷ್ಣ ನನ್ನು ಪೀಡಿಸಿ, ಸ್ವರ್ಗದಿಂದ ಪಾರಿಜಾತವೃಕ್ಷವನ್ನು ತರಿಸಿ, ತನ್ನ ಮನೆಯ ಅಂಗಳದಲ್ಲಿ ಹಚ್ಚಿಸಿಕೊಂಡರೂ ಅದರ ಹೂಗಳು ರುಕ್ಮಿಣಿಯ ಅಂಗಳದಲ್ಲಿ ಹೋಗಿ ಬೀಳುತ್ತಿದ್ದವಂತೆ. ಅದೇ ಮೇರೆಗೆ ನಮ್ಮ ಪೂರ್ವಜರು ಈ ಅನುಭವದ ಸಿದ್ಧಾಂತವನ್ನು ಕಂಡುಹಿಡಿದರೂ ಅದರಂತೆ ಮಾಡಿ ಅದರ ಫಲವನ್ನನುಭೋಗಿಸುವ ಸುಯೋಗವು ಪಾಶ್ಚಿಮಾತ್ಯರಿಗೆ ಬಂತು. ಮೊದಲು ಫ್ರೆಂಚರ ಅಧಿಪತಿಯಾದ ಡ್ಯೂಪ್ಲೆಯೂ ಬಳಿಕ ಇಂಗ್ಲಿಷರೂ ಹೊಟ್ಟೆಗಿಲ್ಲದ ಭಾರತೀಯರನ್ನು ದಂಡಾಗಿಕಟ್ಟಿಕೊಂಡು, ಅವರ ನೆರವಿ ನಿಂದಲೇ ದೇಶೀಯ ಅರಸರನ್ನು ಪಾದಾಕ್ರಾಂತರಾಗಿ ಮಾಡಿಕೊಂಡು ಕ್ರಮದಿಂದ ತಮ್ಮ ರಾಜ್ಯವನ್ನು ಬೆಳಿಸಿಕೊಂಡು, ತರುವಾಯ ಜಾಣರಾದ ಇಂಗ್ಲಿಷರು ತಮ್ಮ ಧೈರ್ಯಸಾಹಸ ದೀರ್ಘಪ್ರಯತ್ನಗಳಿಂದ ಫ್ರೆಂಚರನ್ನು ಮುರಿಬಡಿದು. ದೇಶೀಯ ಕೆಲ ರಾಜ್ಯಗಳನ್ನು ನುಂಗಿ, ಭರತಖಂಡದ ಸಾರ್ವಭೌಮರಾದರು. ಆ ಕಾಲಕ್ಕೆ ಅಂದರೆ ೧೭ ನೆಯ ಶತಮಾನದ ಆರಂಭದಲ್ಲಿ ೧೦೦ ಕ್ಕೆ ೯೦ ರಷ್ಟು ಬ್ರಾಹ್ಮಣರು ಮಾತ್ರ ತಮ್ಮ ಧರ್ಮ ವನ್ನು ಹೇಗಾದರೂ ಕಾಯ್ದುಕೊಂಡಿದ್ದರು. ಇಂಗ್ಲಿಷರು ಸಾರ್ವಭೌಮ ರಾದ ಬಳಿಕ ಶ್ರೇಷ್ಠವರ್ಣದವರೂ ಪೂಜ್ಯರೂ ಆದ ಬ್ರಾಹ್ಮಣರ ನೆರವಿಲ್ಲದೆ ತಮ್ಮ ಆಳಿಕೆಯು ನೆಲೆಗೊಳ್ಳಲಿಕ್ಕಿಲ್ಲೆಂಬ ಸಂಶಯದಿಂದ ಪಾಶ್ಚಿಮಾತ್ಯ ಶಿಕ್ಷಣವನ್ನಾರಂಭಿಸಿ, ದೊಡ್ಡದೊಡ್ಡ ಸಂಬಳಗಳ ಮತ್ತು ಅಧಿಕಾರಗಳ ಆಶೆಯನ್ನು ಹಚ್ಚಿ, ಬಹುಶಃ ಎಲ್ಲ ಬ್ರಾಹ್ಮಣರನ್ನು ತಮ್ಮ ಆಳಾಗಿ ಮಾಡಿ

ಕೊಂಡರು. ಬ್ರಾಹ್ಮಣರು ತಮ್ಮನ್ನು ನಂಬಿಕೊಂಡಿದ್ದ ಉಳಿದ ಜನರನ್ನು ಬಿಟ್ಟು, ಪರಕೀಯ ಅರಸಾಳುಗಳಿಗೆ ನೆರವಾಗಿ ಜನರನ್ನು ನೋಯಿಸತೊಡಗಿದ್ದರಿಂದ ಬ್ರಾಹ್ಮಣೇತರರು ಅವರ ಮೇಲೆ ದ್ವೇಷಾಸೂಯೆಗಳನ್ನು ಕಾರತೊಡಗಿದರು. ಇಂಗ್ಲಿಷರು ಈಗ ಬ್ರಾಹ್ಮಣರನ್ನು ಹಿಂದಕ್ಕೆ ನೂಕಿ ಬ್ರಾಹ್ಮಣೇತರರನ್ನು ಮುಂದಕ್ಕೆ ಕರೆಯಲಾರಂಭಿಸಿದ್ದಾರೆ. ಈ ಕಾರಣಗಳಿಂದ ಪೂರ್ವಕಾಲದಲ್ಲಿ ಒಕ್ಕಟ್ಟನಿಂದ ಒಪ್ಪುತ್ತಿದ್ದ ಭಾರತೀಯರು ಈಗ ಬಿಡಿಕಟ್ಟಿಗೆಗಳಾಗಿ ಆಯಾಸವಿಲ್ಲದೆ ಮುರಿಯಲ್ಪಡುತ್ತಾರೆ. ಭರತಖಂಡದ ದುರದೃಷ್ಟದಿಂದ ಈಗ ಎಲ್ಲಿ ನೋಡಿದರೂ ಜಗಳವೇ ಜಗಳ. ಜಾತಿಜಾತಿಗಳ ನಡುವೆಯೂ ಕೋಮುಕೋಮುಗಳ ನಡುವೆಯೂ ಪಂಗಡಪಂಗಡಗಳ ನಡುವೆಯೂ ಎಡೆಬಿಡದೆ ಬಡಿದಾಟಗಳು ನಡೆದಿವೆ; ಸ್ವಾರ್ಥಪರತ್ವವು ದಿನದಿನಕ್ಕೆ ಹೆಚ್ಚುತ್ತಲಿದೆ. ದೇವಗುರುಪಿತೃಭಕ್ತಿಯು ಕ್ರಮವಾಗಿ ಕಡಮೆಯಾಗತೊಡಗಿದೆ; ಮತ್ತು ವ್ಯಾಪಾರೋದ್ಯೋಗಸ್ಥರೂ ಒಕ್ಕಲತನಮಾಡುವವರೂ ಕೂಲಿಕಾರರಾಗಲಾರಂಭಿಸಿದ್ದಾರೆ.

ನಮ್ಮ ಚರಿತ್ರನಾಯಕನ ಕಾಲದಲ್ಲಿ ಅಂದರೆ ೧೭ ನೆಯ ಶತಮಾನದ ಮಧ್ಯಭಾಗದಲ್ಲಿ ನಮ್ಮ ಮಾತೃಖಂಡವು ಇಂತಹ ನಿಕೃಷ್ಟಾವಸ್ಥೆಗೆ ಬಂದಿದ್ದಿಲ್ಲ. ಕ್ಷತ್ರಿಯ ವೈಶ್ಯರು ಕಂಗಾಲರಾಗುತ್ತ ನಡೆದಿದ್ದರೂ ಬ್ರಾಹ್ಮಣರಿನ್ನೂ ಕೆಲಮಟ್ಟಿಗಾದರೂ ತಮ್ಮ ಧರ್ಮವನ್ನು ಪಾಲಿಸುತ್ತಿದ್ದರು. ಉಳಿದ ವರ್ಗದವರ ಮೇಲೆ ಅವರ ವರ್ಚಸ್ಸೂ ನೈತಿಕಾಧಿಕಾರವೂ ಅಚ್ಚಳಿಯದೆ ನಡೆಯುತ್ತಿತ್ತು. ಬ್ರಾಹ್ಮಣ್ಯವು ಕಳೆಗುಂದಲಾರಂಭಿಸಿದ್ದರಿಂದ ಜ್ಞಾನದೇವ, ತುಕಾರಾಮ, ಪುರಂದರದಾಸ, ರಾಮದಾಸ ಮೊದಲಾದ ಅಪ್ರತಿಮಭಗವದ್ಭಕ್ತರು ಜನ್ಮವೆತ್ತಿ, ಬ್ರಾಹ್ಮಣ್ಯಕ್ಕೆ ಬಂದ ಮಾಲಿನ್ಯವನ್ನು ದೂರಮಾಡಲಿಕ್ಕೆ ಹಗಲಿರುಳು ಹೆಣಗಾಡುತ್ತಿದ್ದರು. ಈ ಮಹಾತ್ಮರ ಉಪದೇಶದಿಂದ ದೇವರಲ್ಲಿ ಭಕ್ತಿಯೂ ಬ್ರಾಹ್ಮಣರಲ್ಲಿ ವಿಶ್ವಾಸಪೂಜ್ಯಬುದ್ಧಿಯೂ ಜುಲುಮೆಯಿಂದ ಕುಲಗೆಟ್ಟವರನ್ನು ತಿರುಗಿ ಜಾತಿಯೊಳಗೆ ತೆಗೆದುಕೊಳ್ಳುವುದರಲ್ಲಿ ಆದರವೂ ಗುಡಿಗುಂಡಾರಗಳನ್ನು ರಕ್ಷಿಸುವುದರಲ್ಲಿ ಆತುರತೆಯೂ ಮ್ಲೇಂಛರ ಊಳಿಗದಲ್ಲಿ ತಿರಸ್ಕಾರವೂ ಜನರ

ಮನಸ್ಸಿನಲ್ಲಿ ಜಾಗೃತವಾದವು. ಸಮರ್ಥರ ಅಪ್ಪಣೆಯಂತೆ ಶಿವಾಜಿಯು ಪ್ರತಿವರ್ಷ ಶ್ರಾವಣಮಾಸದಲ್ಲಿ ಬ್ರಾಹ್ಮಣರಿಗೆ ದಕ್ಷಿಣಾಸಂಭಾವನೆ ವಸ್ತ್ರಾಶನಗಳನ್ನು ಕೊಡಲಾರಂಭಿಸಿದಂದಿನಂದಂತೂ ಅವನ ಸ್ವರಾಜ್ಯ ಸ್ಥಾಪನಾವಿಚಾರಕ್ಕೆ ಲೋಕಮತದ ಬೆಂಬಲವು ಪೂರ್ಣವಾಗಿ ದೊರೆಯಿತು. ನಮ್ಮ ಚರಿತ್ರನಾಯಕನ ಯಶಸ್ಸಿಗೆ ಅವನ ಶೌರ್ಯಧೈರ್ಯ ಸಾಹಸಾದಿಗಳು ನೆರವಾದಷ್ಟೇ ಲೋಕಮತವು ಅಥವಾ ಜನರ ಸಹಾನುಭೂತಿಯು ನೆರವಾಯಿತೆಂದರೆ ಅತಿಶಯೋಕ್ತಿಯಾಗಲಾರದೆಂದು ಹೇಳಬಹುದು.

ನಮ್ಮ ಚರಿತ್ರನಾಯಕನಿಗಿದ್ದ ಧಾರ್ಮಿಕ ಮತ್ತು ಸಾಮಾಜಿಕ ಪರಿಸ್ಥಿತಿಯು ಅಥವಾ ಪೊಲಬಿನ ಅನುಕೂಲತೆಯನ್ನು ಮೇಲೆ ವಿವರಿಸಿದೆವು. ಇನ್ನು ಅವನಿಗೆ ಆ ಕಾಲಕ್ಕೆ ನೈತಿಕ ಪೊಲಬಿನ ಅನುಕೂಲತೆಯು ಎಷ್ಟಿತ್ತೆಂಬುದನ್ನು ನೋಡುವಾ. ನೀತಿಯೇ ಸನಾತನಧರ್ಮದ ತಳಹದಿಯಾದ್ದರಿಂದಲೂ ಕ್ಷೀಣವಾದ ಬ್ರಾಹ್ಮಣ್ಯಕ್ಕೆ ಸಾಧುಸಂತರು ಶಕ್ತಿವರ್ಧಕ ಔಷಧವನ್ನು ಸಕಾಲಕ್ಕೆ ಕೊಟ್ಟುದರಿಂದಲೂ ಆಕಾಲದಲ್ಲಿ ಈಗಿನಂತೆ ಸುಳ್ಳು, ಮೋಸ, ತಗಲು, (ಅಪ್ರಮಾಣಿಕತನ) ಇವು ಜನರಲ್ಲಿ ಹಬ್ಬಿದಿಲ್ಲ ಮತ್ತು ಆ ಕಾಲದ ಜನರು ಪಾಪಭೀರುಗಳೂ ಸತ್ಯವಂತರೂ ಪ್ರಾಮಾಣಿಕರೂ ದೇವಬ್ರಾಹ್ಮಣ-ಪಿತೃಗಳಲ್ಲಿ ವಿಶ್ವಾಸಭಕ್ತಿಯುಳ್ಳವರೂ ಆಗಿದ್ದರು. ಈಗ ಸತ್ಯವನ್ನು ಉಪದೇಶಿಸುವ ಬ್ರಾಹ್ಮಣರು ಇಲ್ಲದಂತೆ ಆಗಿರುತ್ತಾರೆ. ಇಷ್ಟೇ ಅಲ್ಲ ಅವರ ಬದಲು ಸುಳ್ಳನ್ನು ಕಲಿಸುವ ಕೆಲ ಕೆಟ್ಟ ವಕೀಲರೂ ಮುಕ್ತಿಯಾರರೂ ಅವರ ಸಹಾಯಕರೂ ದೊಡ್ಡದೊಡ್ಡ ಪಟ್ಟಣಗಳನ್ನು ತುಂಬಿ ಹೆಚ್ಚಾಗಿ ಹಳ್ಳಿಗಳನ್ನುಸೇರಿ ಜನರ ನೀತಿಯನ್ನು ಅವಿಶ್ರಾಂತಶ್ರಮ ಮಾಡಿ ಕೆಡಿಸುತ್ತಲಿದ್ದಾರೆ. ೧೭ ನೆಯ ಶತಮಾನದ ನಮ್ಮ ಪೂರ್ವಜರು ೨೦೦೦ ವರ್ಷಗಳ ಹಿಂದೆ ಮೆಗಾಸ್ತನಿಸನೆಂಬ ಗ್ರೀಕ ಪ್ರವಾಸಿಯು ವರ್ಣಿಸಿದಷ್ಟು ನೀತಿವಂತರಾಗದಿದ್ದರೂ ಈಗಿನವರಿಗಿಂತ ನೂರಾರುಪಟ್ಟು ಹೆಚ್ಚು ನೀತಿವಂತರಾಗಿದ್ದರೆಂದು ನಿಶ್ಚಯವಾಗಿ ಹೇಳಬಹುದು. ಅವರು ಹೆಚ್ಚು ಪ್ರಮಾಣಿಕರೂ ಸತ್ಯವಂತರೂ ಆಗಿದ್ದರೆಂಬುದಕ್ಕೆ ಸಂದೇಹವಿಲ್ಲ. ಆ ಕಾಲದ ಜನರಿಗೆ ಸಾಲ ಒಯ್ಯುವಾಗ ತಸಿಕಾಗದ ಬೇಕಾಗುತ್ತಿದ್ದಿಲ್ಲ.

ನೋಂದಣಿಯು (Registration) ಅವಶ್ಯಕತೆ ಇದ್ದಿಲ್ಲ. ಸಾಕ್ಷಿದಾರರ ಅಗತ್ಯ ವಿದ್ದಿಲ್ಲ. ಬರಿ ಮಾತಿನ ಮೇಲೆ ಸಾಲಗಳನ್ನು ಕೊಡತೆಗೆದು ಕೊಳ್ಳುತ್ತಿದ್ದರು. ದುರದೃಷ್ಟದಿಂದ ಸಾಲಗಾರನು ಮರಣೋನ್ಮುಖನಾದರೆ, ಅವನು ತನ್ನ ಮಕ್ಕಳಿಂದಾಗಲಿ ಬೇರೆ ನೆಂಟರಿಂದಾಗಲಿ ತನ್ನನ್ನು ಋಣಮುಕ್ತನಾಗಿ ಮಾಡಬೇಕೆಂದು ವಚನ ತೆಗೆದುಕೊಳ್ಳುತ್ತಿದ್ದನು; ಮತ್ತು ವಚನಕೊಟ್ಟ ವರು ತಮ್ಮ ಜೀವವನ್ನಾದರೂ ಒತ್ತಿಯಿಟ್ಟು, ಆ ಸಾಲವನ್ನು ತೀರಿಸಿ ತಮ್ಮ ವಚನದಿಂದ ಮುಕ್ತರಾಗುತ್ತಿದ್ದರು. ಈಗಲಾದರೋ, ಸಾಲದ ಕಾಗದ ವನ್ನು ಬರೆದು ಕೊಡುವಾಗಲೇ ಸಾವುಕಾರನ ಗಂಟನ್ನು ಹೇಗೆ ಮುಣಗಿಸ ಬೇಕೆಂಬ ವಿಚಾರವು ಎಡೆಬಿಡದೆ ನಡೆದಿರುತ್ತದೆ. ನ್ಯಾಯಾಧೀಶರಂತೂ ಸುಳ್ಳು ಕೇಳಿ ಕೇಳಿ ಬೇಸರಿಯುತ್ತಾರೆ. ನಂಬಿದವರನ್ನು ವಂಚಿಸುವುದೂ ಪರಸ್ತ್ರೀಯರನ್ನು ಕೆಡಿಸುವುದೂ ಪರವಿತ್ತವನ್ನು ಹರಣಮಾಡುವುದೂ ಮಹಾಪಾತಕಗಳೆಂದು ಆಗಿನ ಜನರು ನೆರೆನಂಬಿದ್ದರು. ಈಗಿನವರಲ್ಲಿ ಕೆಲವರು, ವಿಶೇಷವಾಗಿ ಪಟ್ಟಣವಾಸಿಗಳು, ಈ ಪಾಪಕೃತ್ಯಗಳನ್ನೇ ತಮ್ಮ ಜೀವನಸಾಧನಗಳಾಗಿ ಇಟ್ಟುಕೊಂಡು, ಜನರನ್ನು ಪರಿಪರಿಯಿಂದ ಗೋಳಾ ಡಿಸುತ್ತಾರೆ. ಆಕಾಲದಲ್ಲಿ ಒಕ್ಕಟ್ಟಿನ ಬಂಧನದಲ್ಲಿ ಇರಿಸಲ್ಪಟ್ಟ ಅರಿಷಡ್ರಿ ಪುಗಳು* ಈಗ ಬಂಧಮುಕ್ತವಾಗಿ ಚಕ್ಕಂದದಲ್ಲಿರುತ್ತವೆ. ಸಾಮಾನ್ಯವಾಗಿ ಈಗ ಹಿರಿಯರಿಗೆ ಮಾನವಿಲ್ಲ, ದೇವರಲ್ಲಿ ಭಕ್ತಿಯಿಲ್ಲ, ಗುರುಗಳಲ್ಲಿ ವಿಶ್ವಾಸ ವಿಲ್ಲ, ಸತ್ಯದಲ್ಲಿ ಪ್ರೀತಿಯಿಲ್ಲ, ಪರಿಜನರಲ್ಲಿ ನಂಬಿಗೆಯಿಲ್ಲ, ಒಡೆಯರಲ್ಲಿ ಪೂಜ್ಯಬುದ್ಧಿಯಿಲ್ಲ. ಅವರು ಸೆರೆಮನೆಗೆ ಅಂಜುತ್ತಾರೆ ಹೊರತು ಅಸತ್ಯ ಕ್ಕೆ ಅಂಜುವುದಿಲ್ಲ. ಪ್ರಾಣಹಾನಿಗೆ ಹೆದರುತ್ತಾರೆ ಹೊರತು ಮಾನಹಾನಿಗೆ ಹೆದರುವುದಿಲ್ಲ. ದಂಡಕ್ಕೂ ದಂಡನೆಗೂ ಭಯಪಡುತ್ತಾರೆ ಹೊರತು ನೀತಿಜ್ಞರ ವಚನಕ್ಕೂ ಸಾಧುಸಂತರ ಶಾಪಕ್ಕೂ ಭಯಪಡುವುದಿಲ್ಲ. ಸಾರಾಂಶ ಆಕಾಲದಲ್ಲಿ ಬಹಳ ಜನರು ಈಗಿನವರಿಗಿಂತ ಹೆಚ್ಚು ಸುನೀತರು ಅಂದರೆ ಹೆಚ್ಚು ಸತ್ಯವಂತರೂ ಹೆಚ್ಚು ನಂಬಿಗಸ್ತರೂ ಹೆಚ್ಚು ಸ್ವಾಮಿ ಭಕ್ತರೂ ಹೆಚ್ಚು ಸ್ವಾಭಿಮಾನವುಳ್ಳವರೂ ಹೆಚ್ಚು ಧರ್ಮಾಭಿಮಾನಿಗಳೂ

---

* ಕಾಮಃ ಕ್ರೋಧಸ್ತಥಾ ಲೋಭೋ ಮದಮೋಹೌ ಚ ಮತ್ಸರಃ ।

ಹೆಚ್ಚು ಸ್ವಜನಾಭಿಮಾನಿಗಳೂ ಆದ್ದರಿಂದ ನಮ್ಮ ಚರಿತ್ರನಾಯಕನಿಗೆ ದೊಡ್ಡ ನೈತಿಕಾನುಕೂಲತೆಯು ದೊರೆಯಿತು. *

ಎರಡೂ ಕಯ್ಗೂಡಿದರೆ ಚಪ್ಪಾಳೆಯಾಗುತ್ತದೆಂಬ ನಾಣ್ಣುಡಿಯನ್ನು ವಾಚಕರು ಕೇಳಿರಬಹುದು. ರಾಜ್ಯಕ್ರಾಂತಿಯನ್ನಾಗಲಿ ಧರ್ಮಕ್ರಾಂತಿಯನ್ನಾಗಲಿ ಮಾಡಲಿಚ್ಛಿಸುವ ಮಹಾಪುರುಷನ ಯೋಗ್ಯತೆಯೂ ಜನರ ವಿಚಾರವೂ ಸರಿಯಾಗಿ ಒಂದಕ್ಕೆ ಮತ್ತೊಂದು ಕೂಡಿದರೆ ಕೂಡಲೆ ಇಷ್ಟಸಿದ್ಧಿಯಾಗುತ್ತದೆ. ಮಹಾಪುರುಷರ ಅಲೌಕಿಕ ಗುಣಗಳೂ ಜನರ ಗುಣಗಳೂ ಅಥವಾ ಪರಿಸ್ಥಿತಿಯೂ ಒಂದಕ್ಕೊಂದು ಹೊಂದಿಕೆಯಾಗಿ ಬೆರೆತರೆ, ವಜ್ರಕ್ಕೆ ಕುಂದಣಹಾಕಿದಂತೆ ಫಲವದ್ರೂಪವಾಗಿ ಶೋಭಿಸುತ್ತವೆ. ನಮ್ಮ ಚರಿತ್ರನಾಯಕನ ಶೌರ್ಯ ಧೈರ್ಯ ಸಾಹಸ ಸ್ವಾತಂತ್ರ್ಯಪ್ರೀತಿ ಮುಂತಾದ ಅದ್ಭುತಗುಣಗಳಿಗೆ ಆ ಕಾಲದ ನೈತಿಕ ಸಾಮಾಜಿಕ ಧಾರ್ಮಿಕ ರಾಜಕೀಯ ಪರಿಸ್ಥಿತಿಯ ಅಥವಾ ಪೊಲಬಿನ ಬೆಂಬಲವು ದೊರೆದುದರಿಂದ ನಮ್ಮ ಚರಿತ್ರನಾಯಕನ ಸ್ವರಾಜ್ಯಸ್ಥಾಪನಾ–ವಿಚಾರವೆಂಬ ವೃಕ್ಷವು ಬೆಳೆದು ಹೂಕಾಯಿಗಳಿಂದ ತುಂಬಿ ಶೋಭಿಸತೊಡಗಿತು.

ಇಷ್ಟು ಹೊತ್ತಿನ ವರೆಗೆ ನಮ್ಮ ಚರಿತ್ರನಾಯಕನ ಅತಿ ದೊಡ್ಡಗುಣವಾದ ಸ್ವಾಭಿಮಾನಪೂರಿತ ಸ್ವಾತಂತ್ರ್ಯಪ್ರೀತಿಯನ್ನೂ ಅದಕ್ಕೆ ಅನುಕೂಲವಾದ ಪೊಲಬನ್ನೂ ವರ್ಣಿಸಿದೆವು. ಈ ವರ್ಣನೆಯಲ್ಲಿ ಅವನ ಉಳಿದ ಕೆಲವು ಗುಣಗಳನ್ನು ಆನುಷಂಗಿಕವಾಗಿ ಹೇಳಬೇಕಾಯಿತು. ಇನ್ನು ಮುಂದೆ ನಮ್ಮ ಚರಿತ್ರನಾಯಕನ ಮಿಕ್ಕ ಗುಣಗಳನ್ನು ಯಥೋಚಿತವಾಗಿ ವಿವರಿಸಿ ಈ ಪ್ರಕರಣವನ್ನು ಮುಗಿಸುವೆವು.

**೩ ಬಂಧುಪ್ರೀತಿ, ಧರ್ಮಾಭಿಮಾನ, ದೇಶಭಕ್ತಿ, ದೃಢನಿಶ್ಚಯ.** ಈ ಪ್ರಪಂಚದಲ್ಲಿ ಸುಖದುಃಖಗಳು ಒಂದರೊಳಗೊಂದು ಬೆರೆತಿರುತ್ತವೆಂಬುದು ಎಲ್ಲರಿಗೂ ಗೊತ್ತಿದ್ದ ಮಾತೇ ಸರಿ. ನಮ್ಮ ಚರಿತ್ರನಾಯಕನು ಚಿಕ್ಕಂದಿನಿಂದ ತನ್ನ ತಂದೆಯಿಂದ ದೂರವಾಗಿದ್ದುದೊಂದು

* ಬ್ರಿಟಿಶ್ ರಾಜ್ಯದಿಂದ ನಮಗೆ ಉಂಟಾದ ಲಾಭಹಾನಿಗಳಲ್ಲಿ ಯಂತ್ರ ರಸಾಯನ–ವಿದ್ಯುಲ್ಲತಾಶಾಸ್ತ್ರಗಳ ಪರಿಚಯವು ದೊಡ್ಡಲಾಭವೆಂದೂ ನಮ್ಮ ನೈತಿಕ ಅವನತಿಯು ದೊಡ್ಡ ಹಾನಿಯೆಂದೂ ಹೇಳಬಹುದು.

ಸಂಗತಿಯು ಅವನಿಗೆ ಕೆಲವು ಅಂಶದಿಂದ ಗುಣಕಾರಿಯಾಗಿಯೇ ಪರಿಣಮಿಸಿತು. ಏಕೆಂದರೆ ಅವನಲ್ಲಿ ತಾನು ದೊಡ್ಡ ಸರದಾರನ ಮಗನೆಂಬ ಹೆಮ್ಮೆಯು ಹುಟ್ಟಲಿಲ್ಲ. ಅವನ ಪಾಲಕಗುರುವಾದ ದಾದೋಜಿ ಕೋಂಡದೇವನು ಸರಳಸ್ವಭಾವದವನಾದ್ದರಿಂದ ಅವನ ಜತೆಯಲ್ಲಿ ಜಹಗೀರಿನ ಹಳ್ಳಿಪಳ್ಳಿಗೆ ಹೋಗುತ್ತಿದ್ದ ಚಿಕ್ಕ ಸಿವಾಜಿಯು ತಾನುದೊಡ್ಡವನೆಂದು ಸೆಟಕೊಂಡು (ಬಿಕ್ಕೊಂಡು) ಕೂಡ್ರದೆ, ಬಡಬಗ್ಗರೊಳಗೂ ಹಣವಂತರೊಳಗೂ ಭೇದಭಾವವಿಲ್ಲದೆ ಕೂಡಿ, ಅವರ ಸುಖದುಃಖಗಳನ್ನೂ ಅನುವಾಪತ್ತುಗಳನ್ನೂ ತಿಳಿದುಕೊಳ್ಳುತ್ತಿದ್ದನು. ಮುಸಲ್ಮಾನ ಅರಸಾಳುಗಳಿಂದ ತನ್ನ ದೇಶಬಂಧುಗಳಿಗೆ ಎಡೆಬಿಡದೆ ಆಗುತ್ತಿದ್ದ ಧನಮಾನಹಾನಿಗಳನ್ನೂ ಧರ್ಮಾಚರಣೆಗೆ ಬರುವ ತೊಂದರೆಗಳನ್ನೂ ಅನ್ಯಾಯಗಳನ್ನೂ ಕೇಳಿಕೇಳಿ, ಅವನ ಕಿವಿಗಳು ಮರಗಟ್ಟಿದ್ದವು. ಜನರ ವಿಷಯದಲ್ಲಿ ಅವನ ಹೃದಯದಲ್ಲಿ ಬಹಳ ಕನಿಕರಹುಟ್ಟಿದ್ದರಿಂದ ಹೇಗಾದರೂ ಮಾಡಿ ಅವರ ಹೆಗ್ಗೋಳಾಟವನ್ನು ದೂರಮಾಡದಿದ್ದರೆ, ತನ್ನ ಜನ್ಮವು ವ್ಯರ್ಥವಾದ್ದೆಂದೆಣಿಸಿ, ಜೀವದ ಹಂಗು ತೊರೆದು ಸ್ವರಾಜ್ಯಸ್ಥಾಪನೆಯ ಪ್ರಯತ್ನವನ್ನು ಮಾಡಬೇಕೆಂದು ಅವನು ದೃಢನಿಶ್ಚಯ ಮಾಡಿದನು. ಬ್ರಾಹ್ಮಣರಿಗೆ ಹೊಟ್ಟೆಗಿಲ್ಲದೆ ತಾಪತ್ರಯವಾಗುತ್ತಿರುವುದನ್ನು ನೋಡಿ ಅವರನ್ನು ಪ್ರತಿವರ್ಷ ಪರೀಕ್ಷಿಸಿ, ಯೋಗ್ಯರಿದ್ದವರಿಗೆ ವರ್ಷಾಶನ ಮುಂತಾದ್ದನ್ನು ಕೊಡುವ ಏರ್ಪಾಡುಮಾಡಿದನು. ಬ್ರಾಹ್ಮಣರು ಧರ್ಮನೀತಿಗಳ ಪಾಲಕರೂ ಪುರಸ್ಕರ್ತರೂ ಪ್ರಸಾರಕರೂ ಆದ್ದರಿಂದ ಅರಸನು ಅವರ ಯೋಗಕ್ಷೇಮವನ್ನು ಸರಿಯಾಗಿ ನೋಡತಕ್ಕದ್ದೆಂಬ ರಾಜತತ್ವವನ್ನು ಸಮರ್ಥರು ಅವನ ಮನಸ್ಸಿನಲ್ಲಿ ಚೆನ್ನಾಗಿ ಬಿಂಬಿಸಿದ್ದರಿಂದ, ಅದನ್ನು ಅವನು ಆಮರಣಾಂತ ನೆನಪಿನಲ್ಲಿಟ್ಟುಕೊಂಡು ಅಕ್ಷರಶಃ ಆ ತತ್ವವನ್ನು ಪಾಲಿಸಲಿಲ್ಲವೇ?

**ಧೈರ್ಯ, ಶೌರ್ಯ, ಸಾಹಸ, ಕಷ್ಟಸಹಿಷ್ಣುತೆ, ಉದ್ಯೋಗ, ಕಲ್ಪಕತೆ** (Originality), **ಬುದ್ಧಿಚಾತುರ್ಯ.** ಈ ಏಳುಗುಣಗಳು ನಮ್ಮ ಚರಿತ್ರನಾಯಕನಲ್ಲಿ ಮನೆಮಾಡಿಕೊಂಡಿದ್ದವೆಂಬುದಕ್ಕೆ ಹಲವು ದೃಷ್ಟಾಂತಗಳುಂಟು. ಅವನು ಆದಿಲ್ಶಾಹಿಯ ಊರುಕೋಟೆಗಳನ್ನು ಒಂದರಹಿಂದೊಂದು ಹಿಡಿಕೊಂಡುದೂ ಮೊಗಲರ ದೊಡ್ಡಪಟ್ಟಣಗಳನ್ನು

ಸುಲಿದುದೂ ಅಫಜುಲ್ಖಾನನನ್ನು ಕೊಂದುದೂ ಸಾಯಿಸ್ತೆಖಾನನ ಬೆರಳು ಕೊಯ್ದುದೂ ಆಗ್ರಾದ ಸೆರೆಮನೆಯಿಂದ ತಪ್ಪಿಸಿಕೊಂಡು ಬಂದುದೂ ಮುಂದೆ ಬೈರಾಗಿವೇಷದಿಂದ ತೀರ್ಥಯಾತ್ರೆ ಮಾಡಿದುದೂ ಕುತುಬಶಹ ನನ್ನು ಮರುಳುಮಾಡಿ ಹಣತೋಫಖಾಸೆಗಳನ್ನು ಇಸುಕೊಂಡುದೂ ಕರ್ನಾಟಕದ ದಂಡಯಾತ್ರೆಮಾಡಿದುದೂ ಅವನಲ್ಲಿದ್ದ ಈ ಗುಣಗಳ ದೊಡ್ಡ ದೃಷ್ಟಾಂತಗಳಾಗಿರುತ್ತವೆ.

**೫ ಸಭ್ಯತೆ, ದೊಡ್ಡಮನಸ್ಸು, ಗುಣಗ್ರಹಣ, ನಿಷ್ಪಕ್ಷಪಾತ, ಕೃತಜ್ಞತಾ.** ಈ ೫ ಗುಣಗಳು ನಮ್ಮ ಚರಿತ್ರನಾಯಕನಲ್ಲಿ ನೆಲೆಗೊಂಡಿದ್ದವು. ಶ್ರೇಯೋಭ್ಯುದಯವನ್ನು ಬಯಸುವ ಪ್ರತಿಯೊಬ್ಬ ಮನುಷ್ಯನಲ್ಲಿ ಸಭ್ಯತೆಯು ಇರುವುದು ಅವಶ್ಯವಾಗಿರುತ್ತದೆ. ಸಭ್ಯತೆಯು ಆಕರ್ಷಕ ಗುಣವಾಗದಿದ್ದರೂ ಅಸಭ್ಯತೆಯಂತೆ ಅಪಕರ್ಷಕ ಗುಣವಾಗಿರುವುದಿಲ್ಲ. ಅಸಭ್ಯತೆಯು ನೆಂಟರನ್ನೂ ಇಷ್ಟರನ್ನೂ ಗೆಂಟುತ್ತದೆ; ಆದರೆ ಸಭ್ಯತೆಯು ಹಾಗೆ ನೆಂಟರನ್ನಾಗಲಿ ಬೇಕಾದವರನ್ನಾಗಲಿ ದೂರವಾಗಿ ದೂಡುವುದಿಲ್ಲ. ಸಿವಾಜಿಯಲ್ಲಿ ಸಭ್ಯತೆ ಇದ್ದುದರಿಂದ ಆಪ್ತೇಷ್ಟರೂ ನೆರೆಹೊರೆಯವರೂ ಅವನನ್ನು ಸೇರುತ್ತಿದ್ದರು.

ಮನಸ್ಸು ಅಥವಾ ಬಗೆಯು ನಿರಾಕಾರವಸ್ತುವಾದ್ದರಿಂದ ಅದನ್ನು ಅಳತೆಮಾಡುವುದು ಸಾಧ್ಯವಿಲ್ಲ. ದೊಡ್ಡಮನಸ್ಸೆಂದರೆ ದಪ್ಪನ್ನ ಮನಸ್ಸಲ್ಲ. ಸಣ್ಣಪುಟ್ಟ ತಪ್ಪುಗಳನ್ನೂ ಕ್ಷುಲ್ಲಕ ಲಾಭಹಾನಿಗಳನ್ನೂ ಎಣಿಸದ ಮನಸ್ಸೇ ದೊಡ್ಡಮನಸ್ಸೆನಿಸಿಕೊಳ್ಳುತ್ತದೆ. ನಮ್ಮ ಚರಿತ್ರನಾಯಕನಿಗೆ ಸಂಬಂಧ ಪಟ್ಟ ಜನರೆಲ್ಲರು ಅವನ ದೊಡ್ಡಮನಸ್ಸಿಗೆ ಮೆಚ್ಚಿ ಅವನನ್ನು ಮನ್ನಿಸುತ್ತಿದ್ದರು.

ಗುಣಗ್ರಹಣವು ಅಪರೂಪವಾದ ದೊಡ್ಡ ಗುಣವಿರುತ್ತದೆ. ಗುಣಗ್ರಾಹಕತ್ವವು ಪೂರ್ವಜನ್ಮದ ಸುಕೃತದಿಂದಲೂ ಬಾಲ್ಯಾಭ್ಯಾಸದಿಂದಲೂ ಬರುತ್ತದೆ ಹೊರತು ಅನಾಯಾಸವಾಗಿ ಬರುವುದಿಲ್ಲ. ನಮ್ಮ ಚರಿತ್ರನಾಯಕನಿಗೆ ಚಿಕ್ಕಂದಿನಲ್ಲೇ ಜನರ ನೆರವು ಬೇಕಾಯಿತು. ಆದ್ದರಿಂದ ಅವನು ಜನರ ಚಿಕ್ಕಪುಟ್ಟ ದೋಷಗಳನ್ನು ದೊಡ್ಡಮನಸ್ಸಿನಿಂದ ಲಕ್ಷಿಸಸದೆ, ಅವರಲ್ಲಿದ್ದ ಅನರ್ಘ್ಯವಾದ ದೊಡ್ಡಗುಣಗಳನ್ನು ಮುಕ್ತಕಂಠವಾಗಿ

ಹೊಗಳುತ್ತಿದ್ದನು. * ಈ ಗುಣಗ್ರಾಹಕತ್ವದಿಂದ ಅವನು ಹಿರಿಯರಿಗೂ ಕಿರಿಯರಿಗೂ, ಸರಿಗರಿಗೂ ಕಯ್ಕೆಳಗಿನವರಿಗೂ, ಬಡವರಿಗೂ ದೈವುಳ್ಳವರಿಗೂ, ಪಂಡಿತರಿಗೂ ಪಾಮರರಿಗೂ ಪ್ರಿಯನಾಗಿದ್ದನು. ಯಾವನಾದರೊಬ್ಬನು ಸಣ್ಣ ದೊಡ್ಡ ಊಳಿಗವನ್ನು ಕೇಳಲಿಕ್ಕೆ ಬಂದಾಗ, ಅವನ ಮುಖಮುದ್ರೆಯಿಂದಲೇ ನಮ್ಮ ಚರಿತ್ರನಾಯಕನು ಅವನು ವಿಶ್ವಾಸಕ್ಕೆ ಪಾತ್ರನೋ ಅಲ್ಲವೋ ಎಂಬುದನ್ನು ಕೂಡಲೇ ನಿರ್ಣಯಿಸುತ್ತಿದ್ದನು; ಮತ್ತು ಅವನ ಪರೀಕ್ಷೆಯು ಬಹುಶಃ ತಪ್ಪಾಗುತ್ತಿದ್ದಿಲ್ಲ. ಯಾವದಾದರೊಂದು ದೊಡ್ಡ ಕೆಲಸವನ್ನು ಮಾಡುವುದಕ್ಕೆ ಜನರನ್ನು ಆರಿಸುವಾಗ ಇಂತಹನು ಇಂತಹ ಕೆಲಸವನ್ನು ಸರಿಯಾಗಿ ಮಾಡಿಯಾನು ಅಥವಾ ಮಾಡಲಿಕ್ಕಿಲ್ಲ ಎಂಬುದನ್ನಾದರೂ ತಪ್ಪದೆ ಸರಿಯಾಗಿ ತರ್ಕಿಸುತ್ತಿದ್ದನು. ಆದ್ದರಿಂದ ಅವನು ಊಳಿಗಕ್ಕೆ ಇಟ್ಟುಕೊಂಡ ಸಾವಿರಾರು ಜನರೊಳಗೆ ರಾಜದ್ರೋಹಿಗಳು ಅತಿವಿರಳರಾಗಿದ್ದರು. ಮೊಗಲ್ಬಾದಶಾಹಿಯಲ್ಲಿಯೂ ಆದಿಲ್ಶಾಹಿಯಲ್ಲಿಯೂ ನೂರಾರು ಜನರು ರಾಜದ್ರೋಹಿಗಳೂ ಲಂಚಗುಳಿಗಳೂ ಕುತ್ತಿಗೆ್ಗೊಯ್ಕರೂ ಇದ್ದರೆಂಬುದು ಹಿಂದಿನ ಚರಿತ್ರವನ್ನು ಓದಿದ ನಮ್ಮ ಪ್ರಿಯವಾಚಕರಿಗೆ ಗೊತ್ತಿದ್ದ ಮಾತೇಸರಿ. ನಮ್ಮ ಚರಿತ್ರನಾಯಕನು ಒಡೆಕೊಳ್ಳಲಿಕ್ಕೆ ಪ್ರಯತ್ನಿಸಿದ ಸರದಾರಕಿಲ್ಲೆದಾರರೊಳಗೆ, ಒಬ್ಬ ಕಿಲ್ಲೆದಾರನು ಮಾತ್ರ ಅವನನ್ನು ಮೋಸಗೊಳಿಸಿ ತನ್ನ ಸ್ವಾಮಿಭಕ್ತಿಯನ್ನು ತೋರಿಸಿವನೆಂಬುದಾದರೂ ನಮ್ಮ ವಾಚಕರು ಅರಿಯದ ಸಂಗತಿಯಲ್ಲ. ನಮ್ಮ ಚರಿತ್ರನಾಯಕನ ಸರದಾರರಲ್ಲಿ ಅವನನ್ನು ವಂಚಿಸಿ ಹಗೆಗಳನ್ನು ಕೂಡಿದವರು ಎಷ್ಟು ಮಂದಿ? ಒಬ್ಬನೇ ಒಬ್ಬ ಮಾತ್ರ. ಅವನೇ ನೇತಾಜಿ ಪಾಲಕರನು. ಅವನಾದರೂ ತನ್ನ ದ್ರೋಹದ ಬಗ್ಗೆ ತಕ್ಕ ಶಿಕ್ಷೆಯನ್ನು ಹೊಂದಿ, ಬಹಳವಾಗಿ ಹಳಹಳಿಸಿ, ಮನಃಪೂರ್ವಕವಾಗಿ ಪಶ್ಚಾತ್ತಾಪಪಟ್ಟು, ಹೇಯ ಬುದ್ಧಿ ಹುಟ್ಟಿ, ತಿರುಗಿ ಬಂದು ನಮ್ಮ ಚರಿತ್ರನಾಯಕನ ಮರೆಬಿದ್ದನು. ಸಿವಾಜಿಯು

---

* ಪಾಪಾನ್ನಿವಾರಯತಿ ಯೋಜಯತೇ ಹಿತಾಯ । ಗುಹ್ಯಂಚಗೂಹತಿ ಗುಣಾನ್ಪ್ರಕಟೀಕರೋತಿ ।
ಆಪದ್ಗತಂ ನ ಚ ಜಹಾತಿ ದದಾತಿ ಕಾಲೇ । ಸನ್ಮಿತ್ರಲಕ್ಷಣಮಿದಂ ಪ್ರವದಂತಿ ಸಂತಃ ॥

ದೊಡ್ಡಮನಸ್ಸಿನಿಂದ ಅವನನ್ನು ಕ್ಷಮಿಸಿ, ಆವನ ಪಶ್ಚಾತ್ತಾಪವು ನಿಜವಾ ದ್ದೆಂದು ನಂಬಿ, ಅವನ ಶೌರ್ಯ ಸಾಹಸ ಮುಂತಾದ ದೊಡ್ಡ ಗುಣಗಳನ್ನು ನೆನಪಿಗೆ ತಂದು, ಆವನಿಗೆ ಪ್ರಾಯಶ್ಚಿತ್ತಕೊಡಿಸಿ, ಅವನನ್ನು ಮರಾಟಿ ಜಾತಿಯಲ್ಲಿ ತಿರುಗಿ ತೆಗೆದುಕೊಂಡು, ಪುನಃ ಅವನನ್ನು ತನ್ನ ಊಳಿಗದಲ್ಲಿ ಟ್ಟುಕೊಂಡನು. ಅವನ ಉಳಿದ ಗುಣಗಳಂತೆ ಅವನ ದೊಡ್ಡಮನಸ್ಸೂ ಕ್ಷಮಾಗುಣವೂ ಗುಣಗ್ರಾಹಕತೆಯೂ ಅವನ ಸ್ವರಾಜ್ಯಸ್ಥಾಪನೆಗೆ ಒತ್ತಾಸೆ ಯಾದವೆಂದು ಹೇಳಬಹುದು.

ನಿಷ್ಪಕ್ಷಪಾತವು ಒಂದು ಅಪರೂಪವಾದ ದೊಡ್ಡಗುಣವಿರುತ್ತದೆ. ಇಂದ್ರಿಯಗಳನ್ನು ನಿಗ್ರಹಿಸಬಲ್ಲವನಲ್ಲಿ ಮಾತ್ರ ಈ ಗುಣವು ಕಂಡು ಬರುವದು. ನಿಸ್ಪೃಹತೆಯೇ ಇದಕ್ಕೆ ಮೂಲಾಧಾರವು. ಯಾವನಾದರೊಬ್ಬ ಮನುಷ್ಯನಿಗೆ, ಅವನಿಗೆ ನ್ಯಾಯವಾಗಿ ಸಲ್ಲತಕ್ಕುದಕ್ಕಿಂತ, ಹೆಚ್ಚುಕೊಡು ವುದೇ ಪಕ್ಷಪಾತವೆನಿಸುತ್ತದೆ. ಈ ಪಕ್ಷಪಾತವನ್ನು ಅಥವಾ ಹೆಚ್ಚು ಲಾಭ ವನ್ನು ಮಾಡಿಕೊಡಬೇಕೆಂಬ ಆಶೆಯನ್ನು ಬದಿಗೊತ್ತಿ, ನ್ಯಾಯವಾಗಿ ತೀರ್ಪುಮಾಡುವುದೇ ನಿಷ್ಪಕ್ಷಪಾತವು. ಈ ಗುಣವು ನಮ್ಮ ಚರಿತ್ರ ನಾಯಕನಲ್ಲಿ ಯಥೇಷ್ಟವಾಗಿದ್ದುದರಿಂದ ಜನರಲ್ಲಿ ಅವನ ವಿಷಯವಾಗಿ ಆದರವೂ ಪೂಜ್ಯಬುದ್ಧಿಯೂ ಎಡೆಬಿಡದೆ ಹುಟ್ಟುತ್ತಿತ್ತು. ತಪ್ಪಿಗೆ ಶಿಕ್ಷೆ ಯನ್ನಾಗಲಿ ಬಹದ್ದೂರಿಗೆ ಇನಾಮನ್ನಾಗಲಿ ಅವನು ನ್ಯಾಯತಃ ಕೊಡು ತ್ತಿದ್ದುದರಿಂದ ಅವನ ಊಳಿಗದವರೆಲ್ಲ ಅವನು ಹೇಳಿದ ಕೆಲಸವನ್ನು ಮಾಡು ವುದಕ್ಕೆನಾ ಮುಂದೆ ನೀ ಮುಂದೆ ಎಂದು ಮೇಲಾಡುತ್ತಿದ್ದುದಲ್ಲದೆ, ಕೊಟ್ಟ ಕೆಲಸವನ್ನು ದಕ್ಷತೆಯಿಂದಲೂ ಹುರಪಿನಿಂದಲೂ ಉತ್ಸಾಹದಿಂದಲೂ ಮನ ಮುಟ್ಟಿ ಮಾಡುತ್ತಿದ್ದರು. ಪ್ರತಾಪರಾವಗುಜ್ಜರನು ನಮ್ಮ ಚರಿತ್ರನಾಯಕನ ಅತಿಪ್ರಿಯನಾದ ಮುಖ್ಯದಳವಾಯಿಯಾಗಿದ್ದು ತನ್ನ ಒಡೆಯನಿಗೋಸ್ಕರ ಎಷ್ಟೋ ಸಾಹಸಕೃತ್ಯಗಳನ್ನು ಮಾಡಿದ್ದನಷ್ಟೇ; ಅವನು ಯಾವುದೋ ಕಾರಣದಿಂದ ಉಮ್ರಾಣಿಕಾಳಗದಲ್ಲಿ (೧೬೭೪) ಕಯ್ಯಲ್ಲಿ ಸಿಕ್ಕ ಬಾಹಲೋಲ ಖಾನನನ್ನು ಸಮೂಲವಾಗಿ ನಾಶಮಾಡದೆ ಬಿಟ್ಟಾಗ, ಸಿವಾಜಿಯು ಅವನಿಗೆ ಪಕ್ಷಪಾತ ತೋರಿಸಿ ಸುಮ್ಮನಿರದೆ ಬಾಹಲೋಲಖಾನನನ್ನು ನಾಶ ಮಾಡದೆ, ಮೋರೆ ತೋರಿಸಬೇಡೆಂದು ಹೇಳಿ ಕಳುಹಿದ ಸಂಗತಿಯು ನಮ್ಮ

ವಾಚಕರ ಸ್ಮರಣದಲ್ಲಿರಬಹುದು. ತನ್ನ ಒಡೆಯನ ಸಿಟ್ಟಿನ ಅಪ್ಪಣೆಯನ್ನು ಕೇಳಿ ಪ್ರತಾಪರಾಯನು ಮನಸ್ಸಿನಲ್ಲಿ ಬಲುನೊಂದುಕೊಂಡು ಬಹಳವಾಗಿ ಹಳಹಳಿಸಿ, ಇನ್ನು ಮುಂದೆ ಪ್ರಾಣವನ್ನಿಟ್ಟುಕೊಳ್ಳುವುದು ಸರಿಯಲ್ಲೆಂದೆಣಿಸಿ ೬ ಮಂದಿ ರಾಹುತರೊಡನೆ ನೇಸರಿಯಲ್ಲಿ ಬಾಹಲೋಲಖಾನನ ಮೇಲೆ ದುಮುಕಿ, ಆತ್ಮಯಜ್ಞವನ್ನು ಮಾಡಿದ್ದನ್ನಾದರೂ ನಮ್ಮ ಪ್ರಿಯವಾಚಕರು ಮರೆತಿರಲಿಕ್ಕಿಲ್ಲ. ಈ ಉದಾಹರಣೆಯಿಂದ ನಮ್ಮ ಚರಿತ್ರನಾಯಕನ ಕಯ್ಕೆಳಗಿನವರು ಅವನ ನಿಷ್ಪಕ್ಷಪಾತದ ನ್ಯಾಯಬುದ್ಧಿಗೆ ಎಷ್ಟು ಮಾನವನ್ನು ಕೊಡುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ.

ಕೃತಜ್ಞತೆಯು ನಮ್ಮ ಚರಿತ್ರನಾಯಕನಲ್ಲಿ ತುಂಬಾ ಇತ್ತೆಂದು ಎಲ್ಲರೂ ಒಡಂಬಡಬಹುದು. ತನಗೆ ಮಾಡಿದ ಉಪಕಾರವನ್ನು ಸ್ಮರಿಸಿ ಅದಕ್ಕೆ ಬದಲಾಗಿ ಸೇವೆಯನ್ನಾಗಲಿ ಉಪಕಾರವನ್ನಾಗಲಿ ಮಾಡಬೇಕೆಂಬ ಲವಲವಿಕೆಗೆ ಕೃತಜ್ಞತೆ ಎನ್ನುತ್ತಾರೆ. ಜನರನ್ನು ಒಟ್ಟುಗೂಡಿಸುವ ಸದ್ಗುಣ ಗಳಲ್ಲಿ ಇದೊಂದು ದೊಡ್ಡ ಸದ್ಗುಣವಾಗಿರುತ್ತದೆ. ಈ ಸದ್ಗುಣವು ದೇವತಾ ಭಕ್ತಿ ಬಂಧುಪಿತೃಗಳಿಂದ ಹುಟ್ಟಿ, ಸಂಸಾರದ ನಲವುನೋವುಗಳಿಂದ ಆರಯ್ಕೆ ಮಾಡಲ್ಪಟ್ಟು ದೊಡ್ಡಮರವಾಗಿ, ಸ್ವಾರ್ಥತ್ಯಾಗ, ದೇಶಾಭಿಮಾನ ಗಳೆಂಬ ಹೂಗಾಯಿಗಳನ್ನು ಕೊಡುತ್ತದೆ. ಇದು ಭೂತವರ್ತಮಾನಕಾಲ ಗಳ ಸಂಬಂಧವನ್ನು ನೆಲೆಗೊಳಿಸುವುದಲ್ಲದೆ, ಹಿರಿಕಿರಿಯರ ಗುರುಶಿಷ್ಯರ ಆಳೊಡೆಯರ ಸಂಬಂಧವನ್ನು ಒಂದೇ ಸವನೆ ಅಚ್ಚಳಿಯದಂತೆ ಕಾಪಾಡು ತ್ತದೆ. ಈ ಸದ್ಗುಣವನ್ನು ಉಜ್ವಲಸ್ವರೂಪದಲ್ಲಿಟ್ಟುಕೊಂಡ ಮನೆತನವಾಗಲಿ ಸಮಾಜವಾಗಲಿ ಜನಾಂಗವಾಗಲಿ ಒಕ್ಕಟ್ಟಿನ ಕಸುವುಳ್ಳದ್ದಾಗಿ. ದಿನದಿನಕ್ಕೆ ಬೆಳೆಯುತ್ತ ನಡೆಯುತ್ತದೆ. ಈ ಸದ್ಗುಣವು ಕಡಮೆಯಾದ ಗೃಹಸಮಾಜ ಜನಾಂಗಗಳು ನಸಿಬೇನೆ (ಕ್ಷಯರೋಗ) ಹತ್ತಿದವರಂತೆ ದಿನದಿನಕ್ಕೆ ಕ್ಷೀಣದೆಸೆಯನ್ನು ಹೊಂದುತ್ತವೆ. ಈ ಸದ್ಗುಣವನ್ನು ತೊರೆದವರು ಬಿಡಿ ಕಟ್ಟಿಗೆಯ ಅವಸ್ಥೆಯನ್ನು ಹೊಂದುವುದರಿಂದ ಅವರು ದುಷ್ಟರ ಕೇಡಿಗೆ ಗುರಿಯಾಗಿ ಕೂಡಲೆ ನಾಶಹೊಂದುತ್ತಾರೆ. ಇಂತಹ ಮಹತ್ವದ ಸದ್ಗುಣವು ನಮ್ಮ ಚರಿತ್ರನಾಯಕನಲ್ಲಿ ನೆಲೆಗೊಂಡಿತ್ತು. ಹಿಂದೆ ವಿವರಿಸಿದ ಅವನ ದೇವತಾಭಕ್ತಿ, ಪಿತೃಭಕ್ತಿ, ಗುರುಭಕ್ತಿಗಳು ಈ ಸದ್ಗುಣದ ಪ್ರಕಾರಗಳೇ

ಹೊರತು ಬೇರೆಯಲ್ಲ. ಅವನು ತನ್ನ ಕಯ್ಕೆಳಗಿನ ಜನರ ಉಪಕಾರ ಗಳನ್ನಾದರೂ ಸ್ಮರಿಸಿ ಕೃತಜ್ಞತೆಯಿಂದ ಅವರು ಸತ್ತ ಬಳಿಕ ಅವರ ಮಕ್ಕಳಿಗೆ ಪ್ರತ್ಯುಪಕಾರವನ್ನು ಮಾಡಿ, ಅವರ ಋಣದಿಂದ ಮುಕ್ತನಾಗು ತ್ತಿದ್ದನೆಂಬುದನ್ನು ತೋರಿಸಿದರೆ ಈ ಸದ್ಗುಣವು ಅವನ ಹೃದಯದಲ್ಲಿ ಎಷ್ಟು ಆಳವಾಗಿ ಬೇರುಬಿಟ್ಟಿತ್ತೆಂಬುದು ಸ್ಪಷ್ಟವಾಗುತ್ತದೆ.

ತನ್ನ ಒಡೆಯನು ಸಿಟ್ಟುಮಾಡಿದ್ದನ್ನು ತಾಳಲಾರದೆ, ಆ ಸ್ವಾಭಿಮಾನಿ ಯಾದ ಪ್ರತಾಪರಾವಗುಜ್ಜರನು ತನ್ನ ಪ್ರಾಣವನ್ನು ತನ್ನ ಯಜಮಾನನಿಗೆ ಆಹುತಿಯಾಗಿ ಕೊಟ್ಟು, ವೀರಸ್ವರ್ಗವನ್ನೈಯ್ದಿದನೆಂದು ಮೇಲೆ ಬರೆದಿರು ತ್ತೇವಷ್ಟೇ. ಅವನ ಸ್ವಾಮಿಭಕ್ತಿಗೆ ಮೆಚ್ಚಿ, ನಮ್ಮ ಚರಿತ್ರನಾಯಕನು ಅವನು ಜೀವದಿಂದಿರುವಾಗ ಮಾಡಿದ ದೊಡ್ಡ ಉಪಕಾರಗಳನ್ನು ನೆನಿಸಿ, ಅವನ ಕುಂಟುಂಬದ ಯೋಗಕ್ಷೇಮವು ಸರಿಯಾಗಿ ನಡೆಯುವಂತೆ ಸಾಕಾದಷ್ಟು ಉಂಬಳಿಯನ್ನು ಹಾಕಿಕೊಟ್ಟುದಲ್ಲದೆ, ಅವನ ಮಗಳನ್ನು ತನ್ನ ಎರಡನೆಯ ಮಗನಾದ ರಾಜಾರಾಮನಿಗೆ ತೆಗೆದುಕೊಂಡು ಮದುವೆಮಾಡಿದನು. ಪ್ರತಾಪರಾಯನು ಜೀವಂತನಿದ್ದಾಗ ಈ ಮದುವೆಯಾಗಿದ್ದರೆ, ಅವನು ಮುಂದೆ ಹೆಚ್ಚಾಗಿ ಮನಮುಟ್ಟಿ ನೆರವಾಗಬೇಕೆಂಬ ಬಯಕೆಯಿಂದ ಈ ಮದುವೆಯು ಆಗಿರಬಹುದೆಂದು ಕುತರ್ಕಮಾಡಲಿಕ್ಕೆ ಅನುವು ದೊರೆಯು ತ್ತಿತ್ತು. ಆದರೆ ನಮ್ಮ ಚರಿತ್ರನಾಯಕನು ಅವನು ಸತ್ತಮೇಲೆ ಅವನ ಮಗಳನ್ನು ತನ್ನ ಕಿರಿಸೊಸೆಯಾಗಿ ಮಾಡಿಕೊಂಡುದರಿಂದ ಇಂತಹ ಕುಕಲ್ಪನೆಗೆ ಆಸ್ಪದವೇ ಇಲ್ಲ; ಕೇವಲ ಕೃತಜ್ಞತಾಬುದ್ಧಿಯಿಂದಲೇ ನಮ್ಮ ಚರಿತ್ರನಾಯಕನು ಅವನ ಮಗಳನ್ನು ತನ್ನ ಮಗನಿಗೆ ತೆಗೆದುಕೊಂಡನೆಂದು ನಿಸ್ಸಂದೇಹವಾಗಿ ಹೇಳಬಹುದು.

**೩ ಪ್ರಜಾವಾತ್ಸಲ್ಯ, ಪರಧರ್ಮದ್ವೇಷಾಭಾವ, ನ್ಯಾಯ ಬುದ್ಧಿ.** ಪ್ರಜಾವಾತ್ಸಲ್ಯ ಅಥವಾ ಪ್ರಜಾರಂಜನವೇ ಅರಸುಗಳ ಮುಖ್ಯ ಧರ್ಮವು. ಉಳಿದಜನರು ತಂತಮ್ಮ ಕುಟುಂಬಗಳ ಸುಖಸಂಪತ್ತಿಗೆ ಹೊಣೆಯಾಗಿರುವಂತೆ ಅರಸನು ತನ್ನ ನಾಡಿನ ಪ್ರಜೆಗಳ ಯೋಗಕ್ಷೇಮಕ್ಕೆ ಜವಾಬುದಾರನಾಗಿರುತ್ತಾನೆ. ತಂತಮ್ಮ ಮಕ್ಕಳಿಗೆ ವಿದ್ಯಾಬುದ್ಧಿಧನಾರ್ಜನ ಕ್ರಮಗಳನ್ನು ಕಲಿಸುವುದು ತಂದೆಗಳ ಆದ್ಯಕರ್ತವ್ಯವಾಗಿದ್ದಂತೆ, ಪ್ರಜೆಗಳಿಗೆ

ವಿದ್ಯೆಕಲಿಸುವುದೂ ಅವರನ್ನು ಸುನೀತರಾಗಿ ಮಾಡುವುದೂ ಅವರು ಸ್ವಕಷ್ಟ ದಿಂದ ಹೊಟ್ಟೆಗೋಸ್ಕರ ಹಣವನ್ನು ಸಾಕಷ್ಟು ದೊರಕಿಸುವುದಕ್ಕೆ ಅನುಕೂಲ ವಾಗುವಂತೆ ತರತರದ ಕಸಬುಗಳನ್ನು ಕಲ್ಪಿಸಿಕೊಡುವುದೂ ಅರಸರ ಅತಿಪವಿತ್ರಕರ್ತವ್ಯವಾಗಿರುತ್ತದೆ. ಈ ಕರ್ತವ್ಯವನ್ನು ಮನಮುಟ್ಟಿ ಮಾಡುವ ಅರಸರನ್ನು ಪ್ರಜೆಗಳು ಹಾಡಿಹರಿಸುತ್ತಾರೆ. ಇಂತಹ ಅರಸರು ದೇವರಿಗೂ ಮನುಷ್ಯರಿಗೂ ಬೇಕಾದವರಾಗುವುದಲ್ಲದೆ, ಅವರಿಗೆ ಇಹಪರದಲ್ಲಿ ಸುಖ ವಾಗುವದು; ಅವರ ವಂಶವು ಬೆಳೆದು ಅವರ ಮನೆತನವು ಬಹುಕಾಲ ಬಾಳು ವುದು. ಕರ್ತವ್ಯಪರಾಙ್ಮುಖರಾದ ಅರಸರು ಪ್ರಜೆಗಳ ಸಿಟ್ಟುಹೊಟ್ಟುರಿಹಗೆ ತನಗಳಿಗೆ ಈಡಾಗುತ್ತಾರೆ. ಪ್ರಜಾಪೀಡನೆಯಿಂದ ಹುಟ್ಟಿದ ಬೆಂಕಿಯು ಅರಸ ರನ್ನೂ ಅವರ ಪೀಳಿಗೆಯವರನ್ನೂ ಸುಟ್ಟು ಬೂದಿಮಾಡುತ್ತದೆಂದು ನೀತಿ ಜ್ಞರು ಹೇಳುತ್ತಾರೆ. ಪ್ರಜೆಗಳಿಗೆ ವಿದ್ಯಾಬುದ್ಧಿಯನ್ನು ಕಲಿಸದೆ, ಅವರನ್ನು ನೀತಿವಂತರಾಗಿ ಮಾಡುವುದಕ್ಕೆ ತಕ್ಕ ಏರ್ಪಾಡುಗಳನ್ನು ಮಾಡದೆ. ತಮ್ಮ ದೇಶದ ಅಥವಾ ಜಾತಿಯ ಜನರಿಗೆ ಮಾತ್ರ ದೊಡ್ಡದೊಡ್ಡ ಅಧಿಕಾರ ವೇತನಗಳನ್ನು ಕೊಟ್ಟು ಅಲ್ಲದ ಸಲ್ಲದ ನಾನಾತರದ ತೆರಿಗೆಗಳನ್ನು ಜನರ ಮೇಲೆ ಹೇರಿ, ಅವರ ಕಷ್ಟಾರ್ಜಿತ ಹಣವನ್ನು ಸೆಳೆದುಕೊಂಡು, ಅವರನ್ನು ಹೊಟ್ಟೆಗಿಲ್ಲದವರನ್ನಾಗಿಮಾಡಿ, ಅವರ ಅಭಿಪ್ರಾಯಕ್ಕೆ ಏನೂ ಮಾನ ಕೊಡದೆ, ಅವರ ಅನುಮಾಪತ್ತುಗಳನ್ನು ಲೆಕ್ಕಿಸದೆ, ಒತ್ತಾಯದಿಂದ ಕೂಡಿ ಸಿದ ಧನವನ್ನೆಲ್ಲ ಮುಂದುಗಾರಿಕೆಯಲ್ಲಿ ಹಾಳುಮಾಡಿ, ಪ್ರಜೆಗಳನ್ನು ತಮ್ಮ ದಂಡುಕಶಾಹಿಯಿಂದ ಗೋಳಾಡಿಸುವ ಸ್ವಾರ್ಥಪರರಾದ ಅರಸರಿಗೆ ಖೋಡಿಯರಸರೆನ್ನುತ್ತಾರೆ. ಮಹಮ್ಮದ ತಗಲಖನೂ (೧೩೨೪-೧೩೫೧) ಅವರಂಗಜೇಬನೂ (೧೬೫೮-೧೭೦೭) ಈ ಮಾದರಿಯ ಹಿರಿಯರಸರಾಗಿ ಭಾರತೀಯರನ್ನು ಗೋಳಾಡಿಸಿ ಗೋಡೆಹೊಗಿಸಿದರೆಂದು ಇತಿಹಾಸವು ಸಾರಿಹೇಳುತ್ತದೆ.

ನಮ್ಮ ಚರಿತ್ರನಾಯಕನ ರಾಜ್ಯವು ರಾಮರಾಜ್ಯವಾಗದಿದ್ದರೂ ಆ ಕಾ ಲದಲ್ಲಿದ್ದ ಮುಸಲ್ಮಾನರಾಜ್ಯಗಳಿಗಿಂತ ನೂರಾರುಪಟ್ಟು ಒಳಿತಾಗಿತ್ತೆಂದು ಧಾರಾಳವಾಗಿ ಹೇಳಬಹುದು. ಅವನ ನಾಡಿನಲ್ಲಿ ಭೂಮಿಯ ಕಂದಾಯದ ಹೊರತು ಬೇರೆ ಯಾವ ತೆರಿಗೆಯನ್ನು ಜನರು ಕೊಡಬೇಕಾಗುತ್ತಿದ್ದಿಲ್ಲ.

ಆದನ್ನಾದರೂ ಜನರು ತಮ್ಮ ಹೊಲಗಳಲ್ಲಿ ಬೆಳೆದ ಕಾಳಿನಲ್ಲೇ ಕೊಡು ತ್ತಿದ್ದರೆ ಹೊರತು ಈಗಿನವರಂತೆ ಬಂದ ಕಾಳುಗಳನ್ನೆಲ್ಲ ಮಾರಿ ಸರಕಾರದ ಪಟ್ಟೆಯನ್ನು ಕೊಟ್ಟು, ಹೊಟ್ಟೆಯ ಸಲುವಾಗಿ ಸಾಲವನ್ನು ಮಾಡು ತ್ತಿದ್ದಿಲ್ಲ. ಶಾನುಭೋಗರ ಹೊರತು ಬೇರೆಯವರು ರೈತರಿಗೆ ದುಡ್ಡುಕೇಳ ಕೂಡದೆಂತಲೂ ಅಧಿಕಾರಿಗಳಾಗಲಿ ದೇಸಾಯಿ ದೇಶಪಾಂಡೆ ದೇಶಮುಖ ಜಹಗೀರದಾರರಾಗಲಿ ರೈತರಿಗೆ ಯಾವ ಬಗೆಯಿಂದಲೂ ತೊಂದರೆ ಕೊಡ ಕೂಡದೆಂತಲೂ ಕಟ್ಟುಮಾಡಿದ್ದನು. ವ್ಯಾಪಾರೋದ್ಯೋಗಕಲಾಕೌಶಲ್ಯ ಗಳನ್ನು ಬೆಳಿಸುವುದಕ್ಕೆ ತನ್ನಿಂದಾದಷ್ಟು ಸಾಹಾಯ ಮಾಡುತ್ತಿದ್ದನೇ ಹೊರತು ಅವುಗಳನ್ನು ಸುಂಕಸುಲಿಗೆಗಳಿಂದ ಕುಗ್ಗಿಸುತ್ತಿದ್ದಿಲ್ಲ. ದುಡ್ಡಿ ನಾಸೆಗೆ ಪರದೇಶದವರ ವ್ಯಾಪಾರವನ್ನು ಬೆಳಿಸಿ, ತನ್ನ ನಾಡಿನವರ ವ್ಯಾಪಾರ ವನ್ನು ಮುಗ್ಗಕೊಡುತ್ತಿದ್ದಿಲ್ಲ. ಆರ್ಯಸಂಸ್ಕೃತಿ–ಸನಾತನಧರ್ಮಗಳ ಸಂರಕ್ಷಕರೆಂದು ಹೆಸರುವಾಸಿಯಾದ ಬ್ರಾಹ್ಮಣರಿಗೆ ವೃತ್ತಿಸ್ವಾಸ್ತಿಗಳನ್ನು ಹಾಕಿಕೊಡುತ್ತಿದ್ದನಲ್ಲದೆ, ವರ್ಷಾಶನವನ್ನೂ ನಗದು ಹಣವನ್ನೂ ಪ್ರತಿ ವರ್ಷ ಕೊಡುತ್ತಿದ್ದನು. ಸರಕಾರದ ಉದ್ಯೋಗಗಳನ್ನು ಕೊಡುವಾಗ ಗುಣೈಕಪಕ್ಷಪಾತಿಯಾಗಿದ್ದನೇ ಹೊರತು ಜಾತಿಯ ಅಭಿಮಾನವನ್ನು ತರುತ್ತಿದ್ದಿಲ್ಲ. ಅವನ ರಾಜ್ಯದಲ್ಲಿ ಜನರಿಗೆ ತಮ್ಮತಮ್ಮೊಳಗೆ ಬಡಿದಾ ಡುವುದಕ್ಕೂ ಸ್ವಾರ್ಥತೆಯಿಂದ ಸುಳ್ಳಾಡುವುದಕ್ಕೂ ಪ್ರೋತ್ಸಾಹವಿದ್ದಿಲ್ಲ. ದೊಡ್ಡ ದೊಡ್ಡ ಊರುಗಳಲ್ಲಿದ್ದ ಪಂಚರೇ ಬಹುಶಃ ಎಲ್ಲ ನ್ಯಾಯವಿಚಾ ರಣೆಯನ್ನು ನಡಿಸುತಿದ್ದರು ಮತ್ತು ಸರಕಾರದವರು ಪಂಚರ ತೀರ್ಪು ಗಳನ್ನು ಅಮಲಿನಲ್ಲಿ ತರುತ್ತಿದ್ದರು.

**ಪರಧರ್ಮದ್ವೇಷಾಭಾವ.** ನಮ್ಮ ಚರಿತ್ರನಾಯಕನು ಭಕ್ತಿ ವಿಶ್ವಾಸಶ್ರದ್ಧೆಯುಳ್ಳವನಾದರೂ ಪರಧರ್ಮದವರನ್ನು ದ್ವೇಷಿಸುತ್ತಿದ್ದಿಲ್ಲ. ಈಗಿನಂತೆ ಕ್ರಿಸ್ತಧರ್ಮವು ಆ ಕಾಲಕ್ಕೆ ಬಲವಾಗಿದ್ದಿಲ್ಲ. ಹಿಂದು ಮುಸ ಲ್ಮಾನಧರ್ಮಗಳು ಮಾತ್ರ ಅವನ ನಾಡಿನಲ್ಲಿ ನೆಲೆಗೊಂಡಿದ್ದವು. ಈ ಎರಡೂ ಧರ್ಮದವರು ತಂತಮ್ಮ ಧರ್ಮದಂತೆ ನಡೆದುಕೊಳ್ಳಲಿಕ್ಕೆ ಯಾವ ಬಗೆಯ ತೊಂದರೆಯೂ ಇದ್ದಿಲ್ಲ. ಇಷ್ಟೇ ಅಲ್ಲ; ಮಸೀದೆಗಳಿಗೂ ಪೀರರಿಗೂ ದರ್ಗಾಗಳಿಗೂ ನಮ್ಮ ಚರಿತ್ರನಾಯಕನು ಉಂಬಳಿ ನಗದು

ಹಣಗಳನ್ನು ಕೊಡುತ್ತಿದ್ದನು. ಕೊಳ್ಳೆಸುಲಿಗೆ ಮಾಡುವಾಗ ಫಕೀರರಿಗೂ ಮಸೀದೆಗಳಿಗೂ ಏನೂ ಅಪಾಯವನ್ನು ಮಾಡಕೂಡದೆಂದು ಕಟ್ಟಪ್ಪಣೆ ಯಿತ್ತು. ಯೋಗ್ಯರಾದ ಮುಸಲ್ಮಾನರಿಗೆ ಸರಕಾರದ ಉದ್ಯೋಗಗಳು ದೊರೆಯುತಿದ್ದವು. ದಾವುದಖಾನನು ಮರಾಟರ ಹಡಗುಪಡೆಯ ಮುಖ್ಯಾ ಧಿಕಾರಿಯಾಗಿದ್ದುದು ನಮ್ಮ ಪ್ರಿಯವಾಚಕರ ನೆನಪಿನಲ್ಲಿ ಇರಬಹುದು.

**ನ್ಯಾಯಬುದ್ಧಿ.** ಇದೊಂದು ಅತ್ಯಪರೂಪವಾದ ಸದ್ಗುಣವು. ಮನೋನಿಗ್ರಹಶಕ್ತಿಯುಳ್ಳವರಿಗೆ ಮಾತ್ರ ಈ ಸದ್ಗುಣವು ಸಾಧ್ಯವಾಗ ಬಹುದು. ಈ ಕಾಲಕ್ಕೆ ನ್ಯಾಯಬುದ್ಧಿಯುಳ್ಳವರು ವಿರಳ. ಸ್ವಾಭಿಮಾನವು ಬೆಳೆದು ಸ್ವಾತಂತ್ರ್ಯಪ್ರೀತಿಯಾಗುವಂತೆ, ಸ್ವಾರ್ಥತ್ಯಾಗವು ಬೆಳೆದು ನ್ಯಾಯ ಬುದ್ಧಿಯಲ್ಲಿ ಪರಿಣಮಿಸುತ್ತದೆ. ಇಂತಹ ಅಮೌಲ್ಯವಾದ ಸದ್ಗುಣವು ನಮ್ಮ ಚರಿತ್ರನಾಯಕನಲ್ಲಿ ಇತ್ತೆಂದು ಬರೆಯಲಿಕ್ಕೆ ಸಂತೋಷಪಡುತ್ತೇವೆ. ಅವನು ಶ್ರೀರಾಮನಷ್ಟು ಅಥವಾ ಹಂಸಧ್ವಜನಷ್ಟು ನ್ಯಾಯಬುದ್ಧಿಯು ವನಾಗದಿದ್ದರೂ ಇತ್ತಲಾಗಿನ ಅರಸರಿಗಿಂತ ಹೆಚ್ಚು ನ್ಯಾಯಬುದ್ಧಿಯುಳ್ಳವ ನಾಗಿದ್ದನೆಂದು ಹೇಳಲಿಕ್ಕೆ ಅಡ್ಡಿಯಿಲ್ಲ. ಅವನು ತನ್ನ ಜಾತಿಯ ಅಭಿ ಮಾನವನ್ನು ಹಿಡಿದು ದೊಡ್ಡದೊಡ್ಡ ಅಧಿಕಾರದ ಕೆಲಸಗಳನ್ನು ಮರಾ ಟರಿಗೆ ಕೊಡದೆ, ಗುಣೈಕಪಕ್ಷಪಾತದಿಂದ ಯೋಗ್ಯರಾದವರಿಗೆ ಮಾತ್ರ ಕೊಡುತಿದ್ದನೆಂದು ಹಿಂದೆ ಹೇಳಿರುತ್ತೇವಷ್ಟೇ. ಅವನ ಕಯ್ಕೆಳಗಿನವರು, ಅವರು ಎಷ್ಟೇ ದೊಡ್ಡ ಅಧಿಕಾರಿಗಳಾಗಲಿ, ನಂಬುವುದಕ್ಕೆ ತಕ್ಕವರಲ್ಲೆಂದು ಮನಗಂಡ ಕೂಡಲೆ, ಅವನು ನ್ಯಾಯಬುದ್ಧಿಯಿಂದ ಅವರ ತಪ್ಪಿಗೆ ಸರಿ ಯಾದ ಶಿಕ್ಷೆಯನ್ನು ಕೂಡಲೆ ನಿರ್ದಾಕ್ಷಣ್ಯದಿಂದ ವಿಧಿಸುತ್ತಿದ್ದನು. ಅವನು ತನ್ನ ಹಿರಿಮಗನಾದ ಶಂಭುಜಿಯನ್ನು ಅವನು ಮಾಡಿದ ಅಪರಾಧಕ್ಕಾಗಿ ಕಾವಲಲ್ಲಿರಿಸಿದ ಸಂಗತಿಯು ನಮ್ಮ ಪ್ರಿಯವಾಚಕರ ನೆನಪಿನಲ್ಲಿರಬಹುದು.

ಸಂಪೂರ್ಣಂ.



## ಶ್ರೀಶಂಕರ ಕರ್ನಾಟಕ ಪುಸ್ತಕ ಭಾಂಡಾರ.

# ಬೆಲೆಪಟ್ಟಿಯ ಪುರವಣಿ.

---

| | ಪದ್ಯ ಚಂಪೂಗ್ರಂಥಗಳು. | | | ರೂ. | ಆ. | ಪೈ. |
|---|---|---|---|---|---|---|
| ೧ | ಅಕ್ರೂರಚರಿತ್ರೆ | (ಸೋಮನಾಥ) | .. | ೧ | ೨ | ೦ |
| ೨ | ಅಜಿತತೀರ್ಥಕರ ಪುರಾಣತಿಲಕಮ್ | (ರನ್ನಕವಿ) | .. | ೧ | ೧೨ | ೦ |
| ೩ | ಉದ್ಭಟಕಾವ್ಯ | (ಸೋಮರಾಜ) | .. | ೨ | ೩ | ೦ |
| ೪ | ಕೆಳದಿನೃಪವಿಜಯ | (ಲಿಂಗಣ್ಣಕವಿ) | .. | ೧ | ೧೨ | ೦ |
| ೫ | ಗಯಚರಿತ್ರೆ | (ಕೋನಯ್ಯ) | .. | ೩ | ೨ | ೦ |
| ೬ | ಚಂದ್ರಪ್ರಭಾಪುರಾಣ | (ಅಗ್ಗಳದೇವ) | .. | ೪ | ೮ | ೦ |
| ೭ | ಪಂಪರಾಮಾಯಣ (ಸಾಹಿತ್ಯಪರಿಷತ್ತು) | ಅರವಿರಟ್ಟು | .. | ೬ | ೦ | ೦ |
| ೮ | ,, ,, | ಕಾಗದರಟ್ಟು | .. | ೫ | ೦ | ೦ |
| ೯ | ಭಾಗವತ ೧೨ ಸ್ಕಂಧ | (ಸದಾನಂದಯೋಗಿ) | .. | ೬ | ೮ | ೦ |
| ೧೦ | ಮಲ್ಲಿನಾಥಪುರಾಣ | (ನಾಗಚಂದ್ರ) | .. | ೪ | ೦ | ೦ |
| ೧೧ | ಮಹಾಭಾರತ ಉದ್ಯೋಗಪರ್ವ | (ಪೌರ್ವಾತ್ಯಪುಸ್ತಕಾಲಯ) | | ೧ | ೩ | ೦ |
| ೧೨ | ,, ವಿರಾಟಪರ್ವ | ( ,, ) | | ೧ | ೧೦ | ೦ |
| ೧೩ | ಯಶೋಧರ ಚರಿತ್ರೆ | (ಜನ್ನ) | .. | ೧ | ೬ | ೦ |
| ೧೪ | ಲೀಲಾವತೀಪ್ರಬಂಧ | | .. | ೩ | ೧೪ | ೧ |
| ೧೫ | ಶಾಂತೀಶ್ವರಪುರಾಣ | (ಕಮಲಭಾವ) | .. | ೫ | ೦ | ೦ |
| ೧೬ | ಶೃಂಗಾರ ರತ್ನಾಕರ | (ಕವಿಕಾಮದೇವ) | .. | ೧ | ೨ | ೦ |
| ೧೭ | ಶ್ರೀರಾಮಪಟ್ಟಾಭಿಷೇಕ | (ಮಹಾಲಕ್ಷ್ಮ್ಯಂಬಾ) | .. | ೧ | ೧ | ೦ |
| ೧೮—೨೦ | ಸರ್ವಜ್ಞವಚನಗಳು ಭಾಗ ೧, ೨, ೩ (ಉತ್ತಂಗಿ) ಪ್ರತಿಯೊಂದಕ್ಕೆ | | .. | ೦ | ೮ | ೦ |
| ೨೧ | ಹರಿಶ್ಚಂದ್ರೋಪಾಖ್ಯಾನ | (ನಾಯಿಕ) | .. | ೧ | ೦ | ೦ |

## ಐತಿಹಾಸಿಕ ಗ್ರಂಥಗಳು.

| | | | | ರೂ. | ಆ. | ಪೈ. |
|---|---|---|---|---|---|---|
| ೧ | ಅರವಿಂದ ಘೋಷ | (ಜೊಯ್ಸ್) | .. | ೦ | ೧೨ | ೦ |
| ೨ | ಆರ್ಯಕೀರ್ತಿಭಾಗ ೧ | (ಚ. ವಾಸುದೇವಯ್ಯ) | .. | ೧ | ೨ | ೦ |
| ೩ | ಛತ್ರಪತಿ ಸಿವಾಜಿಮಹಾರಾಜ | (ರಾ. ಹ. ದೇಶಪಾಂಡೆ) | .. | ೨ | ೧೨ | ೦ |
| ೪ | ಪರಶುರಾಮ ಭಾವುಪಟವರ್ಧನ | (ಕುಲಕರ್ಣಿ) | .. | ೧ | ೪ | ೦ |
| ೫ | ಭರತಖಂಡದ ಜೀವಜ್ಯೋತಿಗಳು | (ಚಿದಂಬರಯ್ಯ) | .. | ೧ | ೪ | ೦ |
| ೬ | ಭಾರತೀಯರ ದೇಶಭಕ್ತಿ | (ಹರ್ಡೀಕರ) | .. | ೧ | ೪ | ೦ |
| ೭ | ಮುಂಬಯಿಕರ್ನಾಟಕ ಗ್ಯಾಝಿಟಿಯರ | (ವೆ. ರ. ಕಟ್ಟಿ) | | ೪ | ೦ | ೦ |
| ೮ | ಶ್ರೀಕೃಷ್ಣಚರಿತ್ರೆ ೧ ರಿಂದ ೭ ಖಂಡ | | .. | ೩ | ೧೨ | ೦ |
| ೯ | ಶ್ರೀರಾಮದಾಸ ಸ್ವಾಮಿಗಳ ಚರಿತ್ರೆ | (ಹೊನ್ನಾಪುರಮಠ) | .. | ೧ | ೦ | ೦ |

## ಪೌರಾಣಿಕ ಗ್ರಂಥಗಳು.

| | | | | | | |
|---|---|---|---|---|---|---|
| ೧ | ಪಂಪರಾಮಾಯಣಕಥೆ | (ಸಾಹಿತ್ಯ ಪರಿಷತ್ತು) | .. | ೦ | ೧೪ | ೦ |
| ೨ | ಭಾಗವತಾಮೃತ | (ಗಳಗನಾಥ) | .. | ೩ | ೮ | ೦ |
| ೩ | ಮಹಾಭಕ್ತಿವಿಜಯ | (ರಾಮಸ್ವಾಮಿ) | .. | ೨ | ೮ | ೦ |
| ೪ | ಶಂಕರಸಂಹಿತೆ | | .. | ೪ | ೮ | ೦ |
| ೫ | ಶೈವಸುಧಾರ್ಣವ | (ಗಳಗನಾಥ) | .. | ೩ | ೮ | ೦ |
| ೬ | ಶ್ರೀಕೃಷ್ಣರಾಜ ವಾ. ವಿ. ಟೀಕು ಭಾಗವತ ೧೦ನೆಯಸ್ಕಂಧ | | | ೩ | ೧ | ೦ |
| ೭ | ಶ್ರೀರಾಮ ತತ್ವಾಮೃತ | (ರಾಮಸ್ವಾಮಿ) | .. | ೧ | ೮ | ೦ |

## ನಾಟಕಗಳು.

| | | | | | | |
|---|---|---|---|---|---|---|
| ೧ | ಅಭಿಜ್ಞಾನಶಾಕುಂತಲಾನಾಟಕ | (ಬಿ. ಕೃಷ್ಣಪ್ಪ) | .. | ೦ | ೧೩ | ೦ |
| ೨ | ಕೇತುಭಂಗ | (ಓಡಲ್ಮನೆ) | .. | ೦ | ೧೪ | ೦ |
| ೩ | ಟೊಳ್ಳುಗಟ್ಟಿ | (ಗುಂಡು) | .. | ೦ | ೧೪ | ೦ |
| ೪ | ಪ್ರೇಮಲೀಲಾ | (ಫಕೀರಯ್ಯ) | .. | ೧ | ೦ | ೦ |
| ೫ | ಬಸವೇಶ್ವರನಾಟಕ | (ಲಿಂಗಸೂಗರ) | .. | ೧ | ೦ | ೦ |
| ೬ | ಭದ್ರಾಚಲರಾಮದಾಸಚರಿತ್ರೆ | (ಸಿವರಾಮದಾಸ) | .. | ೧ | ೧ | ೦ |

| | | | | ರೂ. | ಆ. | ಪೈ. |
|---|---|---|---|---|---|---|
| ೭ | ರುಕ್ಮಿಣೀಪರಿಣಯನಾಟಕ | (ಪದ್ಮನಾಭಯ್ಯ) | .. | ೦ | ೧೨ | ೦ |
| ೮ | ಶಾಕುಂತಲಾ | (ಬಸಪ್ಪಶಾಸ್ತ್ರಿ) | .. | ೧ | ೧ | ೦ |
| ೯ | ಸ್ತ್ರೀಧರ್ಮರಹಸ್ಯ | (ಹುಯಿಲಗೋಳ) | .. | ೧ | ೦ | ೦ |
| ೧೦ | ಸ್ವರಾಜ್ಯವಿಯೋಗ | (ಹೊಸೂರ) | .. | ೦ | ೧೨ | ೦ |

## ನೈತಿಕಗ್ರಂಥಗಳು.

| | | | | ರೂ. | ಆ. | ಪೈ. |
|---|---|---|---|---|---|---|
| ೧ | ನೀತಿಧರ್ಮ | (ಮಹಾತ್ಮಾಗಾಂಧಿ) | .. | ೦ | ೬ | ೬ |
| ೨ | ನೈತಿಕವಿಷಯಸಂಗ್ರಹ ಭಾಗ ೧ | | .. | ೦ | ೮ | ೦ |
| ೩ | ಶ್ರೀಸ್ವಾಮಿ ರಾಮತೀರ್ಥರ ಉಪನ್ಯಾಸಗಳು ಭಾಗ ೧ ರಿಂದ ೫. | | .. | ೩ | ೨ | ೦ |
| ೪ | ಸುಖವೂ ಶಾಂತಿಯೂ | (ಆಲೂರ) | .. | ೧ | ೦ | ೦ |
| ೫ | ಸುಜ್ಞಾನ ಚಂದ್ರೋದಯ | (ಶಿವರಾಮದಾಸ) | .. | ೧ | ೧ | ೦ |

## ಶಾಸ್ತ್ರೀಯ ಗ್ರಂಥಗಳು.

| | | | | ರೂ. | ಆ. | ಪೈ. |
|---|---|---|---|---|---|---|
| ೧ | ಆರೋಗ್ಯಸಾಧನೆ | (ಮಹಾತ್ಮಾಗಾಂಧಿ) | .. | ೦ | ೧೩ | ೦ |
| ೨ | ಆಯುರ್ವೇದಸಾರ ಭಾಗ ೧ | (ರಾಮಕೃಷ್ಣಯ್ಯ) | .. | ೭ | ೦ | ೦ |
| ೩ | ಕಲ್ಪವೃಕ್ಷ | (ಆರುಬೆರಳಿನ) | .. | ೧ | ೧೪ | ೦ |
| ೪ | ಕಾಮಧೇನು | ,, | .. | ೨ | ೪ | ೦ |
| ೫ | ಕೃಷಿಕರ್ಮಶಾಸ್ತ್ರ | (ಮಹಿಷಿ) | .. | ೦ | ೧೨ | ೦ |
| ೬ | ಕ್ಷೈತೋಟಗಳ ವ್ಯವಸಾಯ | (ಕ್ಯಾಮರಾನ) | .. | ೧ | ೧೦ | ೦ |
| ೭ | ಕೋಕಶಾಸ್ತ್ರ | (ಕಿತ್ತೂರ) | .. | ೧ | ೮ | ೦ |
| ೮ | ಜ್ಯೋತಿಷ್ಯಸರ್ವವಿಷಯಾಮೃತಸಂಗ್ರಹ | (ವೆಂಕಟರಮಣಶಾಸ್ತ್ರಿ) | .. | ೧ | ೦ | ೦ |
| ೯ | ಪದಾರ್ಥವಿಜ್ಞಾನಶಾಸ್ತ್ರ | (ಕಟ್ಟಿ) | .. | ೦ | ೧೩ | ೦ |
| ೧೦ | ಪಾಕಶಾಸ್ತ್ರ ಭಾಗ ೨ | (ರಘುಪತಾಚಾರ್ಯ) | .. | ೦ | ೧೨ | ೬ |
| ೧೧ | ಭೌತಿಕಶಾಸ್ತ್ರ | (ಸೀತಾರಾಮಯ್ಯಾ) | .. | ೧ | ೧ | ೦ |
| ೧೨ | ಯೋಗರತ್ನಾಕರ ಟೀಕು | (ಪೌರಾತ್ಯಪುಸ್ತಕಾಲಯ) | .. | ೨ | ೧೨ | ೦ |
| ೧೩ | ವ್ಯವಸಾಯ ಬೋಧಿನಿ | (ಶೇಷಾದ್ರಿ ಅಯ್ಯಂಗಾರ್) | .. | ೦ | ೧೦ | ೦ |

## ಕಥೆಗಳು.

| | | | ರೂ. | ಆ. | ಪೈ. |
|---|---|---|---|---|---|
| ೧ | ಅರೇಬಿಯನ್‌ನೈಟ್ಸ್ (ಬಿ. ಸುಬ್ಬಯ್ಯ) | .. | ೪ | ೮ | ೦ |
| ೨ | ಕಥೆಗಳನ್ನೊಳಗೊಂಡ ಬೀರಬಲ್ಲನಚರಿತ್ರೆ (ರಾ. ಹ. ದೇಶಪಾಂಡೆ) | .. | ೧ | ೬ | ೦ |
| ೩ | ಕನಕೋಣಾರ್ಜನ (ಬಿ. ಕೃಷ್ಣಪ್ಪ) | .. | ೦ | ೬ | ೦ |
| ೪ | ಚಿಕ್ಕದೇವರಾಯನ ವಂಶಾವಳಿ (ತಿರುಮಲೆಯಾರ್ಯ) | .. | ೧ | ೧೦ | ೦ |
| ೫ | ಜಯಸಿಂಹರಾಜಚರಿತ್ರೆ | .. | ೦ | ೧೫ | ೦ |
| ೬ | ತಕ್ಕಸೇನರಾಜಪುತ್ರನಕಥೆಗಳು (ಕಿತ್ತೂರ ಭೀಮಾಚಾರ್ಯ) | | ೦ | ೮ | ೦ |
| ೭ | ಮಂಜುಘೋಷಾ ,, | .. | ೧ | ೪ | ೦ |
| ೮ | ಮೋಹನಾಂಗಿಕಥೆ (ಭೀಮರಾವ) | .. | ೦ | ೮ | ೦ |

## ಕಾದಂಬರಿಗಳು.

| | | | | | |
|---|---|---|---|---|---|
| ೧ | ಕರ್ನಾಟಕಸಿಂಹಾಸನಸ್ಥಾಪನೆ (ಕುಲಕರ್ಣಿ) | .. | ೧ | ೦ | ೦ |
| ೨ | ಕಲ್ಯಾಣಕುಮಾರಿ | .. | ೦ | ೧೨ | ೦ |
| ೩ | ಕುರುಹಿನಬಕುಳಾಹಾರ (ಹುನಗುಂದ) | .. | ೦ | ೧೨ | ೦ |
| ೪ | ಗುರುಪ್ರಸಾದ ,, | .. | ೦ | ೧೨ | ೦ |
| ೫ | ಗೃಹಕಲಹ (ಗಳಗನಾಥ) | .. | ೧ | ೦ | ೦ |
| ೬ | ಚಾಲುಕ್ಯಪುಲಕೇಶಿ (ಸಬರದ) | .. | ೧ | ೧ | ೦ |
| ೭ | ದುರ್ಗೇಶನಂದಿನಿ (ಬಿ. ವೆಂಕಟಾಚಾರ್ಯ) | .. | ೨ | ೨ | ೦ |
| ೮ | ನಭಾ (ತಿರುಮಲಾಂಬಾ) | .. | ೦ | ೧೦ | ೦ |
| ೯ | ನಿಶಾಕಾಂತ ,, | .. | ೦ | ೯ | ೬ |
| ೧೦ | ಪನ್ನಾಮತಿ (ಪ್ರಣಯಲೀಲಾ) (ಕುಲಕರ್ಣಿ) | .. | ೧ | ೬ | ೦ |
| ೧೧ | ಪ್ರಾಣಪ್ರತಿಷ್ಠಾ ,, | .. | ೦ | ೧೦ | ೦ |
| ೧೨ | ಭಗವಾನ್‌ದಾಸ (ಪತ್ತೇದಾರಿ ಕಥೆ) (ಕಾಳೆ) | .. | ೧ | ೦ | ೦ |
| ೧೩ | ಭಯಂಕರಕೊಲೆ ,, (ಕುಲಕರ್ಣಿ) | .. | ೦ | ೧೨ | ೦ |
| ೧೪ | ಮಾಡಿದ್ದುಣ್ಣೋಮಹಾರಾಯ (ಪುಟ್ಟಣ್ಣ) | .. | ೧ | ೦ | ೦ |

| | | | ರೂ. | ಆ. | ಪೈ. |
|---|---|---|---|---|---|
| ೧೫ | ಮಾಧವಕರುಣಾವಿಲಾಸ ಭಾಗ ೧, ೨ (ಗಳಗನಾಥ) | .. | ೧ | ೮ | ೦ |
| ೧೬ | ಮೃಣ್ಮಯಿ (ಬಿ. ವೆಂಕಟಾಚಾರ್ಯ) | .. | ೧ | ೧೧ | ೦ |
| ೧೭ | ರಾಯಚೂರವಿಜಯ (ಬಿ. ಕೃಷ್ಣಪ್ಪ) | .. | ೨ | ೨ | ೦ |
| ೧೮ | ವಾಗ್ದೇವಿ (ಬಾಬುರಾವ) | .. | ೧ | ೧ | ೦ |
| ೧೯ | ವಿಕಾರವಿನಾಶ (ಕುಲಕರ್ಣಿ) | .. | ೦ | ೧೦ | ೦ |
| ೨೦ | ವೈಭವ (ಗಳಗನಾಥ) | .. | ೧ | ೦ | ೦ |
| ೨೧ | ಶಕ್ತಿಮಯಿ (ಕಾಳೆ) | .. | ೧ | ೦ | ೦ |
| ೨೨ | ಶಾಂತಿ ಭಾಗ ೧ (ಬಿ. ವೆಂಕಟಾಚಾರ್ಯ) | .. | ೧ | ೧೦ | ೦ |
| ೨೩ | ಸುಮತಿಮದನಕುಮಾರಚರಿತ್ರೆ ಭಾಗ ೧ (ಪುಟ್ಟಣ್ಣ) | .. | ೦ | ೧೨ | ೦ |
| ೨೪ | ,, ,, ,, ,, | .. | ೦ | ೫ | ೦ |
| ೨೫ | ಸುವ್ರತೆ (ರಾಮಾನುಜಯ್ಯಂಗಾರ್) | .. | ೦ | ೧೪ | ೦ |
| ೨೬ | ಹೇಮಚಂದ್ರ (ಸಬರದ) | .. | ೧ | ೮ | ೦ |

## ಹಾಡೂ ಯಕ್ಷಗಾನಗಳು.

| | | | | | |
|---|---|---|---|---|---|
| ೧ | ಕಲ್ಯಾಣಗೀತಾವಳಿ (ಜಯರಾಮಾಚಾರ್ಯ) | .. | ೦ | ೨ | ೦ |
| ೨ | ಧನ್ವಂತರಿಕೀರ್ತನೆ (ಪಂಡಿತ) | .. | ೦ | ೬ | ೦ |
| ೩ | ಬಾಲಿಕಾಗೀತಮುಕ್ತಾಕಲಾಪ (ಕೃಷ್ಣರಾವ) | .. | ೦ | ೬ | ೦ |
| ೪ | ಬಿನ್ನಹ (ಶ್ರೀನಿವಾಸ) | .. | ೦ | ೫ | ೬ |
| ೫ | ಭಕ್ತಿಗೀತಾವಳಿ (ಚಿದಂಬರಯ್ಯ) | .. | ೦ | ೮ | ೦ |
| ೬ | ಶಿಶುನಾಳ ತತ್ವಪದಗಳು ಭಾಗ ೧, ೨ ಪ್ರತಿಯೊಂದಕ್ಕೆ | .. | ೦ | ೮ | ೦ |

## ವೈದಿಕ ಮತ್ತು ವೇದಾಂತಗ್ರಂಥಗಳು.

| | | | | | |
|---|---|---|---|---|---|
| ೧ | ಕಾಣ್ವನಿತ್ಯವಿಧಿ (ಚಿದಂಬರಭಟ್ಟ) | .. | ೦ | ೮ | ೦ |
| ೨ | ಗೀತಾರ್ಥವಿಚಾರಸೂಚನೆ | .. | ೦ | ೧೨ | ೦ |
| ೩ | ಪ್ರಶ್ನಮುಂಡಮಾಂಡೂಕ್ಯೋಪನಿಷತ್ಸಾರ (ದೊ. ನಾರಾಯಣಶಾಸ್ತ್ರಿ) | .. | ೧ | ೮ | ೦ |
| ೪ | ಮಣಿಮಂಜರೀಟೀಕು | .. | ೧ | ೦ | ೦ |

| | | | ರೂ. | ಆ. | ಪೈ. |
|---|---|---|---|---|---|
| ೫ ವಚನಶಾಸ್ತ್ರಸಾರ | (ಹಳಕಟ್ಟಿ) | .. | ೫ | ೫ | ೦ |
| ೬ ವ್ರತವಲ್ಲಿ | (ಕೃಷ್ಣಶಾಸ್ತ್ರಿ) | .. | ೧ | ೨ | ೦ |
| ೭ ವಿವೇಕಚೂಡಾಮಣಿಟೀಕು | (ದೊ. ನಾರಾಯಣಶಾಸ್ತ್ರಿ) | .. | ೩ | ೪ | ೦ |
| ೮ ವೀರಶೈವ ಧರ್ಮಸಿಂಧು | (ಸೋಮಾರಾಧ್ಯ) | .. | ೨ | ೦ | ೦ |
| ೯ ವೈಷ್ಣವಾದಿ ನಾನಾಮತೋತ್ಪತ್ತಿಸಿದ್ಧಾಂತ | | .. | ೨ | ೮ | ೦ |
| ೧೦ ಶ್ರೀದಾಸಬೋಧ ಭಾಗ ೧ | | .. | ೦ | ೧೪ | ೦ |
| ೧೧—೧೨ ,, | ೨, ೩ ಪ್ರತಿಯೊಂದಕ್ಕೆ | .. | ೧ | ೦ | ೦ |
| ೧೩ ಶ್ರೀವಿಷ್ಣುಸಹಸ್ರನಾಮರತ್ನಮೂಲ | (ನಾರಾಯಣಶಾಸ್ತ್ರಿ) | .. | ೦ | ೧೪ | ೦ |
| ೧೪ ಹಠಪ್ರದೀಪಿಕಾ | | .. | ೦ | ೮ | ೦ |

## ಕೋಶಗಳು.

| | | | | | |
|---|---|---|---|---|---|
| ೧ ಇಂಗ್ಲಿಷಕನ್ನಡಕೋಶ | (ಸಿ. ರಾಮರಾವ) | .. | ೮ | ೦ | ೦ |
| ೨ ಕರ್ನಾಟಕ ಶಬ್ದಸಾರ | | .. | ೦ | ೫ | ೦ |
| ೩ ಕನ್ನಡ ಇಂಗ್ಲಿಷಕೋಶ | (ಬೂಚರ) | .. | ೫ | ೪ | ೦ |
| ೪ ಚತುರಾಸ್ಯನಿಘಂಟು | | .. | ೧ | ೫ | ೦ |
| ೫ ನಾನಾರ್ಥಶಬ್ದಾವಳಿ | | .. | ೦ | ೧೪ | ೦ |
| ೬ ಪಂಡಿತನಿಘಂಟು | (ಪಂಡಿತ) | .. | ೩ | ೦ | ೦ |
| ೭ ರಾಮಚಂದ್ರಚರಿತಪುರಾಣನಿಘಂಟು | | .. | ೦ | ೯ | ೦ |

## ಇತರ ಗ್ರಂಥಗಳು.

| | | | | | |
|---|---|---|---|---|---|
| ೧ ಅಭಿವೃದ್ಧಿಸಂದೇಶ | (ಪುಟ್ಟಯ್ಯ) | .. | ೨ | ೧ | ೦ |
| ೨ ಪರರಾಷ್ಟ್ರಗಳಲ್ಲಿಯ ಅಸಹಕಾರತೆ | (ಕಮಲಾಪುರ) | .. | ೧ | ೦ | ೦ |
| ೩ ಪ್ರಗತಿ ಅಥವಾ ದಾಸ್ಯವಿಮೋಚನೆ | (ಕಾಳೆ) | .. | ೦ | ೬ | ೦ |
| ೪ ಮಡಿ ಮೈಲಿಗೆಯ ಗುಟ್ಟು | (ಕರ್ಪೂರ) | .. | ೦ | ೫ | ೦ |
| ೫ ಹಂಗೇರಿಯನ್ ಅಸಹಕಾರತೆ | (ನವರತ್ನ) | .. | ೦ | ೬ | ೦ |
| ೬ ಹಿಂದೀಭಾಷಾಸಾರ | (ಭಾರದ್ವಾಜ) | .. | ೦ | ೫ | ೬ |



ಾಮಚಂದ್ರ ದೇಶಪಾಂಡೆ, ಬಿ. ಎಸ್‌ಸಿ.,

ವ್ಯವಸ್ಥಾಪಕ.

